ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೭

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಭಾಗ—೮

## ಪ್ರತಿಸರ್ಗಪರ್ವ—ತೃತೀಯಖಂಡ



ಅನುವಾದಕ

ಪಂಡಿತ ಬಿ. ಚನ್ನಕೇಶವಯ್ಯ

ಆಸ್ಥಾನ ವಿದ್ವಾನ್.

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೮

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಮುನ್ನುಡಿ

ಭವಿಷ್ಯಮಹಾಪುರಾಣದ ಈ ಭಾಗದಲ್ಲಿ ವಿಷಯವು ಬಹು ವಿಚಿತ್ರವಾಗಿರುವುದು. ಪುರಾಣ ವಿಷಯದಲ್ಲಿ ಚರ್ಚೆ ಹುಟ್ಟುವುದೂ, ಅದರಿಂದ ಆಸ್ತಿಕತೆ ಅಥವಾ ನಾಸ್ತಿಕತೆ ಇವು ಜನಸಾಮಾನ್ಯಕ್ಕೆ ಮೂಡುವುದೂ ಈ ಭಾಗದ ಕಥಾಂಶದಿಂದ. ಪ್ರತಿ, ವಸ್ತುವಿನ ಮೂಲಶೋಧನೆಗಾಗಿಯೇ ಮುಂದುವರಿದ ಈಗಿನ ಕೆಲವು ಜನಾಂಗವು ಇಲ್ಲಿನ ಕಥಾಭಾಗವನ್ನು ನೋಡಿದೊಡನೆಯೇ ಈ ಪುರಾಣವು ಅತ್ಯಾಧುನಿಕವೆಂದೂ ಆಧ್ಯಾತ್ಮಿಕ ಗ್ರಂಥವರ್ಗಕ್ಕೆ ಇದು ಸೇರಲಾರದೆಂದೂ ಇದು ಕೇವಲ ಐತಿಹಾಸಿಕ ಕಾವ್ಯವೆಂದೂ ತೀರ್ಮಾನಿಸಿಬಿಡುವರು. ಇತ್ತೀಚಿನ ಅನೇಕ ಮಹಾಪುರುಷರ ಚರಿತ್ರೆಯು ಈಗ ಲೋಕಪ್ರಸಿದ್ಧಿಯಲ್ಲಿರುವಂತೆ ಇಲ್ಲಿ ವಿಸ್ತೃತವಾಗಿದೆ. ಇದನ್ನು ವ್ಯಾಸರೇ ಎಷ್ಟೋ ಹಿಂದೆ ಬರೆದಿರುವರೆಂದು ಹೇಳಲಾಗಿದೆ. ಅಪರೋಕ್ಷ ಜ್ಞಾನಿಗಳಾದ ಅವರಿಗೆ ಇದು ಸ್ವಭಾವವಾಗಿ ತಿಳಿದಿತ್ತೆಂದು ಹೇಳುವುದು ಆಸ್ತಿಕರ ಅಭಿಪ್ರಾಯ. ಪರಿಶೋಧಕರ ದೃಷ್ಟಿಗೆ ಇದು ಸರಿಬರಲಾರದು. ವಸ್ತುವಿನ ನಿಜಸ್ವರೂಪ ಏನೇ ಇದ್ದರೂ ವಿಮರ್ಶಕರ ಮನೋಭಾವಕ್ಕೆ ತಕ್ಕಂತೆ ಭಿನ್ನಭಿನ್ನವಾಗಿ ಕಾಣುವುದೇ ಲೋಕದಲ್ಲಿ ಸ್ವಭಾವ. ಇದರ ನೆಪದಿಂದಲೇ ನಮ್ಮ ಪೂರ್ವಿಕರ ಶಕ್ತಿಸಾಮರ್ಥ್ಯಗಳನ್ನು ನಮ್ಮ ದೃಷ್ಟಿಕೋಣದಿಂದ ಅಳೆಯೋಣ. ನಮ್ಮ ಈ ದಕ್ಷಿಣ ಭಾರತದಲ್ಲಿ ಕೆಲವು ನಾಡೀಗ್ರಂಥಗಳು ಅಲ್ಲಲ್ಲಿ ದೊರೆಯುತ್ತವೆ. ಅವು ಪ್ರಾಯಶಃ ತಮಿಳು ಭಾಷೆಯಲ್ಲಿರುವುದೇ ಹೆಚ್ಚು. ಅಗಸ್ತ್ಯಮಹರ್ಷಿಗಳು ಆ ಗ್ರಂಥ ನಿರ್ಮಾಪಕರೆಂದು ಹೇಳುವರು. ಆ ಗ್ರಂಥಗಳು ಎಷ್ಟೇ ಆಧುನಿಕವೆಂದರೂ ಸಾವಿರಾರು ವರ್ಷಗಳ ಹಿಂದೆಯೇ ರಚಿತವಾದುವೆಂದು ನಿಶ್ಚಯಿಸಲ್ಪಟ್ಟಿವೆ. ಆ ಗ್ರಂಥಗಳಲ್ಲಿ ಈಗ ಜೀವಿಸಿರುವ ಮಾನವವರ್ಗದ ಜೀವನದ ಭವಿಷ್ಯವು ನಿರೂಪಿತವಾಗಿರುವುದನ್ನು ನಾವು ಈಗಲೂ ನೋಡಬಹುದು. ಅಷ್ಟೇ ಅಲ್ಲ. ಆ ಗ್ರಂಥಗಳಲ್ಲಿ ಪ್ರಪಂಚದ ಜನಾಂಗದ ಮಾರ್ಪಾಟಿನ ಕ್ರಮವನ್ನೂ ಅಲ್ಲಲ್ಲಿ ಕಾಣಬಹುದು. ಇದನ್ನು ನೋಡಿದರೆ ಯಾರಿಗೆತಾನೆ ಆಶ್ಚರ್ಯವಾಗಲಾರದು ? ಈ ವಿಸ್ಮಯದಿಂದ ಮೂಲಶೋಧನೆಗೆ ಹೊರಟರೆ ಪ್ರಪಂಚವು ಭಗವತ್ಸಂಕಲ್ಪಕ್ಕೆ ಅನುಸಾರವಾಗಿ ನಡೆಯುವುದೇ ಹೊರತು ಅನ್ಯಥಾ ಇಲ್ಲ. ಅದು ಮಹಾತಪಸ್ವಿಗಳಿಗೆ ಮಾತ್ರ ತಮ್ಮ ಜ್ಞಾನದೃಷ್ಟಿಯಿಂದ ಗೋಚರಿಸುವುದು ಎಂಬ ತೀರ್ಮಾನಕ್ಕೆ ಎಲ್ಲರೂ ಬರಬೇಕಾಗುವುದು. ಅದೇ ಅಭಿಪ್ರಾಯವನ್ನು ಈ ಪುರಾಣದ ವಿಷಯದಲ್ಲಿಯೂ ಏಕೆ ಅನುಮೋದಿಸಬಾರದು ಎಂಬ ಪೂರ್ವಪಕ್ಷವು ಆಸ್ತಿಕರಿಂದ ವಿಮರ್ಶಕರಿಗೆ ತಪ್ಪಿದುದಲ್ಲ !

ಇಲ್ಲಿ ಬಂದಿರುವ ಕಥಾಭಾಗವು ಕೇವಲ ಯುದ್ಧ. ಅದಕ್ಕೆ ಸಂಬಂಧಿಸಿದ ಒಳಸಂಚು ಅನ್ಯೈಕಮತ್ಯದ ಫಲ. ಅಸೂಯಾತಿರೇಕ, ಅವಿವೇಕದ ಪರಾಕಾಷ್ಠತೆ. ಈ ವಿಷಯಗಳನ್ನು ವಿಶೇಷವಾಗಿ ತಿಳಿಯಪಡಿಸುವುದರಲ್ಲಿಯೇ ಪರ್ಯಾಪ್ತವಾಗಿದೆ. ಆದರೆ ಪ್ರತಿ ಇತಿಹಾಸದಲ್ಲಿಯೂ ಧರ್ಮಸೂಕ್ಷ್ಮವು ಅಡಗಿದೆ. ಧರ್ಮಾಭಿಮಾನದ ಕೆಚ್ಚು ಪ್ರತಿ ರಾಜಪುತ್ರನಲ್ಲಿಯೂ ಹಿಂದೆ ಕಾಣುತ್ತಿತ್ತು. ಧರ್ಮದ ಹೆಸರಿನಿಂದ ಅನೇಕ ದುಷ್ಕಾರ್ಯಗಳು ದುಷ್ಪರಿಣಾಮಕಾರಕವಾದ ಸನ್ನಿವೇಶಗಳು ನಡೆದು ಹೋಗಿವೆ. ಅಧರ್ಮಮಾರ್ಗಾನುಯಾಯಿಗಳು ಅದಕ್ಕೆ ತಕ್ಕ ಫಲವನ್ನು ಅನುಭವಿಸಿರುವರು. ಇಷ್ಟೆಲ್ಲಾ ಕೋಲಾಹಲವಾಗಿರುವ ಸಂಗತಿಗಳು ನಡೆದಿದ್ದರೂ ನಮ್ಮ ಭರತಖಂಡದಲ್ಲಿ ಧರ್ಮಾಭಿಮಾನವೊಂದೇ ನೆಲೆಯಾಗಿ ನಿಂತಿರುವುದು. ಇತ್ಯಾದಿ ವಿಷಯಗಳಿಂದ ಪ್ರಾಚೀನ ಧರ್ಮವೀರರ ಸಾಮರ್ಥ್ಯಾದಿಗಳನ್ನು ವಿವರಿಸುತ್ತಾ ಈ ಪುರಾಣವು ವಿಶೇಷ ಜನಾದರಣೆಯನ್ನು ಪಡೆದಿದೆ.

ಪ್ರಾಚೀನ ಸಂಪ್ರದಾಯವನ್ನು ಬಿಡದೆ ಆಧುನಿಕ ಮಾರ್ಗದಲ್ಲಿ ಸತ್ಯಧ್ವಜರೂಪರಾಗಿ ವಿರಾಜಿಸುತ್ತಾ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಪ್ರಭುಗಳವರು** ಪುರಾತನವೂ ಅಮೂಲ್ಯವೂ ಆದ ಇಂತಹ ಗ್ರಂಥಗಳ ಪ್ರಕಾಶಕ್ಕೆ ಸರ್ವಸಹಾಯ ನೀಡಿ ಆಸ್ತಿಕವೃಂದಕ್ಕೆ ಅಮೃತಫಲದಂತೆ ಶೋಭಿಸುತ್ತಿರುವರು. ಕರ್ಣಾಟಕ ಸಿಂಹಾಸನಾಧೀಶ್ವರರಾದ ನಮ್ಮ ಮಹಾಪ್ರಭುಗಳಿಗೂ ಅವರ ಕುಟುಂಬವರ್ಗಕ್ಕೂ ಸರ್ವೇಶ್ವರನೂ ಶ್ರೀ ಚಾಮುಂಡಾಂಬಿಯೂ ಆಯುರಾರೋಗ್ಯಾದಿ ಸಕಲ ಮನೋಭೀಷ್ಟಗಳನ್ನೂ ಕರುಣಿಸಿ ಸಲಹುತ್ತಿರಲಿ ಎಂದು ಸರ್ವದಾ ಪ್ರಾರ್ಥಿಸುವೆನು.

ಸರ್ವಧಾರಿ ಸಂವತ್ಸರದ
ಕಾರ್ತಿಕ ಕೃಷ್ಣ ತ್ರಯೋದಶಿ ಭಾನುವಾರ,
೨೪—೧೧—೧೯೪೮.

ಇಂತು ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್.



# ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯಖಂಡದ

# ವಿಷಯಾನುಕ್ರಮಣಿಕೆ.

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

# ತೃತೀಯಖಂಡ ಸಮಾಪ್ತಿ



॥ ಶ್ರೀಃ ॥

---

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಪ್ರಥಮೋಽಧ್ಯಾಯಃ

---

॥ ಋಷಯಃ ಊಚು ॥

ಭಗವನ್ವಿಕ್ರಮಾಖ್ಯಾನಕಾಲೋಽಯಂ ಭವತೋದಿತಃ ।
ಶತದ್ವಾದಶಮರ್ಯಾದೋ ದ್ವಾಪರಸ್ಯ ಸಮೋ ಭುವಿ ॥ ೧ ॥

ಅಸ್ಮಿನ್ಕಾಲೇ ಮಹಾಭಾಗ ಲೀಲಾ ಭಗವತಾ ಕೃತಾ ।
ತಾಮೇತಾಂ ಕಥಯಾಸ್ಮಾಕಂ ಸರ್ವಜ್ಞೋಽಸ್ತಿ ಭವಾನ್ಸದಾ ॥ ೨ ॥

---

ಶ್ರೀ ಗಣೇಶಾಯನಮಃ ಶ್ರೀ ಚಾಮುಂಡಾಂಬಾಯೈನಮಃ

## ಪ್ರತಿಸರ್ಗಪರ್ವದ ತೃತೀಯಖಂಡದಲ್ಲಿ ಒಂದನೆಯ ಅಧ್ಯಾಯ

೧-೨. ಋಷಿಗಳು ಸೂತಮುನಿವರ್ಯನನ್ನು ಕೇಳುತ್ತಾರೆ—"ಪೂಜ್ಯನಾದ ಸೂತಮಹರ್ಷಿಯೇ! ಭೂಲೋಕದಲ್ಲಿ ವಿಕ್ರಮಾದಿತ್ಯನ ಕಥೆಗೆ ಸಂಬಂಧಿಸಿದ ಕಾಲವು ದ್ವಾಪರಯುಗದಲ್ಲಿ ಸಾವಿರದ ಇನ್ನೂರು ವರ್ಷಗಳು ಎಂದು ನೀನು ನಿರೂಪಿಸಿವೆಯಷ್ಟೆ, ಆ ಕಾಲದಲ್ಲಿಯೂ ಪರಮಾತ್ಮನು ತನ್ನ ಲೀಲೆಯನ್ನು ತೋರಿಸಿರಬೇಕು. ಸದಾ ಸರ್ವಜ್ಞನಾದ ನೀನು ಸಂತೋಷದಿಂದ ನಮಗೆ ಆ ಲೀಲೆಗಳನ್ನು ತಿಳಿಸು" ಎಂದರು.

॥ ಸೂತ ಉವಾಚ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೧ ॥

ಭವಿಷ್ಯಾಖ್ಯೇ ಮಹಾಕಲ್ಪೇ ಪ್ರಾಪ್ತೇ ವೈವಸ್ವತೇಂತರೇ ।
ಅಷ್ಟಾವಿಂಶದ್ವಾಪರಾಂತೇ ಕುರುಕ್ಷೇತ್ರೇ ರಣೋಽಭವತ್ ॥ ೨ ॥

ಪಾಂಡವೈರ್ನಿರ್ಜಿತಾಃ ಸರ್ವೇ ಕೌರವಾ ಯುದ್ಧದುರ್ಮದಾಃ ।
ಅಷ್ಟಾದಶೇ ಚ ದಿವಸೇ ಪಾಂಡವಾನಾಂ ಜಯೋಽಭವತ್ ॥ ೩ ॥

ದಿನಾಂತೇ ಭಗವಾನ್ಕೃಷ್ಣೋ ಜ್ಞಾತ್ವಾ ಕಾಲಸ್ಯ ದುರ್ಗತಿಂ ।
ಶಿವಂ ತುಷ್ಟಾವ ಮನಸಾ ಯೋಗರೂಪಂ ಸನಾತನಂ ॥ ೪ ॥

---

೧. ಆ ಮಾತನ್ನು ಕೇಳಿ ಸೂತಮುನಿವರ್ಯನು ಅದನ್ನು ನಿರೂಪಿಸುವ ಮೊದಲು ಸಂಪ್ರದಾಯವನ್ನನುಸರಿಸಿ "ನಾರಾಯಣನನ್ನೂ ಪುರುಷಶ್ರೇಷ್ಠನಾದ ನರನನ್ನೂ, ಸರಸ್ವತೀ ದೇವಿಯನ್ನೂ, ವ್ಯಾಸಮಹರ್ಷಿಗಳನ್ನೂ ನಮಸ್ಕರಿಸಿ ಜಯ ಸಂಜ್ಞಕವಾದ ಭಾರತಾದಿ ಗ್ರಂಥಗಳನ್ನು ಪಠನಮಾಡಬೇಕು" ಎಂಬ ಅರ್ಥವುಳ್ಳ ಶ್ಲೋಕವನ್ನು ಪಠಿಸಿ ಸ್ತುತಿಸಿ, ಅನಂತರ ಹೇಳಲು ತೊಡಗಿದನು.

೨. ಭವಿಷ್ಯವೆಂಬ ಮಹಾಕಲ್ಪದಲ್ಲಿ ವೈವಸ್ವತ ಮನ್ವಂತರವೆಂಬುದು ಒಂದು. ಆ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಕುರುಃಕ್ಷೇತ್ರದಲ್ಲಿ ಕೌರವರಿಗೂ ಪಾಂಡವರಿಗೂ ಮಹಾಯುದ್ಧವಾಯಿತು.

೩. ಆ ಘೋರಯುದ್ಧವು ಹದಿನೆಂಟುದಿನಗಳು ನಡೆಯಿತು. ಯುದ್ಧೋನ್ಮತ್ತರಾದ ಕೌರವರೆಲ್ಲರನ್ನೂ ಪಾಂಡವರು ಯುದ್ಧದಲ್ಲಿ ಜಯಿಸಿದರು.

೪. ಹಾಗೆ ಜಯ ಲಭಿಸಿದ ದಿನ ಸಾಯಂಕಾಲ ಭಗವಂತನಾದ ಕೃಷ್ಣನು ಮುಂದೆ ದುಃಷ್ಟಾರಿಷ್ಟ ಪ್ರಾಪ್ತಿಯಾಗುವುದನ್ನು ಅರಿತು, ಯೋಗಸ್ವರೂಪನೂ, ಪುರಾತನನೂ ಆದ ಪರಮೇಶ್ವರನನ್ನು ಭಕ್ತಿಪೂರ್ವಕವಾಗಿ ಸ್ತುತಿಸತೊಡಗಿದನು.

॥ ಕೃಷ್ಣ ಉವಾಚ ॥

ನಮಃ ಶಾಂತಾಯ ರುದ್ರಾಯ ಭೂತೇಶಾಯ ಕಪರ್ದಿನೇ ।
ಕಾಲಕರ್ತ್ರೇ ಜಗದ್ಭರ್ತ್ರೇ ಪಾಪಹರ್ತ್ರೇ ನಮೋನಮಃ ॥ ೭ ॥

ಪಾಂಡವಾನ್ರಕ್ಷ ಭಗವನ್ಮದ್ಭಕ್ತಾನ್ಭೂತಭೀರುಕಾನ್ ।
ಇತಿ ಶ್ರುತ್ವಾ ಸ್ತವಂ ರುದ್ರೋ ನಂದಿಯಾನೋಪರಿ ಸ್ಥಿತಃ ।
ರಕ್ಷಾರ್ಥಂ ಶಿಬಿರಾಣಾಂ ಚ ಪ್ರಾಪ್ತವಾಞ್ಛೂಲಹಸ್ತಧೃಕ್ ॥ ೮ ॥

ತದಾ ನೃಪಾಜ್ಞಯಾ ಕೃಷ್ಣಃ ಸ ಗತೋ ಗಜಸಾಹ್ವಯಮ್ ।
ಪಾಂಡವಾಃ ಪಂಚ ನಿರ್ಗತ್ಯ ಸರಸ್ವತ್ಯಾಸ್ತಟೇಽವಸನ್ ॥ ೯ ॥

ನಿಶೀಥೇ ದ್ರೌಣಿಭೋಜೌ ಚ ಕೃಪಸ್ತತ್ರ ಸಮಾಯಯುಃ ।
ತುಷ್ಟುವುರ್ಮನಸಾ ರುದ್ರಂ ತೇಭ್ಯೋ ಮಾರ್ಗಂ ಶಿವೋದದಾತ್ ॥ ೧೦ ॥

---

೭ ಕೃಷ್ಣನು ಸ್ತುತಿಸಿದ ಕ್ರಮ :—ಶಾಂತಸ್ವಭಾವನೂ, ಭಯಂಕರ ಸ್ವರೂಪನೂ, ಭೂತಗಳಿಗೆ ಅಧಿಪತಿಯೂ, ಜಟಾಜೂಟವುಳ್ಳವನೂ, ಕಾಲನಿಯಂತೃವೂ. ಜಗದ್ರಕ್ಷಕನೂ, ಪಾಪಧ್ವಂಸಕನೂ, ಆದ ಪರಮೇಶ್ವರನೇ! ನಿನಗೆ ನಮಸ್ಕಾರ.

೮. "ಸ್ವಾಮೀ ಭಗವಂತಾ! ಭೂತದಯಾಪಶ್ಚಾತ್ತಾಪಯುಕ್ತರೂ, ನನ್ನ ಭಕ್ತರೂ ಆದ ಪಾಂಡವರನ್ನು ನೀನೇ ರಕ್ಷಿಸಬೇಕು" ಎಂದನು. ಈ ಸ್ತೋತ್ರವನ್ನು ಕೇಳಿ ಈಶ್ವರನು ನಂದಿವಾಹನನಾಗಿ ಪಾಂಡವರ ಪಾಳೆಯವನ್ನು ರಕ್ಷಿಸುವುದಕ್ಕೋಸ್ಕರ ತ್ರಿಶೂಲವನ್ನು ಧರಿಸಿ ಕಾವಲಾಗಿ ನಿಂತನು.

೯. ಆಗ ಧರ್ಮರಾಜನ ಅನುಜ್ಞೆ ಪಡೆದು ಶ್ರೀ ಕೃಷ್ಣನು ಗಜಸನೆಂಬ ಸ್ಥಳಕ್ಕೆ ಹೋದನು. ಐವರು ಪಾಂಡವರೂ ರಣಭೂಮಿಯಿಂದ ಸರಸ್ವತೀ ತೀರಕ್ಕೆ ಬಂದು ತಳುಗಿದರು.

೧೦. ಅರ್ಧರಾತ್ರಿಯ ಸಮಯದಲ್ಲಿ ಅಶ್ವತ್ಥಾಮ, ಭೋಜ, ಕೃಪ ಈ ಮೂವರೂ ಪಾಂಡವರ ಪಾಳೆಯವನ್ನು ಪ್ರವೇಶಿಸಲು ಬಂದರು. ಅಲ್ಲಿ ಕಾವಲಾಗಿದ್ದ ಈಶ್ವರನನ್ನು ಕಂಡು ಮನಃಪೂರ್ವಕವಾಗಿ ಅವನನ್ನು ಸ್ತುತಿಮಾಡಿದರು. ಆಗ ಈಶ್ವರನು ಅವರಿಗೆ ದಾರಿಯನ್ನು ಬಿಟ್ಟುಕೊಟ್ಟನು.

ಅಶ್ವತ್ಥಾಮಾ ತು ಬಲವಾಞ್ಶಿವದತ್ತಮಸಿಂ ತದಾ ।
ಗೃಹೀತ್ವಾ ಸ ಜಘಾನಾಶು ಧೃಷ್ಟದ್ಯುಮ್ನಪುರಃ ಸರಾನ್ ॥ ೧೧ ॥

ಹತ್ವಾ ಯಥೇಷ್ಟಮಗಮದ್ದ್ರೌಣಿ ಸ್ತಾಭ್ಯಾಂಸಮನ್ವಿತಃ ॥ ೧೨ ॥

ಪಾರ್ಷತಸ್ಯೈವ ಸೂತಶ್ಚ ಹತಶೇಷೋ ಭಯಾತುರಃ ।
ಪಾಂಡವಾನ್ವರ್ಣಯಾಮಾಸ ಯಥಾ ಜಾತೋ ಜನಕ್ಷಯಃ ॥ ೧೩ ॥

ಆಗಸ್ಕೃತಂ ಶಿವಂ ಜ್ಞಾತ್ವಾ ಭೀಮಾದ್ಯಾಃ ಕ್ರೋಧಮೂರ್ಛಿತಾಃ ।
ಸ್ವಾಯುಧೈಸ್ತಾಡಯಾಮಾಸು ರ್ದೇವದೇವಂ ಪಿನಾಕಿನಂ ॥ ೧೪ ॥

ಅಸ್ತ್ರಶಸ್ತ್ರಾಣಿ ತೇಷಾಂ ತು ಶಿವದೇಹೇ ಸಮಾವಿಶನ್ ।
ದೃಷ್ಟ್ವಾ ತೇ ವಿಸ್ಮಿತಾಃ ಸರ್ವೇ ಪ್ರಜಘ್ನುಸ್ತಲಮುಷ್ಟಿಭಿಃ ॥ ೧೫ ॥

---

೧೧. ಪರಾಕ್ರಮಶಾಲಿಯಾದ ಅಶ್ವತ್ಥಾಮನು ಹಿಂದೆ ಶಿವನು ತನಗೆ ಕೊಟ್ಟಿದ್ದ ಕತ್ತಿಯನ್ನು ಆಗ ಹಿಡಿದು, ಶೀಘ್ರದಲ್ಲಿ ಧೃಷ್ಟದ್ಯುಮ್ನ (ಉಪಪಾಂದವರು) ಮೊದಲಾದವರನ್ನು ಕೊಂದುಹಾಕಿದನು.

೧೨-೧೩. ಅನಂತರ ಅಶ್ವತ್ಥಾಮನು ಭೆದೇಜ, ಕೃಪ, ಇವರ ಜತೆ ಶತ್ರು ಹನನಕಾರ್ಯ ಸಾಧನೆಯಾಯಿತೆಂಬ ಭಾವನೆಯಿಂದ ಮನಬಂದಕಡೆ ಹೊರಟು ಹೋದನು. ಪೃಷತರಾಜನ ಸಾರಥಿಯೊಬ್ಬನು ಏಟಿಗೆ ಸಿಕ್ಕದೆ ತಪ್ಪಿಸಿಕೊಂಡು ಭಯಾತುರನಾಗಿ ಪಾಂಡವರಿದ್ದಲ್ಲಿಗೆ ಬಂದು, ಅವರ ಕಡೆಯವರು ನಾಶವಾದ ಸಂಗತಿಯನ್ನು ವರ್ಣಿಸಿದನು.

೧೪. ಇದನ್ನು ಕೇಳಿ ಭೀಮಾದಿಗಳು ಶಿವನಿಂದಲೇ ತಮಗೆ ಈ ಪಾಡು ಸಂಭವಿಸಿತೆಂದು ನಿಶ್ಚಯಿಸಿ, ಕ್ರೋಧಾಂಧರಾಗಿ ತಮ್ಮ ಆಯುಧಗಳನ್ನು ತೆಗೆದುಕೊಂಡು ದೇವಶ್ರೇಷ್ಠನಾದ ಪರಮೇಶ್ವರನ ಮೇಲೆ ಪ್ರಯೋಗಿಸಿದರು.

೧೫. ಹೀಗೆ ಅವರು ಪ್ರಯೋಗಿಸಿದ ಶಸ್ತ್ರಾಸ್ತ್ರಗಳೆಲ್ಲವೂ ಈಶ್ವರನ ದೇಹದಲ್ಲೇ ಐಕ್ಯವಾದುವು. ಹೀಗಾದುದನ್ನು ನೋಡಿ ಅವರೆಲ್ಲ ಆಶ್ಚರ್ಯಗೊಂಡು ಪುನಃ ಅವನನ್ನು ತಮ್ಮ ಕೈಮುಷ್ಟಿಗಳಿಂದಲೇ ಹೊಡೆಯಲು ಆರಂಭಿಸಿದರು.

ತಾಞ್ಛಶಾಪ ತದಾ ರುದ್ರೋ ಯೂಯಂ ಕೃಷ್ಣಪ್ರಪೂಜಕಾಃ ।
ಅತೋಽಸ್ಮಾಭೀ ರಕ್ಷಣೀಯಾ ವಧಯೋಗ್ಯಾಶ್ಚ ವೈ ಭುವಿ ॥ ೧೬ ॥

ಪುನರ್ಜನ್ಮ ಕಲೌ ಪ್ರಾಪ್ಯ ಭೋಕ್ಷ್ಯತೇ ಚಾಪರಾಧಕಮ್ ।
ಇತ್ಯುಕ್ತ್ವಾಽನ್ತರ್ದಧೇ ದೇವಃ ಪಾಂಡವಾ ದುಃಖಿತಾಸ್ತದಾ ॥ ೧೭ ॥

ಹರಿಂ ಶರಣಮಾಜಗ್ಮುರಪರಾಧನಿವೃತ್ತಯೇ ।
ತದಾ ಕೃಷ್ಣಯುತಾಃ ಸರ್ವೇ ಪಾಂಡವಾಃ ಶಸ್ತ್ರವರ್ಜಿತಾಃ ॥ ೧೮ ॥

ತುಷ್ಟುವುರ್ಮನಸಾ ರುದ್ರಂ ತದಾ ಪ್ರಾದುರಭೂಚ್ಛಿವಃ ।
ವರಂ ವರಯತ ಪ್ರಾಹ ಕೃಷ್ಣಃ ಶ್ರುತ್ವಾಬ್ರವೀದಿದಂ ॥ ೧೯ ॥

ಶಸ್ತ್ರಾಣ್ಯಸ್ತ್ರಾಣಿ ಯಾನ್ಯೇವ ತ್ವದಂಗೇ ಕ್ಷಪಿತಾನಿ ವೈ ।
ಪಾಂಡವೇಭ್ಯಶ್ಚ ದೇಹಿ ತ್ವಂ ಶಾಪಸ್ಯಾನುಗ್ರಹಂ ಕುರು ॥ ೨೦ ॥

---

೧೬-೧೭. ಇದರಿಂದ ಪರಮೇಶ್ವರನು ಕುಪಿತನಾಗಿ ಅವರುಗಳನ್ನು ಕುರಿತು " ನ್ಯಾಯವಾಗಿ ನೀವೆಲ್ಲರೂ ವಧೆಗೆ ಅರ್ಹರು. ಆದರೆ ಕೃಷ್ಣನ ಭಕ್ತರಾಗಿರುವುದರಿಂದ ಕೊಲ್ಲದೆ ಕಾಪಾಡಬೇಕಾಗಿದೆ. ನೀವು ಮುಂದೆ ಕಲಿಯುಗದಲ್ಲಿ ಭೂಲೋಕದಲ್ಲಿ ಜನ್ಮವೆತ್ತಿ, ನಿಮ್ಮ ಅಪರಾಧಕ್ಕೆ ತಕ್ಕ ಫಲವನ್ನು ಅನುಭವಿಸುವಿರಿ" ಎಂಬದಾಗಿ ಶಾಪ ಕೊಟ್ಟು ಈಶ್ವರನು ಅಲ್ಲಿಯೇ ಅಂತರ್ಧಾನವಾದನು. ಇದನ್ನು ಕೇಳಿ ಪಾಂಡವರು ತಮ್ಮ ಅವಿಜ್ಞತೆಗಾಗಿ ದುಃಖಿತರಾದರು.

೧೮-೨೦. ಅನಂತರ ಪಾಂಡವರು ತಮ್ಮ ಅವಿಜ್ಞತೆಯ ಪರಿಹಾರಕ್ಕಾಗಿ ಶ್ರೀ ಕೃಷ್ಣನನ್ನು ಮರೆಹೊಕ್ಕರು. ಆಗ ಕೃಷ್ಣನೂ ಮತ್ತು ಶಸ್ತ್ರರಹಿತರಾದ ಪಾಂಡವರೂ ಸಹ, ಭಕ್ತಿನಮ್ರರಾಗಿ ಪರಮೇಶ್ವರನನ್ನು ಸ್ತುತಿಮಾಡಿದರು. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ, " ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿ " ಎಂದು ಹೇಳಲು ಆ ಮಾತನ್ನು ಕೇಳಿ ಶ್ರೀ ಕೃಷ್ಣನು "ಪರಮೇಶ್ವರಾ! ನಿನ್ನ ಶರೀರದ ಮೇಲೆ ಪ್ರಯೋಗಿಸಲ್ಪಟ್ಟ ನಿನ್ನ ದೇಹದಲ್ಲಿಯೇ ಅಡಗಿಕೊಂಡಿರುವ ಶಸ್ತ್ರಾಸ್ತ್ರಗಳನ್ನೆಲ್ಲಾ ಪುನಃ ಪಾಂಡವರಿಗೆ ಕೊಟ್ಟು ಅವರಿಗೆ ಕೊಟ್ಟಿರುವ ಶಾಪವನ್ನು ವಿಮೋಚನೆಮಾಡುವ ಅನುಗ್ರಹ ತೋರಿಸು " ಎಂಬದಾಗಿ ಪ್ರಾರ್ಥಿಸಿದನು.

ಇತಿ ಶ್ರುತ್ವಾ ಶಿವಃ ಪ್ರಾಹ ಕೃಷ್ಣದೇವ ನಮೋಽಸ್ತು ತೇ ।
ಅಪರಾಧೋ ನ ಮೇ ಸ್ವಾಮಿನ್ಮೋಹಿತೋಽಹಂ ತವಾಜ್ಞಯಾ ॥ ೨೧ ॥

ತದ್ವಶೇನ ಮಯಾ ಸ್ವಾಮಿನ್ ದತ್ತಃ ಶಾಪೋ ಭಯಂಕರಃ ।
ನಾನ್ಯಥಾ ವಚನಂ ಮೇ ಸ್ಯಾದಂಶಾವತರಣಂ ಭವೇತ್ ॥ ೨೨ ॥

ವತ್ಸರಾಜಸ್ಯ ಪುತ್ರತ್ವಂ ಗಮಿಷ್ಯತಿ ಯುಧಿಷ್ಠಿರಃ ।
ಬಲಖಾನಿರಿತಿ ಖ್ಯಾತಃ ಶಿರೀಷಾಖ್ಯಪುರಾಧಿಪಃ ॥ ೨೩ ॥

ಭೀಮೋ ದುರ್ವಚನಾದ್ದುಷ್ಟೋ ಮ್ಲೇಚ್ಛಯೋನೌ ಭವಿಷ್ಯತಿ ।
ವೀರಣೋ ನಾಮ ವಿಖ್ಯಾತಃ ಸ ವೈ ವನರಸಾಧಿಪಃ ॥ ೨೪ ॥

ಅರ್ಜುನಾಂಶಶ್ಚ ಮದ್ಭಕ್ತೋ ಜನಿಷ್ಯತಿ ಮಹಾಮತಿಃ ।
ಪುತ್ರಃ ಪರಿಮಲಸ್ಯೈವ ಬ್ರಹ್ಮಾನಂದ ಇತಿ ಸ್ಮೃತಃ ॥ ೨೫ ॥

---

೨೧. ಪರಮೇಶ್ವರನು ಈ ವಾಕ್ಯವನ್ನು ಕೇಳಿ " ಅಯ್ಯಾ ಶ್ರೀಕೃಷ್ಣ ! ನಿನಗೆ ನಮಸ್ಕಾರ. ಇದರಲ್ಲಿ ನನ್ನ ಅಪರಾಧವೇನೂ ಇಲ್ಲ. ನಿನ್ನ ಆಜ್ಞೆಯಿಂದ ನಾನು ಮೋಹಗೊಂಡೆನು. "

೨೨. " ಹಾಗೆ ನಿನ್ನ ದೆಸೆಯಿಂದ ಮೋಹಗೊಂಡಾಗ ನಾನು ಭಯಂಕರವಾದ ಶಾಪಕೊಟ್ಟಿರುವೆನು. ನನ್ನ ವಚನವು ಎಂದಿಗೂ ವ್ಯರ್ಥವಾಗತಕ್ಕದ್ದಲ್ಲ. ಇವರೆಲ್ಲರೂ ಕಲಿಯುಗದಲ್ಲಿ ಅವತರಿಸಲೇ ಬೇಕು. "

೨೩. " ಯುಧಿಷ್ಠಿರನು ವತ್ಸರಾಜನ ಮಗನಾಗಿ ಹುಟ್ಟಿ ಬಲಖಾನಿ ಎಂಬ ಹೆಸರಿನಿಂದ ವಿಖ್ಯಾತನಾಗಿ ಶಿರೀಷಪಟ್ಟಣದ ಅಧಿಪತಿಯಾಗುವನು. "

೨೪. " ಯಾವಾಗಲೂ ಕೆಟ್ಟ ಮಾತುಗಳನ್ನು ಆಡುತ್ತಿರುವ ಭೀಮನು ಮ್ಲೇಚ್ಛಜಾತಿಯಲ್ಲಿ ಹುಟ್ಟಿ, ದುಷ್ಟನಾಗಿ ವೀರಣನೆಂಬ ಹೆಸರಿನಿಂದ ಪ್ರಸಿದ್ಧನಾಗಿ (ಅರಣ್ಯದಲ್ಲಿ ಮರಗಳಿಂದ ಮದ್ಯವನ್ನು ತೆಗೆಯುವ ಖಾತೆಯ ಅಧಿಪತಿ) ವನರಸಾಧಿಪತಿಯಾಗುವನು. "

೨೫. " ಮಹಾಮೇಧಾವಿಯೂ, ನನ್ನ ಭಕ್ತನೂ ಆದ ಅರ್ಜುನನು ಪರಿಮಳನೆಂಬವನಿಗೆ ಮಗನಾಗಿ ಜನಿಸಿ ಬ್ರಹ್ಮಾನಂದನೆಂಬ ಹೆಸರಿನಿಂದ ಪ್ರಸಿದ್ಧನಾಗುವನು. "

ಕಾನ್ಯಕುಬ್ಜೇ ಹಿ ನಕುಲೋ ಭವಿಷ್ಯತಿ ಮಹಾಬಲಃ ।
ರತ್ನಭಾನುಸುತೋಽಸೌ ವೈ ಲಕ್ಷಣೋ ನಾಮ ವಿಶ್ರುತಃ ॥ ೨೬ ॥

ಸಹದೇವಸ್ತು ಬಲವಾಞ್ಜನಿಷ್ಯತಿ ಮಹಾಮತಿಃ ।
ಭೀಷ್ಮಸಿಂಹಸುತೋ ಜಾತೋ ದೇವಸಿಂಹ ಇತಿ ಸ್ಮೃತಃ ॥ ೨೭ ॥

ಧೃತರಾಷ್ಟ್ರಾಂಶ ಏವಾಸೌ ಜನಿಷ್ಯತ್ಯಜಮೇರಕೇ ।
ಪೃಥಿವೀರಾಜ ಇತಿ ಸ ದ್ರೌಪದೀ ತತ್ಸುತಾ ಸ್ಮೃತಾ ॥ ೨೮ ॥

ವೇಲಾ ನಾಮ್ನಾ ಚ ವಿಖ್ಯಾತಾ ತಾರಕಃ ಕರ್ಣ ಏವ ಹಿ ।
ರಕ್ತಬೀಜಸ್ತಥಾ ರುದ್ರೋ ಭವಿಷ್ಯತಿ ಮಹೀತಲೇ ॥ ೨೯ ॥

ಕೌರವಾಶ್ಚ ಭವಿಷ್ಯಂತಿ ಮಾಯಾಯುದ್ಧವಿಶಾರದಾಃ ।
ಪಾಂಡುಪಕ್ಷಾಶ್ಚ ತೇ ಸರ್ವೇ ಧರ್ಮಿಣೋ ಬಲಶಾಲಿನಃ ॥ ೩೦ ॥

---

೨೬. "ಮಹಾಬಲಶಾಲಿಯಾದ ನಕುಲನು ಕನ್ಯಾಕುಬ್ಜದಲ್ಲಿ ರತ್ನಭಾನುವೆಂಬವನಿಗೆ ಮಗನಾಗಿ ಜನಿಸಿ ಲಕ್ಷಣನೆಂಬ ಹೆಸರಿನಿಂದ ಪ್ರಸಿದ್ಧಿಹೊಂದುವನು."

೨೭. ಶೂರನೂ ಬುದ್ಧಿಶಾಲಿಯೂ ಆದ ಸಹದೇವನು ಭೀಷ್ಮಸಿಂಹನಿಗೆ ಮಗನಾಗಿ ಜನಿಸಿ, ದೇವಸಿಹ್ಮನೆಂಬ ಹೆಸರಿನಿಂದ ಪ್ರಸಿದ್ಧಿಹೊಂದುವನು

೨೮. ಧೃತರಾಷ್ಟ್ರನು ಅಜಮೇರು ಎಂಬ ಸ್ಥಳದಲ್ಲಿ ಪೃಥಿವೀರಾಜನೆಂಬ ಹೆಸರಿನಿಂದ ಅವತರಿಸುವನು. ದೌಪದಿಯು ಅವನ ಪುತ್ರಿಯಾಗಿ ಜನಿಸಿ ವೇಲಾ ಎಂಬ ಹೆಸರಿನಿಂದ ವಿಖ್ಯಾತೆಯಾಗುವಳು

೨೯-೩೦. ಕರ್ಣನು ತಾರಕಾಸುರನಾಗುವನು. ರುದ್ರನು ರಕ್ತಬೀಜಾಸುರನಾಗಿ ಜನಿಸುವನು. ಕೌರವರ ಮಾಯಾಯುದ್ಧ ಮಾಡುವುದರಲ್ಲಿ ನಿಪುಣರಾಗಿ ಪಾಂಡವರ ಪಕ್ಷಕ್ಕೇ ಸೇರಿ ಧರ್ಮಿಷ್ಠರೂ ಬಲಿಷ್ಠರೂ ಆಗುವರು." ಎಂಬದಾಗಿ ಹೇಳಿದನು.

॥ ಸೂತ ಉವಾಚ ॥

ಇತಿ ಶ್ರುತ್ವಾ ಹರಿಃ ಪ್ರಾಹ ವಿಹಸ್ಯ ಪರಮೇಶ್ವರಂ ।
ಮಯಾ ಶಕ್ತ್ಯವತಾರೇಣ ರಕ್ಷಣೀಯಾ ಹಿ ಪಾಂಡವಾಃ ॥ ೩೧ ॥

ಮಹಾವತೀ ಪುರೀ ರಮ್ಯಾ ಮಾಯಾದೇವೀವಿನಿರ್ಮಿತಾ ।
ದೇಶರಾಜಸುತಸ್ತತ್ರ ಮಮಾಂಶೋ ಹಿ ಜನಿಷ್ಯತೇ ॥ ೩೨ ॥

ದೇವಕೀಜಠರೇ ಜನ್ಮೋದಯಸಿಂಹ ಇತಿ ಸ್ಮೃತಃ ।
ಆಹ್ಲಾದೋ ಮಮ ಧಾಮಾಂಶೋ ಜನಿಷ್ಯತಿ ಗುರುರ್ಮಮ ॥ ೩೩ ॥

ಹತ್ವಾಗ್ನಿವಂಶಜಾನ್ಭೂಪಾನ್ಸ್ಥಾಪಯಿಷ್ಯಾಮಿ ವೈ ಕಲಿಂ ।
ಇತಿ ಶ್ರುತ್ವಾ ಶಿವೋ ದೇವಸ್ತತ್ರೈವಾಂತರಧೀಯತ ॥ ೩೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ವಿಕ್ರಮಾಖ್ಯಾನಕಾಲೇ ಪ್ರಥಮೋಽಧ್ಯಾಯಃ

---

೩೧. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಶಿವನು ಹೇಳಿದ ಮಾತನ್ನು ಕೇಳಲು ಕೃಷ್ಣನು ಸ್ವಲ್ಪ ನಕ್ಕು, "ಪರಮೇಶ್ವರನನ್ನು ಕುರಿತು, ನಾನು ಶಕ್ತಿಯ ಅವತಾರಮಾಡಿ ಪಾಂಡವರನ್ನು ರಕ್ಷಿಸಲೇಬೇಕು.

೩೨-೩೩. ಮಾಯೆಯಿಂದ ನಿರ್ಮಿತವಾದ ಮಹಾವತಿಯೆಂಬ ಸುಂದರವಾದ ನಗರದಲ್ಲಿ ನಾನು ದೇಶರಾಜನ ಪತ್ನಿಯಾದ ದೇವಕಿಯ ಗರ್ಭದಲ್ಲಿ ಜನಿಸಿ, ಉದಯ ಸಿಂಹ (ಕೃಷ್ಣಾಂಶ) ನೆಂಬದಾಗಿ ಪ್ರಸಿದ್ಧನಾಗುವೆನು. ನನ್ನ ತೇಜಸ್ಸಿನ ಒಂದು ಅಂಶ ಆಹ್ಲಾದನೆಂಬ ಹೆಸರಿನಿಂದ ಅವತರಿಸಿ ನನಗೆ (ಅಣ್ಣ) ಗುರುವಾಗುವನು.

೩೪. ಆ ಬಳಿಕ ಅಗ್ನಿವಂಶಸಂಭೂತರಾದ ರಾಜರೆಲ್ಲರನ್ನೂ ಧ್ವಂಸಮಾಡಿ ಕಲಿಯನ್ನು ಸ್ಥಾಪಿಸುವೆನು" ಎಂಬದಾಗಿ ಶ್ರೀ ಕೃಷ್ಣನು ಹೇಳಲು ಶಿವನು ಇದನು ಕೇಳಿ ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸ ಸಮುದಾಯದಲ್ಲಿ
ಒಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ದ್ವಿತೀಯೋಽಧ್ಯಾಯಃ

---

॥ ಸೂತ ಉವಾಚ ॥

ಪ್ರಾತಃ ಕಾಲೇ ಚ ಸಂಪ್ರಾಪ್ತೇ ಪಾಂಡವಾಃ ಪುತ್ರಶೋಕಿನಃ ।
ಪ್ರೇತಕಾರ್ಯಾಣಿ ತೇ ಕೃತ್ವಾ ಭೀಷ್ಮಾಂತಿಕಮುಪಾಯಯುಃ ॥ ೧ ॥

ರಾಜಧರ್ಮಾನ್ ಮೋಕ್ಷಧರ್ಮಾನ್ ದಾನಧರ್ಮಾನ್ ವಿಭಾಗಶಃ ।
ಶ್ರುತ್ವಾ ಯಜನ್ನಶ್ವಮೇಧೈಸ್ತ್ರಿಭಿರುತ್ತಮಕರ್ಮಭಿಃ ॥ ೨ ॥

---

## ಎರಡನೆಯ ಅಧ್ಯಾಯ

೧ ಸೂತಮುನಿವರ್ಯನು ಹೇಳುತ್ತಾನೆ—ಮಾರನೆಯದಿನ ಬೆಳಗಾಗುತ್ತಲೆ ಪಾಂಡವರೆಲ್ಲರೂ ತಮ್ಮ ಪಾಳಯಕ್ಕೆ ಬಂದು ತಮ್ಮ ಪುತ್ರರು, ಭಾವಮೈದ, ಎಲ್ಲರೂ ಮೃತರಾಗಿರುವುದನ್ನು ಕಂಡು, ಪುತ್ರಶೋಕದಿಂದ ವ್ಯಥೆಪಡುತ್ತಾ, ಮೃತರಿಗೆ ಉತ್ತರ ಕ್ರಿಯಾದಿಗಳನ್ನು ನೆರವೇರಿಸಿ ಭೀಷ್ಮರ ಸಮೀಪಕ್ಕೆ ಬಂದರು.

೨. ಅಲ್ಲಿ ಅವರಿಗೆ ನಮಸ್ಕಾರಮಾಡಲು ಅವರು ಈ ಪಾಂಡವರಿಗೆ ಮನಶ್ಶಾಂತಿಯುಂಟಾಗಲೆಂದು ರಾಜಧರ್ಮ, ಮೋಕ್ಷಧರ್ಮ, ದಾನಧರ್ಮ, ಇವುಗಳ ವಿಚಾರವನ್ನು ಪ್ರತ್ಯೇಕವಾಗಿ ನಿರೂಪಿಸಿದರು.

ಷಟ್‌ತ್ರಿಂಶದಬ್ದರಾಜ್ಯಂ ಹಿ ಕೃತ್ವಾ ಸ್ವರ್ಗಪುರಂ ಯಯುಃ ।
ಜನಿಷ್ಯಂತೇ ತದಂಶಾ ವೈ ಕಲಿಧರ್ಮವಿವೃದ್ಧಯೇ ॥ ೩ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಸ ಮುನಿಃ ಸರ್ವಾನ್ಪುನಃ ಸೂತೋ ವದಿಷ್ಯತಿ ।
ಗಚ್ಛಧ್ವಂ ಮುನಯಃ ಸರ್ವೇ ಯೋಗನಿದ್ರಾವಶೋ ಹ್ಯಹಂ ॥ ೪ ॥

ಚಕ್ರತೀರ್ಥೇ ಸಮಾಧಿಸ್ಥೋ ಧ್ಯಾಯೇಽಹಂ ತ್ರಿಗುಣಾತ್ಪರಂ ।
ಇತಿ ಶ್ರುತ್ವಾ ತು ಮುನಯೋ ನೈಮಿಷಾರಣ್ಯವಾಸಿನಃ ॥ ೫ ॥

ಯೋಗಸಿದ್ಧಿಂ ಸಮಾಸ್ಥಾಯ ಗಮಿಷ್ಯಂತ್ಯಾತ್ಮನೋಂತಿಕೇ ।
ದ್ವಾದಶಾಬ್ದಶತೇ ಕಾಲೇಽತೀತೇ ತೇ ಶೌನಕಾದಯಃ ॥ ೬ ॥

---

೩. ಅನಂತರ ಪಾಂಡವರು ಅವುಗಳ ಅಭಿಪ್ರಾಯವನ್ನು ಚೆನ್ನಾಗಿ ತಿಳಿದು ಶ್ರೇಷ್ಠವಾದ ಮೂರು ಅಶ್ವಮೇಧಯಾಗಗಳನ್ನು ಮಾಡಿ, ಮೂವತ್ತಾರು ವರ್ಷ ಪರ್ಯಂತ ರಾಜ್ಯವಾಳಿ, ಬಳಿಕ ಸ್ವರ್ಗಲೋಕಕ್ಕೆ ತೆರಳಿದರು. ಆ ಪಾಂಡವರ ಅಂಶ ದವರು ಕಲಿಯುಗದಧರ್ಮದ ಸ್ಥಾಪನೆಗೋಸ್ಕರ ಅವತರಿಸುವರು ಎಂಬದಾಗಿ ಹೇಳಿದನು.

೪. ವ್ಯಾಸರು ಹೇಳುತ್ತಾರೆ—ಸೂತಮುನಿವರ್ಯನು ಇಷ್ಟುಮಾತನ್ನು ಹೇಳಿ ಅನಂತರ ಋಷಿಗಳನ್ನು ಕುರಿತು "ನಾನು ಈಗ ಯೋಗನಿದ್ರಾಪರನಾಗಬೇಕು. ಚಕ್ರತೀರ್ಥದಲ್ಲಿ ಸಮಾಧಿಯೋಗಮಗ್ನನಾಗಿ ಸತ್ವ ರಜಸ್ಸು ತಮಸ್ಸು ಈ ಗುಣ ಗಳಿಂದ ಅತೀತವೂ ಶ್ರೇಷ್ಠವೂ ಆದ ಪರಬ್ರಹ್ಮವನ್ನು ಧ್ಯಾನಮಾಡುವೆನು" ಎಂಬ ದಾಗಿ ಹೇಳಿದನು.

೬-೭. ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳೆಲ್ಲರೂ ಈ ಮಾತನ್ನು ಕೇಳಿ, ಈ ಮಹಾನುಭಾವನು ಯೋಗಸಿದ್ಧಿಯನ್ನು ಪಡೆದು ಅನಂತರ ನಮಗೆ ದರ್ಶನ ಕೊಡುವನು" ಎಂದುಕೊಂಡು ನಿರೀಕ್ಷಿಸುತ್ತಿದ್ದರು. ಸಾವಿರದ ಇನ್ನೂರು ವರ್ಷಗಳು ಕಳೆದನಂತರ ಉಕ್ತಕಾಲಕ್ಕೆ ಶೌನಕಾದಿ ಋಷಿಗಳು ಬಂದು, ದೇವಖಾತವೆಂಬ ತೀರ್ಥ

ಉತ್ಥಾಯ ದೇವಖಾತೇ ಚ ಸ್ನಾನಧ್ಯಾನಾದಿಕಾಃ ಕ್ರಿಯಾಃ ।
ಕೃತ್ವಾ ಸೂತಾಂತಿಕಂ ಗತ್ವಾ ವದಿಷ್ಯಂತಿ ಪುನರ್ವಚಃ ॥ ೭ ॥

॥ ಋಷಯ ಊಚುಃ ॥

ವಿಕ್ರಮಾಖ್ಯಾನಕಾಲೋಽಯಂ ದ್ವಾಪರೇ ಚ ಶಿವಾಜ್ಞಯಾ ।
ವಿನೀತಾನ್ನೃಪಾನ್ಬ್ರೂಹಿ ತದಾ ತಾನ್ನೃಪತೀನ್ವದ ॥ ೮ ॥

॥ ಸೂತ ಉವಾಚ ॥

ಸ್ವರ್ಗತೇ ವಿಕ್ರಮಾದಿತ್ಯೇ ರಾಜಾನೋ ಬಹುಧಾಽಭವನ್ ।
ತಥಾಷ್ಟಾದಶ ರಾಜ್ಯಾನಿ ತೇಷಾಂ ನಾಮಾನಿ ಮೇ ಶೃಣು ॥ ೯ ॥

ಪಶ್ಚಿಮೇ ಸಿಂಧುನದ್ಯಂತೇ ಸೇತುಬಂಧೇ ಹಿ ದಕ್ಷಿಣೇ ।
ಉತ್ತರೇ ಬದರೀಸ್ಥಾನೇ ಪೂರ್ವೇ ಚ ಕಪಿಲಾಂತಿಕೇ ॥ ೧೦ ॥

ಅಷ್ಟಾದಶೈವ ರಾಷ್ಟ್ರಾಣಿ ತೇಷಾಂ ಮಧ್ಯೇ ಬಭೂವಿರೇ ।
ಇಂದ್ರಪ್ರಸ್ಥಂ ಚ ಪಾಂಚಾಲಂ ಕುರುಕ್ಷೇತ್ರಂ ಚ ಕಾಪಿಲಂ ॥ ೧೧ ॥

---

ಕ್ಷೇತ್ರದಲ್ಲಿ ಸ್ನಾನಧ್ಯಾನಾದಿಗಳನ್ನು ಮುಗಿಸಿಕೊಂಡು ಪುನಃ ಸೂತಮುನಿವರ್ಯನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಇಂತೆಂದರು.

೮. ಋಷಿಗಳು ಹೇಳುತ್ತಾರೆ—"ಪೂಜ್ಯನಾದ ಸೂತಮಹರ್ಷಿಯೇ ! ಇದು ದ್ವಾಪರಯುಗದಲ್ಲಿ ವಿಕ್ರಮಾಖ್ಯಾನಕಾಲವೆಂದು ಪರಮೇಶ್ವರನು ಅಪ್ಪಣೆ ಕೊಡಿಸಿದನು. ಈ ಯುಗದಲ್ಲಿ ವಿನಯಶೀಲರಾದ ರಾಜರು ಯಾರು ಯಾರು ಇದ್ದರು ಎಂಬುದನ್ನು ನೀನು ನಮಗೆ ತಿಳಿಸು" ಎಂದರು.

೯. ಅದನ್ನು ಕೇಳಿ ಸೂತಮುನಿವರ್ಯನು ಹೇಳುತ್ತಾನೆ—ವಿಕ್ರಮಾದಿತ್ಯ ಮಹಾರಾಜನು ಸ್ವರ್ಗಸ್ಥನಾದ ಮೇಲೆ ಅನೇಕ ರಾಜರು ರಾಜ್ಯವಾಳಿದರು. ಅವರುಗಳು ಆಳುತ್ತಿದ್ದ ಪ್ರಸಿದ್ಧವಾದ ಹದಿನೆಂಟು ದೇಶಗಳ ಹೆಸರುಗಳನ್ನು ಹೇಳುತ್ತೇನೆ ಕೇಳು.

೧೦-೧೩. ಪಶ್ಚಿಮ ದಿಕ್ಕಿನಲ್ಲಿ ಸಿಂಧುನದಿಯ ಪರ್ಯಂತ, ದಕ್ಷಿಣದಲ್ಲಿ ರಾಮ ಸೇತುವಿನ ವರೆಗೆ, ಉತ್ತರ ದಿಕ್ಕಿನಲ್ಲಿ ಬದರಿಕಾಶ್ರಮದ ವರೆಗೆ, ಪೂರ್ವ ದಿಕ್ಕಿನಲ್ಲಿ ಕಪಿಲಾಶ್ರಮದ ವರೆಗೆ ಪ್ರಸರಿಸಿರುವ ಭೂಭಾಗವಾದ ಈ ಭರತ ಭೂಮಿಯಲ್ಲಿ ಇಂದ್ರ

ಅನ್ತರ್ವೇದೀ ವ್ರಜಥ್ಯೈವಾಜಮೇರಂ ಮರುಧನ್ವ ಚ ।
ಗೌರ್ಜರಂ ಚ ಮಹಾರಾಷ್ಟ್ರಂ ದ್ರಾವಿಡಂ ಚ ಕಲಿಂಗಕಂ ॥ ೧೨ ॥

ಅವಂತ್ಯಂ ಚೋಡುಪಂ ವಂಗಂ ಗೌಡಂ ಮಾಗಧಮೇವ ಚ ।
ಕೌಶಲ್ಯಂ ಚ ತಥಾ ಜ್ಞೇಯಂ ತೇಷಾಂ ರಾಜಾ ಪೃಥಕ್ಪೃಥಕ್ ॥ ೧೩ ॥

ನಾನಾಭಾಷಾಃ ಸ್ಥಿತಾಸ್ತತ್ರ ಬಹುಧರ್ಮಪ್ರವರ್ತಕಾಃ ।
ಏವಮಬ್ದಶತಂ ಜಾತಂ ತತಸ್ತೇ ವೈ ಶಕಾದಯಃ ॥ ೧೪ ॥

ಶ್ರುತ್ವಾ ಧರ್ಮವಿನಾಶಂ ಚ ಬಹುವೃಂದೈಃ ಸಮನ್ವಿತಾಃ ।
ಕೇಚಿತ್ತೀರ್ತ್ವಾ ಸಿಂಧುನದೀಮಾರ್ಯ್ಯದೇಶಂ ಸಮಾಗತಾಃ ॥ ೧೫ ॥

ಹಿಮಪರ್ವತಮಾರ್ಗೇಣ ಸಿಂಧುಮಾರ್ಗೇಣ ಚಾಗಮನ್ ।
ಜಿತ್ವಾರ್ಯ್ಯಾನ್‌ಲಾಠಯಿತ್ವಾ ತಾನ್ಸ್ವದೇಶಂ ಪುನರಾಯಯುಃ ॥ ೧೬ ॥

---

ಪ್ರಸ್ಥ, ಪಾಂಚಾಲ, ಕುರುಕ್ಷೇತ್ರ, ಕಾಪಿಲ, ಅಂತರ್ವೇದಿ, ವ್ರಜಥ್ಯಾ ಅಜಮೇರ, ಮರುಧನ್ವಾ, ಗೌರ್ಜರ, ಮಹಾರಾಷ್ಟ್ರ, ದ್ರಾವಿಡ, ಕಳಿಂಗ, ಅವಂತಿ, ಉಡುಪ, ವಂಗ, ಗೌಡ, ಮಾಗಧ, ಕೋಸಲ ಎಂಬ ಹೆಸರಿನ ಹದಿನೆಂಟು ರಾಷ್ಟ್ರಗಳು ಏರ್ಪಟ್ಟುವು. ಈ ಒಂದೊಂದು ರಾಷ್ಟ್ರಕ್ಕೂ ಪ್ರತ್ಯೇಕವಾಗಿ ಒಬ್ಬೊಬ್ಬ ರಾಜನು ಇರುತ್ತಿದ್ದನು.

೧೪-೧೬. ಆ ದೇಶಗಳಲ್ಲಿ ನಾನಾ ಧರ್ಮಾಶ್ರಯಗಳಾದ ಅನೇಕ ಭಾಷೆಗಳು ವ್ಯವಹಾರದಲ್ಲಿದ್ದುವು. ಈರೀತಿ ನೂರುವರ್ಷಗಳು ಕಳೆದುವು. ಅನಂತರ ಲೋಕದಲ್ಲಿ ಧರ್ಮವು ಖಿಲವಾಗುತ್ತಿರುವುದನ್ನು ನೋಡಿ, ಶಕರು ಮುಂತಾದ ಪರದೇಶದವರು ಗುಂಪುಗುಂಪಾಗಿ ಈ ದೇಶಕ್ಕೆ ಬರಬೇಕೆಂದು ಹೊರಟು, ಕೆಲವರು ಸಿಂಧೂನದಿಯನ್ನು ದಾಟಿ ಈ ಆರ್ಯದೇಶಕ್ಕೆ ಬಂದರು. ಮತ್ತೆ ಕೆಲವರು ಹಿಮಾಲಯಪರ್ವತದ ಕಣಿವೆಯನ್ನು ದಾಟಿಕೊಂಡು ಬಂದರು. ಇನ್ನು ಕೆಲವರು ಸಮುದ್ರಮಾರ್ಗವಾಗಿ ಬಂದು ಈ ಆರ್ಯರನ್ನು ಜಯಿಸಿ ಅವರಿದ್ದ ಜಾಗದಿಂದ ಅಟ್ಟಿ ಮತ್ತೆ ತಮ್ಮ ದೇಶಕ್ಕೆ ಹಿಂದಿರುಗಿದರು.

ಗೃಹೀತ್ವಾ ಯೋಷಿತಸ್ತೇಷಾಂ ಪರಂ ಹರ್ಷಮುಪಾಯಯುಃ ।
ಏತಸ್ಮಿನ್ನಂತರೇ ತತ್ರ ಶಾಲಿವಾಹನಭೂಪತಿಃ ॥ ೧೭ ॥

ವಿಕ್ರಮಾದಿತ್ಯಪೌತ್ರಶ್ಚ ಪಿತೃರಾಜ್ಯಂ ಗೃಹೀತವಾನ್ ।
ಜಿತ್ವಾ ಶಕಾನ್ ದುರಾಧರ್ಷಾಂಶ್ಚೀನತ್ತೈತ್ತಿರಿದೇಶಜಾನ್ ॥ ೧೮ ॥

ಬಾಹ್ಲೀಕಾನ್ ಕಾಮರೂಪಾಂಶ್ಚ ರೋಮಜಾನ್ಖುರಜಾಞ್ಛಠಾನ್ ।
ತೇಷಾಂ ಕೋಶಾನ್ಗೃಹೀತ್ವಾ ಚ ದಂಡಯೋಗ್ಯಾನಕಾರಯತ್ ॥ ೧೯ ॥

ಸ್ಥಾಪಿತಾ ತೇನ ಮರ್ಯಾದಾ ಮ್ಲೇಚ್ಛಾರ್ಯಾಣಾಂ ಪೃಥಕ್ಪೃಥಕ್ ।
ಸಿಂಧುಸ್ಥಾನಮಿತಿ ಜ್ಞೇಯಂ ರಾಷ್ಟ್ರಮಾರ್ಯಸ್ಯ ಚೋತ್ತಮಂ ॥ ೨೦ ॥

ಮ್ಲೇಚ್ಛಸ್ಥಾನಂ ಪರಂ ಸಿಂಧೋಃ ಕೃತಂ ತೇನ ಮಹಾತ್ಮನಾ ।
ಏಕದಾ ತು ಶಕಾಧೀಶೋ ಹಿಮತುಂಗಂ ಸಮಾಯಯೌ ॥ ೨೧ ॥

---

೧೭-೧೯. ಇನ್ನು ಕೆಲವರು ಆರ್ಯಮಹಿಳೆಯರ ಪಾತಿವ್ರತ್ಯವನ್ನು ಕೆಡಿಸಿ ಸಂತುಷ್ಟರಾದರು. ಈ ಕಾಲದಲ್ಲಿ ವಿಕ್ರಮಾದಿತ್ಯನ ಮೊಮ್ಮಗನಾದ ಶಾಲಿವಾಹನನು ರಾಜ್ಯಸೂತ್ರವನ್ನು ಕೈಗೊಂಡು ಮೊದಲು ದುಷ್ಟರಾದ ಶಕರನ್ನು ಜಯಿಸಿ ಅನಂತರ ಚೀನ, ತೈತ್ತಿರಿ, ಬಾಹ್ಲಿಕ ಕಾಮರೂಪ, ಇಲ್ಲಿನ ನಿವಾಸಿಗಳಾಗಿ ಹಿಂದೆ ಕಾಮಧೇನುವಿನ ರೋಮದಿಂದಲೂ, ಖುರದಿಂದಲೂ, ಜನಿಸಿದರೆಂದು ಹೇಳಿಸಿಕೊಳ್ಳುವ ಸೀಚರಾದ ರೋಮಜರು ಖುರಜರು ಇವರೇ ಮೊದಲಾದ ಪ್ರಬಲರನ್ನೆಲ್ಲಾ ಜಯಿಸಿ ಅವರ ಧನಕನಕಾದಿಗಳನ್ನು ವಶಪಡಿಸಿಕೊಂಡು ಅವರನ್ನು ಚೆನ್ನಾಗಿ ಶಿಕ್ಷಿಸಿದನು.

೨೦. ಮ್ಲೇಚ್ಛರಾಜ್ಯ ಮತ್ತು ಆರ್ಯರಾಜ್ಯದ ಮಧ್ಯದ ಎಲ್ಲೆಕಟ್ಟು ಶಾಲಿವಾಹನನಿಂದಲೇ ಸ್ಥಾಪಿತವಾಯಿತು. ಸಿಂಧೂನದಿಯ ಈಚಿನ ಪ್ರದೇಶವು ಆರ್ಯಭೂಮಿ ಎಂದೂ ;

೨೧. ಸಿಂಧುನದಿಯ ಆಚೆಯ ಪ್ರದೇಶವು ಮ್ಲೇಚ್ಛರಾಷ್ಟ್ರ ಎಂದೂ, ಆ ಮಹಾತ್ಮನು ನಿಷ್ಕರ್ಷೆಮಾಡಿದನು, ಶಕಾರಿಯೆನಿಸಿದ ಈ ಶಾಲಿವಾಹನನು ಒಂದು ಸಲ ಹಿಮತುಂಗವೆಂಬ ಒಂದು ಉನ್ನತ ಸ್ಥಳದ ಪುಣ್ಯಕ್ಷೇತ್ರಕ್ಕೆ ಹೋದನು.

ಹೂಣದೇಶಸ್ಯ ಮಧ್ಯೇ ವೈ ಗಿರಿಸ್ಥಂ ಪುರುಷಂ ಶುಭಂ ।
ದದರ್ಶ ಬಲವಾನ್ರಾಜಾ ಗೌರಾಂಗಂ ಶ್ವೇತವಸ್ತ್ರಕಂ ॥ ೨೨ ॥

ಕೋ ಭವಾನಿತಿ ತಂ ಪ್ರಾಹ ಸ ಹೋವಾಚ ಮುದಾನ್ವಿತಃ ।
ಈಶಪುತ್ರಂ ಚ ಮಾಂ ವಿದ್ಧಿ ಕುಮಾರೀಗರ್ಭಸಂಭವಂ ॥ ೨೩ ॥

ಮ್ಲೇಚ್ಛಧರ್ಮಸ್ಯ ವಕ್ತಾರಂ ಸತ್ಯವ್ರತಪರಾಯಣಂ ।
ಇತಿ ಶ್ರುತ್ವಾ ನೃಪಃ ಪ್ರಾಹ ಧರ್ಮಃ ಕೋ ಭವತೋ ಮತಃ ॥ ೨೪ ॥

ಶ್ರುತ್ವೋವಾಚ ಮಹಾರಾಜ ಪ್ರಾಪ್ತೇ ಸತ್ಯಸ್ಯ ಸಂಕ್ಷಯೇ ।
ನಿರ್ಮರ್ಯಾದೇ ಮ್ಲೇಚ್ಛದೇಶೇ ಮಸೀಹೋಽಹಂ ಸಮಾಗತಃ ॥ ೨೫ ॥

ಈಶಾಮಸೀ ಚ ದಸ್ಯೂನಾಂ ಪ್ರಾದುರ್ಭೂತಾ ಭಯಂಕರೀ ।
ತಾಮಹಂ ಮ್ಲೇಚ್ಛತಃ ಪ್ರಾಪ್ಯ ಮಸೀಹತ್ವಮುಪಾಗತಃ ॥ ೨೬ ॥

---

೨೨. ಹೂಣದೇಶದ ಮಧ್ಯೆ ಇರುವ ಆ ಬೆಟ್ಟದಲ್ಲಿ ಸುಂದರನೂ ಶುಭ್ರವಸ್ತ್ರ ಧರಿಸಿದವನೂ, ಗೌರವರ್ಣದ ದೇಹವುಳ್ಳವನೂ, ಬಲಶಾಲಿಯೂ, ಆದ ಪುರುಷನೊಬ್ಬನು ಕುಳಿತಿದ್ದುದನ್ನು ಕಂಡನು.

೨೩-೨೪. ಆಗ ಆತನನ್ನು ಕುರಿತು "ನೀನು ಯಾರು" ಎಂದು ಪ್ರಶ್ನಿಸಿದನು. ಅದಕ್ಕೆ ಆತನು "ನಾನು ಪರಶಿವನ ಪುತ್ರನು, ಕುಮಾರೀಗರ್ಭಸಂಭೂತನು. ಮ್ಲೇಚ್ಛ ಧರ್ಮ ಪ್ರವರ್ತಕನು, ಸತ್ಯವ್ರತದಲ್ಲಿ ಆಸಕ್ತನು ಎಂದು ತಿಳಿ" ಎಂದನು. ರಾಜನು ಈ ಮಾತನ್ನು ಕೇಳಿ ನಿನಗೆ "ಅಭಿಮತವಾದ ಧರ್ಮದ ಸ್ವರೂಪವು ಯಾವುದು ?" ಎಂದು ಕೇಳಿದನು.

೨೫-೨೬. ಈ ಮಾತನ್ನು ಕೇಳಿ ಆ ಪುರುಷನು "ಎಲೈ ರಾಜನೇ ! ಮ್ಲೇಚ್ಛ ದೇಶದಲ್ಲಿ ಸತ್ಯಕ್ಕೆ ಚ್ಯುತಿರೂಪವಾದ ದುರ್ವ್ಯಾಪಾರವು ಅಪರಿಮಿತವಾಗಿ ಉಂಟಾಗಲು ಮಸೀಹನೆಂಬ ಹೆಸರುಳ್ಳ ನಾನು ಇಲ್ಲಿಗೆ ಬಂದೆನು. ಈ ದೇಶದ ದರೋಡೆಕೋರರ ಜನಗಳಾದ ದಸ್ಯುಗಳಿಗೆ ಈಶಾಮಸಿಯೆಂಬ ಹೆಸರುಳ್ಳ ಭಯಂಕರ ಸ್ವರೂಪಿಣಿಯೊಬ್ಬಳು ಹುಟ್ಟಿದಳು. ನಾನು ಮ್ಲೇಚ್ಛರಿಂದ ಆಕೆಯನ್ನು ಪಡೆದು ಮಸೀಹತ್ವವನ್ನು ಹೊಂದಿದೆನು"

ಮ್ಲೇಚ್ಛೇಷು ಸ್ಥಾಪಿತೋ ಧರ್ಮೋ ಮಯಾ ತಚ್ಛೃಣು ಭೂಪತೇ ।
ಮಾನಸಂ ನಿರ್ಮಲಂ ಕೃತ್ವಾ ಮಲಂ ದೇಹೇ ಶುಭಾಶುಭಂ ॥ ೨೭ ॥

ನೈಗಮಂ ಜಪಮಾಸ್ಥಾಯ ಜಪೇತ ನಿರ್ಮಲಂ ಪರಂ ।
ನ್ಯಾಯೇನ ಸತ್ಯವಚಸಾ ಮನಸೈಕ್ಯೇನ ಮಾನವಃ ॥ ೨೮ ॥

ಧ್ಯಾನೇನ ಪೂಜಯೇದೀಶಂ ಸೂರ್ಯಮಂಡಲಸಂಸ್ಥಿತಂ ।
ಅಚಲೋಽಯಂ ಪ್ರಭುಃ ಸಾಕ್ಷಾತ್ತಥಾ ಸೂರ್ಯೋಽಚಲಃ ಸದಾ ॥ ೨೯ ॥

ತತ್ವಾನಾಂ ಚಲಭೂತಾನಾಂ ಕರ್ಷಣಃ ಸ ಸಮಂತತಃ ।
ಇತಿ ಕೃತ್ಯೇನ ಭೂಪಾಲ ಮಸೀಹಾ ವಿಲಯಂ ಗತಾ ॥ ೩೦ ॥

ಈಶಮೂರ್ತಿರ್ಹೃದಿ ಪ್ರಾಪ್ತಾ ನಿತ್ಯಶುದ್ಧಾ ಶಿವಂಕರೀ ।
ಈಶಾಮಸೀಹ ಇತಿ ಚ ಮಮ ನಾಮ ಪ್ರತಿಷ್ಠಿತಂ ॥ ೩೧ ॥

---

೨೭–೨೮. "ಎಲೈ ರಾಜನೇ ! ನಾನು ಮ್ಲೇಚ್ಛರಿಗೆ ಉಪದೇಶಮಾಡಿರುವ ಧರ್ಮವನ್ನು ಹೇಳುವೆನು ಕೇಳು. ಮಾನವನು ಮನಸ್ಸನ್ನು ನಿರ್ಮಲವಾಗಿಟ್ಟು ಕೊಂಡು (ಅಂತಃಶುದ್ಧನಾಗಿ) ದೇಹದ ಕಶ್ಮಲವನ್ನು ಹೋಗಲಾಡಿಸಿಕೊಂಡು (ಬಹಿಃ ಶುದ್ಧನಾಗಿ) ಶುಭಾಶುಭಗಳಲ್ಲಿ ಅನುಸೃತವಾಗಿರುವ ವೇದೋಕ್ತಮಂತ್ರ ಜಪವನ್ನು ಹಿಡಿದು, ನ್ಯಾಯದಿಂದಲೂ ಸತ್ಯವಾಕ್ಯಿನಿಂದಲೂ ಧೃಢಮನಸ್ಸಿನಿಂದಲೂ ಸಹ ಕೂಡಿ ಪರಿಶುದ್ಧವಾದ ಆ ಮಂತ್ರವನ್ನು ಜಪಿಸಬೇಕು.

೨೯. ಸೂರ್ಯಮಂಡಲದಲ್ಲಿ ನೆಲಸಿರುವ ಪರಮಾತ್ಮನನ್ನು ಧ್ಯಾನಪೂರ್ವಕ ವಾಗಿ ಅರ್ಚಿಸಬೇಕು. ಆ ಸೂರ್ಯನೂ ಸಹ ಅವಿನಾಶಿಯೂ ಸರ್ವಸಮರ್ಥನೂ ಆದ ಪರಮೇಶ್ವರನಂತೆಯೇ ಯಾವಾಗಲೂ ಚಾಂಚಲ್ಯರಹಿತನಾದವನು (ಅಚಲನು).

೩೦. ಚಂಚಲವಾದ ಪಂಚಭೂತಗಳನ್ನೂ ಪಂಚವಿಂಶತಿತತ್ವಗಳನ್ನೂ ಎಲ್ಲ ಕಡೆಗಳಿಂದಲೂ ಆಕರ್ಷಣೆಮಾಡುವ ಸಾಮರ್ಥ್ಯವುಳ್ಳವನು. ಈರೀತಿ ಆಚರಣೆ ಮಾಡುವುದರಿಂದ ನನ್ನ ಮಸೀಹಾ ಧರ್ಮವು ನಾಶವಾಯಿತು.

೩೧. ಈಗ ಮಂಗಳಕರವೂ ನಿತ್ಯಶುದ್ಧವೂ ಆದ ಪರಮೇಶ್ವರನ ಮೂರ್ತಿಯು ಹೃದಯದಲ್ಲಿ ಆವಿರ್ಭವಿಸಿದುದರಿಂದ ನನ್ನ ಹೆಸರು ಈಶಾಮಸೀಹ ಎಂದು ಆಯಿತು" ಎಂಬದಾಗಿ ಆ ಪುರುಷನು ಶಾಲಿವಾಹನನನ್ನು ಕುರಿತು ಹೇಳಿದನು.

ಇತಿ ಶ್ರುತ್ವಾ ಸ ಭೂಪಾಲೋ ನತ್ವಾ ತಂ ಮ್ಲೇಚ್ಛಪೂಜಕಂ ।
ಸ್ಥಾಪಯಾಮಾಸ ತಂ ತತ್ರ ಮ್ಲೇಚ್ಛಸ್ಥಾನೇ ಹಿ ದಾರುಣೇ ॥ ೩೨ ॥

ಸ್ವರಾಜ್ಯಂ ಪ್ರಾಪ್ತವಾನ್ರಾಜಾ ಹಯಮೇಧಮಚೀಕರತ್ ।
ರಾಜ್ಯಂ ಕೃತ್ವಾ ಸ ಷಷ್ಟ್ಯಬ್ದಂ ಸ್ವರ್ಗಲೋಕಮುಪಾಯಯೌ ॥ ೩೩ ॥

ಸ್ವರ್ಗತೇ ನೃಪತೌ ತಸ್ಮಿನ್ಯಥಾ ಚಾಸೀತ್ತಥಾ ಶೃಣು ॥ ೩೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಶಾಲೀವಾಹನ
ಕಾಲೋ ನಾಮ ದ್ವಿತೀಯೋಽಧ್ಯಾಯಃ



---

೩೨. ಈ ಮಾತುಗಳನ್ನು ಕೇಳಿ ಶಾಲಿವಾಹನ ಮಹಾರಾಜನು ಆ ಮ್ಲೇಚ್ಛ ಪೂಜಕನಿಗೆ ನಮಸ್ಕರಿಸಿ, ಅವನನ್ನು ಭಯಂಕರವಾದ ಆ ಮ್ಲೇಚ್ಛದೇಶದಲ್ಲಿಯೇ ಇರುವಂತೆ ಏರ್ಪಡಿಸಿದನು.

೩೩. ಅನಂತರ ಶಾಲಿವಾಹನ ರಾಜನು ತನ್ನ ದೇಶಕ್ಕೆ ಹಿಂತಿರುಗಿ ಬಂದು, ಅಶ್ವಮೇಧಯಾಗವನ್ನು ಮಾಡಿದನು. ಈ ಪ್ರಕಾರ ಶಾಲಿವಾಹನ ಮಹಾರಾಜನು ಅರವತ್ತು ವರ್ಷಗಳ ಪರ್ಯಂತ ರಾಜ್ಯವಾಳಿ ಸ್ವರ್ಗಕ್ಕೆ ತೆರಳಿದನು

೩೪. ಆ ಶಾಲಿವಾಹನ ಮಹಾರಾಜನು ಸ್ವರ್ಗಸ್ಥನಾದನಂತರ ನಡೆದ ವೃತ್ತಾಂತವನ್ನು ಹೇಳುವೆನು ಕೇಳು. ಎಂಬದಾಗಿ ಸೂತನು ಶೌನಕಾದಿಮುನಿಗಳನ್ನು ಕುರಿತು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದ ತೃತೀಯಃ
ಖಂಡದಲ್ಲಿ ಕಲಿಯುಗದ ಇತಿಹಾಸ ಸಮುದಾಯವೆಂಬ
ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ತೃತೀಯೋಽಧ್ಯಾಯಃ

॥ ಶ್ರೀ ಸೂತ ಉವಾಚ ॥

ಶಾಲಿವಾಹನವಂಶೇ ಚ ರಾಜಾನೋ ದಶ ಚಾಭವನ್ ।
ರಾಜ್ಯಂ ಪಂಚಶತಾಬ್ದಂ ಚ ಕೃತ್ವಾ ಲೋಕಾಂತರಂ ಯಯುಃ ॥ ೧ ॥

ಮರ್ಯಾದಾ ಕ್ರಮತೋ ಲೀನಾ ಜಾತಾ ಭೂಮಂಡಲೇ ತದಾ ।
ಭೂಪತಿರ್ದಶಮೋ ಯೋ ವೈ ಭೋಜರಾಜ ಇತಿ ಸ್ಮೃತಃ ।
ದೃಷ್ಟ್ವಾ ಪ್ರಕ್ಷೀಣಮರ್ಯಾದಾಂ ಬಲೀ ದಿಗ್ವಿಜಯಂ ಯಯೌ ॥ ೨ ॥

---

### ಮೂರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಶಾಲಿವಾಹನ ಮಹಾರಾಜನು ದಿವಂಗತನಾದ ಮೇಲೆ ಅವನ ವಂಶದಲ್ಲಿ ಹತ್ತುಮಂದಿ ರಾಜರು ಪಟ್ಟಕ್ಕೆ ಐದುನೂರು ವರ್ಷಗಳಕಾಲ ರಾಜ್ಯವಾಳಿ ಲೋಕಾಂತರವನ್ನೈದಿದರು.

೨. ಅನಂತರ ಭೂಮಂಡಲದಲ್ಲಿ ಆರ್ಯದೇಶದ ವಿಸ್ತಾರವು ಕ್ರಮವಾಗಿ ಕಡಿಮೆಯಾಗುತ್ತಾ ಬಂದಿತು. ಆ ವಂಶದಲ್ಲಿ ಹತ್ತನೆಯವನಾದ ಭೋಜರಾಜನು, ರಾಜ್ಯವು ಹೀಗೆ ಕ್ಷೀಣಸ್ಥಿತಿಗಿಳಿಯುತ್ತಿರುವುದನ್ನು ನೋಡಿ ತಾನು ಪರಾಕ್ರಮಿಯಾದುದರಿಂದ ದಿಗ್ವಿಜಯಾರ್ಥವಾಗಿ ಹೊರಟನು.

**ಸೇನಯಾಂ ದಶಸಾಹಸ್ರ್ಯಾ ಕಾಲಿದಾಸೇನ ಸಂಯುತಃ ।**
**ತಥಾನ್ಯೈರ್ಬ್ರಾಹ್ಮಣೈಃ ಸಾರ್ಧಂ ಸಿಂಧುಪಾರಮುಪಾಯಯೌ ॥ ೩ ॥**

**ಜಿತ್ವಾ ಗಾಂಧಾರಜಾನ್ ಮ್ಲೇಚ್ಛಾನ್ಕಾಶ್ಮೀರಾನ್ನಾರವಾಞ್ಛಠಾನ್ ।**
**ತೇಷಾಂ ಪ್ರಾಪ್ಯ ಮಹಾಕೋಶಂ ದಂಡಯೋಗ್ಯಾನಕಾರಯತ್ ॥ ೪ ॥**

**ಏತಸ್ಮಿನ್ನಂತರೇ ಮ್ಲೇಚ್ಛ ಆಚಾರ್ಯೇಣ ಸಮನ್ವಿತಃ ।**
**ಮಹಾಮದ ಇತಿ ಖ್ಯಾತಃ ಶಿಷ್ಯಶಾಖಾಸಮನ್ವಿತಃ ॥ ೫ ॥**

**ನೃಪಶ್ಚೈವ ಮಹಾದೇವಂ ಮರುಸ್ಥಲನಿವಾಸಿನಂ ।**
**ಗಂಗಾಜಲೈಶ್ಚ ಸಂಸ್ನಾಪ್ಯ ಪಂಚಗವ್ಯಸಮನ್ವಿತೈಃ ॥ ೬ ॥**

---

೩. ಹೀಗೆ ಹೊರಡುವಾಗ ಜತೆಯಲ್ಲಿ ಹತ್ತುಸಾವಿರ ಸೈನ್ಯವನ್ನು ತೆಗೆದುಕೊಂಡು, ಜತೆಯಲ್ಲಿ ಕಾಳಿದಾಸ ಮತ್ತು ಇತರ ಬ್ರಾಹ್ಮಣರೊಡನೆ ಸಿಂಧೂನದಿಯು ತೀರದ ವರೆಗೂ ಬಂದನು.

೪. ಅನಂತರ ಗಾಂಧಾರದೇಶದ ಮ್ಲೇಚ್ಛರನ್ನೂ ಕಾಶ್ಮೀರದೇಶದ ನಿವಾಸಿಗಳಾದ ನಾರವರೆಂಬ ದುಷ್ಟಜನಗಳನ್ನೂ ಜಯಿಸಿ ಅವರ ಧನ, ಧಾನ್ಯ ಕೋಶಗಳೆಲ್ಲವನ್ನೂ ವಶಪಡಿಸಿಕೊಂಡು ಅವರವರ ಯೋಗ್ಯತಾನುಸಾರ ಅವರಿಗೆ ದಂಡನೆ ವಿಧಿಸಿದನು.

೫. ಇದೇ ಸಮಯಕ್ಕೆ ಸರಿಯಾಗಿ ಮಹಮ್ಮದನೆಂಬ ಮ್ಲೇಚ್ಛನು ತನ್ನ ಗುರು ಮತ್ತು ಅವನ ಶಿಷ್ಯಸಮೂಹದಿಂದ ಕೂಡಿ ಆ ಸ್ಥಳಕ್ಕೆ ಬಂದನು.

೬. ಮಹಾರಾಜನಾದ ಭೋಜನು ಮರುಭೂಮಿಯ ಮಧ್ಯದಲ್ಲಿ ನೆಲಸಿರುವ ಮಹಾದೇವನನ್ನು ಪಂಚಗವ್ಯದಿಂದಲೂ ತಾನು ತಂದಿದ್ದ ಗಂಗಾಜಲದಿಂದಲೂ ಅಭಿಷೇಕಮಾಡಿ ವಸ್ತ್ರ ಚಂದನಾದಿಗಳನ್ನು ಸಮರ್ಪಿಸಿ ಪೂಜಿಸಿ, ಅನಂತರ ಏಕಾಗ್ರಚಿತ್ತದಿಂದ ಪರಮೇಶ್ವರನನ್ನು ಸ್ತುತಿಸತೊಡಗಿದನು.

॥ ಭೋಜರಾಜ ಉವಾಚ ॥

ನಮಸ್ತೇ ಗಿರಿಜಾನಾಥ ಮರುಸ್ಥಲನಿವಾಸಿನೇ ।
ತ್ರಿಪುರಾಸುರನಾಶಾಯ ಬಹುಮಾಯಾಪ್ರವರ್ತಿತೇ ॥ ೭ ॥

ಮ್ಲೇಚ್ಛೈರ್ಗುಪ್ತಾಯ ಶುದ್ಧಾಯ ಸಚ್ಚಿದಾನಂದರೂಪಿಣೇ ।
ತ್ವಂ ಮಾಂ ಹಿ ಕಿಂಕರಂ ವಿದ್ಧಿ ಶರಣಾರ್ಥಮುಪಾಗತಂ ॥ ೮ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ಸ್ತವಂ ದೇವಃ ಶಬ್ದಮಾಹ ನೃಪಾಯ ತಂ ।
ಗಂತವ್ಯಂ ಭೋಜರಾಜೇನ ಮಹಾಕಾಲೇಶ್ವರಸ್ಥಲೇ ॥ ೯ ॥

ಮ್ಲೇಚ್ಛೈಸ್ಸುದೂಷಿತಾ ಭೂಮಿರ್ವಾಹೀಕಾ ನಾಮ ವಿಶ್ರುತಾ ।
ಆರ್ಯಧರ್ಮೋ ಹಿ ನೈವಾತ್ರ ವಾಹೀಕೇ ದೇಶದಾರುಣೇ ॥ ೧೦ ॥

---

೭-೮. ಭೋಜರಾಜನು ಸ್ತುತಿಸಿದ ಪ್ರಕಾರವು ಇದು "ಮರುಭೂಮಿಯಲ್ಲಿ ನೆಲಸಿರುವ ಗಿರಿಜಾರಮಣನೇ ! ನಿನಗೆ ನಮಸ್ಕಾರ. ತ್ರಿಪುರ ದೈತ್ಯರನ್ನು ನಾಶಮಾಡಿದವನೂ, ನಾನಾವಿಧವಾದ ಮಾಯಾವಿದ್ಯೆಗಳಿಗೆ ಪ್ರವರ್ತಕನೂ ಮ್ಲೇಚ್ಛರ ದೃಗ್ಗೋಚರವಿಲ್ಲದಂತೆ ಗುಪ್ತಪ್ರದೇಶದಲ್ಲಿರುವವನೂ ಪರಿಶುದ್ಧನೂ ಸಚ್ಚಿದಾನಂದಸ್ವರೂಪನೂ ಆದ ಪಾರ್ವತೀಪತಿಯೇ ! ನಿನಗೆ ನಮಸ್ಕಾರ, ನನ್ನನ್ನು ನಿನ್ನ ಶರಣಾಗತನಾದ ಸೇವಕನೆಂದು ಭಾವಿಸು" ಎಂದು ಸ್ತೋತ್ರಮಾಡಿದನು.

೯. "ಸೂತಮುನಿವರ್ಯನು ಹೇಳುತ್ತಾನೆ— ಈ ಸ್ತೋತ್ರವನ್ನು ಕೇಳಿ ಪರಮೇಶ್ವರನು ಭೋಜರಾಜನನ್ನು ಕುರಿತು ಅಶರೀರವಾಣಿಯಿಂದ "ನೀನು ಮಹಾಕಾಳೇಶ್ವರ ನಿವಾಸವಾದ ಉಜ್ಜಯನಿಗೆ ಹೋಗು"

೧೦. "ವಾಹೀಕವೆಂಬ ಈ ದೇಶವು ಮ್ಲೇಚ್ಛರಿಂದ ಆವೃತವಾಗಿ ದೂಷ್ಯವೆಂದು ಪರಿಗಣಿತವಾಗಿದೆ. ಭಯಂಕರವಾದ ಈ ವಾಹೀಕದೇಶದಲ್ಲಿ ಆರ್ಯಧರ್ಮವು ನೆಲಸಲಾರದು."

ಬಭೂವಾತ್ರ ಮಹಾಮಾಯೀ ಯೋಽಸೌ ದಗ್ಧೋ ಮಯಾ ಪುರಾ ।
ತ್ರಿಪುರೋ ಬಲಿದೈತ್ಯೇನ ಪ್ರೇಷಿತಃ ಪುನರಾಗತಃ ॥ ೧೧ ॥

ಅಯೋನಿಃ ಸ ವರೋ ಮತ್ತಃ ಪ್ರಾಪ್ತವಾನ್ದೈತ್ಯವರ್ಧನಃ !
ಮಹಾಮದ ಇತಿ ಖ್ಯಾತಃ ಪೈಶಾಚಕೃತಿತತ್ಪರಃ ॥ ೧೨ ॥

ನಾಗಂತವ್ಯಂ ತ್ವಯಾ ಭೂಪ ಪೈಶಾಚೇ ದೇಶಧೂರ್ತಕೇ ।
ಮತ್ಪ್ರಸಾದೇನ ಭೂಪಾಲ ತವ ಶುದ್ಧಿಃ ಪ್ರಜಾಯತೇ ॥ ೧೩ ॥

ಇತಿ ಶ್ರುತ್ವಾ ನೃಪಶ್ಚೈವ ಸ್ವದೇಶಾನ್ ಪುನರಾಗಮತ್ ।
ಮಹಾಮದಶ್ಚ ತೈಃ ಸಾರ್ಧಂ ಸಿಂಧುತೀರಮುಪಾಯಯೌ ॥ ೧೪ ॥

ಉವಾಚ ಭೂಪತಿಂ ಪ್ರೇಮ್ಣಾ ಮಾಯಾಮದವಿಶಾರದಃ ।
ತವ ದೇವೋ ಮಹಾರಾಜ ಮಮ ದಾಸತ್ವಮಾಗತಃ ॥ ೧೫ ॥

---

೧೧. " ಮಹಾಮಾಯಾವಿಯೂ ಆದ ತ್ರಿಪುರಾಸುರನನ್ನು ನಾನು ಹಿಂದೆ ದಹಿಸಿದ್ದೆನು ಅವನೇ ಈಗ ಬಲಿಯೆಂಬ ರಾಕ್ಷಸೇಂದ್ರನಿಂದ ಕಳುಹಿಸಲ್ಪಟ್ಟ ಈ ಮ್ಲೇಚ್ಛರೂಪದಿಂದ ಬಂದಿರುವನು."

೧೨. " ಆ ದೈತ್ಯಕುಲಾಧಿಪತಿಗೆ " ಇತರರಿಂದ ಉತ್ಪತ್ತಿರಹಿತನಾಗು " ಎಂಬದಾಗಿ ಆಗ ನಾನೇ ವರವನ್ನು ಕೊಟ್ಟಿದ್ದೆನು. ಆವನು ಈಗ ಮಹಾಮದನೆಂದು ಪ್ರಸಿದ್ಧಿ ಹೊಂದಿ ಪೈಶಾಚಕೃತ್ಯದಲ್ಲಿ ತತ್ಪರನಾಗಿರುವನು."

೧೩ " ಧೂರ್ತನಾದ ಈ ಮುಹಮ್ಮದನ ದೇಶಕ್ಕೆ ಇನ್ನು ನೀನು ಬರಬೇಡ, ಈಗ ಬಂದುದರಿಂದ ಪ್ರಾಪ್ತನಾದ ದೋಷವು ನನ್ನ ಅನುಗ್ರಹದಿಂದ ಪರಿಹಾರವಾಗಿ ನೀನು ಪರಿಶುದ್ಧನಾಗಿದ್ದೀಯೆ " ಎಂಬದಾಗಿ ಹೇಳಿದನು.

೧೪. ಈರೀತಿ ಹೇಳಿದ ಪರಮೇಶ್ವರನ ಮಾತನ್ನು ಕೇಳಿ ಭೋಜರಾಜನು ತನ್ನ ದೇಶಕ್ಕೆ ಹಿಂದಿರುಗಿ ಹೊರಟನು. ಮುಹಮುದನೂ ಸಹ ತನ್ನ ಪರಿಜನರೊಡನೆ ಸಿಂಧುನದಿಯತೀರಕ್ಕೆ ಬಂದನು.

೧೫. ಮಾಯೇ, ಮದ, ಇವುಗಳಲ್ಲಿ ವಿಶಾರದನಾದ ಮುಹಮುದನು ಅಲ್ಲಿ ರಾಜನನ್ನು ಕುರಿತು ಪ್ರೀತಿಯಿಂದ " ಎಲೈ ಮಹಾರಾಜನೇ ! ನಿಮ್ಮ ದೇವರು ನನ್ನ ದಾಸತ್ವವನ್ನು ಹೊಂದಿರುವನು "

ಮಮೋಚ್ಛಿಷ್ಟಂ ಸ ಭುಂಜೀಯಾದ್ಯಥಾ ತತ್ಪಶ್ಯ ಭೋ ನೃಪ ।
ಇತಿ ಶ್ರುತ್ವಾ ತಥಾ ದೃಷ್ಟ್ವಾ ಪರಂ ವಿಸ್ಮಯಮಾಗತಃ ॥ ೧೬ ॥

ಮ್ಲೇಚ್ಛಧರ್ಮೇ ಮತಿಶ್ಚಾಸೀತ್ತಸ್ಯ ಭೂಪಸ್ಯ ದಾರುಣೇ ॥ ೧೭ ॥

ತಚ್ಛ್ರುತ್ವಾ ಕಾಲಿದಾಸಸ್ತು ರುಷಾ ಪ್ರಾಹ ಮಹಾಮದಂ ।
ಮಾಯಾ ತೇ ನಿರ್ಮಿತಾ ಧೂರ್ತ ನೃಪಮೋಹನಹೇತವೇ ॥ ೧೮ ॥

ಹನಿಷ್ಯಾಮಿ ದುರಾಚಾರಂ ವಾಹೀಕಂ ಪುರುಷಾಧಮಂ ।
ಇತ್ಯುಕ್ತ್ವಾ ಸ ದ್ವಿಜಃ ಶ್ರೀಮಾನ್ನವಾರ್ಣಜಪತತ್ಪರಃ ॥ ೧೯ ॥

ಜಪ್ತ್ವಾ ದಶಸಹಸ್ರಂ ಚ ತದ್ದಶಾಂಶಂ ಜುಹಾವ ಸಃ ।
ಭಸ್ಮ ಭೂತ್ವಾ ಸ ಮಾಯಾವೀ ಮ್ಲೇಚ್ಛದೇವತ್ವಮಾಗತಃ ॥ ೨೦ ॥

---

೧೬. "ಅವನು ನನ್ನ ಉಚ್ಛಿಷ್ಟವನ್ನು ಊಟಮಾಡುವನು. ಬೇಕಾದರೆ ನೀನೂ ನೋಡು" ಎಂದು ಮಹಮ್ಮದನು ಹೇಳಿದನು. ಆದರಂತೆಯೇ ಆ ಕಾರ್ಯವು ನಡೆದುದನ್ನು ಸಹ ನೋಡಿ ಆ ರಾಜನು ತುಂಬ ಆಶ್ಚರ್ಯಗೊಂಡನು.

೭. ಆ ಬಳಿಕ ಆ ರಾಜನಿಗೆ ಭಯಂಕರವಾದ ಈ ಮ್ಲೇಚ್ಛ ಧರ್ಮದಲ್ಲಿ ಅಭಿಮಾನಬುದ್ಧಿಯು ಉಂಟಾಯಿತು.

೧೮. ಈರೀತಿ ನಡೆದುದನ್ನು ಕೇಳಿ ಕಾಳಿದಾಸನು ಕೋಪದಿಂದ ಮಹಮ್ಮದನನ್ನು ಕುರಿತು "ನೀನು ರಾಜನನ್ನು ಮೋಸಗೊಳಿಸುವುದಕ್ಕೋಸ್ಕರ ಏನೋ ಮಾಯೆಯನ್ನು ನಿರ್ಮಿಸಿರುವೆ."

೧೯–೨೦. "ಎಲಾ ಮೋಸಗಾರಾ ! ದುರಾಚಾರಿಯೂ ವಾಹೀಕದೇಶದವನೂ ನರಾಧಮನೂ ಆದ ನಿನ್ನನ್ನು ಕೊಂದುಬಿಡುವೆನು" ಎಂದು ಹೇಳಿ ಆ ಕಾಳಿದಾಸನು ನವಾರ್ಣಜಪಮಾಡುವುದರಲ್ಲಿ ಆಸಕ್ತನಾಗಿ ಹತ್ತುಸಾವಿರ ಜಪಮಾಡಿ ಅಗ್ನಿ ಪ್ರತಿಷ್ಠೆಮಾಡಿ ಜಪದ ಹತ್ತರಲ್ಲಿ ಒಂದುಭಾಗದಷ್ಟು ಎಂದರೆ ಒಂದುಸಾವಿರ ಆಹುತಿಗಳನ್ನು ಹೋಮಮಾಡಿದನು. ಇದರಿಂದ ಆ ಮಾಯಾವಿಯು ಭಸ್ಮವಾಗಿ ಮ್ಲೇಚ್ಛದೇವತ್ವವನ್ನು ಪಡೆದನು.

ಭಯಭೀತಾಸ್ತು ತಚ್ಛಿಷ್ಯಾ ದೇಶಂ ವಾಹೀಕಮಾಯಯುಃ ।
ಗೃಹೀತ್ವಾ ಸ್ವಗುರೋರ್ಭಸ್ಮ ಮದಹೀನತ್ವಮಾಗತಂ ॥ ೨೧ ॥

ಸ್ಥಾಪಿತಂ ತೈಶ್ಚ ಭೂಮಧ್ಯೇ ತತ್ರೋಷುರ್ಮದತತ್ಪರಾಃ ।
ಮದಹೀನಂ ಪುರಂ ಜಾತಂ ತೇಷಾಂ ತೀರ್ಥಂ ಸಮಂ ಸ್ಮೃತಂ ॥ ೨೨ ॥

ರಾತ್ರೌ ಸ ದೇವರೂಪಶ್ಚ ಬಹುಮಾಯಾವಿಶಾರದಃ ।
ಪೈಶಾಚಂ ದೇಹಮಾಸ್ಥಾಯ ಭೋಜರಾಜಂ ಹಿ ಸೋಽಬ್ರವೀತ್ ॥ ೨೩ ॥

ಆರ್ಯಧರ್ಮೋ ಹಿ ತೇ ರಾಜನ್ಸರ್ವಧರ್ಮೋತ್ತಮಃ ಸ್ಮೃತಃ ।
ಈಶಾಜ್ಞಯಾ ಕರಿಷ್ಯಾಮಿ ಪೈಶಾಚಂ ಧರ್ಮದಾರುಣಂ ॥ ೨೪ ॥

---

೨೧. ಆಗ ಆವನ ಶಿಷ್ಯರೆಲ್ಲರೂ ಹೆದರಿ ತಮ್ಮ ಗುರುವಿನ ಭಸ್ಮವನ್ನು ತೆಗೆದು ಕೊಂಡು ತಮ್ಮ ದೇಶಕ್ಕೆ ಹಿಂದಿರುಗಿ ಹೋದರು. ಆಮೇಲೆ ಅವರ ಅಹಂಕಾರವೆಲ್ಲಾ ಅಡಗಿಹೋಯಿತು.

೨೨. ಅವರಲ್ಲಿ ಮದವಿಶಿಷ್ಟರಾದ ಕೆಲವರು ಶಿಷ್ಯರು, ತಾವು ತೆಗೆದುಕೊಂಡು ಹೋದ ಭಸ್ಮವನ್ನು ಭೂಮಿಯಲ್ಲಿ ಹೂಳಿ ಇಟ್ಟು ಆ ಸ್ಥಳದಲ್ಲಿಯೇ ವಾಸಿಸಲು ಮೊದಲುಮಾಡಿದರು. ಅದೂ ಒಂದು ಮದರಹಿತವಾದ (ಮದಹೀನಾ—ಮದೀನಾ) ಊರಾಯಿತು. ಕೊನೆಗೆ ಅದೇ ಅವರ ಯಾತ್ರಾಸ್ಥಳವೆನಿಸಿತು.

೨೩. ಬಹು ಮಾಯಾವಿಶಾರದನಾದ ಆ ಮ್ಲೇಚ್ಛರ ದೇವನು ಆರಾತ್ರಿ ಪಿಶಾಚಿ ದೇಹವನ್ನು ಧರಿಸಿಕೊಂಡು ಬಂದನು. ಆಗ ಭೋಜರಾಜನು ವಿಹರಿಸುತ್ತಿರಲು ಅವನ ಬಳಿಗೆ ಹೋಗಿ ಆವನನ್ನು ಕುರಿತು, ಇಂತೆಂದನು.

೨೪. "ಎಲೈ ರಾಜನೇ! ನಿನ್ನ ಆರ್ಯಧರ್ಮವು ಎಲ್ಲ ಧರ್ಮಗಳಿಗಿಂತ ಉತ್ತಮವೆಂದು ಹೊಗಳಿಕೊಂಡೆ. ಈಗ ನಾನು ಪರಮೇಶ್ವರನ ಅಪ್ಪಣೆಯಂತೆ ಭಯಂಕರವಾದ ಪಿಶಾಚಿ ಧರ್ಮವನ್ನು ಪ್ರಕಟಪಡಿಸುವೆನು."

ಲಿಂಗಚ್ಛೇದೀ ಶಿಖಾಹೀನಃ ಶ್ಮಶ್ರುಧಾರೀ ಸದೂಷಕಃ ।
ಉಚ್ಚಾಲಾಪೀ ಸರ್ವಭಕ್ಷೀ ಭವಿಷ್ಯತಿ ಜನೋ ಮಮ ॥ ೨೫ ॥

ವಿನಾ ಕೌಲಂ ಚ ಪಶವಸ್ತೇಷಾಂ ಭಕ್ಷ್ಯಾ ಮತಾ ಮಮ ।
ಮುಸಲೇನೈವ ಸಂಸ್ಕಾರಃ ಕುಶೈರಿವ ಭವಿಷ್ಯತಿ ॥ ೨೬ ॥

ತಸ್ಮಾನ್ಮುಸಲವಂತೋ ಹಿ ಜಾತಯೋ ಧರ್ಮದೂಷಕಾಃ ।
ಇತಿ ಪೈಶಾಚಧರ್ಮಶ್ಚ ಭವಿಷ್ಯತಿ ಮಯಾ ಕೃತಃ ॥ ೨೭ ॥

ಇತ್ಯುಕ್ತ್ವಾ ಪ್ರಯಯೌ ದೇವಃ ಸ ರಾಜಾ ಗೇಹಮಾಯಯೌ ।
ತ್ರಿವರ್ಣೇ ಸ್ಥಾಪಿತಾ ವಾಣೀ ಸಾಂಸ್ಕೃತೀ ಸ್ವರ್ಗದಾಯಿನೀ ॥ ೨೮ ॥

---

೨೫. "ನನ್ನ ಮತ ಧರ್ಮಾವಲಂಬಿಗಳು ಶಿಶ್ನದ ತುದಿಯನ್ನು ಕತ್ತರಿಸಿ, ತಲೆಯ ಕೂದಲನ್ನೆಲ್ಲಾ ತೆಗೆಸಿಕೊಂಡು ಗಡ್ಡವನ್ನು ಬಿಟ್ಟುಕೊಂಡು ಯಾವಾಗಲೂ ದುರ್ಭಾಷೆಯನ್ನಾಡುವರೂ ದೊಡ್ಡ ಧ್ವನಿಯಿಂದ ಕೂಗಾಡತಕ್ಕವರೂ ಸರ್ವ ಭಕ್ಷಕರೂ ಆಗುವರು."

೨೬. "ಅವರು ಪ್ರಾಣಿಗಳ ಜಾತಿ ಕುಲಗಳನ್ನು ಲಕ್ಷಿಸದೆ ಗೋವುಗಳನ್ನು ಕೂಡ ಭಕ್ಷಿಸುತ್ತಾರೆ. ಆರ್ಯಧರ್ಮಿಗಳು ಸಂಸ್ಕಾರಕಾರ್ಯಗಳಿಗೆ ದರ್ಭೆಯನ್ನು ಉಪಯೋಗಿಸುವಂತೆ ಆ ನನ್ನ ಮತಧರ್ಮಿಗಳು ಒನಕೆಯನ್ನೇ ಸಂಸ್ಕಾರಾರ್ಥವಾಗಿ ಉಪಯೋಗಿಸುವರು." (ಈಗಲೂ ಮುಹಮದೀಯರ ವಿವಾಹಕಾಲದಲ್ಲಿ ಒನಕೆಯನ್ನು ಅಡ್ಡಲಾಗಿ ಹಿಡಿಯುವ ಪದ್ಧತಿ ಇದೆ).

೨೭. "ಈ ಪ್ರಕಾರ ಮುಸಲಸಂಸ್ಕಾರಾದ್ಯವಿರುದ್ಧಧರ್ಮವುಳ್ಳ ಈ ಮತವು ಆರ್ಯಧರ್ಮವನ್ನು ದೂಷಿಸತಕ್ಕದ್ದಾಗಿದೆ. ಈರೀತಿಯಿಂದ ಪಿಶಾಚಧರ್ಮವು ನನ್ನಿಂದ ನಿರ್ಮಿತವಾಗಿ ಮುಂದೆ ಪ್ರಚಾರಕ್ಕೆ ಬರುವುದು."

೨೮–೨೯. ಮ್ಲೇಚ್ಛದೇವನು ಹೀಗೆಂದು ಹೇಳಿ ಕಣ್ಮರೆಯಾದನು. ಭೋಜರಾಜನು ತನ್ನ ದೇಶಕ್ಕೆ ಬಂದನು. ಅನಂತರ ಮೇಧಾವಿಯಾದ ಭೋಜರಾಜನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ವರ್ಣಗಳವರೂ ಸ್ವರ್ಗಪ್ರದವಾದ ಸಂಸ್ಕೃತ ಭಾಷೆಯನ್ನೇ ವ್ಯವಹಾರದಲ್ಲಿ ಬಳಸಬೇಕೆಂದೂ, ಶೂದ್ರರು ಮಾತ್ರ ಪ್ರಾಕೃತ ಭಾಷೆಯಲ್ಲಿಯೇ ವ್ಯವಹರಿಸಬೇಕೆಂದೂ ವಿಧಾಯಕಮಾಡಿದನು. ಈರೀತಿ

ಶೂದ್ರೇಷು ಪ್ರಾಕೃತೀ ಭಾಷಾ ಸ್ಥಾಪಿತಾ ತೇನ ಧೀಮತಾ ।
ಪಂಚಾಶದಬ್ದಕಾಲಂ ತು ರಾಜ್ಯಂ ಕೃತ್ವಾ ದಿವಂ ಗತಃ ॥ ೨೯ ॥

ಸ್ಥಾಪಿತಾ ತೇನ ಮರ್ಯಾದಾ ಸರ್ವದೇವೋಪಮಾನಿನೀ ।
ಆರ್ಯಾವರ್ತಃ ಪುಣ್ಯಭೂಮಿರ್ಮಧ್ಯಂ ವಿಂಧ್ಯಹಿಮಾಲಯೋಃ ॥ ೩೦ ॥

ಆರ್ಯವರ್ಣಾಃ ಸ್ಥಿತಾಸ್ತತ್ರ ವಿಂಧ್ಯಾನ್ತೇ ವರ್ಣಸಂಕರಾಃ !
ನರಾ ಮುಸಲವಂತಶ್ಚ ಸ್ಥಾಪಿತಾಃ ಸಿಂಧುಪಾರಜಾಃ ॥ ೩೧ ॥

ಬರ್ಬರೇ ತುಷದೇಶೇ ಚ ದ್ವೀಪೇ ನಾನಾವಿಧೇ ತಥಾ ।
ಈಶಾಮಸೀಹಧರ್ಮಾಶ್ಚ ಸುರೈ ರಾಜ್ಞೈವ ಸಂಸ್ಥಿತಾಃ ॥ ೩೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ತೃತೀಯೋಧ್ಯಾಯಃ

---

ಯಲ್ಲಿ ಐವತ್ತು ವರ್ಷಗಳಕಾಲ ರಾಜ್ಯವಾಳಿ ಆನಂತರ ಭೋಜರಾಜನು ದಿವಂಗತನಾದನು.

೩೦. ಆ ಭೋಜರಾಜನು ಸಕಲದೇವತೆಗಳಿಗೂ ಸಮ್ಮತವಾದ ಒಂದು ಎಲ್ಲೆಯನ್ನು ಸ್ಥಾಪಿಸಿದನು. ವಿಂಧ್ಯ ಹಿಮಾಲಯಗಳ ಮಧ್ಯಪ್ರದೇಶವು ಆರ್ಯಾವರ್ತವೆಂದು ಪ್ರಸಿದ್ಧಿ ಹೊಂದಿ ಪುಣ್ಯಭೂಮಿಯೆನಿಸಿತು.

೩೧. ಈ ಪ್ರದೇಶದಲ್ಲಿಯೇ ಆರ್ಯಪಂಗಡದವರು ವಾಸಿಸುತ್ತಿದ್ದರು. ವಿಂಧ್ಯ ಪರ್ವತದಿಂದೀಚೆ ವರ್ಣಗಳ ಸಾಂಕರ್ಯವು ಏರ್ಪಟ್ಟಿದ್ದಿತು ಸಿಂಧುನದಿಯ ಆಚೆಯ ನಿವಾಸಿಗಳಾದ ಜನರು ಮುಸಲಮಾನರೆನಿಸಿದರು.

೩೨. ಬರ್ಬರ ದೇಶದಲ್ಲಿಯೂ ತುಷ ದೇಶದಲ್ಲಿಯೂ ಇತರವಾದ ನಾನಾ ದ್ವೀಪದಲ್ಲಿಯೂ ದೈವಾಜ್ಞೆಯಿಂದಲೇ ಈಶಾಮಸೀಹಕೃತವಾದ ಮುಸಲ್ಮಾನ ಧರ್ಮವು ಏರ್ಪಟ್ಟಿತು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಚತುರ್ಥೋಽಧ್ಯಾಯಃ

---

॥ ಸೂತ ಉವಾಚ ॥

ಸ್ವರ್ಗತೇ ಭೋಜರಾಜೇ ತು ಸಪ್ತಭೂಪಾಸ್ತದನ್ವಯೇ ।
ಜಾತಾಶ್ಚಾಲ್ಪಾಯುಷೋ ಮಂದಾಸ್ತ್ರಿಶತಾಬ್ದಾಂತರೇ ಮೃತಾಃ ॥ ೧ ॥

ಬಹುಭೂಪವತೀ ಭೂಮಿಸ್ತೇಷಾಂ ರಾಜ್ಯೇ ಬಭೂವ ಹ ।
ವೀರಸಿಂಹಶ್ಚ ಯೋ ಭೂಪಃ ಸಪ್ತಮಃ ಸಂಪ್ರಕೀರ್ತಿತಃ ॥ ೨ ॥

ತದನ್ವಯೇ ತ್ರಿಭೂಪಾಶ್ಚ ದ್ವಿಶತಾಬ್ದಾಂತರೇ ಮೃತಾಃ ।
ಗಂಗಾಸಿಂಹಶ್ಚ ಯೋ ಭೂಪೋ ದಶಮಃ ಸ ಪ್ರಕೀರ್ತಿತಃ ॥ ೩ ॥

---

## ನಾಲ್ಕನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ— ಭೋಜರಾಜನು ಸ್ವರ್ಗಸ್ಥನಾದ ಮೇಲೆ ಅವನ ವಂಶದಲ್ಲಿ ಏಳುಮಂದಿ ರಾಜರು ಆಳಿದರು. ಅವರು ಅಲ್ಪಾಯುಗಳೂ ದಡ್ಡರೂ ಆಗಿ ಮುನ್ನೂರು ವರ್ಷದೊಳಗೇ ಮೃತರಾದರು.

೨-೩. ಪರಿಸ್ಥಿತಿ ಹೀಗಾದುದರಿಂದ ಅವರ ರಾಜ್ಯವು ಒಡೆದು ಅನೇಕ ಸಣ್ಣ ರಾಜ್ಯಗಳಾದುವು. ಭೋಜವಂಶದಲ್ಲಿ ಏಳನೆಯ ರಾಜನಿಗೆ ವೀರಸಿಂಹನೆಂದು ಹೆಸರು. ಈತನ ವಂಶದಲ್ಲಿ ಮೂರುಜನ ರಾಜರು ಇನ್ನೂರು ವರ್ಷಗಳ ಪರ್ಯಂತ ಆಳಿ ಮೃತರಾದರು.

ಕಲ್ಪಕ್ಷೇತ್ರೇ ಚ ರಾಜ್ಯಂ ಸ್ವಂ ಕೃತವಾನ್ಧರ್ಮತೋ ನೃಪಃ ।
ಅಂತರ್ವೇದ್ಯಾಂ ಕಾನ್ಯಕುಬ್ಜೇ ಜಯಚನ್ದ್ರೋ ಮಹೀಪತಿಃ ॥ ೪ ॥

ಇಂದ್ರಪ್ರಸ್ಥೇನಂಗಪಾಲಸ್ತೋಮರಾನ್ವಯ ಸಂಭವಃ ।
ಅನ್ಯೇ ಚ ಬಹವೋ ಭೂಪಾ ಬಭೂವುರ್ಗ್ರಾಮರಾಷ್ಟ್ರಪಾಃ ॥ ೫ ॥

ಅಗ್ನಿವಂಶಸ್ಯ ವಿಸ್ತಾರೋ ಬಭೂವ ಬಲವತ್ತರಃ ।
ಪೂರ್ವೇ ತು ಕಪಿಲಸ್ಥಾನೇ ವಾಹೀಕಾಂತೇ ತು ಪಶ್ಚಿಮೇ ॥ ೬ ॥

ಉತ್ತರೇ ಚೀನದೇಶಾಂತೇ ಸೇತುಬಂಧೇ ತು ದಕ್ಷಿಣೇ ।
ಷಷ್ಟಿಲಕ್ಷಾಶ್ಚ ಭೂಪಾಲಾ ಗ್ರಾಮಪಾ ಬಲವತ್ತರಾಃ ॥ ೭ ॥

ಅಗ್ನಿಹೋತ್ರಸ್ಯ ಕರ್ತಾರೋ ಗೋಬ್ರಾಹ್ಮಣಹಿತೈಷಿಣಃ ।
ಬಭೂವುರ್ದ್ವಾಪರಸಮಾ ಧರ್ಮಕೃತ್ಯವಿಶಾರದಾಃ ॥ ೮ ॥

---

೪. ಆ ಹತ್ತನೆಯ ರಾಜನಾದ ಗಂಗಾಸಿಂಹನು ಕಲ್ಪಕ್ಷೇತ್ರದಲ್ಲಿ ಧರ್ಮದಿಂದ ರಾಜ್ಯವಾಳುತ್ತಿದ್ದನು. ಅಂತರ್ವೇದಿ ಎಂಬ ರಾಜ್ಯದ ರಾಜಧಾನಿಯಾದ ಕನ್ಯಾಕುಬ್ಜ ದಲ್ಲಿ ಜಯಚಂದ್ರನೆಂಬ ರಾಜನು ಆಳುತ್ತಿದ್ದನು.

೫. ಇಂದ್ರಪ್ರಸ್ಥದಲ್ಲಿ ತೋಮರವಂಶದಲ್ಲಿ ಹುಟ್ಟಿದ ಅನಂಗಪಾಲನೆಂಬವನು ರಾಜನಾಗಿದ್ದನು. ಇನ್ನೂ ಅನೇಕ ಜನರು ರಾಜವಂಶೀಯರು ಸಣ್ಣರಾಜ್ಯಗಳಲ್ಲಿಯೂ, ಹಳ್ಳಿಗಳಲ್ಲಿಯೂ ಪಾಳೆಯಗಾರರಾಗಿದ್ದರು.

೬-೭. ಆಗ ಅಗ್ನಿಕುಲನೆಂಬ ಕ್ಷತ್ರಿಯವಂಶವು ಪ್ರಬಲವಾಗಿ ವಿಸ್ತರಿಸಿತ್ತು ಪೂರ್ವದಿಕ್ಕಿನಲ್ಲಿ ಕಪಿಲಾಶ್ರಮದವರೆಗೆ, ಪಶ್ಚಿಮದಲ್ಲಿ ವಾಹೀಕರಾಷ್ಟ್ರದವರೆಗೆ ಉತ್ತರದಲ್ಲಿ ಚೀನಾದೇಶದವರೆಗೆ, ದಕ್ಷಿಣದಲ್ಲಿ ರಾಮಸೇತುವಿನವರೆಗೆ, ಈ ಮಧ್ಯ ಪ್ರದೇಶದಲ್ಲಿ ಅರುವತ್ತುಲಕ್ಷಮಂದಿ ಬಲಿಷ್ಠರು ಪಾಳೆಯಗಾರರಾಗಿ ಗ್ರಾಮಗಳಿಗೆ ಒಡೆಯರಾಗಿ ಇದ್ದರು.

೮. ಅವರ ರಾಷ್ಟ್ರದಲ್ಲಿ ಅಗ್ನಿಹೋತ್ರವನ್ನು ಆಚರಿಸುವ ಶ್ರೋತ್ರಿಯರೂ ಗೋಬ್ರಾಹ್ಮಣಹಿತೈಷಿಗಳೂ, ಧರ್ಮಕಾರ್ಯನಿರತರೂ ಆದ ಜನರು ಬಹಳಮಂದಿ ಇದ್ದು ದ್ವಾಪರಯುಗದ ಜನಗಳಿಗೆ ಸಮಾನರಾಗಿ ಇದ್ದರು.

ದ್ವಾಪರಾಖ್ಯಸಮಃ ಕಾಲಃ ಸರ್ವತ್ರ ಪರಿವರ್ತತೇ ।
ಗೇಹೇಗೇಹೇ ಸ್ಥಿತಂ ದ್ರವ್ಯಂ ಧರ್ಮಶ್ಚೈವ ಜನೇಜನೇ ॥ ೯ ॥

ಗ್ರಾಮೇಗ್ರಾಮೇ ಸ್ಥಿತೋ ದೇವೋ ದೇಶೇ ದೇಶೇ ಸ್ಥಿತೋ ಮಖಃ ।
ಆರ್ಯಧರ್ಮಕರಾ ಮ್ಲೇಚ್ಛಾ ಬಭೂವುಃ ಸರ್ವತೋಮುಖಾಃ ॥ ೧೦ ॥

ಇತಿ ದೃಷ್ಟ್ವಾ ಕಲಿರ್ಘೋರೋ ಮ್ಲೇಚ್ಛಾಯಾ ಸಹ ಭೀರುಕಃ ।
ನೀಲಾದ್ರೌ ಪ್ರಾಪ್ಯ ಮತಿಮಾನ್ ಹರಿಂ ಶರಣಮಾಯಯೌ ॥ ೧೧ ॥

ದ್ವಾದಶಾಬ್ದಮಿತೇ ಕಾಲೇ ಧ್ಯಾನಯೋಗಪರೋಽಭವತ್ ।
ಧ್ಯಾನೇನ ಸಚ್ಚಿದಾನಂದಂ ದೃಷ್ಟ್ವಾ ಕೃಷ್ಣಂ ಸನಾತನಂ ॥ ೧೨ ॥

ತುಷ್ಟಾವ ಮನಸಾ ತತ್ರ ರಾಧಯಾಸಹಿತಂ ಹರಿಂ ।
ಪುರಾಣಮಜರಂ ನಿತ್ಯಂ ವೃಂದಾವನನಿವಾಸಿನಂ ॥ ೧೩ ॥

---

೯. ಆ ಕಾಲವು ದ್ವಾಪರಯುಗಕಾಲಕ್ಕೆ ಸಮಾನವೆನಿಸಿತ್ತು. ಮನೆಮನೆಯಲ್ಲಿಯೂ ಹೇರಳವಾಗಿ ದ್ರವ್ಯಸಂಪತ್ತು ಇದ್ದಿತು. ಪ್ರತಿಯೊಬ್ಬ ಮನುಷ್ಯನೂ ಧರ್ಮಾಚರಣೆಯಲ್ಲಿ ತತ್ಪರನಾಗಿರುತ್ತಿದ್ದನು.

೧೦. ಪ್ರತಿಗ್ರಾಮದಲ್ಲಿಯೂ ದೇವಾಲಯಗಳು ಏರ್ಪಟ್ಟಿದ್ದುವು. ದೇಶದ ಅನೇಕಕಡೆಗಳಲ್ಲಿ ಯಜ್ಞಯಾಗಾದಿಗಳು ನಡೆಯುತ್ತಿದ್ದುವು. ಮ್ಲೇಚ್ಛರೆಲ್ಲರೂ ಸರ್ವತೋಮುಖವಾಗಿ ಆರ್ಯಧರ್ಮವನ್ನೇ ಅನುಸರಿಸಹತ್ತಿದರು.

೧೧. ಇದನ್ನು ನೋಡಿ ಭಯಂಕರಸ್ವರೂಪನಾದ ಕಲಿಯು ಭಯಪಟ್ಟು ತನ್ನ ಪತ್ನಿಯಾದ ಮ್ಲೇಚ್ಛವನಿತೆಯೊಡಗೂಡಿ ನೀಲಿಗಿರಿಗೆ ಹೋಗಿ ಬುದ್ಧಿಶಾಲಿಯಾದ ಅವನು ವಿಷ್ಣುವಿಗೆ ಶರಣಾಗತನಾಗಿ ಆರಾಧಿಸತೊಡಗಿದನು.

೧೨. ಅಲ್ಲಿ ಹನ್ನೆರಡು ವರ್ಷಗಳಕಾಲ ಧ್ಯಾನಾಸಕ್ತನಾಗಿದ್ದ ಮೇಲೆ ಸಚ್ಚಿದಾನಂದಸ್ವರೂಪನೂ ಸನಾತನನೂ ಆದ ಶ್ರೀಕೃಷ್ಣ ಪರಮಾತ್ಮನ ದರ್ಶನ ಲಭಿಸಿತು.

೧೩. ಆಗ ಸಂತೋಷಗೊಂಡು ಕಲಿಯು ಪುರಾತನನೂ ಮುಪ್ಪು ಇಲ್ಲದವನೂ ನಿತ್ಯನೂ, ಬೃಂದಾವನವಾಸಿಯೂ, ಆಗಿರುವ ರಾಧಾಸಮೇತನಾದ ಕೃಷ್ಣನನ್ನು ಇಂತು ಮನದಣಿಯೆ ಸ್ತೋತ್ರಮಾಡಿದನು

॥ ಕಲಿರುವಾಚ ॥

ಸಾಷ್ಟಾಂಗಂ ದಂಡವತ್ಸ್ವಾಮಿನ್ ಗೃಹಾಣ ಮಮ ಚೇಶ್ವರ ।
ಪಾಹಿ ಮಾಂ ಶರಣಂ ಪ್ರಾಪ್ತಂ ಚರಣೇ ತೇ ಕೃಪಾನಿಧೇ ॥ ೧೪ ॥

ಸರ್ವಪಾಪಹರಸ್ತ್ವಂ ವೈ ಸರ್ವಕಾಲಕರೋ ಹರಿಃ ।
ಭವಾನ್ಗೌರಃ ಸತ್ಯಯುಗೇ ತ್ರೇತಾಯಾಂ ರಕ್ತರೂಪಕಃ ॥ ೧೫ ॥

ದ್ವಾಪರೇ ಪೀತರೂಪಶ್ಚ ಕೃಷ್ಣಸ್ತ್ವಂ ಮಮ ದಿಷ್ಟಕೇ ।
ಮತ್ಪುತ್ರಾಶ್ಚ ಸ್ಮೃತಾ ಮ್ಲೇಚ್ಛಾ ಆರ್ಯಧರ್ಮತ್ವಮಾಗತಾಃ ॥ ೧೬ ॥

ಚತುರ್ಗೇಹಂ ಚ ಮೇ ಸ್ವಾಮಿನ್ ದ್ಯೂತಂ ಮದ್ಯಂ ಸುವರ್ಣಕಂ ।
ಸ್ತ್ರೀ ಹಾಸ್ಯಂ ಚಾಗ್ನಿವಂಶ್ಯೈಶ್ಚ ಕ್ಷತ್ರಿಯೈಶ್ಚ ವಿನಾಶಿತಂ ॥ ೧೭ ॥

ತ್ಯಕ್ತದೇಹಸ್ತ್ಯಕ್ತಕುಲಸ್ತ್ಯಕ್ತರಾಷ್ಟ್ರೋ ಜನಾರ್ದನ ।
ತ್ವತ್ಪಾದಾಂಬುಜಮಾಧ್ಯಾಯ ಸ್ಥಿತೋಽಹಂ ಶರಣಂ ತ್ವಯಿ ॥ ೧೮ ॥

---

೧೪. "ಸರ್ವಸಮರ್ಥನಾದ ಸ್ವಾಮಿಯೇ! ನನ್ನ ದೀರ್ಘದಂಡಪ್ರಣಾಮವನ್ನು ಸ್ವೀಕರಿಸು. ಕೃಪಾನಿಧಿಯೇ ನಿನ್ನ ಪಾದಗಳಲ್ಲಿ ಶರಣಾಗತನಾಗಿರುವ ನನ್ನನ್ನು ಕಾಪಾಡು."

೧೫-೧೬. "ನೀನು ಸರ್ವರ ಪಾಪಗಳನ್ನೂ ಪರಿಹಾರಮಾಡತಕ್ಕವನು. ನೀನೇ ಸರ್ವಕಾಲನಿಯಾಮಕನಾದ ಮಹಾವಿಷ್ಣು, ನೀನು ಸತ್ಯಯುಗದಲ್ಲಿ ಶುಭ್ರವರ್ಣವುಳ್ಳವನಾಗಿಯೂ, ತ್ರೇತಾಯುಗದಲ್ಲಿ ಕೆಂಪು ಬಣ್ಣವುಳ್ಳವನಾಗಿಯೂ ದ್ವಾಪರಯುಗದಲ್ಲಿ ಹೊಂಬಣ್ಣವುಳ್ಳವನಾಗಿಯೂ ಈ (ನನ್ನ) ಕಲಿಯುಗದಲ್ಲಿ ಕಪ್ಪುಬಣ್ಣವುಳ್ಳವನಾಗಿಯೂ ಇರುವೆ. ನನ್ನ ಮಕ್ಕಳೆನಿಸಿರುವ ಈ ಮ್ಲೇಚ್ಛರೆಲ್ಲರೂ ಆರ್ಯಧರ್ಮವನ್ನು ಅನುಸರಿಸುತ್ತಿರುವರು.

೧೭. "ನನ್ನ ನಾಲ್ಕು ವಾಸಸ್ಥಳಗಳಾದ ದ್ಯೂತ, ಮದ್ಯ, ಸುವರ್ಣ, ಸ್ತ್ರೀಹಾಸ್ಯ, ಇವೆಲ್ಲ ಅಗ್ನಿಕುಲೋತ್ಪನ್ನರಾದ ಕ್ಷತ್ರಿಯರಿಂದ ನಾಶವಾಗಿಹೋಗಿವೆ."

೧೮. "ಎಲೈ ಜನಾರ್ದನನೆ! ಈಗ ನಾನು ಈ ನನ್ನ ದೇಹ, ಕುಲ, ರಾಷ್ಟ್ರ ಎಲ್ಲವನ್ನೂ ಬಿಟ್ಟು ನಿನ್ನ ಪಾದಕಮಲವನ್ನೇ ನಂಬಿ ನಿನ್ನನ್ನು ಶರಣುಹೊಕ್ಕಿರುವೆನು." ಎಂಬದಾಗಿ ಕಲಿಯು ಸ್ತೋತ್ರಮಾಡಿದನು.

**ಇತಿ ಶ್ರುತ್ವಾ ಸ ಭಗವಾನ್ಕೃಷ್ಣಃ ಪ್ರಾಹ ವಿಹಸ್ಯ ತಂ ।**
**ಭೋಃ ಕಲೇ ತವ ರಕ್ಷಾರ್ಥಂ ಜನಿಷ್ಯೇಹಂ ಮಹಾವತೀಂ ॥ ೧೯ ॥**

**ಮಮಾಂಶೋಃ ಭೂಮಿಮಾಸಾದ್ಯ ಕ್ಷಯಿಷ್ಯತಿ ಮಹಾಬಲಾನ್ ।**
**ಮ್ಲೇಚ್ಛವಂಶಸ್ಯ ಭೂಪಾಲಾನ್ ಸ್ಥಾಪಯಿಷ್ಯತಿ ಭೂತಲೇ ॥ ೨೦ ॥**

**ಇತ್ಯುಕ್ತ್ವಾ ಭಗವಾನ್ಸಾಕ್ಷಾತತ್ರೈವಾಂತರಧೀಯತ ।**
**ಕಲಿಸ್ತು ಮ್ಲೇಚ್ಛಯಾ ಸಾರ್ಧಂ ಪರಮಾನಂದಮಾಪ್ತವಾನ್ ॥ ೨೧ ॥**

**ಏತಸ್ಮಿನ್ನಂತರೇ ವಿಪ್ರ ಯಥಾ ಜಾತಂ ಶೃಣುಷ್ವತತ್ ।**
**ಆಭೀರೀವಾಕ್ಸರೇ ಗ್ರಾಮೇ ವ್ರತಪಾ ನಾಮ ವಿಶ್ರುತಾ ॥ ೨೨ ॥**

**ನವದುರ್ಗಾವ್ರತಂ ಶ್ರೇಷ್ಠಂ ನವವರ್ಷಂ ಚಕಾರ ಹ ।**
**ಪ್ರಸನ್ನಾ ಚಂಡಿಕಾ ಪ್ರಾಹ ವರಂ ವರಯ ಶೋಭನೇ ॥ ೨೩ ॥**

---

೧೯. ಈರೀತಿ ಕಲಿಯು ಸ್ತೋತ್ರಮಾಡಿದುದನ್ನು ಕೇಳಿ ಭಗವಂತನಾದ ಕೃಷ್ಣನು ಸ್ವಲ್ಪ ನಕ್ಕು ಅವನನ್ನು ಕುರಿತು "ಎಲೈ ಕಲಿಪುರುಷನೆ! ನಿನ್ನನ್ನು ರಕ್ಷಿಸುವುದಕ್ಕಾಗಿ ನಾನೇ ಅವತಾರಮಾಡುವೆನು."

೨೦. "ಆ ನನ್ನ ಅಂಶಪುರುಷನು ಮಹಾವತೀ ನಗರದಲ್ಲಿ ಜನಿಸಿ ಮಹಾಬಲಿಷ್ಠರಾದ ಕ್ಷತ್ರಿಯರನ್ನು ನಾಶಮಾಡಿ ಮ್ಲೇಚ್ಛವಂಶದ ರಾಜರುಗಳನ್ನು ಭೂಮಂಡಲದಲ್ಲಿ ಸ್ಥಾಪನಮಾಡುವೆನು ಎಂಬುದಾಗಿ ಹೇಳಿದನು.

೨೧. ಹೀಗೆ ಹೇಳಿ ಪರಮಾತ್ಮನು ಅಲ್ಲಿಯೇ ಅದೃಶ್ಯನಾದನು. ಕಲಿಯು ಸಹ ತನ್ನ ಪತ್ನಿಯಾದ ಮ್ಲೇಚ್ಛೆಯೊಡನೆ ಇದನ್ನು ಕೇಳಿ ಪರಮಾನಂದಹೊಂದಿದನು.

೨೨. ಅಯ್ಯಾ ವಿಪ್ರನೆ! ಈ ಸಂದರ್ಭದಲ್ಲಿ ನಡೆದುದನ್ನು ಹೇಳುವೆನು ಕೇಳು ವಾಕ್ಸರವೆಂಬ ಗ್ರಾಮದಲ್ಲಿ ವ್ರತಪಾ ಎಂಬ ಹೆಸರಿನ ಶೂದ್ರಸ್ತ್ರೀಯು ಪ್ರಸಿದ್ಧಳಾಗಿದ್ದಳು.

೨೩. ಅವಳು ಶ್ರೇಷ್ಠವಾದ ನವದುರ್ಗಾವ್ರತವನ್ನು ಒಂಭತ್ತು ವರ್ಷಗಳಕಾಲ ಆಚರಿಸಿದಳು.

ಸಾಹ ತಾಂ ಯದಿ ಮೇ ಮಾತರ್ವರೋ ದೇಯಸ್ತ್ವಯೇಶ್ವರಿ ।
ರಾಮಕೃಷ್ಣಸಮೌ ಬಾಲೌ ಭವೇಯಾತಾಂ ಮಮಾನ್ವಯೇ ॥ ೨೪ ॥

ತಥೇತ್ಯುಕ್ತ್ವಾ ತು ಸಾ ದೇವೀ ತತ್ರೈವಾಂತರಧೀಯತ ।
ವಸುಮಾನ್ನಾಮ ನೃಪತಿಸ್ತಸ್ಯಾ ರೂಪೇಣ ಮೋಹಿತಃ ೨೫ ॥

ಉದ್ವಾಹ್ಯ ಧರ್ಮತೋ ಭೂಪಃ ಸ್ವಗೇಹೇ ತಾಮವಾಸಯತ್ ।
ತಸ್ಯಾಂ ಜಾತೌ ನೃಪಾತ್ಪುತ್ರೌ ದೇಶರಾಜಸ್ತು ತದ್ವರಃ ॥ ೨೬ ॥

ಅಪಾರ್ಯೋ ವತ್ಸರಾಜಶ್ಚ ಶತಹಸ್ತಿಸಮೋ ಬಲೇ ।
ಜಿತ್ವಾ ತೌ ಮಗಧಾನ್ದೇಶಾನ್ ರಾಜ್ಯವಂತೌ ಬಭೂವತುಃ ॥ ೨೮ ॥

---

೨೪. ಇದರಿಂದ ಪ್ರಸನ್ನೆಯಾದ ದುರ್ಗಿಯು ಆ ವ್ರತಪೆಯನ್ನು ಕುರಿತು "ಸಂದರೀ ನೀನು ಬೇಕಾದ ವರವನ್ನು ಕೇಳಿಕೋ" ಎಂದು ಹೇಳಿದಳು. ಆಗ ವ್ರತಪೆಯು "ಎಲೌ ತಾಯಿ, ಜಗದೀಶ್ವರೀ! ನೀನು ನನಗೆ ವರಕೊಡುವುದಾದರೆ ರಾಮ ಕೃಷ್ಣ ಇವರ ಅಂಶದವರಾದ ಬಾಲಕರು ನನ್ನ ವಂಶದಲ್ಲಿ ಹುಟ್ಟುವಂತೆ ಕರುಣಿಸು" ಎಂದು ಬೇಡಿಕೊಂಡಳು.

೨೫-೨೭. ಆಗ ದೇವಿಯು ಆಕೆಯನ್ನು ಕುರಿತು "ಹಾಗೆಯೇ ಆಗಲಿ" ಎಂದು ಹೇಳಿ ಅಲ್ಲಿಯೇ ಅಂತರ್ಧಾನಳಾದಳು. ವಸುಮಂತನೆಂಬ ಒಬ್ಬ ರಾಜನು ಆ ವ್ರತಪಳ ರೂಪವನ್ನು ನೋಡಿ ಮೋಹಗೊಂಡು ಅವಳನ್ನು ಧರ್ಮಪ್ರಕಾರ ವಿವಾಹಮಾಡಿ ಕೊಂಡು ಆಕೆಯನ್ನು ತನ್ನ ಮನೆಗೆ ಕರೆದೊಯ್ದನು. ವಸುಮಂತನಿಗೆ ಆ ವ್ರತಪಳಲ್ಲಿ ಇಬ್ಬರುಮಕ್ಕಳು ಜನಿಸಿದರು. ಅವರಲ್ಲಿ ಹಿರಿಯುವನಿಗೆ ದೇಶರಾಜನೆಂದು ಹೆಸರು. ಎರಡನೆಯವನ ಹೆಸರು ವತ್ಸರಾಜ. ಇವನು ನೂರು ಆನೆಗಳಷ್ಟು ಬಲಶಾಲಿಯೆಂದು ಪ್ರಸಿದ್ಧಿಪಡೆದಿದ್ದನು. ಇವರಿಬ್ಬರೂ ಮಗಧದೇಶವನ್ನು ಜಯಿಸಿ ಅಲ್ಲಿಗೂ ತಾವೇ ರಾಜರಾದರು.

೨೮. ಶೂರನಾದ ಶತಯತ್ತನೆಂಬ ಒಬ್ಬ ಮ್ಲೇಚ್ಛನು ಅಲ್ಲಿ ವನರಸಾಧಿಪತಿ ಯಾಗಿದ್ದನು. ಭೀಮಸೇನನ ಅಂಶದ ಷೀರಣನೆಂಬುವನು ಈಶ್ವರನ ಅಪ್ಪಣೆಯಂತೆ ಅವನಿಗೆ ಮಗನಾಗಿ ಹುಟ್ಟಿದನು.

**ಶತಯತ್ತ್ರಃ ಸ್ಮೃತೋ ಮ್ಲೇಚ್ಛಃ ಶೂರೋ ವನರಸಾಧಿಪಃ ।**
**ತತ್ಪುತ್ರೋ ಭೀಮಸೇನಾಂಶೋ ವೀರಣೋಭೂಚ್ಛಿವಾಜ್ಞಯಾ ॥ ೨೯ ॥**

**ತಾಲವೃಕ್ಷಪ್ರಮಾಣೇನ ಚೋರ್ಧ್ವವೇಗೋ ಹಿ ತಸ್ಯ ವೈ ।**
**ವಾರಿತೋ ನಾಮ ವಿಖ್ಯಾತಃ ಶತಯತ್ತ್ರೇನ ವೈ ಸ್ಮೃತಃ ॥ ೨೯ ॥**

**ತಾಭ್ಯಾಂ ನೃಪಾಭ್ಯಾಂ ತದ್ಯುದ್ಧಮಭವಲ್ಲೋಮಹರ್ಷಣಂ ।**
**ಯುದ್ಧೇನ ಹೀನತಾಂ ಪ್ರಾಪ್ತಸ್ತಾಲನೋ ಬಲವತ್ತರಃ ॥ ೩೦ ॥**

**ತದಾ ಮೈತ್ರೀ ಕೃತಾ ತಾಭ್ಯಾಂ ತಾಲನೇನ ಸಮನ್ವಿತಾ ।**
**ಜಯಚಂದ್ರಪರೀಕ್ಷಾರ್ಥೇ ತ್ರಯಃ ಶೂರಾಃ ಸಮಾಯಯುಃ ॥ ೩೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಚತುರ್ಥೋಽಧ್ಯಾಯಃ**

---

೨೯. ಅವನು ಒಂದು ತಾಳೇಮರದ ಪ್ರಮಾಣದಷ್ಟು ಎತ್ತರಕ್ಕೆ ಹಾರುವ ಶಕ್ತಿಯುಳ್ಳವನಾದುದರಿಂದ ಅವನ ತಂದೆಯಾದ ಶತಯತ್ತನು ಅವನಿಗೆ ತಾಲನ ಎಂಬ ಅಡ್ಡ ಹೆಸರನ್ನು ಇಟ್ಟನು.

೩೦. ಈ ತಾಲನನು ಯಾವುದೋ ಸಂದರ್ಭದಲ್ಲಿ ಅಣ್ಣತಮ್ಮಂದಿರಾದ ದೇಶರಾಜ ಮತ್ತು ವತ್ಸರಾಜ ಇವರನ್ನು ಎದುರಿಸಿ ನೋಡಿದವರಿಗೆ ರೋಮಾಂಚವುಂಟಾಗುವಂತೆ ಅತ್ಯದ್ಭುತವಾಗಿ ಯುದ್ಧಮಾಡಿದನು. ಅಷ್ಟು ಬಲಿಷ್ಠನಾಗಿದ್ದರೂ ಈ ತಾಲನನು ಕೊನೆಗೆ ಹೇಗೋ ಸೋಲಬೇಕಾಗಿ ಬಂದಿತು.

೩೧. ಆದಾಗ್ಯೂ ತಾಲನನು ಅವರೊಡನೆ ಸ್ನೇಹಮಾಡಿಕೊಂಡನು. ಕೊನೆಗೆ ಮೂವರೂಸೇರಿ ಜಯಚಂದ್ರನ ಶಕ್ತಿಯನ್ನು ಪರೀಕ್ಷೆಮಾಡಬೇಕೆಂದು ನಿಶ್ಚಯಿಸಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದ ಮೂರನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮೂಹದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

ಇಂದ್ರಪ್ರಸ್ಥೇಽನಂಗಪಾಲೋಽನಪತ್ಯಶ್ಚ ಮಹೀಪತಿಃ ।
ಪುತ್ರಾರ್ಥಂ ಕಾರಯಾಮಾಸ ಶೈವಂ ಯಜ್ಞಂ ವಿಧಾನತಃ ॥ ೧ ॥

ಕನ್ಯಕೇ ಚ ತದಾ ಜಾತೇ ಶಿವಭಾಗಪ್ರಸಾದತಃ ।
ಚಂದ್ರಕಾನ್ತಿಶ್ಚ ಜ್ಯೇಷ್ಠಾ ವೈ ದ್ವಿತೀಯಾ ಕೀರ್ತಿಮಾಲಿನೀ ॥ ೨ ॥

ಕಾನ್ಯಕುಬ್ಜಾಧಿಪಾಯೈವ ಚಂದ್ರಕ್ರಾಂತಿಂ ಪಿತಾದದತ್ ।
ದೇವಪಾಲಾಯ ಶುದ್ಧಾಯ ರಾಷ್ಟ್ರಪಾಲಾನ್ವಯಾಯ ಚ ॥ ೩ ॥

---

## ಐದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ— ಇಂದ್ರಪ್ರಸ್ಥನಗರದ ರಾಜನಾದ ಅನಂಗಪಾಲನಿಗೆ ಮಕ್ಕಳಿರಲಿಲ್ಲ. ಅವನು ತನಗೆ ಪುತ್ರರು ಜನಿಸಲಿ ಎಂಬ ಉದ್ದೇಶದಿಂದ ಶಿವಪ್ರೀತ್ಯರ್ಥವಾದ ಯಜ್ಞವೊಂದನ್ನು ವಿಧಿಪೂರ್ವಕವಾಗಿ ಮಾಡಿಸಿದನು.

೨. ಈ ಯಾಗಮಾಡಿದುದರಿಂದ ಶಿವನ ಅನುಗ್ರಹವು ಲಭಿಸಿ ಚಂದ್ರಕಾಂತಿ ಮತ್ತು ಕೀರ್ತಿಮಾಲಿನಿ ಎಂಬ ಇಬ್ಬರು ಪುತ್ರಿಯರು ಜನಿಸಿದರು.

೩. ತಂದೆಯಾದ ಅನಂಗಪಾಲನು ಪರಿಶುದ್ಧರಾಜವಂಶೀಯನೂ ಕನ್ಯಾಕುಬ್ಜದ ರಾಜನೂ ಆದ ದೇವಪಾಲನಿಗೆ ತನ್ನ ಹಿರಿಯಮಗಳಾದ ಚಂದ್ರಕಾಂತಿಯನ್ನು ಕೊಟ್ಟು ಮದುವೆಮಾಡಿದನು.

ಸೋಮೇಶ್ವರಾಯ ಭೂಪಾಯ ಚಪಹಾನಿಕುಲಾಯ ತು ।
ಅಜಮೇರಾಧಿಪಾಯೈವ ತಥಾ ವೈ ಕೀರ್ತಿಮಾಲಿನೀಂ ॥ ೪ ॥

ಜಯಶರ್ಮಾ ದ್ವಿಜಃ ಕಶ್ಚಿತ್ಸಮಾಧಿಸ್ಥೋ ಹಿಮಾಲಯೇ ।
ದೃಷ್ಟ್ವಾ ಭೂಪೋತ್ಸವಂ ರಮ್ಯಂ ರಾಜ್ಯಾರ್ಥೇ ಸ್ವಮನೋsದಧತ್ ॥ ೫ ॥

ತ್ಯಕ್ತ್ವಾ ದೇಹಂ ಸ ಶುದ್ಧಾತ್ಮಾ ಚಂದ್ರಕಾನ್ತ್ಯಾಃ ಸುತೋಽಭವತ್ ।
ಜಯಚಂದ್ರ ಇತಿ ಖ್ಯಾತೋ ಬಾಹುಶಾಲೀ ಜಿತೇಂದ್ರಿಯಃ ।
ರತ್ನಭಾನುಶ್ಚ ಸಂಜಜ್ಞೇ ಶೂರಸ್ತಸ್ಯಾನುಜೋ ಬಲೀ ॥ ೬ ॥

ಸ ಜಿತ್ವಾ ಗೌಡವಂಗಾದೀನ್ ಮರುದೇಶಾನ್ಮದೋತ್ಕಟಾನ್ ।
ದಂಡ್ಯಾನ್ಕೃತ್ವಾ ಗೃಹಂ ಪ್ರಾಪ್ಯ ಭ್ರಾತ್ರಾಜ್ಞಾತತ್ಪರೋsಭವತ್ ॥ ೭ ॥

ಗಂಗಾಸಿಂಹಸ್ಯ ಭಗಿನೀ ನಾಮ್ನಾ ವೀರವತೀ ಶುಭಾ ।
ರತ್ನಭಾನೋಶ್ಚ ಮಹಿಷೀ ಬಭೂವ ವರವರ್ಣಿನೀ ॥ ೮ ॥

---

೪. ಚಪಹಾನಿ (ಚೊಹಾನ್) ಕುಲಾಧಿಪತಿಯೂ, ಅಜಮೇರುವಿನ ರಾಜನೂ ಆದ, ಸೋಮೇಶ್ವರನಿಗೆ ಕಿರಿಯಮಗಳಾದ ಕೀರ್ತಿಮಾಲಿನಿಯನ್ನು ಕೊಟ್ಟು ಮದುವೆ ಮಾಡಿದ್ದನು.

೫. ಹಿಂದೆ ಜಯಶರ್ಮನೆಂಬ ಒಬ್ಬ ಬ್ರಾಹ್ಮಣನು ಹಿಮಾಲಯಪರ್ವತದಲ್ಲಿ ಸಮಾಧಿಯೋಗದಲ್ಲಿದ್ದುಕೊಂಡು ರಾಜನು ಅನುಭವಿಸುತ್ತಿರುವ ಸೊಗಸಾದ ವೈಭವಗಳನ್ನು ನೋಡಿ ತಾನೂ ರಾಜ್ಯಾಧಿಪತಿಯಾಗಬೇಕೆಂದು ಮನಸ್ಸುಮಾಡಿದನು.

೬-೮. ಪರಿಶುದ್ಧಾತ್ಮನಾದ ಆ ಜಯಶರ್ಮನು ಆ ದೇಹವನ್ನು ತ್ಯಜಿಸಿ ಚಂದ್ರಕಾಂತಿಯ ಗರ್ಭದಲ್ಲಿ ಮಗನಾಗಿ ಹುಟ್ಟಿದನು. ಅವನ ಹೆಸರು ಜಯಚಂದ್ರ. ಅವನು ಪರಾಕ್ರಮಶಾಲಿ ಮತ್ತು ಇಂದ್ರಿಯ ನಿಗ್ರಹಪರ ಎಂದು ಪ್ರಸಿದ್ಧನಾಗಿದ್ದನು ಇವನಿಗೆ ಪರಾಕ್ರಮಶಾಲಿಯಾದ ರತ್ನಭಾನು ಎಂಬ ತಮ್ಮನು ಹುಟ್ಟಿದನು. ಅವನು ಗೌಡದೇಶ, ವಂಗದೇಶ, ಮರುದೇಶ ಮುಂತಾದ್ದನ್ನು ಗೆದ್ದು ಅಲ್ಲಿಯವರನ್ನು ತನ್ನ ಆಜ್ಞಾನುವರ್ತಿಗಳನ್ನಾಗಿ ಮಾಡಿ ಹಿಂದಿರುಗಿ ಬಂದು ಅಣ್ಣನ ಆಜ್ಞಾಧಾರಕನಾಗಿರುತ್ತಿದ್ದನು. ಗಂಗಾಸಿಂಹನ ತಂಗಿಯಾದ ವೀರವತಿಯೆಂಬ ಸುಂದರಿಯು ರತ್ನಭಾನುವಿನ ಮಹಿಷಿಯಾಗಿದ್ದಳು.

ನಕುಲಾಂಶಸ್ತದಾ ಭೂಮೌ ತಸ್ಯಾಂ ಜಾತಃ ಶಿವಾಜ್ಞಯಾ ।
ಲಕ್ಷಣೋ ನಾಮ ಬಲವಾನ್ಖಡ್ಗಯುದ್ಧವಿಶಾರದಃ ।
ಸ ಸಪ್ತಾಬ್ದಾನ್ತರೇ ಪ್ರಾಪ್ತೇ ಪಿತುಸ್ತುಲ್ಯೋ ಬಭೂವ ಹ ॥ ೯ ॥

ತ್ರಯಶ್ಚ ಕೀರ್ತಿಮಾಲಿನ್ಯಾಂ ಪುತ್ರಾ ಜಾತಾ ಮದೋತ್ಕಟಾಃ ।
ಧುಂಧಕಾರಶ್ಚ ಪ್ರಥಮಸ್ತತಃ ಕೃಷ್ಣಕುಮಾರಕಃ ।
ಪೃಥಿವೀರಾಜ ಏವಾಸೌ ತತೋಽನುಜ ಇತಿ ಸ್ಮೃತಃ ॥ ೧೦ ॥

ದ್ವಾದಶಾಬ್ದವಯಃ ಪ್ರಾಪ್ತಃ ಸಿಂಹಖೇಲಸ್ತತೋಽಭವತ್ ।
ಶ್ರುತ್ವಾ ಚಾನಂಗಪಾಲಶ್ಚ ತಸ್ಮೈ ರಾಜ್ಯಂ ಸ್ವಯಂ ದದೌ ।
ಗತ್ವಾ ಹಿಮಗಿರಿಂ ರಮ್ಯಂ ಯೋಗಧ್ಯಾನಪರೋಽಭವತ್ ॥ ೧೧ ॥

ಮಧುರಾಯಾಂ ಧುಂಧಕಾರೋಽಜಮೇರೇ ಚ ತತೋಽನುಜಃ ।
ರಾಜಾ ಬಭೂವ ನೀತಿಜ್ಞಸ್ತೌ ಸುತೌ ಪಿತುರಾಜ್ಞಯಾ ॥ ೧೨ ॥

---

೯. ಪರಮೇಶ್ವರನ (ಶಾಪ) ವಾಕ್ಯಪ್ರಕಾರ ನಕುಲನ ಅಂಶವು ಲಕ್ಷಣ ಎಂಬ ಹೆಸರಿನಿಂದ ಈ ವೀರವತಿಯ ಗರ್ಭದಲ್ಲಿ ಅವತರಿಸಿ ಖಡ್ಗಯುದ್ಧವಿಶಾರದನಾದ ಪರಾಕ್ರಮಿ ಎನಿಸಿದ್ದನು. ಈ ಲಕ್ಷಣನು ಏಳುವರ್ಷ ವಯಸ್ಸಿನವನಾಗಿದ್ದಾಗಲೇ ತಂದೆಗೆ ಸಮಾನವಾದ ವೀರನೆನಿಸಿದನು.

೧೦. ಅಜಮೇರುವಿನ ಅಧಿಪತಿ ಸೋಮೇಶ್ವರನ ಹೆಂಡತಿಯಾದ ಕೀರ್ತಿ ಮಾಲಿನಿಯ ಗರ್ಭದಲ್ಲಿ ಗರ್ವಿಷ್ಟರಾದ ದುಂಧಕಾರ, ಕೃಷ್ಣಕುಮಾರ, ಪೃಥ್ವೀರಾಜ ಎಂಬ ಮೂವರು ಮಕ್ಕಳು ಹುಟ್ಟಿದರು.

೧೧. ಅವರಲ್ಲಿ ಮೂರನೆಯವನಾದ ಪೃಥ್ವೀರಾಜನು ಹನ್ನೆರಡು ವರ್ಷದವನಾಗಿರುವಾಗಲೇ ಸಿಂಹದೊಡನೆ ಧೈರ್ಯವಾಗಿ ಕ್ರೀಡಿಸುವನೆಂಬುದನ್ನು ಅಜ್ಜನಾದ ಅನಂಗಪಾಲನು ಕೇಳಿದನು. ತನಗೆ ಗಂಡುಮಕ್ಕಳಿಲ್ಲದ ಆ ಅನಂಗಪಾಲನು ಅವನಿಗೇ ತನ್ನ ರಾಜ್ಯವನ್ನು ವಹಿಸಿ ತಾನು ಹಿಮಾಲಯಕ್ಕೆ ಹೋಗಿ ಅಲ್ಲಿ ಯೋಗಧ್ಯಾನಾಸಕ್ತನಾಗಿರುತ್ತಿದ್ದನು.

೧೨. ದುಂಧಕಾರನು ಮಧುರೆಯಲ್ಲಿಯೂ, ಅವನ ತಮ್ಮನಾದ ಕೃಷ್ಣಕುಮಾರನು ಅಜಮೇರಿನಲ್ಲೂ ರಾಜರಾಗಿ, ತಂದೆಯ ಅಪ್ಪಣೆಯಂತೆ ಧರ್ಮದಿಂದ ರಾಜ್ಯವಾಳುತ್ತಿದ್ದರು.

**ಪ್ರದ್ಯೋತಶ್ಚೈವ ವಿದ್ಯೋತಃ ಕ್ಷತ್ರಿಯೌ ಚಂದ್ರವಂಶಜೌ ।**
**ಮಂತ್ರಿಣೌ ತಸ್ಯ ಭೂಪಸ್ಯ ಬಲವನ್ತೌ ಮದೋತ್ಕಟೌ ॥ ೧೩ ॥**

**ಪ್ರದ್ಯೋತತನಯೋ ಜಾತೋ ನಾಮ್ನಾ ಪರಿಮಲೋ ಬಲೀ ।**
**ಲಕ್ಷಸೇನಾಧಿಪಃ ಸೋ ಹಿ ತೇನ ರಾಜ್ಞೈವ ಸಂಸ್ಕೃತಃ ॥ ೧೪ ॥**

**ವಿದ್ಯೋತಾದ್ಭೀಷ್ಮಸಿಂಹಶ್ಚ ಗಜಸೇನಾಧಿಪೋಽಭವತ್ ।**
**ಸ್ವರ್ಗತೇಽನಂಗಪಾಲೇ ತು ಭೂಮಿರಾಜೋ ಮಹೀಪತಿಃ ॥ ೧೫ ॥**

**ದೃಷ್ಟ್ವಾ ತಾನ್ನಿಪ್ರಿಯಾನ್ಸರ್ವಾನ್ನಿಜರಾಜ್ಯಾನ್ನಿರಾಕರೋತ್ ।**
**ಪ್ರದ್ಯೋತಾದ್ಯಾಶ್ಚ ಚತ್ವಾರಃ ಸ್ವಶೂರೈರ್ದ್ವಿಶತೈರ್ಯುತಾಃ ॥ ೧೬ ॥**

**ಕಾನ್ಯಕುಬ್ಜಪುರಂ ಪ್ರಾಪ್ಯ ಜಯಚಂದ್ರಮವರ್ಣಯನ್ ।**
**ಜಯಚಂದ್ರ ಮಹೀಪಾಲ ತ್ವನ್ಮಾತೃಷ್ವಸೃಜೋ ನೃಪಃ ॥ ೧೭ ॥**

---

೧೩. ಮಹಾಪರಾಕ್ರಮಿಗಳೂ ಮದದಿಂದ ಕೊಬ್ಬಿದವರೂ ಆದ ಪ್ರದ್ಯೋತ ವಿದ್ಯೋತ ಎಂಬ ಇಬ್ಬರು ಚಂದ್ರವಂಶೀಯರೂ ಅನಂಗಪಾಲನ ರಾಜ್ಯದಲ್ಲಿ ಮಂತ್ರಿಗಳಾಗಿದ್ದರು.

೧೪. ಪ್ರದ್ಯೋತನ ಮಗನೂ ಪರಾಕ್ರಮಶಾಲಿಯೂ ಆದ ಪರಿಮಳನು ಅನಂಗಪಾಲನ ಒಂದುಲಕ್ಷ ಸೈನ್ಯಕ್ಕೆ ಅಧಿಪತಿಯಾಗಿದ್ದನು. ವಿದ್ಯೋತನ ಮಗನಾದ ಭೀಷ್ಮಸಿಂಹನು ಗಜಸೇನಾಪತಿಯಾಗಿದ್ದನು.

೧೫. ಅನಂಗಪಾಲನು ಸ್ವರ್ಗಸ್ಥನಾಗುತ್ತಲೆ ಪೃಥ್ವೀರಾಜನೇ ದೊರೆಯಾದನು. ಪಟ್ಟವೇರಿದ ಕೆಲವು ದಿನದನಂತರ ಪರಿಮಳನನ್ನೂ ಭೀಷ್ಮಸಿಂಹನನ್ನೂ ದ್ರೋಹಿಗಳೆಂದು ತಿಳಿದು ಅವರನ್ನು ತನ್ನ ರಾಜ್ಯದಿಂದ ಓಡಿಸಿದನು.

೧೬. ತನ್ನ ಮಕ್ಕಳಿಗಾದ ಶಿಕ್ಷೆಗಾಗಿ ಅಸಮಾಧಾನಪಟ್ಟು ಪ್ರದ್ಯೋತನೇ ಮೊದಲಾದ ಮಂತ್ರಿಗಳು, ಮಕ್ಕಳು ಒಟ್ಟು ನಾಲ್ವರೂ ತಮ್ಮ ಪಕ್ಷದವರೆನಿಸಿ ಶ್ರೇಷ್ಠರಾದ ಇನ್ನೂರು ಮಂದಿಯೊಡನೆ ಹೊರಟು ಕನ್ಯಾಕುಬ್ಜಕ್ಕೆ ಬಂದರು.

೧೭-೧೮. ಅಲ್ಲಿ ಜಯಚಂದ್ರನನ್ನು ಸಂದರ್ಶಿಸಿ ಸ್ತುತಿಸುವರಾಗಿ "ಅಯ್ಯಾ ಜಯಚಂದ್ರ ಮಹಾರಾಜನೇ! ನಿನ್ನ ಚಿಕ್ಕಮ್ಮನ ಮಗನಾದ ಪೃಥ್ವೀರಾಜನು ನಿಮ್ಮ

ಮಾತಾಮಹಸ್ಯ ತೇ ರಾಜ್ಯಂ ಸ್ರಾಪ್ತವಾನ್ನಿರ್ಭಯೋ ಬಲೀ ।
ನ್ಯಾಯೇನ ಕಥಿತೋಽಸ್ಮಾಭಿರರ್ಧರಾಜ್ಯಂ ಹಿ ತೇ ಸ್ಮೃತಂ ॥ ೧೮ ॥

ಸರ್ವರಾಜ್ಯಂ ಕಥಂ ಭುಂಕ್ಷೇ ಶ್ರುತ್ವಾ ತೇನ ನಿರಾಕೃತಾಃ ।
ಭವಂತಂ ಶರಣಂ ಪ್ರಾಪ್ತಾ ಯಥಾಯೋಗ್ಯಂ ತಥಾ ಕುರು ॥ ೧೯ ॥

ಇತಿ ಶ್ರುತ್ವಾ ಮಹೀಪಾಲೋ ಜಯಚಂದ್ರ ಉವಾಚ ತಾನ್ ।
ಅಶ್ವಸೈನ್ಯೇ ಮದೀಯೇ ಚಾಧಿಕಾರೀ ತೇ ಸುತೋ ಭವೇತ್ ॥ ೨೦ ॥

ನಾಮ್ನಾ ಪರಿಮಲಃ ಶೂರಸ್ತ್ವಂ ಮನ್ಮಂತ್ರೀ ಭವಾಧುನಾ ।
ವಿದ್ಯೋತಶ್ಚ ತಥಾ ಮಂತ್ರೀ ಗಜಸೈನ್ಯೇ ಹಿ ಭೀಷ್ಮಕಃ ॥ ೨೧ ॥

ವೃತ್ತ್ಯರ್ಥೇ ಚ ಮಯಾ ಪ್ರೋಕ್ತಾ ಪುರೀ ದತ್ತಾ ಮಹಾವತೀ ।
ಮಹೀಪತೇಶ್ಚ ಭೂಪಸ್ಯ ನಗರೀ ಸಾ ಪ್ರಿಯಂಕರೀ ॥ ೨೨ ॥

---

ಅಜ್ಜನ ರಾಜ್ಯವೆಲ್ಲವನ್ನೂ ಆಕ್ರಮಿಸಿ ನಿರ್ಭಯನಾಗಿ ಪರಾಕ್ರಮದಿಂದ ಮೆರೆಯುತ್ತಿರುವನು. ನ್ಯಾಯವಾಗಿ ಅವನ ರಾಜ್ಯದಲ್ಲಿ ಅರ್ಧವು ನಿನಗೆ ಸೇರಬೇಕು. ನಾವು ಒಂದು ಸಲ ಅವನನ್ನು ಕುರಿತು “ನಿಮ್ಮ ಅಜ್ಜನ ಎಲ್ಲಾ ರಾಜ್ಯವನ್ನೂ ನೀನೊಬ್ಬನೇ ಅನುಭವಿಸುವುದು ಯಾವ ನ್ಯಾಯ?” ಎಂಬದಾಗಿ ಲೋಕರೂಢಿಯಾಗಿ ಪ್ರಶ್ನಿಸಿದೆವು.

೧೯. ಅದಕ್ಕೇ ಅವನು ಈರೀತಿ ನಮ್ಮನ್ನು ತಿರಸ್ಕರಿಸಿದ್ದಾನೆ. ಅದರಿಂದ ನಾವು ಈಗ ನಿನ್ನ ಮರೆಹೊಕ್ಕಿದ್ದೇವೆ. ನೀನು ನಮ್ಮ ವಿಷಯದಲ್ಲಿ ಯೋಗ್ಯರೀತಿಯಿಂದ ನಡೆದುಕೊಳ್ಳುವೆಯೆಂದು ಭಾವಿಸಿ ಬಂದಿದ್ದೇವೆ” ಎಂಬದಾಗಿ ಸ್ತುತಿಸಿದರು.

೨೦-೨೧ ಈ ಮಾತನ್ನು ಕೇಳಿದ ಜಯಚಂದ್ರನು ಅವರನ್ನು ಕುರಿತು “ಅಮಾತ್ಯವರ್ಯ! ನೀನು ಈಗ ನನ್ನ ಮಂತ್ರಿಯಾಗಿರು, ವಿದ್ಯೋತನೂ ನನ್ನ ಇನ್ನೊಬ್ಬ ಮಂತ್ರಿಯಾಗಿರಲಿ. ಪರಾಕ್ರಮಶಾಲಿಯೆನಿಸಿದ ನಿಮ್ಮ ಮಗ ಪರಿಮಳನು ನನ್ನ ಅಶ್ವಸೈನ್ಯಕ್ಕೆ ಅಧಿಪತಿಯಾಗಿರಲಿ, ಭೀಷ್ಮಸಿಂಹನು ನಮ್ಮ ಗಜಸೇನಾಪತಿಯಾಗಿರಲಿ”.

೨೨. “ದೊರೆಯಾದ ಮಹೀಪತಿರಾಜನಿಗೆ ಅಚ್ಚುಮೆಚ್ಚಿನ ಸ್ಥಾನವಾದ ಮಹಾವತೀನಗರವನ್ನೇ ನಿಮ್ಮ ವೆಚ್ಚಕ್ಕಾಗಿ ಜಹಗೀರಿ ಕೊಟ್ಟಿದ್ದೇನೆ” ಎಂದನು. ಜಯಚಂದ್ರನು ಹೀಗೆಂದುದನ್ನು ಕೇಳಿ ಅವರೆಲ್ಲರೂ “ಹಾಗೆಯೇ ಆಗಲಿ” ಎಂದು ಸಂತೋಷದಿಂದ ಒಪ್ಪಿದರು.

ಇತಿ ಶ್ರುತ್ವಾ ತು ತೇ ಸರ್ವೇ ತಥಾ ಮತ್ವಾ ಮುಮೋದಿರೇ ।
ಮಹೀಪತಿಸ್ತು ಬಲವಾನ್ದುಃಖಾತ್ಸಂತ್ಯಜ್ಯ ತಾಂ ಪುರೀಂ ॥ ೨೩ ॥

ಕೃತ್ವೌರ್ವೀಯಾಂ ಪುರೀಮನ್ಯಾಂ ತತ್ರ ವಾಸಮಕಾರಯತ್ ।
ಅಗಮಾ ಮಲನಾ ಚೈವ ಭಗಿನ್ಯೌ ತಸ್ಯ ಚೋತ್ತಮೇ ॥ ೨೪ ॥

ಅಗಮಾ ಭೂಮಿರಾಜಾಯ ಚಾನ್ಯಾ ಪರಿಮಲಾಯ ಸಾ ।
ದತ್ತಾ ಭ್ರಾತ್ರಾ ವಿಧಾನೇನ ಪರಮಾನಂದಮಾಪತುಃ ॥ ೨೫ ॥

ವಿವಾಹಾಂತೇ ಚ ಭೂರಾಜಾ ದುರ್ಗಮನ್ಯಮಕಾರಯತ್ ।
ಕೃತ್ವಾ ಚ ನಗರೀಂ ರಮ್ಯಾಂ ಚತುರ್ವರ್ಣನಿವಾಸಿನೀಂ ॥ ೨೬ ॥

ದೇಹಲೀ ಸುಮುಹೂರ್ತೇನ ದುರ್ಗದ್ವಾರೇ ಸುರೋಪಿತಾ ।
ಗತಾ ಸಾ ಯೋಜನಾಂತೇ ವೈ ವೃದ್ಧಿರೂಪಾ ಸುಕಾಲತಃ ॥ ೨೭ ॥

---

೨೩. ಬಲಶಾಲಿಯಾದ ಮಹೀಪತಿಯು ಜಯಚಂದ್ರನ ಅಪ್ಪಣೆ ಮೀರಲಾರದೆ ಬಹು ಖೇದದಿಂದ ಆ ಪಟ್ಟಣವನ್ನು ತ್ಯಜಿಸಿ ಇನ್ನೊಂದು ಸ್ಥಳದಲ್ಲಿ ಔರ್ವೀಯ ನಗರವನ್ನು ನಿರ್ಮಿಸಿ ಅಲ್ಲಿ ವಾಸಿಸಲು ಆರಂಭಿಸಿದನು.

೨೪. ಆ ಮಹೀಪತಿಗೆ ಸ್ತ್ರೀಜನ ಶ್ರೇಷ್ಠರೆನಿಸಿದ ಅಗಮಾ ಮಲನಾ ಎಂಬ ಇಬ್ಬರು ತಂಗಿಯರು ಇದ್ದರು. ಅಣ್ಣನಾದ ಮಹೀಪತಿಯು ಅಗಮಾದೇವಿಯನ್ನು ಪೃಥ್ವೀರಾಜನಿಗೆ ಕೊಟ್ಟು ವಿವಾಹಮಾಡಿದ್ದನು.

೨೫. ಮಲನಾದೇವಿಯನ್ನು ಸೇನಾಪತಿ ಪರಿಮಳನಿಗೆ ಕೊಟ್ಟು ಶಾಸ್ತ್ರೋಕ್ತವಾಗಿ ವಿವಾಹವನ್ನು ನೆರವೇರಿಸಿದ್ದನು. ಅವರಿಬ್ಬರೂ ತಮಗನುರೂಪರಾದ ಪತಿ ದೊರೆತುದರಿಂದ ಆನಂದದಿಂದಿದ್ದರು.

೨೬ ಈ ವಿವಾಹ ಮಹೋತ್ಸವವು ಮುಗಿದಮೇಲೆ ಪೃಥ್ವೀರಾಜನು ಬೇರೆ ಒಂದು ದುರ್ಗವನ್ನು ನಿರ್ಮಿಸಿದನು. ಎಲ್ಲ ವರ್ಣಗಳವರಿಗೂ ಆಶ್ರಯವೆನಿಸಿ ಆ ಪಟ್ಟಣವು ಸುಂದರವಾಗಿದ್ದಿತು.

೨೭. ರಾಜನು ಸುಮುಹೂರ್ತದಲ್ಲಿ ದುರ್ಗದ ಬಾಗಿಲಲ್ಲಿ (ಹೊಸಲನ್ನು) ದೇಹಲಿಯನ್ನು ಪೂಜಿಸಿ ಪ್ರತಿಷ್ಠೆಮಾಡಿಸಿದನು. ಆ ಮುಹೂರ್ತವು ಬಹು ಶ್ರೇಷ್ಠವಾದುದರಿಂದ ಆ ಹೊಸಲು ಅಲ್ಲಿಂದ ಒಂದು ಯೋಜನದವರೆಗೂ ವಿಸ್ತರಿಸಿತು.

ವಿಸ್ಮಿತಃ ಸ ನೃಪೋ ಭೂತ್ವಾ ದೇಹಲೀ ನಾಮ ಚಾಕರೋತ್ ।
ದೇಹಲೀಗ್ರಾಮ ಇತಿ ಚ ಪ್ರಸಿದ್ಧೋಽಭೂನ್ನೃಪಾಜ್ಞಯಾ ॥ ೨೮ ॥

ತ್ರಿವರ್ಷಾಂತೇ ಚ ಭೋ ವಿಪ್ರಾ ಜಯಚಂದ್ರೋ ಮಹೀಪತಿಃ ।
ಲಕ್ಷಷೋಡಶಸೈನ್ಯಾಢ್ಯಸ್ತತ್ರ ಪತ್ರಮಚೋದಯತ್ ॥ ೨೯ ॥

ಕಿಮರ್ಥಂ ಪೃಥಿವೀರಾಜ ಮದ್ದಾಯಂ ಮೇ ನ ದತ್ತವಾನ್ ।
ಮಾತಾಮಹಸ್ಯ ವೈ ದಾಯಂ ಚಾರ್ಧಂ ಮೇ ಚ ಸಮರ್ಪಯ ॥ ೩೦ ॥

ನೋ ಚೇನ್ಮಚ್ಛಸ್ತ್ರಕಠಿನೈಃ ಕ್ಷಯಂ ಯಾಸ್ಯಂತಿ ಸೈನಿಕಾಃ ।
ಇತಿ ಜ್ಞಾತ್ವಾ ಮಹೀರಾಜೋ ವಿಂಶಲ್ಲಕ್ಷಾಧಿಪೋ ಬಲೀ ॥ ೩೧ ॥

ದೂತಂ ವೈ ಪ್ರೇಷಯಾಮಾಸ ರಾಜರಾಜೋ ಮದೋತ್ಕಟಃ ।
ಜಯಚಂದ್ರಮಹೀಪಾಲ ಸಾವಧಾನಂ ಶೃಣಷ್ವಂ ತತ್ ॥ ೩೨ ॥

---

೨೮. ಇದನ್ನು ನೋಡಿ ಆಶ್ಚರ್ಯಗೊಂಡ ಆ ರಾಜನು ಆ ಊರಿಗೆ ದೇಹಲೀ ಎಂದೇ ಹೆಸರಿಟ್ಟನು. ರಾಜಾಜ್ಞೆಯಿಂದ ಎಲ್ಲರೂ ಆ ಹೆಸರಿನಿಂದಲೇ ಕರೆಯಲು ಆರಂಭಿಸಿದರು.

೨೯. ಇದು ನೆರವೇರಿದ ಮೂರು ವರ್ಷಗಳ ಅವಧಿಯಲ್ಲಿ ಜಯಚಂದ್ರ ಮಹಾರಾಜನು ಏನನ್ನೋ ಯೋಚಿಸಿ ಹದಿನಾರು ಲಕ್ಷಸೇನೆಯನ್ನು ಸಿದ್ಧಪಡಿಸಿಕೊಂಡನು. ಬಳಿಕ ಪೃಥ್ವೀರಾಜನಿಗೆ ಕಾಗದ ಬರೆಯಬೇಕೆಂದು ನಿಶ್ಚಯಿಸಿದನು.

೩೦-೩೧. "ಎಲೈ ಪೃಥ್ವೀರಾಜನೇ! ನಮ್ಮ ಮಾತಾಮಹನಾದ ಅನಂಗಪಾಲನ ಸ್ವತ್ತಿನಲ್ಲಿ ಅರ್ಧಭಾಗಕ್ಕೆ ನನಗೂ ಹಕ್ಕು ಇದೆ. ಅದನ್ನು ನನಗೆ ಕೊಡದೆ ನೀನೇ ಅನುಭವಿಸುತ್ತಿದ್ದೀ ಆ ಅರ್ಧಭಾಗವನ್ನು ಕೂಡಲೆ ನನಗೆ ಕೊಡಬೇಕು, ಇಲ್ಲದಿದ್ದರೆ ನನ್ನ ಕಠಿಣವಾದ ಶಸ್ತ್ರದಿಂದ ನಿನ್ನ ಸೈನ್ಯವೆಲ್ಲ ನಿರ್ಮೂಲವಾಗುವುದು" ಎಂದು ಕಾಗದಬರೆದು ಕಳುಹಿಸಿದನು.

೩೨. ಇಪ್ಪತ್ತುಲಕ್ಷ ಸೈನ್ಯಕ್ಕೆ ಒಡೆಯನೂ ಮಹಾಪರಾಕ್ರಮಿಯೂ ಮದದಿಂದ ಕೊಬ್ಬಿದವನೂ ರಾಜಾಧಿರಾಜನೂ ಆದ ಪೃಥ್ವೀರಾಜನು ತನಗೆ ಜಯಚಂದ್ರನು ಬರೆದ ಪತ್ರವನ್ನು ಓದಿಕೊಂಡು ಅವನ ಬಳಿಗೆ ದೂತನನ್ನು ಕಳುಹಿಸಲು ನಿಶ್ಚಯಿಸಿ ಹೀಗೆ ಪತ್ರ ಬರೆಸಿದನು.

**ಯದಾ ನಿರಾಕೃತಾ ಧೂರ್ತಾ ಮಯಾ ತೇ ಚಂದ್ರವಂಶಿನಃ ।**
**ತತಃ ಪ್ರಭೃತಿ ಸೇನಾಂಗಂ ವಿಂಶಲ್ಲಕ್ಷಂ ಸಮಾಹೃತಂ ॥ ೩೩ ॥**

**ತ್ವಯಾ ಷೋಡಶಲಕ್ಷಂ ಚ ಯುದ್ಧಸೈನ್ಯಂ ಸಮಾಹೃತಂ ।**
**ಸರ್ವೇ ವೈ ಭಾರತೇ ಭೂಪಾ ದಂಡಯೋಗ್ಯಾಶ್ಚ ಮೇ ಸದಾ ॥ ೩೪ ॥**

**ಭವಾನ್ನ ದಂಡ್ಯೋ ಬಲವಾನ್ಕರಂ ಮೇ ದಾತುಮರ್ಹತಿ ।**
**ನೋಚೇನ್ಮತ್ಕಠಿನೈರ್ಬಾಣೈಃ ಕ್ಷಯಂ ಯಾಸ್ಯಂತಿ ಸೈನಿಕಾಃ ॥ ೩೫ ॥**

**ಇತಿ ಜ್ಞಾತ್ವಾ ತಯೋರ್ಘೋರಂ ವೈರಂ ಚಾಸೀನ್ಮಹೀತಲೇ ।**
**ಭೂಮಿರಾಜಶ್ಚ ಬಲವಾಞ್ಜಯಚಂದ್ರಭಯಾರ್ದಿತಃ ॥ ೩೬ ॥**

---

೩೩. "ಎಲೈ ಜಯಚಂದ್ರರಾಜನೇ! ನಾನು ತಿಳಿಸುವುದನ್ನು ಸಾವಧಾನವಾಗಿ ಲಾಲಿಸು. ಚಂದ್ರವಂಶೋತ್ಪನ್ನರೂ ವಂಚಕರೂ ಆದ ಪ್ರದ್ಯೋತಾದಿಗಳನ್ನು ತಿರಸ್ಕರಿಸಿ ಈ ದೇಶದಿಂದ ಓಡಿಸಿದಾಗಿನಿಂದ ನನ್ನ ಸೈನ್ಯಾಂಗವು ಅಭಿವೃದ್ಧಿಯಾಗಿ ಈಗ ಇಪ್ಪತ್ತು ಲಕ್ಷಕ್ಕೆ ಏರಿದೆ.

೩೪. ನೀನು ಹದಿನಾರುಲಕ್ಷ ಸೈನ್ಯವನ್ನು ಯುದ್ಧಕ್ಕೆ ಸಿದ್ಧಪಡಿಸಿದ್ದೀಯೆ ಆದರೆ ಭರತಖಂಡದ ರಾಜರೆಲ್ಲರೂ ಸರ್ವದಾ ನನ್ನ ಆಜ್ಞಾನುವರ್ತಿಗಳಾದ ಸಾಮಂತರು ಅವರಿಗೆ ನಾನು ದಂಡವಿಧಾನಮಾಡಲು ಸಮರ್ಥನಾಗಿದ್ದೇನೆ.

೩೫. ನೀನು ಬಲಿಷ್ಠನಾದುದರಿಂದ ನಿನ್ನನ್ನು ಆರೀತಿ ಭಾವಿಸುವುದಿಲ್ಲ. ಆದರೂ ನೀನೂ ಸಾಮಂತ; ಆದ್ದರಿಂದ ನನಗೆ ಕಪ್ಪವನ್ನು ಕೊಡಬೇಕು. ಹಾಗೆ ಮಾಡದೆ ಇದ್ದರೆ ಕಠಿಣವಾದ ನನ್ನ ಬಾಣಗಳು ನಿನ್ನ ಸೈನಿಕರನ್ನೆಲ್ಲಾ ಧ್ವಂಸ ಮಾಡುವುವು" ಎಂದು ಒಕ್ಕಣೆ ಬರೆಯಿಸಿದನು.

೩೬. ಈರೀತಿಯಾಗಿ ನಡೆದ ಪತ್ರವ್ಯವಹಾರದಿಂದ ಅವರ ದ್ವೇಷವು ಹೆಚ್ಚುತ್ತಾ ಬಂದಿತು. ಪೃಥ್ವೀರಾಜನು ಬಲಿಷ್ಠನಾದರೂ ಜಯಚಂದ್ರನೆಂದರೆ ಸ್ವಲ್ಪ ಅಳುಕುತ್ತಿದ್ದನು.

ಜಯಚಂದ್ರಶ್ಚ ಬಲವಾನ್ಪೃಥಿವೀರಾಜಭೀರುಕಃ ।
ಜಯಚಂದ್ರಶ್ಚಾರ್ಯದೇಶಮರ್ದ್ಧರಾಷ್ಟ್ರಮಕಲ್ಪಯತ್ ॥ ೩೭ ॥

ಪೃಥಿವೀರಾಜ ಏವಾಸೌ ತಥಾರ್ದ್ಧಂ ರಾಷ್ಟ್ರಮಾನಯತ್ ।
ಏವಂ ಜಾತಂ ತಯೋರ್ವೈರಮಗ್ನಿವಂಶಪ್ರಣಾಶನಂ ॥ ೩೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಪಂಚಮೋಽಧ್ಯಾಯಃ



೩೭. ಜಯಚಂದ್ರನು ಶೂರನಾದರೂ ಸಮ್ರಾಜನಾದ ಪೃಥ್ವೀರಾಜನಿಗೆ ಸ್ವಲ್ಪ ಹೆದರುತ್ತಲೇ ಇದ್ದನು. ಆರ್ಯದೇಶದ ರಾಜರಲ್ಲಿ ಅರ್ಧದಷ್ಟು ಮಂದಿಯನ್ನು ಜಯಚಂದ್ರನು ತನ್ನ ಪಕ್ಷಕ್ಕೆ ಸೇರಿಸಿಕೊಂಡಿದ್ದನು.

೩೮. ಪೃಥ್ವೀರಾಜನು ಕೂಡ ಉಳಿದ ಅರ್ಧಭಾಗದ ರಾಜರನ್ನು ತನ್ನ ಕಡೆಗೆ ಸೇರಿಸಿಕೊಂಡಿದ್ದನು. ಈರೀತಿಯಾಗಿ ಅವರವರಿಗೆ ಉಂಟಾದ ದ್ವೇಷವು ಅಗ್ನಿ ಕುಲದವರ ನಾಶಕ್ಕೆ ಕಾರಣವಾಯಿತು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದ ಮೂರನೆಯ ಖಂಡದಲ್ಲಿ
ಕಲಿಯುಗೀಯ ಇತಿಹಾಸವೆಂಬ ಐದನೆಯ ಅಧ್ಯಾಯ ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಷಷ್ಠೋಽಧ್ಯಾಯಃ

---

॥ ಸೂತ ಉವಾಚ ॥

ಏಕದಾ ರತ್ನಭಾನುರ್ಹಿ ಮಹೀರಾಜೇನ ಪಾಲಿತಾಂ ।
ದಿಶಂ ಯಾಮ್ಯಾಂ ಸ ವೈ ಜಿತ್ವಾ ತೇಷಾಂ ಕೋಶಾನುಪಾಹರತ್ ॥ ೧ ॥

ಮಹೀರಾಜಸ್ತು ತಚ್ಛ್ರುತ್ವಾ ಪರಂ ವಿಸ್ಮಯಮಾಗತಃ ।
ರತ್ನಭಾನೋಶ್ಚ ತಿಲಕೋ ಬಭೂವ ಬಹುವಿಸ್ತರಃ ॥ ೨ ॥

ತಿಲಕಾ ನಾಮ ವಿಖ್ಯಾತಾ ಯಾ ತು ವೀರವತೀ ಶುಭಾ ।
ಶ್ರೇಷ್ಠಾ ದ್ವಾದಶರಾಜ್ಞೀನಾಂ ಜನನೀ ಲಕ್ಷಣಸ್ಯ ವೈ ॥ ೩ ॥

---

## ಆರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಜಯಚಂದ್ರನ ತಮ್ಮನಾದ ರತ್ನಭಾನು ಒಂದುಸಲ ಪೃಥ್ವೀರಾಜನ ಆಳ್ವಿಕೆಗೊಳಪಟ್ಟ ದಕ್ಷಿಣಭಾಗದ ರಾಜ್ಯವನ್ನು ಮುತ್ತಿ ಅಲ್ಲಿನ ಧನಧಾನ್ಯಾದಿಗಳನ್ನು ದೋಚಿಕೊಂಡನು.

೨. ಇದನ್ನು ಕೇಳಿ ಪೃಥ್ವೀರಾಜನಿಗೆ ಬಹಳ ಆಶ್ಚರ್ಯವಾಯಿತು. ರತ್ನಭಾನುವಿನ ಕೀರ್ತಿ ಬಹುದೂರ ವಿಸ್ತರಿಸಿತು.

೩. ತಿಲಕಾ ಎಂಬ ಉಪನಾಮ (ಅಡ್ಡ ಹೆಸರಿನಿಂದ) ದಿಂದ ಪ್ರಸಿದ್ಧಳಾದ ವೀರವತಿಯು ಆ ರತ್ನಭಾನುವಿನ ಹನ್ನೆರಡುಮಂದಿ ರಾಣಿಯರೊಳಗೆ ಶ್ರೇಷ್ಠಳೆನಿಸಿ ದುದಲ್ಲದೆ ಲಕ್ಷಣನೆಂಬ ಪುತ್ರನನ್ನು ಪಡೆದಿದ್ದಳು.

**ಜಯಚಂದ್ರಸ್ಯ ಭೂಪಸ್ಯ ಯೋಷಿತಃ ಷೋಡಶಾಭವನ್ ।**
**ತಾಸಾಂ ನ ತನಯೋ ಹ್ಯಾಸೀತ್ಪೂರ್ವಕರ್ಮವಿಪಾಕತಃ ॥ ೪ ॥**

**ಗೌಡಭೂಪಸ್ಯ ದುಹಿತಾ ನಾಮ್ನಾ ದಿವ್ಯವಿಭಾವರೀ ।**
**ಜಯಚಂದ್ರಸ್ಯ ಮಹಿಷೀ ತದ್ದಾಸೀ ಸುರಭಾನವೀ ॥ ೫ ॥**

**ರೂಪಯೌವನಸಂಯುಕ್ತಾ ರತಿಕೇಲಿವಿಶಾರದಾ ।**
**ದೃಷ್ಟ್ವಾ ತಾಂ ಸ ನೃಪಃ ಕಾಮೀ ಬುಭುಜೇ ಸ್ಮರಪೀಡಿತಃ ॥ ೬ ॥**

**ತಸ್ಯಾಂ ಜಾತಾ ಸುತಾ ದೇವೀ ನಾಮ್ನಾ ಸಂಯೋಗಿನೀ ಶುಭಾ ।**
**ದ್ವಾದಶಾಬ್ದವಯಃ ಪ್ರಾಪ್ತಾ ಸಾ ಬಭೂವ ವರಾಂಗನಾ ॥ ೭ ॥**

**ತಸ್ಯಾಃ ಸ್ವಯಂವರೇ ರಾಜಾಹ್ವಯದ್ಭೂಪಾನ್ಮಹಾಶುಭಾನ್ ।**
**ಭೂಮಿರಾಜಸ್ತು ಬಲವಾಞ್ಶ್ರುತ್ವಾ ತದ್ರೂಪಮುತ್ತಮಂ ॥ ೮ ॥**

---

೪. ಜಯಚಂದ್ರನಿಗೆ ಹದಿನಾರು ಜನ ಪತ್ನಿಯರಿದ್ದರೂ ಪ್ರಾರಬ್ಧಕರ್ಮ ವಶದಿಂದ ಅವರಲ್ಲಿ ಯಾರಿಗೂ ಪುತ್ರಸಂತಾನವಿರಲಿಲ್ಲ.

೫-೬. ಗೌಡದೇಶದ ರಾಜನ ಮಗಳಾದ ದಿವ್ಯವಿಭಾವರೀ ಎಂಬವಳು ಜಯಚಂದ್ರನ ಪಟ್ಟದರಾಣಿಯಾಗಿದ್ದಳು. ಅವಳ ಸಮೀಪದಲ್ಲಿ ರತಿಕ್ರೀಡಾ ನಿಪುಣೆಯೂ ರೂಪಯೌವನಸಂಪನ್ನೆಯೂ ಆದ ಸುರಭಾನವೀ ಎಂಬ ದಾಸಿ ಇದ್ದಳು. ರಾಜನಾದ ಜಯಚಂದ್ರನ ದೃಷ್ಟಿಗೆ ಒಂದುಸಾರಿ ಆ ಸುಂದರಿಯು ಗೋಚರಳಾದಳು. ಅವಳನ್ನು ನೋಡಿದೊಡನೆ ಮನ್ಮಥಾವಿಷ್ಟನಾದ ಜಯಚಂದ್ರನು ಅವಳಲ್ಲಿ ಭೋಗಿಸಿದನು.

೭. ಆ ಸುರಭಾನವಿಯು ಗರ್ಭಿಣಿಯಾಗಿ ಸಂಯೋಗಿನಿಯೆಂಬ ಪುತ್ರಿಯನ್ನು ಪ್ರಸವಿಸಿದಳು. ಆ ಬಾಲಿಕೆಗೆ ಹನ್ನೆರಡು ವರ್ಷವಾಯಿತು. ಅವಳು ಅನುಪಮ ಲಾವಣ್ಯವತಿಯೆಂದೂ, ಲೋಕಸುಂದರಿಯೆಂದೂ, ಪ್ರಸಿದ್ಧಳಾಗಿ ವಿವಾಹಯೋಗ್ಯವಾದ ವಯಸ್ಸುಳ್ಳವಳಾದಳು.

೮. ಜಯಚಂದ್ರನು ಆಕೆಯ ಸ್ವಯಂವರವನ್ನು ಏರ್ಪಡಿಸಿ ಸುಂದರರೂ ಯುವಕರೂ ಆದ ರಾಜರನ್ನು ಸ್ವಯಂವರಕ್ಕೆ ಆಹ್ವಾನಿಸಿದ್ದನು. ಪೃಥ್ವೀರಾಜನು ಶೂರನೆಂದು ಆಕೆಗೆ ತಿಳಿದಿದ್ದಿತು. ಶೂರನಾದ ಪೃಥ್ವೀರಾಜನು ಅವಳ ಸೌಂದರ್ಯಾತಿಶಯವನ್ನು ಪರೋಕ್ಷವಾಗಿ ತಿಳಿದು ಅವಳನ್ನು ಮದುವೆಯಾಗಲು ಅಪೇಕ್ಷಿಸಿದ್ದನು.

ವಿವಾಹಾರ್ಥೇ ಮನಶ್ಚಾಸೀಚ್ಚಂದ್ರಭಟ್ಟಮಚೋದಯತ್ ।
ಮಂತ್ರಿಪ್ರವರ ಭೋ ಮಿತ್ರ ಚಂದ್ರಭಟ್ಟ ಮಮ ಪ್ರಿಯ ॥ ೯ ।

ಕಾನ್ಯಕುಬ್ಜಪುರೀಂ ಪ್ರಾಪ್ಯ ಮನ್ಮೂರ್ತಿಂ ಸ್ವರ್ಣನಿರ್ಮಿತಾಂ ।
ಸ್ಥಾಪಯ ತ್ವಂ ಸಭಾಮಧ್ಯೇ ಯದ್ವೃತ್ತಾಂತಂ ತು ಮೇ ವದ ॥ ೧೦ ॥

ಇತಿ ಶ್ರುತ್ವಾ ಚಂದ್ರಭಟ್ಟೋ ಭವಾನೀಭಕ್ತಿತತ್ಪರಃ ।
ಗತ್ವಾ ತತ್ರ ಭೃಗುಶ್ರೇಷ್ಠ ಯಥಾ ಪ್ರೋಕ್ತಸ್ತಥಾಕರೋತ್ ॥ ೧೧ ॥

ಸ್ವಯಂವರೇ ಚ ಭೂಪಾಶ್ಚ ನಾನಾದೇಶ್ಯಾಃ ಸಮಾಗತಾಃ ।
ತ್ಯಕ್ತ್ವಾ ಸಂಯೋಗಿನೀ ತಾನ್ಸ್ವೈ ನೃಪಮೂರ್ತಿವಿಮೋಹಿತಾ ॥ ೧೨ ॥

ಪಿತರಂ ಪ್ರಾಹ ಕಾಮಾಕ್ಷೀ ಯಸ್ಯ ಮೂರ್ತಿರಿಯಂ ನೃಪ ।
ಭವಿಷ್ಯತಿ ಸ ಮೇ ಭರ್ತಾ ಸರ್ವಲಕ್ಷಣಲಕ್ಷಿತಃ ॥ ೧೩ ॥

---

೯-೧೦. ಈ ಕಾರ್ಯಸಾಧನೆಗಾಗಿ ಚಂದ್ರಭಟ್ಟನೆಂಬ ತನ್ನ ಆಪ್ತನನ್ನು ಕರೆದು ‘ ಆಪ್ತಸಚಿವನಾದ ಚಂದ್ರಭಟ್ಟನೇ ! ಕನ್ಯಾಕುಬ್ಜನಗರಕ್ಕೆ ಹೋಗು. ಅಲ್ಲಿ ನನ್ನ ಆಕಾರದ ಬೊಂಬೆಯನ್ನು ಚಿನ್ನದಿಂದ ಮಾಡಿಸಿರುವರಂತೆ, ನೀನು ಯುಕ್ತಿಯಿಂದ ನನ್ನ ಆಕಾರದ ಆ ಬೊಂಬೆಯನ್ನು ಸ್ವಯಂವರ ಮಂಟಪದಲ್ಲಿ ಸ್ಥಾಪಿಸುವಂತೆಮಾಡಿ, ಅಲ್ಲಿಂದ ಮುಂದೆ ನಡೆವ ವೃತ್ತಾಂತವನ್ನು ನನಗೆ ತಿಳಿಸು ” ಎಂದು ಪ್ರೇರೇಪಣೆ ಮಾಡಿ ಕಳುಹಿಸಿದನು.

೧೧. ಅಯ್ಯಾ ಭೃಗುವಂಶಶ್ರೇಷ್ಠನೇ ! ಕೇಳು ; ದೇವೀಭಕ್ತನಾದ ಚಂದ್ರಭಟ್ಟನು ರಾಜನ ಮಾತಿನಪ್ರಕಾರ ಕನ್ಯಾಕುಬ್ಜ ನಗರಕ್ಕೆ ಹೋಗಿ ಅಲ್ಲಿ ಪೃಥ್ವೀರಾಜನು ಹೇಳಿದ್ದಂತೆ ಎಲ್ಲವನ್ನೂ ನೆರವೇರಿಸಿದನು.

೧೨-೧೩. ಸ್ವಯಂವರಕ್ಕಾಗಿ ಅನೇಕದೇಶದ ರಾಜರು ಬಂದಿದ್ದರು. ವಧುವಾದ ಸಂಯೋಗಿನಿಯು ಪೃಥ್ವೀರಾಜನ ವಿಚಾರವನ್ನು ಪರೋಕ್ಷದಲ್ಲಿ ತಿಳಿದು ಅವನಲ್ಲಿ ಮೋಹಿತಳಾಗಿದ್ದುದರಿಂದ ಅವರೆಲ್ಲರನ್ನೂ ಬಿಟ್ಟು ಸಭಾಮಧ್ಯದಲ್ಲಿರಿಸಿದ್ದ ಅವನ ಮೂರ್ತಿಯನ್ನು ನೋಡಿ ಚಪಲಲೋಚನೆಯಾಗಿ ತಂದೆಯನ್ನು ಕುರಿತು “ ರಾಜನೇ ! ಸರ್ವಲಕ್ಷಣ ಯುಕ್ತವಾದ ಈ ಮೂರ್ತಿ ಯಾರದು ? ಇವನೇ ನನ್ನ ಪತಿಯಾಗಲು ಅರ್ಹನು ” ಎಂದು ಹೇಳಿದಳು.

ಜಯಚಂದ್ರಸ್ತು ತಚ್ಛ್ರುತ್ವಾ ಚಂದ್ರಭಟ್ಟಮುವಾಚ ತಂ ।
ಯದಿ ತೇ ಭೂಪತಿಶ್ಚೈವ ಸರ್ವಸೈನ್ಯಸಮನ್ವಿತಃ ॥ ೧೪ ॥

ಸಂಜಯೇದ್ಯೋಗಿನೀಮೇತಾಂ ತರ್ಹಿ ಮೇಽತಿಪ್ರಿಯೋ ಭವೇತ್ ।
ಚಂದ್ರಭಟ್ಟಸ್ತು ತಚ್ಛ್ರುತ್ವಾ ತತ್ತು ಸರ್ವಮವರ್ಣಯತ್ ॥ ೧೫ ॥

ಪೃಥಿವೀರಾಜ ಏವಾಸೌ ಶ್ರುತ್ವಾ ಸೈನ್ಯಮಚೋದಯತ್ ।
ಏಕಲಕ್ಷಾ ಗಜಾಸ್ತಸ್ಯ ಸಪ್ತಲಕ್ಷಾಸ್ತುರಂಗಮಾಃ ॥ ೧೬ ॥

ರಥಾಃ ಪಂಚಸಹಸ್ರಾಶ್ಚ ಧನುರ್ಬಾಣವಿಶಾರದಾಃ ।
ಲಕ್ಷಾಃ ಪದಾತಯೋ ಜ್ಞೇಯಾ ದ್ವಾದಶೈವ ಮಹಾಬಲಾಃ ॥ ೧೭ ॥

ರಾಜಾನಸ್ತ್ರಿಶತಾ ಏವ ಮಹೀರಾಜಪದಾನುಗಾಃ ।
ಸಾರ್ಧಂ ದ್ವಾಭ್ಯಾಂ ಚ ಬಂಧುಭ್ಯಾಂ ಕಾನ್ಯಕುಬ್ಜೇ ನೃಪೋಽಗಮತ್ ॥೧೮॥

ಧುಂಧುಕಾರಶ್ಚ ತದ್ಬಂಧುರ್ಗಜಾನೀಕಪತಿಸ್ಸದಾ ।
ಹಯಾನೀಕಪತಿಃ ಕೃಷ್ಣಕುಮಾರೋ ಬಲವತ್ತರಃ ॥ ೧೯ ॥

---

೧೪-೧೫. ತನ್ನ ಮಗಳು ಈರೀತಿ ಹೇಳಿದುದನ್ನು ಕೇಳಿ ಜಯಚಂದ್ರನು ಮಹೋತ್ಸವಕ್ಕೆ ಬಂದಿದ್ದ ಚಂದ್ರಭಟ್ಟನನ್ನು ಕರೆಯಿಸಿ "ಸ್ವಾಮೀ! ನಿಮ್ಮ ರಾಜನು ಯುದ್ಧಸನ್ನದ್ಧನಾಗಿರುವುದಾದರೆ ಸಮಸ್ತಸೇನಾಸಮೇತನಾಗಿ ಬಂದು ನನ್ನನ್ನು ಜಯಿಸಿ ಈ ಸಂಯೋಗಿನಿಯನ್ನು ವರಿಸಲಿ, ಆಗ ನನಗೆ ಅತಿಪ್ರಿಯನಾಗುವನು" ಎಂದು ತಿಳಿಸಿದನು. ಇದನ್ನು ಕೇಳಿ ಆ ಚಂದ್ರಭಟ್ಟನು ದೆಹಲಿಗೆ ಹಿಂದಿರುಗಿ ಹೋಗಿ ಪೃಥ್ವೀರಾಜನಿಗೆ ಎಲ್ಲವನ್ನೂ ವಿವರಿಸಿದನು.

೧೬-೨೦. ಪೃಥ್ವೀರಾಜನು ಈ ಮಾತನ್ನು ಕೇಳಿ "ನಮ್ಮ ಸೈನ್ಯವೆಲ್ಲವೂ ಪ್ರಯಾಣಸನ್ನದ್ಧವಾಗಲಿ" ಎಂದು ಆಜ್ಞೆಮಾಡಿದನು. ಒಂದುಲಕ್ಷ ಗಜಸೇನೆ, ಏಳುಲಕ್ಷ ಅಶ್ವಸೇನೆ, ಐದುಸಾವಿರ ರಥಸೇನೆ, ಧನುರ್ಯುದ್ಧಚತುರರೂ, ಮಹಾ ಬಲಶಾಲಿಗಳೂ, ಆದ ಹನ್ನೆರಡುಲಕ್ಷ ಪದಾತಿಗಳು ಮತ್ತು ತನ್ನನ್ನು ಅನುಸರಿಸಿ ಪಕ್ಷೀಕರಿಸುವ ಮುನ್ನೂರು ಮಂದಿ ಸಾಮಂತರಾಜರು ಇವನ್ನೆಲ್ಲಾ ಕೂಡಿಕೊಂಡು ತನ್ನ ಒಡಹುಟ್ಟಿದ ಬಂಧುಗಳೊಡನೆ ಕನ್ಯಾಕುಬ್ಜನಗರದಮೇಲೆ ದಂಡೆತ್ತಿಹೊರಟನು ಧುಂಧುಕಾರನೆಂಬ ಸೋದರನು ಗಜಸೇನಾಪತಿಯಾದನು. ಬಲಶಾಲಿಯಾದ ಕೃಷ್ಣ

ಪದಾತೀನಾಂ ನೃಪತಯಃ ಪತಯಸ್ತತ್ರ ಚಾಭವನ್ ।
ಮಹಾನ್ಕೋಲಾಹಲೋ ಜಾತಃ ಸ್ಥಲೀಂ ಶೂನ್ಯಾಮಕಾರಯನ್ ॥ ೨೦ ॥

ವಿಂಶತ್ಕ್ರೋಶಪ್ರಮಾಣೇನ ಸ್ಥಿತಂ ತಸ್ಯ ಮಹಾಬಲಂ ।
ಜಯಚಂದ್ರಸ್ತು ಸಂಜ್ಞಾಯ ಮಹೀರಾಜಸ್ಯ ಚಾಗಮಂ ॥ ೨೧ ॥

ಸ್ವಸೈನ್ಯಂ ಕಲ್ಪಯಾಮಾಸ ಲಕ್ಷಷೋಡಶಸಂಮಿತಂ ।
ಏಕಲಕ್ಷಾ ಗಜಾಸ್ತಸ್ಯ ಸಪ್ತಲಕ್ಷಾಃ ಪದಾತಯಃ ॥ ೨೨ ॥

ವಾಜಿನಶ್ಚಾಷ್ಟಲಕ್ಷಾಶ್ಚ ಸರ್ವಯುದ್ಧವಿಶಾರದಾಃ ।
ದ್ವಿಶತಾಏವ ರಾಜಾನಃ ಪ್ರಾಪ್ತಾಸ್ತತ್ರ ಸಮಾಗಮೇ ॥ ೨೩ ॥

ಆಗಸ್ಕೃತಂ ಮಹೀರಾಜಂ ಮತ್ವಾ ತೇ ಶುಕ್ಲವಂಶಿನಃ ।
ಯುದ್ಧಾರ್ಥಿನಃ ಸ್ಥಿತಾಸ್ತತ್ರ ಪುರಮಾಗಸ್ಕೃತಂ ಹ್ಯಭೂತ್ ॥ ೨೪ ॥

---

ಕುಮಾರನೆಂಬ ಸೋದರನು ಅಶ್ವಸೇನಾಪತಿಯಾದನು. ಹಲವರು ಸಾಮಂತ ನರಪತಿಗಳು ಪದಾತಿಸೇನೆಗೆ ಅಧಿಪತಿಗಳಾದರು.

೨೧. ಈ ಅಪರಿಮಿತ ಸೇನೆಯ ಸಂಚಾರದಿಂದ ಬಹಳ ಗದ್ದಲವಾಗಿ ಎಲ್ಲಿಯೂ ಜಾಗ ತೆರವಿಲ್ಲದೆ ನೆಲವೇ ಕಾಣಿಸದಂತೆ ಆಯಿತು. ಅವನ ಈ ಮಹಾಸೈನ್ಯವು ಇಪ್ಪತ್ತುಕ್ರೋಶ (ಹರಿದಾರಿ) ದಷ್ಟು ದೂರ ವ್ಯಾಪಿಸಿತ್ತು.

೨೨. ಪೃಥ್ವೀರಾಜನು ದಂಡೆತ್ತಿ ಬರುವ ಸಮಾಚಾರವನ್ನು ಜಯಚಂದ್ರನು ತಿಳಿದು ತನ್ನ ಹದಿನಾರುಲಕ್ಷ ಸೇನೆಯೂ ಸಿದ್ಧವಾಗುವಂತೆ ಏರ್ಪಡಿಸಿದನು. ಒಂದು ಲಕ್ಷ ಆನೆಗಳು, ಏಳುಲಕ್ಷ ಕಾಲಾಳುಗಳು, ಎಂಟುಲಕ್ಷ ಕುದುರೆಸವಾರರು.

೨೩-೨೪. ನಾನಾಬಗೆಯ ಯುದ್ಧನಿಪುಣರಾದ ಇನ್ನೂರುಮಂದಿ ಸಾಮಂತ ರಾಜರು ಎಲ್ಲರೂ ಸನ್ನದ್ಧರಾದರು. ಚಂದ್ರವಂಶೀಯರಾದ ಪ್ರದ್ಯೋತ ಮೊದಲಾದವರು ಈ ಸಂದರ್ಭದಲ್ಲಿ ಪೃಥ್ವೀರಾಜನದೇ ತಪ್ಪು; ಎಂದು ನಿರ್ಧರಿಸಿ ಯುದ್ಧಾಪೇಕ್ಷಿಗಳಾಗಿ ತವಕಿಸುತ್ತಿದ್ದರು. ಇದರಿಂದ ಆ ಪಟ್ಟಣವೇ ಅಪರಾಧಕ್ಕೊಳಗಾದಂತಾಯಿತು.

ಈಶನದ್ಯಾಃ ಪರೇ ಕೂಲೇ ತದ್ದೋಲಾ ಸ್ಥಾಪಿತಾ ತದಾ ।
ನಾನಾ ವಾದ್ಯಾನಿ ರಮ್ಯಾಣಿ ತತ್ರ ಚಕ್ರುರ್ಮಹಾರವಂ ॥ ೨೫ ॥

ರತ್ನಭಾನುರ್ಗಜಾನೀಕೇ ರೂಪಾನೀಕೇ ಹಿ ಲಕ್ಷಣಃ ।
ತಾಭ್ಯಾಂ ಸೇನಾಪತಿಭ್ಯಾಂ ತೌ ಸಂಗುಪ್ತೌ ಬಲವತ್ತರೌ ॥ ೨೬ ॥

ಪ್ರದ್ಯೋತಶ್ಚೈವ ವಿದ್ಯೋತೋ ರತ್ನಭಾನುಂ ರರಕ್ಷತುಃ ।
ಭೀಷ್ಮಃ ಪರಿಮಲಶ್ಚೈವ ಲಕ್ಷಣಂ ಚಂದ್ರವಂಶಜಃ ॥ ೨೭ ॥

ಭೂಪಾಃ ಪದಾತಿಸೈನ್ಯೇ ಚ ಸಂಸ್ಥಿತಾ ಮದವಿಹ್ವಲಾಃ ।
ತಯೋಶ್ಚಾಸೀನ್ಮಹದ್ಯುದ್ಧಂ ದಾರುಣಂ ಸೈನ್ಯಸಂಕ್ಷಯಂ ॥ ೨೮ ॥

ಹಯಾ ಹಯೈರ್ಮೃತಾ ಜಾತಾ ಗಜಾಶ್ಚೈವ ಗಜೈಸ್ತಥಾ ।
ಪದಾತಯಃ ಪದಾತ್ಯೈಶ್ಚ ಮೃತಾಶ್ಚಾನ್ಯೇ ಕ್ರಮಾದ್ರಣೇ ॥ ೨೯ ॥

---

೨೫. ಈಶನದಿಯ ದಡದಲ್ಲಿ ಸಂಯೋಗಿನಿಯ ಮೇನೆಯನ್ನು ಇರಿಸಿ ಬಲವಾದ ಕಾವಲನ್ನು ಏರ್ಪಡಿಸಿದರು. ಅಲ್ಲಿ ಮನೋಹರವಾದ ಅನೇಕ ವಾದ್ಯಗಳ ಮಹಾಧ್ವನಿಯು ಭೋರ್ಗರೆಯುತ್ತಿತ್ತು.

೨೬. ಜಯಚಂದ್ರನ ಕಡೆಯ ಗಜಸೇನೆಗೆ ರಾಜನ ತಮ್ಮನಾದ ರತ್ನಭಾನುವೂ, ಅಶ್ವಸೇನೆಗೆ ಅವನ ಮಗ ಲಕ್ಷಣನೂ ಸೇನಾಪತಿಗಳಾದರು. ಆ ಇಬ್ಬರು ಸೇನಾಪತಿಗಳಿಗೂ ಬಲಶಾಲಿಗಳಾದ ರಕ್ಷಕರು ಏರ್ಪಟ್ಟರು.

೨೭. ಚಂದ್ರವಂಶಜರಾದ ಪ್ರದ್ಯೋತ, ವಿದ್ಯೋತ ಇವರು ರತ್ನಭಾನುವಿನ ಬೆಂಗಾವಲಿಗೂ, ಭೀಷ್ಮಸಿಂಹ ಪರಿಮಳ ಇವರಿಬ್ಬರೂ ಲಕ್ಷಣನ ಬೆಂಗಾವಲಿಗೂ ಸನ್ನದ್ಧರಾದರು. ಪದಾತಿ ಸೇನೆಯಲ್ಲಿರತಕ್ಕ ಸಾಮಂತರಾಜರು ಮದಮತ್ತರಾಗಿದ್ದರು.

೨೮-೨೯ ಈರೀತಿ ಸಿದ್ಧರಾದ ಅವರಿಗೆ ಭಯಂಕರವೂ ಸೇನಾವಿನಾಶಕರವೂ ಆದ ದೊಡ್ಡಯುದ್ಧವು ಸಂಭವಿಸಿತು. ಇವರ ಅಶ್ವಸೇನೆಯು ಅವರ ಅಶ್ವಸೇನೆಯಿಂದಲೂ, ಇವರ ಗಜಸೇನೆಯು ಅವರ ಗಜಸೇನೆಯಿಂದಲೂ, ಇವರ ಪದಾತಿ ಸೇನೆಯು ಅವರ ಪದಾತಿಗಳಿಂದಲೂ, ಇತರ ಸೇನೆಯೂ ಇದೇ ಕ್ರಮದಿಂದಲೂ ಬಹು ಸಂಖ್ಯೆಯಲ್ಲಿ ಹತವಾಯಿತು

ಭೂಪೈಶ್ಚ ರಕ್ಷಿತಾಃ ಸರ್ವೇ ನಿರ್ಭಯಾ ರಣಮಾಯಯುಃ ।
ಯಾವತ್ಸೂರ್ಯಃ ಸ್ಥಿತೋ ವ್ಯೋಮ್ನಿ ತಾವದ್ಯುದ್ಧಮವರ್ತತ ॥ ೩೦ ॥

ಏವಂ ಪಂಚದಿನಂ ಜಾತಂ ಯುದ್ಧಂ ವೀರಜನಕ್ಷಯಂ ।
ಗಜಾ ದಶಸಹಸ್ರಾಣಿ ಹಯಾ ಲಕ್ಷಾಣಿ ಸಕ್ಷಿತಾಃ ॥ ೩೧ ॥

ಪಂಚಲಕ್ಷಂ ಮಹೀಭರ್ತುರ್ಹತಾಸ್ತತ್ರ ಪದಾತಯಃ ।
ರಾಜಾನೋ ದ್ವೇ ಶತೇ ತತ್ರ ರಥಾಶ್ಚ ತ್ರಿಶತಂ ತಥಾ ॥ ೩೨ ॥

ಕಾನ್ಯಕುಬ್ಜಾಧಿಪಸ್ಯೈವ ಗಜಾ ನವಸಹಸ್ರಕಾಃ ।
ಸಹಸ್ರೈಕಂ ರಥಾ ಜ್ಞೇಯಾಸ್ತ್ರಿಲಕ್ಷಂ ಚ ಪದಾತಯಃ ॥ ೩೩ ॥

ಏಕಲಕ್ಷಂ ಹಯಾಸ್ತತ್ರ ಮೃತಾಃ ಸ್ವರ್ಗಪುರಂ ಯಯುಃ ।
ಷಷ್ಠಾಹೇ ಸಮನುಪ್ರಾಪ್ತೇ ಪೃಥ್ವೀರಾಜ ಏವ ಸಃ ॥ ೩೪ ॥

---

೩೦. ಎಲ್ಲ ಸೈನಿಕರೂ ರಾಜರುಗಳ ಬೆಂಗಾವಲಿನಿಂದ ನಿರ್ಭಯವಾಗಿ ಯುದ್ಧಕ್ಕೆ ಇಳಿದರು ಆಕಾಶದಲ್ಲಿ ಸೂರ್ಯನು ಕಾಣಿಸುವ ಪರ್ಯಂತ (ಎಂದರೆ ಸೂರ್ಯಾಸ್ತವಾಗುವವರೆಗೆ, ನಿತ್ಯವೂ ಯುದ್ಧ ನಡೆಯುತ್ತಿತ್ತು.

೩೧-೩೨ ಈರೀತಿ ಐದುದಿನ ಯುದ್ಧನಡೆಯಿತು. ಶೂರರನೇಕರು ಹತರಾದರು. ಪೃಥ್ವೀರಾಜನಕಡೆ ಹತ್ತುಸಾವಿರ ಆನೆಗಳು, ಲಕ್ಷಗಟ್ಟಲೆ ಕುದುರೆಗಳು, ಐದುಲಕ್ಷ ಪದಾತಿಸೇನೆಯವರು, ಮುನ್ನೂರು ರಥಗಳು, ಇನ್ನೂರುಮಂದಿ ಸಾಮಂತ ರಾಜರು ಎಲ್ಲರೂ ಹತರಾದರು.

೩೩. ಜಯಚಂದ್ರನ ಸೇನೆಯಲ್ಲಿಯೂ, ಒಂಭತ್ತುಸಾವಿರ ಆನೆ, ಒಂದು ಸಾವಿರ ರಥಗಳು, ಮೂರುಲಕ್ಷ ಕಾಲಾಳುಗಳು, ಒಂದುಲಕ್ಷ ಕುದುರೆಸೇನೆ, ಎಲ್ಲವೂ ಲೋಕಾಂತರ ಹೊಂದಿದವು.

೩೪-೩೫. ಯುದ್ಧಾರಂಭವಾದಂದಿನಿಂದ ಆರನೆಯದಿನ ಪೃಥ್ವೀರಾಜನು ಈ ಲಯಕಾರ್ಯವನ್ನು ನೋಡಿ ದುಃಖಿತನಾಗಿ ಮನದಲ್ಲಿ ಭಕ್ತಿಯಿಂದ ಕೂಡಿ

ದುಃಖಿತೋ ಮನಸಾ ದೇವಂ ರುದ್ರಂ ತುಷ್ಟಾವ ಭಕ್ತಿಮಾನ್ ।
ಸಂತುಷ್ಟಸ್ತು ಮಹಾದೇವೋ ಮೋಹಯಾಮಾಸ ತದ್ಬಲಂ ॥ ೩೫ ॥

ಪ್ರಸನ್ನಸ್ತು ಮಹೀರಾಜೋ ಗತಃ ಸಂಯೋಗಿನೀಂ ಪ್ರತಿ ।
ದೃಷ್ಟ್ವಾ ತತ್ಸುಂದರಂ ರೂಪಂ ಮುಮೋಹ ವಸುಧಾಧಿಪಃ ॥ ೩೬ ॥

ಸಂಯೋಗಿನೀ ನೃಪಂ ದೃಷ್ಟ್ವಾ ಮೂರ್ಛಿತಾ ಚಾಭವತ್ಕ್ಷಣಾತ್ ।
ಏತಸ್ಮಿನ್ನಂತರೇ ರಾಜಾ ತದ್ದೋಲಾಮನಯದ್ಬಲಾತ್ ॥ ೩೭ ॥

ಜಗಾಮ ದೇಹಲೀಂ ಭೂಪಃ ಸರ್ವಸೈನ್ಯಸಮನ್ವಿತಃ ।
ಯೋಜನಾಂತೇ ಗತೇ ತಸ್ಮಿನ್ಬೋಧಿತಾಸ್ತೇ ಮದೋದ್ಧಟಾಃ ॥ ೩೮ ॥

ದೃಷ್ಟ್ವಾ ನೈವ ತದಾ ದೋಲಾಂ ಪ್ರಜಗ್ಮುರ್ವೇಗವತ್ತರಾಃ ।
ಶ್ರುತ್ವಾ ಕೋಲಾಹಲಂ ತೇಷಾಂ ಮಹೀರಾಜೋ ನೃಪೋತ್ತಮಃ ॥ ೩೯ ॥

---

ಶಿವನನ್ನು ಸ್ತುತಿಸಿದನು. ಇದರಿಂದ ಸಂತುಷ್ಟನಾದ ಶಿವನು ಜಯಚಂದ್ರನ ಕಡೆಯು ವರಿಗೆಲ್ಲಾ ಪ್ರಜ್ಞೆ ತಪ್ಪುವಂತೆ ಮಾಡಿದನು.

೩೬ ಆ ಸಮಯದಲ್ಲಿ ಪೃಥ್ವೀರಾಜನು ಹರ್ಷಯುಕ್ತನಾದ ಮನಸ್ಸಿನಿಂದ ಸಂಯೋಗಿನಿಯಿದ್ದ ಶಿಬಿರದಲ್ಲಿಗೆ ಹೋದನು. ಹಾಗೆ ಹೋಗಿ ಅಲ್ಲಿ ಅವಳ ಸೌಂದರ್ಯಾತಿಶಯವನ್ನು ಕಂಡು ಮೋಹಪರವಶನಾದನು. ಸಂಯೋಗಿನಿಯೂ ಕೂಡ ಪೃಥ್ವೀರಾಜನ ಅಸದೃಶವಾದ ರೂಪವನ್ನು ನೋಡಿ ಆಕ್ಷಣವೇ ಮೋಹಾತಿಶಯದಿಂದ ಮೂರ್ಛೆ ಹೋದಳು.

೩೭. ಆ ವೇಳೆಯಲ್ಲಿ ಪೃಥ್ವೀರಾಜನು ತನ್ನ ಚಾತುರ್ಯವನ್ನೆಲ್ಲಾ ವಿನಿಯೋಗಿಸಿ ಶಿಬಿರದಲ್ಲಿದ್ದ ಅವಳ ಮೇನೆಯನ್ನು ಸಾಗಿಸಿಕೊಂಡು ಹೊರಟನು.

೩೮-೩೯ ಅನಂತರ ಆತನು ಇದೇ ಸಮಯವೆಂದು ತನ್ನ ಸಮಸ್ತಸೇನೆಯೊಡನೆ ದಿಲ್ಲಿಗೇ ಸಾಗಹತ್ತಿದನು. ಪೃಥ್ವೀರಾಜನು ಒಂದುಯೋಜನದೂರ ಹೋದ ಮೇಲೆ ಮದಿಸಿ ಮೂರ್ಛಿತರಾಗಿದ್ದ ಆ ಸೇನೆಯ ವೀರರಿಗೆ ಎಚ್ಚರವಾಯಿತು. ತಾವು ಇರಿಸಿದ್ದ ಸ್ಥಳದಲ್ಲಿ ರಾಜಪುತ್ರಿಯ ಮೇನೆಯು ಕಾಣದೆಹೋದುದರಿಂದ ಅವರು ಮಹಾವೇಗದಿಂದ ಪೃಥ್ವೀರಾಜನ ಬೆನ್ನಟ್ಟಿದರು. ಪೃಥ್ವೀರಾಜನು ಹೀಗೆ ತನ್ನನ್ನು

**ಅರ್ಧಸೈನ್ಯಂ ಚ ಸಂಸ್ಥಾಪ್ಯ ಸ್ವಯಂ ಗೇಹಮುಪಾಗಮತ್ ।**
**ಉಭೌ ತದ್ಭ್ರಾತರೌ ವೀರೌ ಚಾರ್ಧಸೈನ್ಯಸಮನ್ವಿತೌ** ॥ ೪೦ ॥

**ಸೂಕರಕ್ಷೇತ್ರಮಾಸಾದ್ಯ ಯುದ್ಧಾಯ ಸಮುಪಸ್ಥಿತೌ ।**
**ಏತಸ್ಮಿನ್ನಂತರೇ ಸರ್ವೇ ಪ್ರದ್ಯೋತಾದಿಮಹಾಬಲಾಃ** ॥ ೪೧ ॥

**ಸ್ವಸೈನ್ಯೈಃ ಸಹ ಸಂಪ್ರಾಪ್ಯ ಮಹದ್ಯುದ್ಧಮಕಾರಯನ್ ।**
**ಹಯಾ ಹಯೈಶ್ಚ ಸಂಜಗ್ಮುರ್ಗಜಾ ಅಥ ಗಜೈಃ ಸಹ** ॥ ೪೨ ॥

**ಸಂಕುಲಶ್ಚ ಮಹಾನಾಸೀದ್ದಾರುಣೋ ಲೋಮಹರ್ಷಣಃ ।**
**ದಿನಾನ್ತೇ ಸಂಕ್ಷಯಂ ಯಾತಂ ತಯೋಶ್ಚೈವ ಮಹದ್ಬಲಂ** ॥ ೪೩ ॥

**ಭಯಭೀತಾಃ ಪರೇ ತತ್ರ ಜ್ಞಾತ್ವಾ ರಾತ್ರಿಂ ತಮೋವೃತಾಂ ।**
**ಪ್ರದುದ್ರುವುರ್ಭಯಾದ್ವೀರಾ ಹತಶೇಷಾಸ್ತು ದೇಹಲೀಮ್** ॥ ೪೪ ॥

---

ಹಿಂಬಾಲಿಸಿ ಬರುತ್ತಿರುವ ಜನರ ಕೋಲಾಹಲವನ್ನು ಕೇಳಿ ಅವರನ್ನು ಎದುರಿಸುವುದಕ್ಕಾಗಿ ತನ್ನ ಸೈನ್ಯದಲ್ಲಿ ಅರ್ಧದಷ್ಟನ್ನು ಅಲ್ಲಿ ನಿಲ್ಲಿಸಿ, ಮಿಕ್ಕ ಅರ್ಧಸೇನೆಯೊಡನೆ ತಾನು ದೆಹಲಿಗೆ ಸುರಕ್ಷಿತವಾಗಿ ಬಂದು ಸೇರಿದನು. ಅವನ ಸಹೋದರರಾದ ಧುಂದುಕಾರ ಕೃಷ್ಣಕುಮಾರ ಈ ಇಬ್ಬರು ವೀರರೂ ಆ ಅರ್ಧಸೇನೆಯನ್ನೊಡಗೊಂಡೇ ವರಾಹಕ್ಷೇತ್ರದಲ್ಲಿ ನಿಂತು ಅವರನ್ನು ಎದುರಿಸಲು ಸಿದ್ಧರಾದರು.

೪೧. ಇಷ್ಟರೊಳಗೆ ಪ್ರತಿಪಕ್ಷದಲ್ಲಿ ಮಹಾಬಲಶಾಲಿಗಳಾದ ಪ್ರದ್ಯೋತ ಮೊದಲಾದವರು ಹಿಂದೆಇದ್ದ ತಮ್ಮ ಸೇನೆಯನ್ನು ಜತೆಯಲ್ಲಿ ತಂದು ಎದುರಿಸಿದರು ಅಲ್ಲಿಯೂ ಘೋರವಾದ ಯುದ್ಧವು ನಡೆಯಿತು.

೪೨-೪೩. ಗಜಸೈನ್ಯವು ಗಜಸೇನೆಯೊಡನೆಯೂ ಅಶ್ವಸೈನ್ಯವು ಅಶ್ವಸೇನೆಯೊಡನೆಯೂ, ರೋಮಾಂಚವುಂಟಾಗುವಂತೆ ಅದ್ಭುತವೂ, ಭಯಂಕರವೂ, ಆದ ಸಂಕುಲಯುದ್ಧ ಮಾಡಿತು. ಸಂಜೆಯವೇಳೆಗೆ ಎರಡುಪಕ್ಷದಲ್ಲಿದ್ದ ದೊಡ್ಡಸೈನ್ಯವೂ ನಾಶವಾಗಿ ಕುಗ್ಗಿಹೋಯಿತು,

೪೪. ಪೃಥ್ವೀರಾಜನಕಡೆ ಉಳಿದ ವೀರರು ರಾತ್ರಿ ಗಾಢಾಂಧಕಾರ ಆವರಿಸಿದ ಮೇಲೆ, ಶತ್ರುಪಕ್ಷದವರು ಏನುಕೇಡುಮಾಡುರೋ ಎಂದು ಹೆದರಿ ದೆಹಲಿಯಕಡೆಗೆ ಓಡಿದರು.

ಪ್ರದ್ಯೋತಾದ್ಯಾಶ್ಚ ತೇ ವೀರಾ ದೇಹಲೀಂ ಪ್ರತಿ ಸಂಯಯುಃ ।
ಪುನಸ್ತಯೋರ್ಮಹದ್ಯುದ್ಧಂ ಹ್ಯಭವಲ್ಲೋಮಹರ್ಷಣಂ ॥ ೪೫ ॥

ಧುಂಧುಕಾರಶ್ಚ ಪ್ರದ್ಯೋತಂ ಹೃದಿ ಬಾಣೈರತಾಡಯತ್ ।
ತ್ರಿಭಿಶ್ಚ ವಿಷನಿರ್ಧೌತೈರ್ಮೂರ್ಛಿತಃ ಸ ಮಮಾರ ಚ ॥ ೪೬ ॥

ಭ್ರಾತರಂ ನಿಹತಂ ದೃಷ್ಟ್ವಾ ವಿದ್ಯೋತಶ್ಚ ಮಹಾಬಲಃ ।
ಆಜಗಾಮ ಗಜಾರೂಢೋ ಧುಂಧುಕಾರಮತಾಡಯತ್ ॥ ೪೭ ॥

ತ್ರಿಭಿಶ್ಚ ತೋಮರೈಃ ಸೋಽಪಿ ಮೂರ್ಛಿತೋ ಭೂಮಿಮಾಗಮತ್ ।
ಮೂರ್ಛಿತಂ ಭ್ರಾತರಂ ದೃಷ್ಟ್ವಾ ಧುಂಧುಕಾರಂ ಮಹಾಬಲಂ ॥ ೪೮ ॥

ತದಾ ಕೃಷ್ಣಕುಮಾರೋಽಸೌ ಗಜಸ್ಥಸ್ತ್ವರಿತೋ ಯಯೌ ।
ರೋಷಾವಿಷ್ಟಶ್ಚ ತಂ ವೀರಂ ಭಲ್ಲೇನೈವಮತಾಡಯತ್ ॥ ೪೯ ॥

---

೪೫. ಪ್ರದ್ಯೋತನೇ ಮೊದಲಾದ ವೀರರೂ ಅವರನ್ನು ಬೆನ್ನಟ್ಟಿಕೊಂಡು ದೆಹಲಿಯ ಕಡೆಗೆ ಹೋದರು. ಪುನಃ ಎರಡುಸೇನೆಗಳೂ ಕಲೆತುವು. ಭಯಂಕರವಾದ ಯುದ್ಧವಾಯಿತು.

೪೬. ಈ ಯುದ್ಧದಲ್ಲಿ ಧುಂದುಕಾರನು ವಿಷಯುಕ್ತವಾದ ಬಾಣವನ್ನು ಪ್ರದ್ಯೋತನ ಹೃದಯಕ್ಕೆ ಗುರಿಯಿಟ್ಟುಹೊಡೆದು ಅಲ್ಲಿ ನಾಟುವಂತೆ ಮಾಡಿದನು. ಇದರಿಂದ ಅವನು ಮೂರ್ಛೆಹೊಂದಿ ಕೊನೆಗೆ ಮೃತನಾದನು.

೪೭. ಬಲಶಾಲಿಯಾದ ವಿದ್ಯೋತನು ತನ್ನ ಅಣ್ಣನು ಮೃತನಾದುದನ್ನು ನೋಡಿ, ಆನೆಯನ್ನೇರಿ ಬಂದು, ಧುಂದುಕಾರನಮೇಲೆ ಬಿದ್ದು ತೋಮರವೆಂಬ ಆಯುಧದಿಂದ ಮೂರುಪೆಟ್ಟುಗಳನ್ನು ಹೊಡೆದನು.

೪೮-೪೯. ಆ ಏಟನಿಂದ ಧುಂದುಕಾರನು ಜ್ಞಾನತಪ್ಪಿ ನೆಲಕ್ಕೆ ಉರುಳಿದನು. ಮಹಾಬಲಶಾಲಿಯಾಗಿದ್ದ ತನ್ನ ಅಣ್ಣನಾದ ಧುಂದುಕಾರನು ಮೂರ್ಛೆಹೋದುದನ್ನು ನೋಡಿ, ಕೃಷ್ಣಕುಮಾರನು ಶೀಘ್ರವಾಗಿ ಆನೆಯನ್ನೇರಿ ಬಂದು ರೋಷಾವೇಶದಿಂದ ಆ ವೀರನಾದ ವಿದ್ಯೋತನನ್ನು ಭಲ್ಲೆಯುದಿಂದ ಇರಿದನು. ಆ ಇರಿತದಿಂದ ವಿದ್ಯೋತನು ಗತಪ್ರಾಣನಾದನು.

ಭಲ್ಲೇನ ತೇನ ಸಂಭಿನ್ನೋ ಮೃತಃ ಸ್ವರ್ಗಪುರಂ ಯಯೌ ।
ವಿದ್ಯೋತೇ ನಿಹತೇ ತಸ್ಮಿನ್ಸರ್ವಸೈನ್ಯಚಮೂಪತೌ ॥ ೫೦ ॥

ರತ್ನಭಾನುರ್ಮಹಾವೀರೋऽಯುಧ್ಯತ್ತೇನ ಸಮನ್ವಿತಃ ।
ಏತಸ್ಮಿನ್ನಂತರೇ ರಾಜಾ ಸಹಸ್ರಗಜಸಂಯುತಃ ॥ ೫೧ ॥

ಲಕ್ಷಣಂ ಸಹಿತಂ ತಾಭ್ಯಾಂ ಕ್ರುದ್ಧಂ ತಂ ಸಮಯುದ್ಧ್ಯತ ।
ಶಿವದತ್ತವರೋ ರಾಜಾ ಭೀಷ್ಮಂ ಪರಿಮಲಂ ರುಷಾ ॥ ೫೨ ॥

ರುದ್ರಾಸ್ತ್ರೈರ್ಮೋಹಯಾಮಾಸ ಲಕ್ಷಣಂ ಬಲವತ್ತರಂ ।
ಮೂರ್ಛಿತಾಂಸ್ತಾನ್ಸಮಾಲೋಕ್ಯ ರತ್ನಭಾನುಃ ಶರೈರ್ನಿಜೈಃ ॥ ೫೩ ॥

ಧುಂಧುಕಾರಂ ಮಹೀರಾಜಂ ವೈಷ್ಣವೈಃ ಸಮಮೋಹಯನ್ ।
ಕೃಷ್ಣಕೋ ರತ್ನಭಾನುಶ್ಚ ಯುಯುಧಾತೇ ಪರಸ್ಪರಂ ॥ ೫೪ ॥

ಉಭೌ ಸಮಬಲೌ ವೀರೌ ಗಜಪೃಷ್ಠಸ್ಥಿತೌ ರಣೇ ।
ಅನ್ಯೋನ್ಯನಿಹತೌ ನಾಗೌ ಖಡ್ಗಹಸ್ತೌ ಮಹೀತಲೇ ॥ ೫೫ ॥

---

೫೦. ಸರ್ವಸೈನ್ಯಾಧಿಪತಿಯೆನಿಸಿದ ವಿದ್ಯೋತನು ಮೃತನಾಗುತ್ತಲೆ ಜಯಚಂದ್ರನ ತಮ್ಮನೂ ಮಹಾವೀರನೂ ಆದ ರತ್ನ ಭಾನುವೇ ಕೃಷ್ಣಕುಮಾರನಮೇಲೆ ಯುದ್ಧಕ್ಕೆ ಬಂದನು.

೫೧. ಇಷ್ಟರೊಳಗೆ ಪೃಥ್ವೀರಾಜನು ತಾನೇ ಬಂದು ಲಕ್ಷಣ ಮತ್ತು ಅವನ ಬೆಂಗಾವಲಾಗಿದ್ದ ಭೀಷ್ಮಸಿಂಹ, ಪರಿಮಳ, ಇವರಮೇಲೆ ಕ್ರೋಧಾನ್ವಿತನಾಗಿ ಯುದ್ಧ ಮಾಡಿದನು.

೫೨. ಈಶ್ವರನಿಂದ ವರಪಡೆದ ಪೃಥ್ವೀರಾಜನು ರೋಷದಿಂದ ಭೀಷ್ಮಸಿಂಹ, ಲಕ್ಷಣ, ಇವರ ಮೇಲೆ ರುದ್ರಾಸ್ತ್ರವನ್ನು ಪ್ರಯೋಗಿಸಿ ಮೂರ್ಛೆಗೊಳಿಸಿದನು.

೫೩-೫೫. ಈರೀತಿ ಮೂರ್ಛೆಗೊಂಡ ಭೀಷ್ಮಸಿಂಹ ಪರಿಮಳರನ್ನು ನೋಡಿದ ರತ್ನಭಾನುವು, ತನ್ನಲ್ಲಿದ್ದ ವೈಷ್ಣವಬಾಣದಿಂದ ಧುಂದುಕಾರ, ಪೃಥ್ವೀರಾಜ, ಇವರಿಬ್ಬರೂ ಮೂರ್ಛೆಹೋಗುವಂತೆ ಮಾಡಿದನು. ಅನಂತರ ಕೃಷ್ಣಕುಮಾರ, ರತ್ನಭಾನು ಇವರಿಬ್ಬರಿಗೂ ಯುದ್ಧ ಮೊದಲಾಯಿತು, ಸಮಾನ ಬಲಶಾಲಿಗಳಾದ ಇವರಿಬ್ಬರೂ ಆನೆಯನ್ನೇರಿ ಪರಸ್ಪರ ಹೋರಾಡುತ್ತಿರಲು ಅವರ ಆನೆಗಳು ಹತವಾದುವು.

ಯುಯುಧಾತೇ ಬಹೂನ್ಮಾರ್ಗಾನ್ಕೃತವಂತೌ ಸುದುರ್ಜಯೌ ।
ಪ್ರಹರಾಂತಂ ರಣಂ ಕೃತ್ವಾ ಮರಣಾಯೋಪಜಗ್ಮತುಃ ॥ ೫೬ ॥

ಹತೇ ತಸ್ಮಿನ್ಮಹಾವೀರ್ಯೇ ಕಾನ್ಯಕುಬ್ಜಾ ಭಯಾತುರಾಃ ।
ಮೂರ್ಛಿತಾಂಸ್ತ್ರೀನ್ ಸಮಾದಾಯ ಪಂಚಲಕ್ಷಬಲೈರ್ಯುತಾಃ ॥ ೫೭ ॥

ರಣಂ ತ್ಯಕ್ತ್ವಾ ಗೃಹಂ ಜಗ್ಮುರ್ನೃಪಶೋಕಪರಾಯಣಾಃ ।
ರತ್ನಭಾನೌ ಚ ನಿಹತೇ ಹತೋತ್ಸಾಹಾಶ್ಚ ಭೂಮಿಪಾಃ ॥ ೫೮ ॥

ಸ್ವಂಸ್ವಂ ನಿವೇಶನಂ ಜಗ್ಮುರ್ಮಹೀರಾಜಭಯಾತುರಾಃ ।
ದೇವಾನಾರಾಧಯಾಮಾಸುರ್ಯಥೇಷ್ಟಂ ತೇ ಗೃಹೇಗೃಹೇ ॥ ೫೯ ॥

---

೫೬. ಅನಂತರ ಪರಸ್ಪರ ಜಯಾಪೇಕ್ಷೆಯಿಂದ ಖಡ್ಗಹಸ್ತರಾಗಿ ನೆಲದ ಮೇಲೆಯೇ ನಿಂತು ನಾನಾಬಗೆಯಲ್ಲಿ ಮಲ್ಲಗಾಳಗಮಾಡಿದರು. ಸಾಯಂಕಾಲದ ವರೆಗೂ ಈರೀತಿ ಹೋರಾಡಿ ಇಬ್ಬರೂ ಮೃತ್ಯುಸನ್ನಿಹಿತರಾದರು.

೫೭. ಮಹಾವೀರನಾದ ರತ್ನಭಾನು ಮೃತನಾಗಲು ಕನ್ಯಕುಬ್ಜದ ಸೈನಿಕರು ದಿಗಿಲುಬಿದ್ದು ಯುದ್ಧಮಾಡುವುದನ್ನು ಬಿಟ್ಟು, ಮೂರ್ಛಿತರಾಗಿ ಬಿದ್ದಿದ್ದ ಲಕ್ಷಣ, ಪರಿಮಳ, ಭೀಷ್ಮಸಿಂಹ, ಇವರದೇಹವನ್ನು ಎತ್ತಿಕೊಂಡು ಐದುಲಕ್ಷ ಸೇನೆಯೊಡನೆ ಹಿಂದಿರುಗಿ ಹೋಗಲು ನಿಶ್ಚಯಿಸಿ ತಮ್ಮ ರಾಜನಿಗೆ ಸೋಲಾಯಿತಲ್ಲಾ ಎಂಬ ಖೇದ ದಿಂದ ಊರುಸೇರಿದರು.

೫೮. ರತ್ನಭಾನು ಮೃತನಾದಮೇಲೆ ಮಿಕ್ಕ ಸಾಮಂತರಾಜರು ಉತ್ಸಾಹ ಹೀನರಾಗಿ ಪೃಥ್ವೀರಾಜನಿಗೆ ಹೆದರಿಕೊಂಡು ತಮ್ಮತಮ್ಮ ರಾಜ್ಯಕ್ಕೆ ಹೋಗಿ ಸೇರಿ ಕೊಂಡರು.

೫೯. ಈ ವಿಪತ್ತಿನಿಂದ ತಾವು ಉಳಿದುಬಂದುದಕ್ಕೂ ತಮಗೆ ಮುಂದೆ ಭಯ ತಪ್ಪಲಿ ಎಂಬುದಕ್ಕೂ ಮನೆಮನೆಯಲ್ಲೂ ದೇವರನ್ನು ಆರಾಧಿಸುತ್ತಿದ್ದರು.

**ಮಹೀರಾಜಸ್ತು ಬಲವಾನ್ಸಪ್ತಲಕ್ಷಬಲಾನ್ವಿತಃ ।**
**ಧುಂಧುಕಾರೇಣ ಸಹಿತೋ ಬಂಧುಕೃತ್ಯೋರ್ಧ್ವಮಾಚರತ್ ॥ ೬೦ ॥**

**ತಥಾ ಭೀಷ್ಮಃ ಪರಿಮಲೋ ಲಕ್ಷಣಃ ಪಿತರಂ ಸ್ವಕಂ ।**
**ಗಂಗಾಕೂಲೇ ಸಮಾಗಮ್ಯ ಚೋರ್ಧ್ವದೈಹಿಕಮಾಚರನ್ ॥ ೬೧ ॥**

**ಭೂಮಿರಾಜಸ್ಯ ವಿಜಯೋ ಜಯಚಂದ್ರಯಶೋ ರಣೇ ।**
**ಪ್ರಸಿದ್ಧಮಭವದ್ಭೂಮೌ ಗೇಹೇಗೇಹೇ ಜನೇಜನೇ ॥ ೬೨ ॥**

**ಜಯಚಂದ್ರಃ ಕಾನ್ಯಕುಬ್ಜೇ ದೇಹಲ್ಯಾಂ ಪೃಥಿವೀಪತಿಃ ।**
**ಉತ್ಸವಂ ಕಾರಯಿತ್ವಾ ತು ಪರಮಾನಂದಮಾಯಯೌ ॥ ೬೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಸಪ್ತಮೋಽಧ್ಯಾಯಃ**

---

೬೦. ಶೂರನಾದ ಪೃಥ್ವೀರಾಜನು ಏಳುಲಕ್ಷ ಸೇನೆಯೊಡಗೂಡಿ ಊರುಸೇರಿ ಧುಂದುಕಾರ ಸಹಿತನಾಗಿ ತನ್ನ ಬಂಧುಗಳಿಗೆ ಮಾಡಬೇಕಾದ ಉತ್ತರಕ್ರಿಯಾದಿಗಳನ್ನು ನೆರವೇರಿಸಿದನು.

೬೧. ಇತ್ತ ಮೂರ್ಛೆತಿಳಿದ ಭೀಷ್ಮಸಿಂಹ, ಪರಿಮಳ, ಇವರೊಡನೆ ಲಕ್ಷಣನು ಗಂಗಾತೀರಕ್ಕೆ ಬಂದು ತನ್ನತಂದೆಯಾದ ರತ್ನಭಾನುವಿನ ಉತ್ತರಕ್ರಿಯಾದಿಗಳನ್ನು ಮಾಡಿದನು.

೬೨. ಪೃಥ್ವೀರಾಜನಿಗೆ ಉಂಟಾದ ವಿಜಯವೂ ಜಯಚಂದ್ರನ ಕೀರ್ತಿಯೂ ಸಹ ಭೂಮಂಡಲದಲ್ಲಿ ಪ್ರತಿಯೊಂದು ಮನೆಯಲ್ಲಿಯೂ ಪ್ರತಿಯೊಬ್ಬನಿಂದಲೂ ಹಾಡಿ ಹೊಗಳುವಷ್ಟುಮಟ್ಟಿಗೆ ಪ್ರಸಿದ್ಧವಾಯಿತು

೬೩. ಕನ್ಯಕುಬ್ಜದಲ್ಲಿ ಜಯಚಂದ್ರನೂ, ದೇಹಲಿಯಲ್ಲಿ ಪೃಥ್ವೀರಾಜನೂ, ವಿಜಯೋತ್ಸವಗಳನ್ನು ನಡೆಯಿಸಿ ಪರಮಾನಂದಹೊಂದಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಗರ್ವದ ತೃತೀಯಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಆರನೆಯಅಧ್ಯಾಯ
ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಸಪ್ತಮೋಽಧ್ಯಾಯಃ

॥ ಸೂತ ಉವಾಚ ॥

ಭೀಷ್ಮಸಿಂಹಃ ಸ್ಥಿತೋ ಗಂಗಾಕೂಲೇ ಶಕ್ರಪ್ರಪೂಜಕಃ ।
ಶಕ್ರಂ ಸೂರ್ಯಮಯಂ ಜ್ಞಾತ್ವಾ ತಪಸಾ ಸಮತೋಷಯತ್ ॥ ೧ ॥

ಮಾಸಾನ್ತೇ ಭಗವಾನಿಂದ್ರೋ ಜ್ಞಾತ್ವಾ ತದ್ಭಕ್ತಿಮುತ್ತಮಾಂ ।
ವರಂ ವರಯ ಚ ಪ್ರಾಹ ಶ್ರುತ್ವಾ ಶೂರೋಽಬ್ರವೀದಿದಂ ॥ ೨ ॥

ದೇಹಿ ಮೇ ವಡವಾಂ ದಿವ್ಯಾಂ ಯದಿ ತುಷ್ಟೋ ಭವಾನ್ಪ್ರಭುಃ ।
ಇತಿ ಶ್ರುತ್ವಾ ತದಾ ತಸ್ಮೈ ವಡವಾಂ ಹರಿಣೀಂ ಶುಭಾಂ ॥ ೩ ॥

---

## ಏಳನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ. ಭೀಷ್ಮಸಿಂಹನು ಇಂದ್ರನೇ ಸೂರ್ಯಸ್ವರೂಪನೆಂದು ಭಾವಿಸಿ, ಗಂಗಾನದಿಯ ದಡದಲ್ಲಿ ಇಂದ್ರನನ್ನು ಆರಾಧಿಸುತ್ತಾ ತನ್ನ ತಪಸ್ಸಿನಿಂದ ಆವನನ್ನು ಸಂತೋಷಪಡಿಸಿದನು.

೨. ಈರೀತಿ ಒಂದುತಿಂಗಳಕಾಲ ತಪಸ್ಸುಮಾಡಿದಮೇಲೆ ಇವನು ಭಕ್ತಾಗ್ರೇಸರನೆಂದು ತಿಳಿದು ಪೂಜ್ಯನಾದ ಇಂದ್ರನು ಪ್ರತ್ಯಕ್ಷನಾಗಿಬಂದು ನಿಂತು "ನಿನಗೆ ಬೇಕಾದ ವರವನ್ನು ಕೇಳು" ಎಂದನು.

೩. ಶೂರನಾದ ಭೀಷ್ಮಸಿಂಹನು ಆ ಮಾತನ್ನು ಕೇಳಿ "ಪ್ರಭುವೇ! ಹಾಗೆ ನೀನು ಸಂತುಷ್ಟನಾಗಿದ್ದರೆ ನನಗೆ ಒಂದು ಉತ್ತಮವಾದ ಹೆಣ್ಣುಕುದುರೆಯನ್ನು ಕೊಡು" ಎಂದು ಕೇಳಿಕೊಂಡನು. ಆಗ ಇಂದ್ರನು "ಹಾಗೆಯೇ ಆಗಲಿ" ಎಂದು

ದದೌ ಸ ಭಗವಾನಿಂದ್ರಸ್ತತ್ರೈವಾಂತರ್ಹಿತೋಽಭವತ್ ।
ತಸ್ಮಿನ್ಕಾಲೇ ಪರಿಮಲಃ ಪಿತೃಶೋಕಪರಾಯಣಃ ॥ ೪ ॥

ಪಾರ್ಥಿವೈಃ ಪೂಜಯಾಮಾಸ ಮಹಾದೇವಮುಮಾಪತಿಂ ।
ಪರೀಕ್ಷಾರ್ಥೇ ಶಿವಃ ಸಾಕ್ಷಾತ್ಸರ್ಪರೋಗೇಣ ತಂ ಗ್ರಸತ್ ॥ ೫ ॥

ವ್ಯತೀತೇ ಪಂಚಮೇ ಮಾಸೇ ನೃಪಃ ಶಕ್ತಿವಿವರ್ಜಿತಃ ।
ನ ತತ್ಯಾಜ ಮಹಾಪೂಜಾಂ ಮಹಾಕ್ಲೇಶಸಮನ್ವಿತಃ ॥ ೬ ॥

ಮರಣಾಯ ಯಯೌ ಕಾಶೀಂ ಸ್ವಪತ್ನ್ಯಾ ಸಹಿತೋ ನೃಪಃ ।
ಉವಾಸ ವಟಮೂಲಾಂತೇ ರಾತ್ರೌ ರೋಗಪ್ರಪೀಡಿತಃ ॥ ೭ ॥

ಏತಸ್ಮಿನ್ನಂತರೇ ಕಶ್ಚಿತ್ಪನ್ನಗೋ ಮೂಲಸಂಸ್ಥಿತಃ ।
ಶಬ್ದಂ ಚಕಾರ ಮಧುರಂ ಶ್ರುತ್ವಾ ರುದ್ರಾಹಿರಾಯಯೌ ॥ ೮ ॥

---

ಹೇಳಿ ಹರಿಣಿಯೆಂಬ ಒಂದು ಒಳ್ಳೆಯ ಹೆಣ್ಣುಕುದುರೆಯನ್ನು ಅವನಿಗೆ ಕೊಟ್ಟು ತಾನು ಅಲ್ಲಿಯೇ ಮಾಯವಾದನು.

೪-೫. ಇದೇ ಸಮಯದಲ್ಲಿ ಇತ್ತ ಪರಿಮಳನು ಪಿತೃಶೋಕದಿಂದ ಕೂಡಿದವನಾಗಿ ಪಾರ್ವತೀ ಪತಿಯಾದ ಮಹಾದೇವನನ್ನು ಪಾರ್ಥಿವಲಿಂಗಪೂಜಾವಿಧಾನದಿಂದ ಪೂಜಿಸತೊಡಗಿದನು. ಇವನ ಮನಸ್ಥೈರ್ಯವನ್ನು ಪರೀಕ್ಷಿಸಬೇಕೆಂದು ಯೋಚಿಸಿ ಸಾಕ್ಷಾತ್ಪರಮೇಶ್ವನು ಸರ್ಪರೂಪದಿಂದ ಅವನಲ್ಲಿ ಸೇರಿಕೊಂಡು ರೋಗಪೀಡೆಯಿಂದ ಭಾಧೆಪಡಿಸುತ್ತಿದ್ದನು..

೬-೭. ಹೀಗೆ ಐದುತಿಂಗಳು ಕಳೆದಮೇಲೆ ರಾಜನಾದ ಪರಿಮಳನು ಶಕ್ತಿಹೀನನಾಗಿದ್ದರೂ ಶಿವಪೂಜೆಯನ್ನು ಮಾತ್ರ ಬಿಡದೆ ನೆರವೇರಿಸುತ್ತಿದ್ದನು. ರೋಗವು ಹೆಚ್ಚಿ ಮರಣೋನ್ಮುಖನಾಗಲು ಆ ರಾಜನು ತನ್ನ ಪತ್ನೀಸಮೇತನಾಗಿ ಕಾಶಿಗೆ ಹೊರಟನು. ಒಂದು ರಾತ್ರಿ ವ್ಯಾಧಿಯು ಬಹಳ ಉತ್ಕಟವಾಗಲು ದಾರಿಯಲ್ಲಿ ಒಂದು ಆಲದಮರದ ಬುಡದಲ್ಲಿ ಮಲಗಿದನು.

೮-೯. ಆಗ ಅಲ್ಲಿದ್ದ ಒಂದುಸರ್ಪವು ಮಧುರವಾಗಿ ಶಬ್ದಮಾಡಿತು. ಅದನ್ನು ಕೇಳಿ ಈ ರಾಜನದೇಹದಲ್ಲಿ ಸೇರಿಕೊಂಡಿದ್ದ ರುದ್ರರೂಪದ ಸರ್ಪವು ದೇಹದಿಂದ

ರುದ್ರಾಹಿಂ ಪನ್ನಗಃ ಪ್ರಾಹ ಭವಾನ್ನಿರ್ದಯ ಮಂದಧೀಃ ।
ಶಿವಭಕ್ತಂ ನೃಪಮಿಮಂ ಪೀಡಯೇತ್ಪ್ರತ್ಯಹಂ ಖಲಃ ॥ ೯ ॥

ಮೂರ್ಖೋಽಯಂ ಭೂಪತಿಃ ಸಾಕ್ಷಾದಾರನಾಲಂ ಪಿಬೇನ್ನಹಿ ।
ಇತಿ ಶ್ರುತ್ವಾ ಸ ರುದ್ರಾಹಿರಾಹ ರೇ ಪನ್ನಗಾಧಮ ॥ ೧೦ ॥

ರಾಜ್ಞೋ ದೇಹೇ ಪರಂ ಹರ್ಷಂ ಪ್ರತ್ಯಹಂ ಪ್ರಾಪ್ತವಾನಹಂ ।
ಸ್ವಗೇಹಂ ದುಃಖತಸ್ತ್ಯಾಜ್ಯಂ ಕಥಂ ತ್ಯಾಜ್ಯಂ ಮಯಾ ಶಠ ॥ ೧೧ ॥

ಮೂರ್ಖೋಽತ್ರ ಭೂಪತಿರ್ಯೋ ವೈ ತೈಲೋಷ್ಣಂ ಯನ್ನ ದತ್ತವಾನ್ ।
ಇತ್ಯುಕ್ತ್ವಾಂತರ್ಗತೋ ದೇಹೇ ಶ್ರುತ್ವಾ ಸಾ ಮಲನಾ ಸತೀ ॥ ೧೨ ॥

---

ಹೊರಕ್ಕೆಬಂದಿತು. ಹಾಗೆ ಕೂಗಿದ ಸರ್ಪವು ಹೀಗೆ ದೇಹದಿಂದ ಹೊರಗೆಬಂದ ರುದ್ರರೂಪದ ಸರ್ಪವನ್ನು ಕುರಿತು "ನೀನು ನಿರ್ಧಯನು ಮತ್ತು ಬುದ್ಧಿಹೀನನು.

೧೦. "ಮೂಢನಾದ ನೀನು ಶಿವಭಕ್ತನಾದ ಈ ರಾಜನನ್ನು ನಿತ್ಯವೂ ಹಿಂಸಿಸುತ್ತಿದ್ದೀ, ಮೂರ್ಖನಾದ ಈ ರಾಜನು ಈಗ ಗಂಜಿಯನ್ನು ಸಹ ಸೇವಿಸುವುದಿಲ್ಲ ಈರೀತಿ ಸಂಕಟಪಡುತ್ತಿದಾನೆ" ಎಂದು ಹೇಳಿತು.

೧೧. ಈ ಮಾತನ್ನುಕೇಳಿ ರುದ್ರರೂಪಿನ ಸರ್ಪವು ವಟಮೂಲದ ಸರ್ಪವನ್ನು ಕುರಿತು "ಎಲಾ ಸರ್ಪಾಧಮಾ! ರಾಜನ ಶರೀರದಲ್ಲಿ ಪ್ರತಿನಿತ್ಯವೂ ನಾನು ಸುಖವನ್ನೇ ಅನುಭವಿಸ.ವೆನು. ನನಗೆ ಆಶ್ರಯವಾಗಿ ಸಿಕ್ಕಿರುವ ಇವನನ್ನು ಬಿಡಬೇಕಾದರೆ ನನಗೆ ದುಃಖವಾಗುತ್ತದೆ. ಆದುದರಿಂದ ಎಲಾ ಮೂರ್ಖನೆ! ನಾನು ಹೇಗೆ ತಾನೆ ಬಿಡಲಿ? ಈ ಮೂರ್ಖನಾದ ರಾಜನಾದರೋ ನನಗೆ ಕಾಯ್ದ ಎಣ್ಣೆಯನ್ನು ಇಲ್ಲಿಯವರೆಗೂ ಕೊಡಲಿಲ್ಲ. ಏನುಮಾಡಲಿ?" ಎಂದು ಹೇಳಿ ಪುನಃ ರಾಜನ ಶರೀರದಲ್ಲಿಯೇ ಸೇರಿಕೊಂಡಿತು.

೧೨. ಆಗ ಸಮೀಪದಲ್ಲಿದ್ದ ರಾಜಪತ್ನಿಯಾದ ಮಲನಾದೇವಿಯು ಈ ಮಾತನ್ನು ಆಲಿಸಿದಳು. ಅನಂತರ ಆಕೆಯು ಸರ್ಪವು ಹೇಳಿದಂತೆ ಎಲ್ಲವನ್ನೂ ಮಾಡಿ ರಾಜನು ರೋಗದಿಂದ ಪಾರಾಗಲು ಯತ್ನಿಸಿದಳು.

**ಚಕಾರ ಪನ್ನಗೋಕ್ತಂ ತದ್ಗತರೋಗೋ ನೃಪೋsಭವತ್ ।**
**ತೈಲೋಷ್ಣೈರ್ಬಿಲಮಾಪೂರ್ಯ ಚಖಾನ ಚ ಸತೀ ಸ್ವಯಂ ॥ ೧೩ ॥**

**ತತೋ ಜಾತಂ ಸ್ವಯಂ ಲಿಂಗಮಂಗುಷ್ಠಾಭಂ ಸನಾತನಂ ।**
**ಜ್ಯೋತೀರೂಪಂ ಚಿದಾನಂದಂ ಸರ್ವಲಕ್ಷ್ಣಸಮನ್ವಿತಂ ॥ ೧೪ ॥**

**ನಿಶೀಥೇ ತಮಉದ್ಭೂತೇ ದಿಕ್ಷು ಸೂರ್ಯತ್ವಮಾಗತಂ ।**
**ದೃಷ್ಟ್ವಾ ಸ ವಿಸ್ಮಿತೋ ರಾಜಾ ಪೂಜಯಾಮಾಸ ಶಂಕರಂ ॥ ೧೫ ॥**

**ಮಹಿಮ್ನಃಸ್ತವಪಾಠೈಶ್ಚ ತುಷ್ಟಾವ ಗಿರಿಜಾಪತಿಂ ।**
**ತದಾ ಪ್ರಸನ್ನೋ ಭಗವಾನ್ವರಂ ಬ್ರೂಹಿ ತಮಬ್ರವೀತ್ ॥ ೧೬ ॥**

**ಶ್ರುತ್ವಾಹ ನೃಪತಿರ್ದೇವಂ ಯದಿ ತುಷ್ಟೋ ಮಹೇಶ್ವರ ।**
**ಶ್ರೀಪತಿರ್ಮೇ ಗೃಹಂ ಪ್ರಾಪ್ಯ ವಸೇನ್ಮತ್ಪ್ರಿಯಕಾರಕಃ ॥ ೧೭ ॥**

---

೧೩-೧೪. ಆಗ ಮಲನಾದೇವಿಯು ಕಾಯಿಸಿದ ಎಣ್ಣೆಯನ್ನು ಹುತ್ತದ ಬಾಯಿಗೆ ತುಂಬಿ ತಾನೇ ಅದನ್ನು ಅಗೆದಳು. ಅಲ್ಲಿ ಪುರಾತನವಾದುದೂ ಅಂಗುಷ್ಠದಷ್ಟು ಪ್ರಮಾಣವುಳ್ಳುದೂ, ಜೋತಿಸ್ವರೂಪವೂ, ಚಿದಾನಂದರೂಪವೂ, ಸರ್ವಲಕ್ಷಣಗಳಿಂದ ಯುಕ್ತವೂ, ಆದ ಒಂದು ಲಿಂಗವು ಕಾಣಿಸಿತು.

೧೫-೧೬. ಅರ್ಧರಾತ್ರಿಯ ಕತ್ತಲು ಕವಿದಿದ್ದರೂ ಆ ಲಿಂಗದ ತೇಜಸ್ಸಿನಿಂದ ದಿಕ್ಕುಗಳೆಲ್ಲಾ ಪ್ರಕಾಶಮಾನವಾದುವು. ಇದನ್ನು ನೋಡಿ ಆಶ್ಚರ್ಯಗೊಂಡ ಪರಿಮಳ ರಾಜನು ಅಲ್ಲಿಯೇ ಪರಮೇಶ್ವರನನ್ನು ಆರಾಧಿಸಿದನು. ಮತ್ತು ಆ ಪಾರ್ವತೀ ಪತಿಯಾದ ಪರಶಿವನನ್ನು ಶಿವಮಹಿಮ್ನ ಸ್ತೋತ್ರದಿಂದ ಸ್ತುತಿಸಲಾಗಿ, ಆಗ ಶಿವನು ಪ್ರತ್ಯಕ್ಷನಾಗಿ ಅವನನ್ನು ಕುರಿತು " ನಿನಗೆ ಬೇಕಾದ ವರವನ್ನು ಕೇಳಿಕೊ " ಎಂದನು.

೧೭. ಈರೀತಿ ನುಡಿದ ಶಿವನ ಮಾತನ್ನು ಕೇಳಿ ಪರಿಮಳನು " ಸ್ವಾಮೀ ಪರಮೇಶ್ವರ! ನೀನು ಹಾಗೆ ಸಂತುಷ್ಟನಾಗಿದ್ದರೆ ಲಕ್ಷ್ಮೀಪತಿಯು ನನ್ನ ಮನೆಗೆಬಂದು ನನಗೆ ಹಿತವನ್ನು ಉಂಟುಮಾಡುತ್ತಾ ವಾಸಿಸಲಿ " ಎಂದು ಕೇಳಿಕೊಂಡನು.

ತಥೇತ್ಯುಕ್ತ್ವಾ ಮಹಾದೇವೋ ಲಿಂಗರೂಪತ್ವಮಾಗತಃ ।
ಪ್ರತ್ಯಹಂ ಭಾರಮೇಕಂ ಚ ಸುವರ್ಣಂ ಸುಷುವೇ ತನೋಃ ॥ ೧೮ ॥

ತದಾ ಮಲಸ್ತು ಸಂತುಷ್ಟಃ ಪ್ರಾಪ್ತೋ ಗೇಹಂ ಮಹಾವತೀಂ ।
ಭೀಷ್ಮಸಿಂಹೇನ ಸಹಿತಃ ಪರಮಾನಂದಮಾಯಯೌ ॥ ೧೯ ॥

ತತಃಪ್ರಭೃತಿ ವರ್ಷಾಂತೇ ಜಯಚಂದ್ರಪುರೀಂ ಯಯೌ ।
ದೃಷ್ಟ್ವಾ ಪರಿಮಲಂ ರಾಜಾ ಕೃತಕೃತ್ಯತ್ವಮಾಗತಃ ॥ ೨೦ ॥

ದಿಷ್ಟ್ಯಾ ತೇ ಸಂಕ್ಷಿತೋ ರೋಗೋ ದಿಷ್ಟ್ಯಾ ತೇ ದರ್ಶಿತಂ ಮುಖಂ ।
ಭವಾನ್ನಿಜಪುರೀಂ ಪ್ರಾಪ್ಯ ಸುಖೀ ಭವತು ಮಾ ಚಿರಂ ॥ ೨೧ ॥

ಯದಾ ಮೇ ವಿಘ್ನ ಆಭೂಯಾತ್ತದಾ ತ್ವಂ ಮಾಂ ಸಮಾಚರ !
ಇತಿ ಶ್ರುತ್ವಾ ಪರಿಮಲೋ ಗತ್ವಾ ಸ್ಥಾನಮುವಾಸಯುತ್ ॥ ೨೨ ॥

---

೧೮. ಮಹಾದೇವನು " ಹಾಗೆಯೇ ಆಗಲಿ " ಎಂದು ಹೇಳಿ ಪುನಃ ತಾನು ಲಿಂಗ ರೂಪವನ್ನು ಹೊಂದಿದುದಲ್ಲದೆ ಆ ಲಿಂಗದ ಶರೀರದಿಂದ ಪ್ರತಿದಿನವೂ ಒಂದು ಭಾರದ ತೂಕದಷ್ಟು ಚಿನ್ನ ಲಭಿಸುವಂತೆ ಮಾಡಿದನು.

೧೯ ಆಗ ಪರಿಮಳನು ಸಂತೋಷಗೊಂಡು ಮಹಾವತೀನಗರಕ್ಕೆ ಬಂದು ಭೀಷ್ಮಸಿಂಹನೊಡನೆ ಪರಮಾನಂದದಿಂದಿರುತ್ತಿದ್ದನು.

೨೦-೨೨ ಇದಾದ ಒಂದು ವರ್ಷದನಂತರ ಆತನು ಜಯಚಂದ್ರನ ರಾಜಧಾನಿಗೆ ಹೋದನು. ಒಹುದಿನದಮೇಲೆ ರೋಗ ವಾಸಿಯಾಗಿಬಂದ ಪರಿಮಳನನ್ನು ನೋಡಿ ಜಯಚಂದ್ರನು " ಪುನಃ ನಿನ್ನ ಮುಖವನ್ನು ನೋಡಿದ ನಾನೇ ಧನ್ಯ ". ಎಂದು ವಿಶ್ವಾಸದಿಂದ ಅವನನ್ನು ಆವರಿಸಿ ಮತ್ತೆ "ಅಯ್ಯಾ ಪರಿಮಳನೇ ! ನಿನ್ನವ್ಯಾಧಿ ಗುಣ ವಾಗಿ ಆರೋಗ್ಯವಾದುದು ದೈವಾನುಗ್ರಹ. ಈ ಕೂಡಲೆ ನೀನು ನಿನ್ನ ಪಟ್ಟಣಕ್ಕೆ ಹೋಗಿ ಅಲ್ಲಿ ಸುಖವಾಗಿರು. ನನಗೆ ಅಂಥಾ ಆವಶ್ಯಕವಾದಾಗ ನಿನ್ನನ್ನು ಕರೆಯಿಸಿ ಕೊಳ್ಳುತ್ತೇನೆ " ಎಂದು ಹೇಳಲು ಪರಿಮಳನು ಅದೇರೀತಿ ತನ್ನ ಊರಿಗೆ ಪ್ರಯಾಣ ಮಾಡಿದನು.

**ತದಾ ತು ಲಕ್ಷಣೋ ವೀರೋ ಭಗವಂತಮುಷಾಪತಿಂ ।**
**ಜಗನ್ನಾಥಮುಪಾಗಮ್ಯ ಸಮಭ್ಯರ್ಚ್ಯಾರ್ಪರೋಽಭವತ್ ॥ ೨೩ ॥**

**ಪಕ್ಷಮಾತ್ರಾಂತರೇ ವಿಷ್ಣುರ್ಜಗನ್ನಾಥ ಉಷಾಪತಿಃ ।**
**ವರಂ ಬ್ರೂಹಿ ವಚಶ್ಚೇತಿ ಲಕ್ಷಣಂ ಪ್ರಾಹ ಹರ್ಷತಃ ॥ ೨೪ ॥**

**ಇತ್ಯುಕ್ತಃ ಸ ತು ತಂ ದೇವಂ ನತ್ವೋವಾಚ ವಿನಮ್ರಧೀಃ ।**
**ದೇಹಿ ಮೇ ವಾಹನಂ ದಿವ್ಯಂ ಸರ್ವಶತ್ರುವಿನಾಶನಂ ॥ ೨೫ ॥**

**ಇತಿ ಶ್ರುತ್ವಾ ಜಗನ್ನಾಥಃ ಶಕ್ತಿಮೈರಾವತಾದ್ಗಜಾತ್ ।**
**ಸಮುತ್ಪಾದ್ಯ ದದೌ ತಸ್ಮೈ ದಿವ್ಯಾಮೈರಾವತೀಂ ಮುದಾ ॥ ೨೬ ॥**

---

೨೩. ರತ್ನಭಾನುವಿನ ಪುತ್ರನೂ ಶೂರನೂ ಆದ ಲಕ್ಷಣನು ತನ್ನ ಇಷ್ಟಾರ್ಥ ಪ್ರಾಪ್ತಿಗಾಗಿ ಪವಿತ್ರವಾದ ಕ್ಷೇತ್ರದಲ್ಲಿ ಭಗವಂತನೂ ಉಷಾಪತಿಯೂ ಜಗನ್ನಾಥನೂ ಆದ ವಿಷ್ಣುವನ್ನು ಬಂದು ಬಹುಭಕ್ತಿಯಿಂದ ಆರಾಧಿಸುತ್ತಿದ್ದನು.

೨೪. ಈ ಪ್ರಕಾರ ಹದಿನೈದು ದಿನಗಳು ಕಳೆದುವು. ಇವನ ಭಕ್ತಿಗೆ ಸಂತುಷ್ಟನಾಗಿ, ಜಗದೊಡೆಯನೂ ಉಷಾಪತಿಯೂ ಆದ ವಿಷ್ಣುವು ಲಕ್ಷಣನಿಗೆ ದರ್ಶನ ಕೊಟ್ಟು, ಅವನನ್ನು ಕುರಿತು "ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಿದನು.

೨೫. ಆಗ ಲಕ್ಷಣನು ಪರಮಾತ್ಮನಾದ ಕೃಷ್ಣನಿಗೆ ನಮಸ್ಕಾರಮಾಡಿ ನಮ್ರತೆಯಿಂದ ಕೂಡಿ "ಪ್ರಭುವೇ ! ಸರ್ವಶತ್ರು ವಿನಾಶಕವೂ ದಿವ್ಯವೂ ಆದ ವಾಹನವೊಂದನ್ನು ನನಗೆ ಕರುಣಿಸು" ಎಂದು ಕೇಳಿಕೊಂಡನು.

೨೬. ಜಗನ್ನಾಥನಾದ ಸ್ವಾಮಿಯು ಇದನ್ನು ಕೇಳಿ ಐರಾವತ ಗಜದಿಂದ ಶಕ್ತಿಯನ್ನು ಸೃಷ್ಟಿಸಿ ಆ ದಿವ್ಯವಾದ ಐರಾವತೀಶಕ್ತಿಯನ್ನು ಲಕ್ಷಣನಿಗೆ ಸಂತೋಷದಿಂದ ಕೊಟ್ಟನು.

ಆರುಹ್ಯೈರಾವತೀಂ ರಾಜಾ ಲಕ್ಷಣೋ ಗೇಹಮಾಯಯೌ ।
ಸ ವೈ ಪರಿಮಲೋ ರಾಜಾ ಜಗಾಮ ಚ ಮಹಾವತೀಂ ॥ ೨೭ ॥

ಏತಸ್ಮಿನ್ನಂತರೇ ವೀರಾಸ್ತಾಲನಾದ್ಯಾ ಮುದೋತ್ಕಟಾಃ ।
ಮಹಾವತೀಂ ಪುರೀಂ ಪ್ರಾಪ್ಯ ದದೃಶುಸ್ತಂ ಮಹೀಪತಿಂ ॥ ೨೮ ॥

ತೇನ ಸಾರ್ಧಂ ಚ ಮಹತೀಂ ಪ್ರೀತಿಂ ಕೃತ್ವಾ ನ್ಯವಾಸಯನ್ ।
ಮಾಸಾಂತೇ ಚ ಪುನಸ್ತೇ ವೈ ರಾಜಾನೋ ವಿನಯಾನ್ವಿತಾಃ ॥ ೨೯ ॥

ಊಚುಸ್ತಂ ಶೃಣು ಭೂಪಾಲ ವಯಂ ಗಚ್ಛಾಮಹೇ ಪುರೀಃ ।
ತದಾ ರಾಜಾಪಿ ತಾನ್ಪ್ರಾಹ ಸರ್ವಾನ್ ಕ್ಷಿತಿಪತೀನಥ ।
ದತ್ತ್ವಾಧಿಕಾರಂ ಪುತ್ರೇಭ್ಯಸ್ತದಾಽಽಯಾಸ್ಯಾಮಿ ವೋಽನ್ತಿಕಂ ॥ ೩೦ ॥

---

೨೭. ರಾಜಕುಲೋತ್ಪನ್ನನಾದ ಲಕ್ಷಣನು ಆ ಐರಾವತೀಶಕ್ತಿಯನ್ನು ಏರಿ, ತನ್ನ ನಿವಾಸಕ್ಕೆ ಹಿಂದಿರುಗಿ ಬಂದನು. ಇಷ್ಟರಲ್ಲಿ ಹಿಂದೆ ಸೂಚಿಸಿದಂತೆ ಪರಿಮಳ ರಾಜನೂ ಸಹ ಮಹಾವತೀ ನಗರವನ್ನು ಸೇರಿದ್ದನು.

೨೮-೨೯. ಇದೇ ಸಮಯಕ್ಕೆ ಸರಿಯಾಗಿ ತಾಲನ ದೇಶರಾಜ, ವತ್ಸರಾಜ ಈ ಮೂರು ಮಂದಿ ಶೂರರೂ ಮದದಿಂದ ಕೊಬ್ಬಿದವರಾಗಿ ಮಹಾವತೀನಗರಕ್ಕೆ ಹೋಗಿ, ಅಲ್ಲಿ ರಾಜನನ್ನು ಸಂದರ್ಶನಮಾಡಿ ತುಂಬಾ ವಿಶ್ವಾಸ ತೋರಿಸುತ್ತಾ ಅವ ನೊಡನೆ ಇರುತ್ತಿದ್ದರು. ಹೀಗೆ ಒಂದು ತಿಂಗಳು ಕಳೆಯಿತು, ಅನಂತರ ತಾಲನನೇ ಮುಂತಾದ ಆ ಮೂವರು ಕ್ಷತ್ರಿಯರೂ ವಿನಯದಿಂದ ಕೂಡಿದವರಾಗಿ "ಎಲೈ ರಾಜೇಂದ್ರನೇ! ಇನ್ನು ನಾವು ನಮ್ಮ ಊರಿಗೆ ಹೊರಡುವುದಕ್ಕೆ ಅನುಜ್ಞೆ ಕೊಡ ಬೇಕು" ಎಂದರು.

೩೦. ಆಗ ಮಹಾವತಿಯ ಅರಸು ಅವರನ್ನು ಕುರಿತು "ಕೆಲವು ದಿನಗಳೊ ಳಗಾಗಿ ಈ ರಾಜ್ಯಾಧಿಕಾರವನ್ನು ನನ್ನ ಮಗನಿಗೆ ವಹಿಸಿ ನಾನೂ ನಿಮ್ಮ ಸಮೀಪಕ್ಕೇ ಬಂದು ಬಿಡುವೆನು" ಎಂದು ಹೇಳಿದನು.

ತಥೇತ್ಯುಕ್ತ್ವಾಸ್ತು ತೇ ರಾಜ್ಞಾ ಸ್ವಗೇಹಂ ಪುನರಾಯಯುಃ ।
ಸಾನುಜೋ ದೇಶರಾಜಸ್ತು ದ್ವಿಜೇಭ್ಯಃ ಸ್ವಪುರಂ ದದೌ ॥ ೩೧ ॥

ಪುತ್ರೇಭ್ಯಸ್ತಾಲನೋ ವೀರೋ ದದೌ ವಾರಾಣಸೀಂ ಪುರೀಂ ।
ಅಲಿಕೋಲ್ಲಾಮತಿಃ ಕಾಲಃ ಪತ್ರಃ ಪುಷ್ಪೋದರೀ ವರೀ ॥ ೩೨ ॥

ಕರೀನರೀ ಸುಲಲಿತಸ್ತೇಷಾಂ ನಾಮಾನಿ ವೈ ಕ್ರಮಾತ್ ।
ದ್ವೌದ್ವೌ ಪುತ್ರೌ ಸ್ಮೃತೌ ತೇಷಾಂ ಪಿತುಸ್ತುಲ್ಯಪರಾಕ್ರಮೌ ॥ ೩೩ ॥

ಸ ವೈ ಪುತ್ರಾಜ್ಞಯಾ ಶೂರಸ್ತಾಲನೋ ರಾಕ್ಷಸಪ್ರಿಯಃ ।
ಯಾತುಧಾನಮಯಂ ದೇವಂ ತುಷ್ಟಾವ ಮ್ಲೇಚ್ಛಪೂಜನೈಃ ॥ ೩೪ ॥

ತಥಾ ವಸುಮತಃ ಪುತ್ರೌ ಭೂಪತೀ ದೇಶವತ್ಸಜೌ ।
ಶಕ್ರಂ ಸೂರ್ಯಂ ಸಮಾರಾಧ್ಯ ಕೃತಕೃತ್ಯೌ ಬಭೂವತುಃ ॥ ೩೫ ॥

---

೩೧. ಅವರುಗಳು "ಅಗತ್ಯವಾಗಿ ಹಾಗೆಮಾಡಿ" ಎಂದು ಹೇಳಿ ತಮ್ಮ ನಿವಾಸಕ್ಕೆ ಹಿಂದಿರುಗಿದರು. ದೇಶರಾಜನೂ ಅವನ ತಮ್ಮ ವತ್ಸರಾಜನೂ ಸಹ, ಉದಾರ ಮನಸ್ಸಿನಿಂದ ತಮ್ಮ ಪಟ್ಟಣವನ್ನು ಬ್ರಾಹ್ಮಣರಿಗೆ ದಾನಮಾಡಿದರು.

೩೨-೩೩. ವೀರನಾದ ತಾಲನನು ವಾರಾಣಸೀಪುರವನ್ನು ತನ್ನ ಮಕ್ಕಳಿಗೆ ಕೊಟ್ಟನು. ಕ್ರಮವಾಗಿ ಅಲಿಕೋಲ್ಲಾಮತೀ ಕಾಲ, ಪತ್ರ, ಪುಷ್ಪೋದರೀ, ವರೀ, ಕರೀ, ನರೀ, ಸುಲಲಿತ ಎಂಬದಾಗಿ ಅವರಿಗೆ ಹೆಸರಿದ್ದಿತು. ಇವರುಗಳಿಗೆ ಕ್ರಮವಾಗಿ ತಂದೆಯ ಪರಾಕ್ರಮದಷ್ಟೇ ಪರಾಕ್ರಮವುಳ್ಳ ಇಬ್ಬರಿಬ್ಬರು ಮಕ್ಕಳು ಇದ್ದರು.

೩೪. ಪರಾಕ್ರಮಶಾಲಿಯಾದ ಆ ತಾಲನನು ರಾಕ್ಷಸಪ್ರಿಯನಾಗಿ ರಾಕ್ಷಸ ಸ್ವರೂಪವನ್ನೇ ದೇವರೆಂದು ಭಾವಿಸಿ ಮ್ಲೇಚ್ಛರು ಆರಾಧಿಸುವ ಕ್ರಮದಿಂದ ಪೂಜಿಸಿ ಸ್ತುತಿಸಿದನು.

೩೫. ವಸುಮಂತನ ಪುತ್ರನಾದ ದೇಶರಾಜ ವತ್ಸರಾಜ ಎಂಬ ಇಬ್ಬರೂ ಇದೇ ಕ್ರಮದಲ್ಲಿ ಸೂರ್ಯಸ್ವರೂಪನಾದ ಇಂದ್ರನನ್ನು ಪೂಜಿದರು.

ಸಿಂಹಿನೀಂ ನಾಮ ವಡವಾಂ ಯಾ ತು ದತ್ತಾ ಭಯಾನಕಾ ।
ಆರುಹ್ಯ ಬಲವಾಞ್ಛೂರೋ ಗಮನಾಯ ಮನೋ ದಧೇ ॥ ೪೬ ॥

ಪಂಚಶಬ್ದಂ ಮಹಾನಾಗಮಿಂದ್ರದತ್ತಂ ಮನೋರಮಂ ।
ದೇಶರಾಜಸ್ತಮಾರುಹ್ಯ ಗಮನಾಯ ಮನೋ ದಧೇ ॥ ೩೭ ॥

ಹಯಂ ಪಪೀಹಕಂ ನಾಮ ಸೂರ್ಯದತ್ತಂ ನರಸ್ವರಂ ।
ವತ್ಸರಾಜಸ್ತಮಾರುಹ್ಯ ಗಮನಾಯ ಮನೋ ದಧೇ ॥ ೩೮ ॥

ತ್ರಯಃ ಶೂರಾಃ ಸಮಾಗಮ್ಯ ನಗರೀಂ ತೇ ಮಹಾವತೀಂ ।
ಊಷುಸ್ತತ್ರ ಮಹಾತ್ಮಾನೋ ಬಹುಮಾನೇನ ಸತ್ಕೃತಾಃ ॥ ೩೯ ॥

ಸೇನಾಷಷ್ಟಿಸಹಸ್ರಂ ತತ್ತೇಷಾಂ ಸ್ವಾಮೀ ಸ ತಾಲನಃ ।
ಮಂತ್ರಿಣೌ ಭ್ರಾತರೌ ತೌ ಚ ನೃಪತೇಶ್ಚಂದ್ರವಂಶಿನಃ ॥ ೪೦ ॥

---

೩೬. ಶೂರನಾದ ತಾಲನನು ಆರಾಧಿಸುತ್ತಿದ್ದ ದೇವರು ಅವನಿಗೆ ಪ್ರತ್ಯಕ್ಷನಾಗಿ ಸಿಂಹಿನಿಯೆಂಬ ಹೆಣ್ಣು ಕುದುರೆಯನ್ನು ಕೊಟ್ಟನು. ಅವನು ಅದನ್ನು ಏರಿ ಹೊರಡಲು ಸಿದ್ಧನಾದನು.

೩೭. ಇಂದ್ರನು ದೇಶರಾಜನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ ಸುಂದರವೂ ಉಚ್ಚಧ್ವನಿಯುಳ್ಳದೂ ಆದ ಪಂಚಶಬ್ದವೆಂಬ ಆನೆಯನ್ನು ಅವನಿಗೆ ಕೊಟ್ಟನು. ಅವನು ಅದನ್ನು ಏರಿ ಹೊರಡಲು ಸಿದ್ಧನಾದನು.

೩೮. ವತ್ಸರಾಜನು ಸೂರ್ಯರೂಪನಾದ ಇಂದ್ರನನ್ನು ಮೆಚ್ಚಿಸಿ ಮನುಷ್ಯ ಧ್ವನಿಯಂತೆ ಧ್ವನಿಯುಳ್ಳ ಪಪೀಹಕವೆಂಬ ಕುದುರೆಯನ್ನು ಪಡೆದು ಅದನ್ನು ಏರಿ ಕೊಂಡು ಹೊರಟನು.

೩೯. ಶೂರರಾದ ಈ ಮೂವರೂ ಆ ಮಹಾವತೀನಗರಕ್ಕೆ ಬಂದು ಅಲ್ಲಿ ಬಹುಮಾನ ಪುರಸ್ಸರವಾದ ಸತ್ಕಾರಹೊಂದಿ ಅಲ್ಲಿಯೇ ನಿಂತರು.

೪೦. ಅಲ್ಲಿ ತಾಲನನು ಅರುವತ್ತು ಸಾವಿರ ಸೇನೆಗಳಿಗೆ ಅಧಿಪತಿಯಾದನು. ಅಣ್ಣ ತಮ್ಮಂದಿರಾದ ದೇಶರಾಜ ವತ್ಸರಾಜ ಇವರಿಬ್ಬರೂ ಚಂದ್ರವಂಶೋತ್ಪನ್ನನಾದ ಆ ರಾಜನಿಗೆ ಮಂತ್ರಿಗಳಾಗಿದ್ದರು.

**ತ್ರೈವಿರ್ರೈರ್ವೈ ರಕ್ಷಿತೋ ರಾಜಾ ಕೃತಕೃತ್ಯತ್ವಮಾಗತಃ ॥ ೪೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಸಪ್ತಮೋಽಧ್ಯಾಯಃ.**



---

೪೧. ಅಂತು ಈ ಮೂವರು ವೀರರ ಸಹಾಯದಿಂದ ರಾಜನು ರಕ್ಷಿತನಾಗಿ ಕೃತಕೃತ್ಯನೆನಿಸಿದ್ದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗ ಪರ್ವದ ಮೂರನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಏಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಅಷ್ಟಮೋಽಧ್ಯಾಯಃ

॥ ಸೂತ ಉವಾಚ ॥

ಜಂಬುಕೋ ನಾಮ ಭೂಪಾಲೋ ಮಹೀರಾಜಭಯಾತುರಃ ।
ಕಾಲಿಯೇನ ಯುತಃ ಪ್ರಾಪ್ತೋ ನರ್ಮದಾಯಾಸ್ತಟೇ ಶುಭೇ ॥ ೧ ॥

ಪಾರ್ಥಿವೈಃ ಪೂಜಯಾಮಾಸ ದೇವದೇವಂ ಪಿನಾಕಿನಂ ।
ಷಣ್ಮಾಸಾನ್ತೇ ಮಹಾದೇವೋ ಜಂಬುಕಂ ಪ್ರಾಹ ಭೂಪತಿಂ ॥ ೨ ॥

ವರಂ ವರಯ ತೇಽಭೀಷ್ಟಂ ಭೂಪ ಆಹ ಕೃತಾಂಜಲಿಃ ।
ಅಜಿತತ್ವಂ ನೃಪೈಃ ಸರ್ವೈರ್ದೇಹಿ ಮೇ ಕರುಣಾನಿಧೇ ॥ ೩ ॥

## ಎಂಟನೆಯ ಅಧ್ಯಾಯ

೧-೨. ಸೂತಮುನಿವರ್ಯನು ಹೇಳುತ್ತಾನೆ.—ಜಂಬುಕೇಶ್ವರನೆಂಬ ಒಬ್ಬ ರಾಜನು ಪೃಥ್ವೀರಾಜನಿಗೆ ಭೀತನಾಗಿ ತನ್ನ ಮಗನಾದ ಕಾಲಿಯನೊಡನೆ ತನ್ನ ರಾಜ್ಯವನ್ನು ಬಿಟ್ಟು ಹೊರಟು ನರ್ಮದಾ ತೀರಕ್ಕೆ ಬಂದು ಅಲ್ಲಿ ದೇವೋತ್ತಮನಾದ ಪರಮೇಶ್ವರನನ್ನು ಪಾರ್ಥಿವಲಿಂಗಪೂಜಾವಿಧಾನದಿಂದ ಆರಾಧಿಸಿದನು. ಈರೀತಿ ಆರು ತಿಂಗಳು ಆರಾಧಿಸಿದ ಮೇಲೆ ಶಿವನು ಪ್ರತ್ಯಕ್ಷನಾಗಿ ಜಂಬುಕೇಶ್ವರ ರಾಜನನ್ನು ಕುರಿತು "ಅಯ್ಯಾ ರಾಜನೆ! ನಿನಗೆ ಇಷ್ಟವಾದ ವರವನ್ನು ಕೇಳು ಕೊಡುವೆನು" ಎಂದು ಹೇಳಿದನು.

೩. ಶಿವನು ಈರೀತಿ ಹೇಳಿದುದನ್ನು ಕೇಳಿ ಜಂಬುಕರಾಜನು ಕೈಮುಗಿದು ಕೊಂಡು (ಅಂಜಲಿಬದ್ಧನಾಗಿ) "ಎಲೈ ಕರುಣಾನಿಧಿಯಾದ ಪರಮೇಶ್ವರನೇ! ಯಾವ ರಾಜರೂ ನನ್ನನ್ನು ಜಯಿಸದಂತೆ ವರವನ್ನು ಕರುಣಿಸಬೇಕು" ಎಂದು ಬೇಡಿಕೊಂಡನು.

**ತಥೇತ್ಯುಕ್ತ್ವಾ ಮಹಾದೇವಸ್ತತ್ರೈವಾನ್ತರ್ಹಿತೋಽಭವತ್ ।**
**ಕಾಲಿಯಸ್ತತ್ಸುತೋ ಲಬ್ಧ್ವಾ ವಿರೋ ಮಾಹೇಶ್ವರಂ ವರಂ　　॥ ೪ ॥**

**ಮೋಹನಂ ಸರ್ವಸೈನ್ಯಾನಾಂ ಪಿತುರಂತಿಕಮಾಯಯೌ ।**
**ಪಿತರಂ ಪ್ರಾಹ ನಮ್ರಾತ್ಮಾ ದೇಹ್ಯಾಜ್ಞಾಂ ತಾತ ಮತ್ಪ್ರಿಯಾಂ　　॥ ೫ ॥**

**ಗಮಿಷ್ಯಾಮಿ ಬಲೈಃ ಸಾರ್ದ್ಧಂ ಗಂಗಾಂ ಶುದ್ಧಜಲಾಂ ಶುಭಾಂ ।**
**ತಥೇತ್ಯುಕ್ತ್ವಾ ಪಿತಾ ತಸ್ಮೈ ಯಯೌ ತು ಸ್ವಂ ನಿವೇಶನಂ　　॥ ೬ ॥**

**ಭಗಿನೀಂ ಪ್ರಾಹ ಬಲವಾನ್ವಿಜಯೈಷಿಣಿ ಶೋಭನೇ ।**
**ಕಿಮಿಚ್ಛಸಿ ಶುಭಂ ವಸ್ತು ತದಾಜ್ಞಾಂ ದೇಹಿ ಮಾ ಚಿರಂ　　॥ ೭ ॥**

**ಸಾಹ ಗ್ರೈವೇಯಕಂ ಹಾರಂ ಮಣಿಮುಕ್ತಾವಿಭೂಷಿತಂ ।**
**ಮತ್ಪ್ರಿಯಂ ದೇಹಿ ಮೇ ವೀರ ತಥೇತ್ಯುಕ್ತ್ವಾ ಯಯೌ ಗೃಹಾತ್ ॥ ೮ ॥**

---

೪-೫. ಇದನ್ನು ಕೇಳಿ ಮಹಾದೇವನು "ಹಾಗೆಯೇ ಆಗಲಿ" ಎಂದು ಹೇಳಿ ಅಂತರ್ಧಾನನಾದನು. ಜಂಬುಕನ ಮಗನಾದ ಕಾಲಿಯನೂ ಕೂಡ ಹಾಗೆಯೇ ಶಿವನನ್ನು ಆರಾಧಿಸಿ ಅವನಿಂದ ಸಕಲ ಸೇನೆಗಳನ್ನೂ ಸಮ್ಮೋಹನಗೊಳಿಸುವ ವರವನ್ನು ಪಡೆದುಕೊಂಡನು. ಬಳಿಕ ನಮ್ರನಾಗಿ ತಂದೆಯ ಸಮೀಪಕ್ಕೆ ಬಂದು "ತಂದೆಯೇ! ನನಗೆ ಸುಮುಖವಾದ ಅಪ್ಪಣೆಯನ್ನು ಕೊಡು."

೬. "ನಾನು ಸೇನಾಸಮೇತನಾಗಿ ಗಂಗಾತೀರದ ರಾಷ್ಟ್ರಗಳ ಮೇಲೆ ದಂಡೆತ್ತಿ ಕೊಂಡು ಹೋಗುವೆನು" ಎಂದು ಹೇಳಿದನು. ರಾಜನು "ಹಾಗೆಯೇ ಆಗಲಿ" ಎಂದು ಹೇಳಿ ಅವನಿಗೆ ಅನುಮತಿಕೊಟ್ಟನು ಆಮೇಲೆ ಅವರು ತಮ್ಮ ನಿವಾಸಗಳಿಗೆ ತೆರಳಿದರು.

೭. ತನ್ನ ನಿವಾಸಕ್ಕೆ ಬಂದಮೇಲೆ ಶೂರನಾದ ಕಾಲಿಯನು ತನ್ನ ತಂಗಿಯನ್ನು ಕುರಿತು "ಎಲೌ ವಿಜಯಾಶಂಸಿನಿಯಾದ ಮಂಗಳಾಂಗಿಯೇ! ನಿನಗೆ ಇಷ್ಟವಾದ ಶ್ರೇಷ್ಠವಸ್ತುವು ಯಾವುದು ಬೇಕು ಎಂಬುದನ್ನು ಹೇಳು; ಅದನ್ನು ಜಾಗ್ರತೆಯಾಗಿಯೇ ತಂದುಕೊಡುವೆನು" ಎಂದು ಹೇಳಿದನು.

೮-೧೧. ಆಗ ಅವಳು ಅಣ್ಣನನ್ನು ಕುರಿತು "ಮಣಿಮುತ್ತುಗಳಿಂದ ಅಲಂಕೃತವಾದ ಕಂಠಮಾಲೆಯಲ್ಲಿ ನನಗೆ ಆಶೆ. ಎಲೈ ವೀರನೇ! ಅದನ್ನು ನನಗೆ ತಂದುಕೊಡು"

ಕಾಲಿಯೋ ಲಕ್ಷತುರಗೈಃ ಸಂಯುತಸ್ತ್ವರಿತೋಽಗಮತ್ ।
ಪ್ರಾಪ್ಯ ಗಂಗಾಂ ಸಾಗರಗಾಂ ಕೃತ್ವಾ ಸ್ನಾನಂ ವಿಧಾನತಃ ॥ ೯ ॥

ದತ್ವಾ ದಾನಾನಿ ವಿಪ್ರೇಭ್ಯೋ ಜಯಚಂದ್ರಪುರೀಂ ಯಯೌ ।
ನಿರ್ಧನಃ ಸಮಭೂದ್ರಾಜಾ ಬಾಹುಶಾಲೀ ಮಹಾಬಲಃ ॥ ೧೦ ॥

ಕಾನ್ಯಕುಬ್ಜೇ ಮಹಾಹಾರೋ ನ ಪ್ರಾಪ್ತೋ ಬಹುಮೂಲ್ಯಕಃ ।
ತದೋರ್ವೀಯಾಧಿಪೇನೈವ ಮಹೀಶೇನ ಪ್ರಬೋಧಿತಃ ॥ ೧೧ ॥

ಯಯೌ ಮಹಾವತೀಂ ರಮ್ಯಾಂ ಶಿವದತ್ತವರೋ ಬಲೀ ।
ರುರೋಧ ನಗರೀಂ ಸರ್ವಾಂ ಶ್ರುತ್ವಾ ರಾಜಾ ಭಯಾತುರಃ ॥ ೧೨ ॥

ರುದ್ರಂ ಕಪರ್ದಿನಂ ಶಂಭುಂ ಶರಣ್ಯಂ ಶರಣಂ ಯಯೌ ।
ಶಿವಾಜ್ಞಯಾ ನೃಪೋ ಧೀಮಾನ್ಬಲೈಃ ಷಷ್ಟಿಸಹಸ್ರಕೈಃ ॥ ೧೩ ॥

---

ಎಂದು ಹೇಳಿದಳು. ಕಾಲಿಯನು "ಹಾಗೆಯೇ ಆಗಲಿ" ಎಂದು ಹೇಳಿ ಒಂದುಲಕ್ಷ ಅಶ್ವಸೇನೆಯೊಡನೆ ಹೊರಟು ತೀವ್ರ ವೇಗದಿಂದ ಗಂಗಾತೀರಕ್ಕೆ ಬಂದನು. ಸಾಗರ ಕಾಮಿನಿಯಾದ ಆ ಗಂಗೆಯಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಾದಿಗಳನ್ನು ಆಚರಿಸಿ ಬ್ರಾಹ್ಮಣರಿಗೆ ದಾನ ಮೊದಲಾದುವನ್ನು ಕೊಟ್ಟು ಅನಂತರ ಮುಂದಕ್ಕೆ ಸಾಗಿ ಜಯಚಂದ್ರನ ರಾಜಧಾನಿಯಾದ ಕನ್ಯಕುಬ್ಜಕ್ಕೆ ಬಂದನು. ಶೂರನಾದ ಜಯಚಂದ್ರನು ಈವೇಳೆಗೆ ದರಿದ್ರಾವಸ್ಥೆಗೆ ಇಳಿದಿದ್ದನು ಕನ್ಯಕುಬ್ಜದಲ್ಲಿ ಬಹು ಬೆಲೆಯುಳ್ಳ ಶ್ರೇಷ್ಠವಾದ ಹಾರವು ಯಾವುದೂ ದೊರೆಯಲಿಲ್ಲ.

೧೨. ಶಿವನ ವರವನ್ನು ಪಡೆದ ಆ ಕಾಲಿಯನು ಉರ್ವೀಯ ನಗರದ ರಾಜನಾದ ಮಹೀಪತಿಯು ಸೂಚಿಸಿದ ಪ್ರಕಾರ ಸುಂದರವಾದ ಮಹಾವತೀ ನಗರಕ್ಕೆ ಮುತ್ತಿಗೆ ಹಾಕಿದನು. ಇದನ್ನು ಕೇಳಿ ಪರಿಮಳರಾಜನು ಗಾಬರಿಹೊಂದಿ ಭಯಂಕರನೂ, ಜಟಾಧಾರಿಯೂ, ಆದ ಪರಮೇಶ್ವರನನ್ನೇ ಮರೆಹೊಕ್ಕನು.

೧೩-೧೪. ಬಳಿಕ ಬುದ್ಧಿಶಾಲಿಯಾದ ಆ ರಾಜನು ಶಿವನ ಅಪ್ಪಣೆಯ ಮೇರೆ ತನ್ನ ಅರವತ್ತು ಸಾವಿರ ಸೇನೆಯೊಡನೆ ಊರಿನಿಂದ ಹೊರಗೆಬಂದು ತಾಲನ, ದೇಶರಾಜ,

ಸಾರ್ದ್ಧಂ ಪುರಾದ್ಬಹಿರ್ಯಾತಸ್ತ್ರಿಭಿಃ ಶೂರೈಃ ಸುರಕ್ಷಿತಃ ।
ತಸ್ಯ ನಾಗಾಃ ಸಹಸ್ರಂ ಚ ದೇಶರಾಜಶ್ಚ ತತ್ಪತಿಃ ॥ ೧೪ ।

ಹಯಾಃ ಷೋಡಶಸಾಹಸ್ರಾ ವತ್ಸರಾಜಸ್ತು ತತ್ಪತಿಃ ।
ಶೇಷಾಃ ಪದಾತಯಸ್ತಸ್ಯ ತಾಲನೇನೈವ ರಕ್ಷಿತಾಃ ॥ ೧೫ ॥

ಅಭವತ್ತುಮುಲಂ ಯುದ್ಧಂ ತೇಷಾಂ ವೀರವರಕ್ಷಯಂ ।
ಅಹೋರಾತ್ರಪ್ರಮಾಣೇನ ಮಹದ್ಘೋರಮವರ್ತತ ॥ ೧೬ ॥

ತೇ ಹತ್ವಾ ಶಾತ್ರವೀಂ ಸೇನಾಂ ಚಕ್ರುರ್ಜಯರವಾನ್ಮುಹುಃ ।
ಭಯಾರ್ತಾ ನಾರ್ಮದೇಯಾಶ್ಚ ಮಾಹಿಷ್ಮತಿನಿವಾಸಿನಃ ॥ ೧೭ ॥

ದುದ್ರುವುಃ ಸರ್ವತೋ ವಿಪ್ರ ದೃಷ್ಟ್ವಾ ತಾನ್ಕಾಲಿಯೋ ನೃಪಃ ।
ಆಶ್ವಾಸ್ಯ ಪ್ರಯಯೌ ಯುದ್ಧಮರ್ಧಸೈನ್ಯಸಮನ್ವಿತಃ ॥ ೧೮ ॥

---

ವತ್ಸರಾಜ, ಈ ಮೂವರು ಶೂರರ ವ್ಯೂಗಾವಲಿನಿಂದ ರಕ್ಷಣೆ ಹೊಂದುತ್ತಿದ್ದನು ಸಾವಿರ ಆನೆಗಳುಳ್ಳ ಆವನ ಗಜಸೇನೆಗೆ ದೇಶರಾಜನು ಸೇನಾಪತಿಯಾದನು.

೧೫. ಹದಿನಾರುಸಾವಿರ ಸಂಖ್ಯೆಯ ಅಶ್ವಸೇನೆಗೆ ವತ್ಸರಾಜನು ಸೇನಾಪತಿಯಾದನು. ಮಿಕ್ಕ ನಲವತ್ತಮೂರುಸಾವಿರ ಪದಾತಿಸೈನ್ಯಕ್ಕೂ ತಾಲನನೇ ಸೇನಾಪತಿಯಾದನು.

೧೬. ಕಾಲಿಯನಿಗೂ ತಾಲನ ಮೊದಲಾದ ಮೂವರು ವೀರರಿಗೂ ಶೂರಕ್ಷಯಕರವೂ, ಮಹಾಭಯಂಕರವೂ, ಆದ ತುಮುಲಯುದ್ಧವು ಹಗಲೂ ರಾತ್ರಿಯೂ ಸಹ ನಡೆಯಿತು.

೧೭. ಈ ಇಬ್ಬರು ವೀರರೂ ಶತ್ರುಸೇನೆಗಳನ್ನು ಕೊಲ್ಲುತ್ತಾ ಬಾರಿಬಾರಿಗೂ ಜಯಧ್ವನಿಮಾಡುತ್ತಿದ್ದರು. ಈ ಧ್ವನಿಯನ್ನು ಕೇಳಿ ನರ್ಮದಾತೀರದ ಮಾಹಿಷ್ಮತೀ ನಗರದ ಸೈನಿಕರು ಭಯದಿಂದ ಕಂಗೆಟ್ಟು ದಿಕ್ಕುದಿಕ್ಕಿಗೆ ಓಡತೊಡಗಿದರು

೧೮. ಅಯ್ಯಾ ವಿಪ್ರೋತ್ತಮನೆ! ಕೇಳು; ತನ್ನ ಸೇನೆಯು ಓಡುತ್ತಿರುವುದನ್ನು ನೋಡಿ ಕಾಲಿಯರಾಜನು ಅವರನ್ನು ಸಂತೈಸಿ ಅರ್ಧಸೇನೆಯನ್ನು ಒಟ್ಟುಗೂಡಿಸಿಕೊಂಡು ಯುದ್ಧಕ್ಕೆ ತೊಡಗಿದನು.

ಹೃದಿ ಕೃತ್ವಾ ಮಹಾದೇವಂ ಮೋಹನಂ ಬಾಣಮಾದಧತ್ ।
ಸಿದ್ಧಮಂತ್ರಪ್ರಭಾವೇಣ ಮೋಹಿತಾಸ್ತೇ ಬಭೂವಿರೇ ॥ ೧೯ ॥

ಶೇಷಾಸ್ತೇ ಶತ್ರವಃ ಸರ್ವೇ ರಿಪುಘಾತಾಯ ಸಂಯಯುಃ ।
ಅಲಸಾಂಸ್ತಾನ್ಕಪಾಲೇಷು ಜಘ್ನುಸ್ತೇ ಭಯವರ್ಜಿತಾಃ ॥ ೨೦ ॥

ಭೀಷ್ಮಸಿಂಹಸ್ತಥಾ ದೃಷ್ಟ್ವಾ ಬೋಧಯಾಮಾಸ ಸೈನಿಕಾನ್ ।
ಸೂರ್ಯದತ್ತೇನ ಬಾಣೇನ ಸಂಜ್ಞಾಖ್ಯಾನೇನ ತತ್ರ ವೈ ॥ ೨೧ ॥

ಭೈರವಾಖ್ಯೇನ ಭಲ್ಲೇನ ಶತ್ರುದೇಹಮತಾಡಯತ್ ।
ಮೂರ್ಛಿತಃ ಸೋऽಪತದ್ವೀರೋ ಗಜಪೃಷ್ಠೇ ಶರಾರ್ದಿತಃ ॥ ೨೨ ॥

ತದಾ ಮಾಹಿಷ್ಮತೀ ಸೇನಾ ನಿರ್ಯಯೌ ಸಾ ದಿಶೋ ದಶ ।
ಮುಹೂರ್ತಂ ಕಶ್ಮಲಂ ಪ್ರಾಪ್ಯ ಪುನರುತ್ಥಾಯ ಕಾಲಿಯಃ ॥ ೨೩ ॥

---

೧೯. ಯುದ್ಧ ಮಾಡುತ್ತಾ ಮಾಡುತ್ತಾ ಶಿವನನ್ನು ಧ್ಯಾನಿಸಿ ತಾನು ವರ ಪಡೆದಿದ್ದ ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿದನು. ಆ ಬಾಣದ ಪ್ರಭಾವದಿಂದ ಶತ್ರುಸೈನ್ಯವೆಲ್ಲಾ ಮೂರ್ಛೆಹೊಂದಿತು.

೨೦. ಇವನ ಕಡೆಯಲ್ಲಿ ಕಳೆದುಳಿದ ಸೈನಿಕರು ಆ ಸಮಯದಲ್ಲೇ ಎದುರಾಳಿಗಳನ್ನು ಧ್ವಂಸಮಾಡುವುದಕ್ಕಾಗಿ ನುಗ್ಗಿ, ಸ್ವಲ್ಪ ಮೂರ್ಛೆ ತಿಳಿದರೂ ಇನ್ನೂ ಜಡರಾಗಿದ್ದ ಆ ಯೋಧರನ್ನು ಆಕ್ರಮಿಸಿ ನಿರ್ಭಯದಿಂದ ಅವರ ಕಪಾಲಕ್ಕೆ ಹೊಡೆದರು

೨೧. ಆಗ ಭೀಷ್ಮಸಿಂಹನು ಈರೀತಿ ಅಲಸರಾದ ತನ್ನ ಸೈನಿಕರನ್ನು ನೋಡಿ ಸೂರ್ಯನು ತನಗೆ ದಯಪಾಲಿಸಿದ್ದ ಸಂಜ್ಞಾಖ್ಯಾನವೆಂಬ ಬಾಣವನ್ನು ಪ್ರಯೋಗಿಸಿ ಸೈನಿಕರನ್ನು ಎಚ್ಚರಗೊಳಿಸಿದನು.

೨೨-೨೩. ಅಷ್ಟೇ ಅಲ್ಲದೆ ಭೈರವವೆಂಬ ಹೆಸರುಳ್ಳ ಭಲ್ಲೆಯಿಂದ ಶತ್ರುವಿನ ದೇಹದಲ್ಲಿ ಇರಿದನು ವೀರನಾದ ಕಾಲಿಯನು ಭಲ್ಲೆಯ ಏಟಿನಿಂದ ನೊಂದು ಆನೆಯ ಮೇಲಿದ್ದ ಹಾಗೆಯೇ ಮೂರ್ಛೆಹೊಂದಿದನು. ಕೂಡಲೆ ಮಾಹಿಷ್ಮತೀ ಸೇನೆಯು ದಶದಿಕ್ಕುಗಳಿಗೂ ಚೆಲ್ಲಾಪಿಲ್ಲಿಯಾಯ್ತು.

ಭಲ್ಲೇನ ತಚ್ಛಿರಃ ಕಾಯಾದಪಾಹರತ ಭೂಮಿಪಃ ।
ಹತೇ ತಸ್ಮಿನ್ಮಹಾವೀರ್ಯೇ ತಾಲನಾದ್ಯಾ ಮಹಾಬಲಾಃ ॥ ೨೪ ॥

ಕಾಲಿಯಂ ತೇ ಪರಾಜಿತ್ಯ ತಂ ಶತ್ರುಂ ಪ್ರತ್ಯಷೇಧಯನ್ ।
ಮಹಾಕಷ್ಟಾನ್ವಿತೋ ಭೂಪೋ ಧ್ಯಾತ್ವಾ ಮನಸಿ ಶಂಕರಂ ॥ ೨೫ ॥

ಮೋಹಯಿತ್ವಾ ರಿಪೂನ್ಸರ್ವಾನ್ಸಯಯೌ ಸ್ವಂ ನಿವೇಶನಂ ।
ಅರ್ಧಸೈನ್ಯೇನ ಸಹಿತಾ ಹತಶೇಷಾಸ್ತ್ರಯಸ್ತಥಾ ॥ ೨೬ ॥

ತದಾ ಪರಿಮಲೋ ರಾಜಾ ದೃಷ್ಟ್ವಾ ಶತ್ರುಪರಾಜಯಂ ।
ಪರಿಷ್ವಜ್ಯ ಮಹಾವೀರಾನ್ಸ್ವಗೇಹಂ ಪುನರಾಯಯೌ ॥ ೨೭ ॥

ಜಯಚಂದ್ರಸ್ತು ತಚ್ಛ್ರುತ್ವಾ ಪರಂ ವಿಸ್ಮಯಮಾಗತಃ ।
ತಾಲನಂ ಚ ಸಮಾಹೂಯ ಸೇನಾಧೀಶಮಕಾರಯತ್ ॥ ೨೮ ॥

---

೨೪ ಕಾಲಿಯನು ಒಂದು ಕ್ಷಣಕಾಲ ಮೂರ್ಛಿತನಾಗಿದ್ದು ಪುನಃ ಚೇತರಿಸಿಕೊಂಡು ತನ್ನ ಭಲ್ಲಿಯನ್ನು ಪ್ರಯೋಗಿಸಿ ಅವನ ಎದುರಾಳಿಯ ಶಿರಸ್ಸನ್ನು ಛೇದಿಸಿದನು. ಮಹಾವೀರನಾದ ಆ ಭೀಷ್ಮಸಿಂಹನು ಮೃತನಾಗುತ್ತಲೆ ತಾಲನನೇ ಮುಂತಾದ ಬಲಶಾಲಿಗಳಾದ ವೀರರು ಕಾಲೀಯನನ್ನು ಎದುರಿಸಿ ಅವನನ್ನು ಸೋಲಿಸಿ ಧಿಕ್ಕರಿಸಿದರು.

೨೫-೨೬. ಈರೀತಿ ಕಷ್ಟಕ್ಕೆ ಒಳಗಾದ ಕಾಲಿಯನು, ಮನದಲ್ಲಿ ಶಿವನನ್ನು ಧ್ಯಾನಿಸಿ, ಮತ್ತೆ ಸಂಮೋಹನಾಸ್ತ್ರಪ್ರಯೋಗದಿಂದ ಶತ್ರುಗಳನ್ನೆಲ್ಲಾ ಮೂರ್ಛೆ ಬೀಳಿಸಿ, ತನ್ನ ಊರಿಗೆ ಹಿಂದಿರುಗಿದನು. ತಾಲನ ಮೊದಲಾದ ಮೂವರು ವೀರರೂ ಯುದ್ಧದಲ್ಲಿ ಕಳೆದು ಉಳಿದ ಅರ್ಧ ಸೇನಾಸಮೇತ ಊರಿಗೆ ಬಂದರು

೨೭. ಆಗ ಪರಿಮಳರಾಜನು ಶತ್ರುವು ಪರಾಜಯ ಹೊಂದಿ ಹಿಂವಕ್ಕೆ ಹೊರಟು ಹೋದದ್ದನ್ನು ನೋಡಿ, ಆ ಮೂವರು ಶೂರರನ್ನೂ ಪ್ರೇಮಾಲಿಂಗನದಿಂದ ಸನ್ಮಾನಿಸಿ ತನ್ನ ನಿವಾಸಕ್ಕೆ ಹಿಂದಿರುಗಿದನು.

೨೮. ಜಯಚಂದ್ರನು ಈ ವಿಚಾರವನ್ನು ಕೇಳಿ ಸಂತೋಷಗೊಂಡು ತಾಲನನನ್ನು ಕರೆಯಿಸಿ ತನ್ನ ಸೇನಾಪತಿಯನ್ನಾಗಿ ನಿಯಮಿಸಿಕೊಂಡನು.

ಭೀಷ್ಮಸಿಂಹೇ ಗತೇ ಲೋಕೇ ಪಂಚಮಾಸಾಂತರೇ ನೃಪೇ ।
ತತ್ಪತ್ನೀ ಜನಯಾಮಾಸ ಪುತ್ರರತ್ನಂ ಶುಭಾನನಂ ॥ ೨೯ ॥

ಸಾ ತು ಗುರ್ಜರಭೂಪಸ್ಯ ತನಯಾಖ್ಯಾ ಮದಾಲಸಾ ।
ದಿವ್ಯಂ ಪುತ್ರಂ ಸಮಾಲೋಕ್ಯ ಮುಮುದೇ ಸಗಣಾ ಭೃಶಂ ॥ ೩೦ ॥

ಶ್ರುತ್ವಾ ತಜ್ಜನ್ಮ ನೃಪತಿರ್ವಿತತಾರ ಧನಂ ಬಹು ।
ಆಹೂಯ ಗಣಕಾನ್ಪ್ರಾಜ್ಞಾಞ್ಜಾತಕರ್ಮ ಹ್ಯಕಾರಯತ್ ॥ ೩೧ ॥

ಸಹದೇವಾಂಶ ಏವಾಸೌ ಭುವಿ ಜಾತಃ ಶಿವಾಜ್ಞಯಾ ।
ದೇವಸಿಂಹಃ ಕೃತೋ ನಾಮ ಗಣಕೈಃ ಶಾಸ್ತ್ರಚಿಂತಕೈಃ ॥ ೩೨ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಅಷ್ಟಮೋಽಧ್ಯಾಯಃ.**

---

೨೯-೩೦. ಭೀಷ್ಮಸಿಂಹನು ಮೃತನಾದ ಐದು ತಿಂಗಳನಂತರ (ಭೀಷ್ಮಸಿಂಹ) ಅವನ ಪತ್ನಿಯೂ ಗುರ್ಜರ ರಾಜಪುತ್ರಿಯೂ ಆದ ಮದಾಲಸೆಗೆ ಸುಂದರವಾದ ಒಂದು ಗಂಡುಮಗು ಹುಟ್ಟಿತು. ಆಕೆಯು ಈ ಪುತ್ರೋದಯದಿಂದ ತನ್ನವರೆಲ್ಲರೊಡನೆ ಅತ್ಯಾನಂದಹೊಂದಿದಳು.

೩೧. ಪರಿಮಳರಾಜನೂ ಸಹ ಇದನ್ನು ಕೇಳಿ ಬೇಕಾದಷ್ಟು ಧನವನ್ನು ದಾನಮಾಡಿದನು. ಬಳಿಕ ಪ್ರಾಜ್ಞರಾದ ಜ್ಯೋತಿಷ್ಕರನ್ನು ಕರೆಯಿಸಿ ಜಾತಕರ್ಮಾದಿಗಳನ್ನು ಮಾಡಿಸಿದನು.

೩೨. ಜ್ಯೋತಿಷಶಾಸ್ತ್ರಪಾರಂಗತರು, ಇವನು ಶಿವನ ಆಜ್ಞೆಯ ಪ್ರಕಾರ ಭೂಮಿಯಲ್ಲಿ ಅವತರಿಸಿರುವ ಸಹದೇವನ ಅಂಶ ಸಂಭೂತನು ಎಂದು ನಿರ್ಧರಿಸಿ ಆ ಮಗುವಿಗೆ ದೇವಸಿಂಹನೆಂದು ನಾಮಕರಣಮಾಡಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಮೂರನೆಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಎಂಟನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ನವಮೋಽಧ್ಯಾಯಃ

---

॥ ಸೂತ ಉವಾಚ ॥

ಕಾಲಿಯಂ ತೌ ಪರಾಜಿತ್ಯ ಭ್ರಾತರೌ ನೃಪಸೇವಕೌ ।
ಗತೌ ಗೋಪಾಲಕೇ ರಾಷ್ಟ್ರೇ ಭೂಪತಿರ್ದಲವಾಹನಃ ॥ ೧ ॥

ಸಹಸ್ರಚಂಡಿಕಾಹೋಮೇ ನಾನಾಭೂಪಸಮಾಗಮೇ ।
ಗೃಹೀತೌ ಮಹಿಷೌ ತಾಭ್ಯಾಂ ಭೂಪೈರನ್ಯೈಶ್ಚ ದುರ್ಜಯೌ ॥ ೨ ॥

ಪೂರ್ವಂ ಹಿ ನೃಪಕನ್ಯಾಭ್ಯಾಂ ಪ್ರತ್ಯಹಂ ಬಂಧನಂ ಗತೌ ।
ತೌ ಸಂಪೂಜ್ಯ ವಿಧಾನೇನ ದದೌ ತಾಭ್ಯಾಂ ಚ ಕನ್ಯಕೇ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಸೇನಾಪತಿಗಳಾದ ದೇಶರಾಜ ವತ್ಸರಾಜ ಎಂಬ ಸಹೋದರರಿಬ್ಬರೂ ಕಾಲಿಯನನ್ನು ಈ ಪ್ರಕಾರ ಸೋಲಿಸಿದ ಮೇಲೆ ದಲವಾಹನನೆಂಬ ರಾಜನ ಗೋಪಾಲಕವೆಂಬ ರಾಷ್ಟ್ರಕ್ಕೆ ಹೋದರು.

೨. ಅಲ್ಲಿ ಅನೇಕ ರಾಜರು ಸೇರಿದ್ದರು. ಮತ್ತು ಸಹಸ್ರಚಂಡೀಹೋಮವನ್ನು ನಡೆಸಲು ಸಿದ್ಧಮಾಡಿದ್ದರು. ಆ ಚಂಡೀಹೋಮಕ್ಕಾಗಿ ತಂದಿದ್ದ ಎರಡು ಕೋಣಗಳನ್ನು ಇತರ ರಾಜರು ಹಿಡಿಯಲು ಅಸಮರ್ಥರಾದುದರಿಂದ ಕೊನೆಗೆ ಈ ಸಹೋದರರು ಅದನ್ನು ಹಿಡಿದು ಕಟ್ಟಿದರು.

೩-೪. ಇವರು ಹಿಡಿದು ಕಟ್ಟಿದ ಕೋಣಗಳನ್ನು ದಲವಾಹನನ ಮಕ್ಕಳಾದ ಇಬ್ಬರು ರಾಜಪುತ್ರಿಯರೂ ಈ ಮುಂಚೆ ಹಿಡಿದು ಕಟ್ಟುತ್ತಿದ್ದರು. ಆದ್ದರಿಂದ ಈ

ದೇವಕೀಂ ದೇಶರಾಜಾಯ ಬ್ರಾಹ್ಮೀಂ ತಸ್ಯಾನುಜಾಯ ವೈ ।
ದದೌ ದುರ್ಗಾಜ್ಞಯಾ ರಾಜಾ ರೂಪಯೌವನಶಾಲಿನೀಂ ॥ ೪ ॥

ಲಕ್ಷಾವರ್ತಿಂ ತಥಾ ವೇಶ್ಯಾಂ ಗೀತನೃತ್ಯವಿಶಾರದಾಂ ।
ಕನ್ಯಯೋಶ್ಚ ಸಖೀಂ ರಮ್ಯಾಂ ಮೇಘಮಲ್ಲಾರರಾಗಿಣೀಂ ॥ ೫ ॥

ಶತಂ ಗಜಾನ್ರಥಾನ್ಪಂಚ ಹಯಾಂಶ್ಚೈವ ಸಹಸ್ರಕಾನ್ ।
ಚತ್ವಾರಿಂಶಚ್ಚ ಶಿಬಿಕಾಃ ಪ್ರದದೌ ದಲವಾಹನಃ ॥ ೬ ॥

ಬಹುದ್ರವ್ಯಯುತಾಂ ಕನ್ಯಾಂ ದಾಸದಾಸೀಸಮನ್ವಿತಾಂ ।
ಉದೂಹ್ಯ ವೇದವಿಧಿನಾ ಪ್ರಾಪತುಶ್ಚ ಮಹಾವತೀಂ ॥ ೭ ॥

---

ಕೋಣಗಳನ್ನು ಹಿಡಿದು ಕಟ್ಟಿದವರಿಗೇ ತನ್ನ ಪುತ್ರಿಯರನ್ನು ಕೊಡಬೇಕೆಂದು ಆ ರಾಜನು ಉದ್ದೇಶಮಾಡಿಕೊಂಡಿದ್ದನು. ಈ ಉದ್ದೇಶದಂತೆ ರಾಜನಾದ ದಲವಾಹನನು ದೇಶರಾಜ ವತ್ಸರಾಜ ಇಬ್ಬರನ್ನೂ ಮರ್ಯಾದೆಯಿಂದ ಸತ್ಕರಿಸಿ ಅವರಿಗೆ ತನ್ನ ಪುತ್ರಿಯರನ್ನು ಕೊಟ್ಟು ಮದುವೆಮಾಡಲು ನಿಶ್ಚಯಿಸಿದನು.

೫. ದೇವಕಿಯೆಂಬ ಪುತ್ರಿಯನ್ನು ದೇಶರಾಜನಿಗೂ, ಬ್ರಾಹ್ಮೀ ಎಂಬವಳನ್ನು ಅವನ ತಮ್ಮನಾದ ವತ್ಸರಾಜನಿಗೂ, ದುರ್ಗಾದೇವಿಯ ಅಪ್ಪಣೆಯಂತೆ ಕೊಟ್ಟು ಮದುವೆಮಾಡಿದನು. ಆ ಪುತ್ರಿಯರು ರೂಪವತಿಯರೂ ಯುವತಿಯರೂ ಆಗಿದ್ದರು.

೬-೭ ಈ ರಾಜಪುತ್ರಿಯರ ಸಖಿಯೂ, ಸಂಗೀತ ನರ್ತನಗಳಲ್ಲಿ ನಿಪುಣೆಯೂ, ಸುಂದರಿಯೂ, ಮೇಘಮಲ್ಲಾರ ರಾಗದಲ್ಲಿ ವಿಶೇಷ ಅಭಿರುಚಿಯುಳ್ಳವಳೂ ಆದ, ಲಕ್ಷಾವರ್ತಿ ಎಂಬ ವೇಶ್ಯೆ ಮತ್ತು ನೂರು ಆನೆಗಳು, ಐದು ರಥಗಳು, ಸಾವಿರ ಕುದುರೆಗಳು, ನಲವತ್ತು ಮೇನೆಗಳು ಇವನ್ನು ದಲವಾಹನನು ತನ್ನ ಪುತ್ರಿಯರಿಗೆ ಬಳುವಳಿಯಾಗಿ ಕೊಟ್ಟನು. ರಾಜಪುತ್ರಿಯರಿಬ್ಬರನ್ನೂ ಶಾಸ್ತ್ರೋಕ್ತವಾಗಿ ವಿವಾಹವಾದ ದೇಶರಾಜ, ವತ್ಸರಾಜ, ಈ ಇಬ್ಬರೂ ಅಪಾರವಾದ ದ್ರವ್ಯ ದಾಸದಾಸೀ ಜನಸಮೂಹ, ಇವುಗಳ ಸಮೇತ ಮಹಾವತೀನಗರಕ್ಕೆ ಬಂದರು.

ಮಲನಾ ತಾಂ ವಧೂಂ ದೃಷ್ಟ್ವಾ ತಸ್ಯೈ ಗ್ರೈವೇಯಕಂ ದದೌ ।
ಬ್ರಾಹ್ಮ್ಯೈ ಷೋಡಶಶೃಂಗಾರಂ ತಥಾ ದ್ವಾದಶಭೂಷಣಂ ॥ ೮ ॥

ರಾಜಾ ಚ ಪರಮಾನಂದೀ ದೇಶರಾಜಾಯ ಶೂರಿಣೇ ।
ದದೌ ದಶಪುರಂ ರಮ್ಯಂ ನಾನಾಜನನಿಷೇವಿತಂ ॥ ೯ ॥

ಊಷತುಸ್ತತ್ರ ತೌ ವೀರೌ ರಾಜಮಾನ್ಯೌ ಮಹಾಬಲೌ ।
ಏತಸ್ಮಿನ್ನಂತರೇ ಜಾತೋ ದೇವಸಿಂಹೋ ಹರಾಜ್ಞಯಾ ॥ ೧೦ ॥

ಜಾತೇ ತಸ್ಮಿನ್ಕುಮಾರೇ ತು ದೇವಕೀಗರ್ಭಮಾದಧೌ ।
ದಾಸಶ್ರುತಾ ಪತೇರ್ದೇವೀ ಸುಷುವೇ ಪುತ್ರಮೂರ್ಜಿತಂ ॥ ೧೧ ॥

ಗೌರಾಂಗಂ ಕಮಲಾಕ್ಷಂ ಚ ದೀಪ್ಯಮಾನಂ ಸ್ವತೇಜಸಾ ।
ತದಾನಂದಮಯೋ ದೇವಃ ಶಕ್ರಃ ಸುರಗಣೈಃ ಸಹ ॥ ೧೨ ॥

---

೮-೯. ಆ ನಗರಾಧಿಪತಿಯಾದ ಪರಿಮಳರಾಜನ ಪತ್ನಿಯೆನಿಸಿದ ಮಲನಾ ದೇವಿಯು ಆ ಕುಮಾರಿಯರನ್ನು ನೋಡಿ ಸಂತೋಷಗೊಂಡು ದೇವಕಿ ಎಂಬ ಕುಮಾರಿಗೆ ಕಂಠಹಾರವನ್ನು ಕೊಟ್ಟಳು. ಬ್ರಾಹ್ಮಿಗೆ ಹದಿನಾರು ಶೃಂಗಾರ ದ್ರವ್ಯಗಳನ್ನೂ ಮತ್ತು ಹನ್ನೆರಡು ಆಭರಣಗಳನ್ನೂ ಕೊಟ್ಟಳು. ರಾಜನಾದ ಪರಿಮಳನು ಪರಮಾನಂದ ಯುಕ್ತನಾಗಿ ಶೂರನಾದ ದೇಶರಾಜನಿಗೆ ಸುಂದರವೂ ಜನಭರಿತವೂ ಆದ ಹತ್ತು ನಗರಗಳನ್ನು ಕೊಟ್ಟನು.

೧೦. ವೀರರಾದ ರಾಜರುಗಳಿಂದ ಸನ್ಮಾನಾರ್ಹರಾಗಿ ಶೂರರೆನಿಸಿಕೊಂಡು ಇವರು ಅಲ್ಲಿ ವಾಸಿಸುತ್ತಿದ್ದರು. ಈ ಸನ್ನಿವೇಶದಲ್ಲಿ ಪರಮೇಶ್ವರನ ಅಪ್ಪಣೆಯಿಂದ ದೇವಸಿಂಹನೆಂಬುವನು ಅವರಿಗೆ ಜನಿಸಿದ್ದನು.

೧೧ ಆ ದೇವಸಿಂಹನು ಹುಟ್ಟಿದ ಮೇಲೆ ದೇವಕಿಯು ಗರ್ಭಿಣಿಯಾದಳು. ದಾಸಿಯರು ಹೊಗಳುತ್ತಿರಲು ದೇವಕಿಯು ಪತಿಗೆ ಸಮಾನವಾದ ಪರಾಕ್ರಮವುಳ್ಳ ಮಗನನ್ನು ಪ್ರಸುವಿಸಿದಳು.

೧೨-೧೩. ಆ ಹುಡುಗನು ಶುಭ್ರವಾದ ಅವಯವ, ಕಮಲದಂತಿರುವ ಕಣ್ಣು, ಜಗತ್ತನ್ನೇ ಬೆಳಗುವಂತಹ ಕಾಂತಿ, ಇವು ಉಳ್ಳವನಾಗಿದ್ದನು. ಆ ಬಾಲಕನು ಹುಟ್ಟಿ

ಶಂಖಶಬ್ದಂ ಚಕಾರೋಚ್ಚೈರ್ಜಯಶಬ್ದಂ ಪುನಃಪುನಃ ।
ದಿಶಃ ಪ್ರಫುಲ್ಲಿತಾಶ್ಚಾಸನ್ಗ್ರಹಾಃ ಸರ್ವೇ ತಥಾ ದಿವಿ ॥ ೧೩ ॥

ಆಯಾತಾ ಬಹವೋ ವಿಪ್ರಾ ವೇದಶಾಸ್ತ್ರಪರಾಯಣಾಃ ।
ಚಕ್ರುಸ್ತೇ ಜಾತಕರ್ಮಾಸ್ಯ ನಾಮಕರ್ಮ ತಥಾವಿಧಂ ॥ ೧೪ ॥

ರಾಮಾಂಶಂ ತಂ ಶಿಶುಂ ಜ್ಞಾತ್ವಾ ಪ್ರಸನ್ನವದನಂ ಶುಭಂ ।
ಭಾದ್ರಕೃಷ್ಣತಿಥೌ ಷಷ್ಠ್ಯಾಂ ಚಂದ್ರವಾರೇಽರುಣೋದಯೇ ॥ ೧೫ ॥

ಸಂಜಾತಃ ಕೃತ್ತಿಕಾಭೇ ಚ ಪಿತೃವಂಶಯಶಸ್ಕರಃ ।
ಆಹ್ಲಾದನಾಮ್ನಾ ಹ್ಯಭವತ್ಪ್ರಖ್ಯಾತಶ್ಚ ಮಹೀತಲೇ ॥ ೧೬ ॥

ಮಾಸಾನ್ತೇ ಚ ಸುತೇ ಜಾತೇ ಬ್ರಾಹ್ಮೀ ಪುತ್ರಮಜೀಜನತ್ ।
ಧರ್ಮಜಾಂಶಂ ತಥಾ ಗೌರಂ ಮಹಾಬಾಹುಂ ಸುವಕ್ಷಸಂ ॥ ೧೭ ॥

---

ದಾಗ ಇಂದ್ರನು ಸಂತೋಷಯುಕ್ತನಾಗಿ ದೇವಗಣದೊಡನೆ ಗಟ್ಟಿಯಾಗಿ ಶಂಖಧ್ವನಿ ಮಾಡಿ, ಪುನಃ ಪುನಃ ಜಯಶಬ್ದವನ್ನು ಮಾಡಿದನು. ಆ ಕಾಲದಲ್ಲಿ ದಿಕ್ಕುಗಳು ನಿರ್ಮಲವಾದುವು. ಅಂತರಿಕ್ಷದ ಗ್ರಹಗಳೆಲ್ಲವೂ ವಿಕಸಿತವಾದಂತೆ ಕಾಣುತ್ತಿದ್ದುವು

೧೪-೧೫ ವೇದಾಧ್ಯಯನಸಂಪನ್ನರಾದ ಅನೇಕಮಂದಿ ಬ್ರಾಹ್ಮಣೋತ್ತಮರು ಬಂದು, ಮಗುವಿಗೆ ಜಾತಕರ್ಮ ನಾಮಕರಣಾದಿಗಳನ್ನು ವಿಧಿಪ್ರಕಾರ ನೆರವೇರಿಸಿದರು. ಭಾದ್ರಪದ ಬಹುಳ ಷಷ್ಠಿ ಸೋಮವಾರ ಅರುಣೋದಯದ ಸಮಯದಲ್ಲಿ, ಕೃತ್ತಿಕಾ ನಕ್ಷತ್ರದಲ್ಲಿ ಹುಟ್ಟಿದ ಈ ಮಗುವು ಬಲರಾಮನ ಅಂಶದಿಂದ ಕೂಡಿದುದು ಎಂದು ನಿಶ್ಚಯಿಸಿದರು.

೧೬. ತಂದೆಯ ವಂಶಕ್ಕೆ ಯಶಸ್ಸನ್ನು ತರುವುದೂ, ಸುಂದರವಾದ ಮುಖವುಳ್ಳದೂ ಆದ ಈ ಮಗುವಿಗೆ ಆಹ್ಲಾದನೆಂದು ಹೆಸರಿಟ್ಟರು. ಅವನೂ ಅದೇ ಪ್ರಕಾರ ಭೂಮಿಯಲ್ಲಿ ಪ್ರಸಿದ್ಧಿಹೊಂದಿದನು.

೧೭. ಈ ಹುಡುಗನಿಗೆ ಒಂದುತಿಂಗಳು ತುಂಬುತ್ತಲೆ ಬ್ರಾಹ್ಮಿಯು ಒಂದು ಗಂಡುಮಗುವನ್ನು ಹೆತ್ತಳು. ಧರ್ಮರಾಜನ ಅಂಶದಿಂದ ಜನಿಸಿದ ಈ ಮಗುವು ಶುಭ್ರಶರೀರ, ಆಜಾನುಬಾಹು, ವಿಶಾಲವಾದ ಎದೆ, ಇವನ್ನು ಉಳ್ಳದ್ದಾಗಿತ್ತು.

ತದಾ ಚ ಬ್ರಾಹ್ಮಣಾಃ ಸರ್ವೇ ದೃಷ್ಟ್ವಾ ಬಾಲಂ ಶುಭಾನನಂ ।
ಪ್ರಸನ್ನವದನಂ ಚಾರು ಪದ್ಮಚಿಹ್ನಪದಸ್ಥಿತಂ ॥ ೧೮ ॥

ತೈರ್ದ್ವಿಜೈಶ್ಚ ಕೃತೋ ನಾಮ್ನಾ ಬಲಖಾನಿರ್ಮಹಾಬಲಃ ।
ವರ್ಷಾನ್ತೇ ವತ್ಸಜೇ ಜಾತೇ ಮೂಲಗಂಡಾಂತಸಂಭವಃ ॥ ೧೯ ॥

ಚಾಮುಂಡೋ ದೇವಕಿಸುತೋ ನಿಜವಂಶ ಭಯಂಕರಃ ।
ಜನಿತಾರಂ ತತಸ್ತ್ಯಾಜ್ಯ ಇತ್ಯೂಚುರ್ದ್ವಿಜಸತ್ತಮಾಃ
ನ ತತ್ಯಾಜ ಸುತಂ ರಾಜಾ ಬಾಲತ್ವೇಽಪಿ ದಯಾಪರಃ ॥ ೨೦ ॥

ತ್ರಿವರ್ಷಾಂತೇ ಗತೇ ತಸ್ಮಿನ್ಬಲಖಾನೌ ಸುತೇ ಶುಭೇ ।
ಶೂದ್ರ್ಯಾಂ ಜಾತಃ ಶಿಖಂಡ್ಯಂಶೋ ರೂಪಣೋ ನಾಮ ವಿಶ್ರುತಃ ॥ ೨೧ ॥

ವತ್ಸರಾಜೋ ಯಯೌ ದೇಶೇ ಗುರ್ಜರೇ ಚ ಮದಾಲಸಾಂ ।
ಸ ಸುತಾಂ ಚ ಸಮಾದಾಯ ದಿನೇ ತಸ್ಮಿನ್ಸಮಾಗತಃ ॥ ೨೨ ॥

---

೧೮. ಮುಗುಳುನಗೆಯಿಂದ ಕೂಡಿ ಸುಂದರವಾಗಿರುವ ಈ ಮಗುವಿನ ಮುಖವನ್ನೂ, ಕಾಲಿನಲ್ಲಿ ಸುಂದರವಾದ ಪದ್ಮಚಿಹ್ನೆಯಿರುವುದನ್ನೂ, ಬ್ರಾಹ್ಮಣೋತ್ತಮರು ನೋಡಿ, ಮಹಾ ಬಲಶಾಲಿಯಾಗುವ ಈ ಮಗುವಿಗೆ ಬಲಖಾನಿ ಎಂದು ಹೆಸರಿಟ್ಟರು.

೧೯. ಮಹಾಬಲಶಾಲಿಯೆನಿಸಿದ ವತ್ಸರಾಜಕುಮಾರನಾದ ಇವನಿಗೆ ಒಂದು ವರ್ಷತುಂಬುತ್ತಲೆ ತನ್ನ ವಂಶಕ್ಕೆ ಭಯಂಕರ ಗಂಡಾಂತರಯುಕ್ತವಾದ ಮೂಲಾ ನಕ್ಷತ್ರದಲ್ಲಿ ದೇವಕಿಗೆ ಚಾಮುಂಡ ಎಂಬ ಮಗುವು ಜನಿಸಿತು. ಜ್ಯೋತಿಷ್ಕರು ಈ ಮಗುವನ್ನು ಎಲ್ಲಾದರೂ ದೂರ ತ್ಯಜಿಸಿಬಿಡಬೇಕೆಂದು ಹೇಳಿದರು.

೨೦-೨೧. ದಯಾಳುವಾದ ರಾಜನು ಅದಕ್ಕೆ ಒಪ್ಪದೆ ಮಗುವಿನ ಮೇಲಿನ ಕರುಣೆಯಿಂದ ಅದನ್ನು ತ್ಯಜಿಸಲಿಲ್ಲ. ಸುಂದರನಾದ ಬಾಲಕನಿಗೆ ಮೂರುವರ್ಷಗಳು ತುಂಬುತ್ತಲೆ, ಲಕ್ಷಾವರ್ತಿಯೆಂಬ ವೇಶ್ಯೆಯಲ್ಲ ಶಿಖಂಡಿಯ ಅಂಶದಿಂದ ಕೂಡಿದ ರೂಪಣನೆಂಬ ಕುಮಾರನು ಹುಟ್ಟಿದನು.

೨೨. ಈ ಮಧ್ಯೆ ವತ್ಸರಾಜನು ಗುರ್ಜರ ರಾಷ್ಟ್ರಕ್ಕೆ ಹೋಗಿದ್ದು, ಅಲ್ಲಿಯ ರಾಜನ ಮಗಳಾದ ಮದಾಲಸೆಯನ್ನು ಒಡಗೊಂಡು ಹಿಂದಿರುಗಿದ್ದನು.

ಪ್ರಾಪ್ತೇ ತಸ್ಮಿನ್ವತ್ಸರಾಜೇ ಜಂಬುಕಃ ಸ್ವಬಲೈರ್ವೃತಃ ।
ಸಪ್ತಲಕ್ಷೈಶ್ಚ ಸಂಪ್ರಾಪ್ತೋ ಬಾಹುಶಾಲೀ ಯತೇಂದ್ರಿಯಃ ॥ ೨೩ ॥

ರುರೋಧ ನಗರೀಂ ಸರ್ವಾಂ ರಾಜ್ಞಃ ಪರಿಮಲಸ್ಯ ವೈ ।
ತ್ರಿಲಕ್ಷೈಶ್ಚ ಮಹಾವತ್ಯೈ ಸಾರ್ಧಂ ತೌ ಜಗ್ಮತುಃ ಪುರಾತ್ ॥ ೨೪ ॥

ಮಾಹಿಷ್ಮತ್ಯೈಃ ಸಪ್ತಲಕ್ಷೈಃ ಸಾರ್ಧಂ ಯುದ್ಧಮಭೂನ್ಮಹತ್ ।
ತ್ರಿರಾತ್ರಂ ದಾರುಣಂ ಘೋರಂ ಯಮರಾಷ್ಟ್ರವಿವರ್ಧನಂ ॥ ೨೫ ॥

ಶಿವಸ್ಯ ವರದಾನೇನ ಭ್ರಾತ್ರೋರ್ಜಾತಃ ಪರಾಜಯಃ ।
ಬದ್ಧ್ವಾ ತೌ ಜಂಬುಕೋ ರಾಜಾ ಲುಂಠಯಿತ್ವಾ ಮಹಾವತೀಂ ॥ ೨೬ ॥

ವೇಶ್ಯಾಂ ಲಕ್ಷಾರತಿಂ ತಸ್ಯ ತಂ ಹರಿಂ ತದ್ಗಜಂ ತಥಾ ।
ಗ್ರೈವೇಯಕಂ ತಥಾ ಹಾರಂ ಮಣಿರತ್ನವಿಭೂಷಿತಂ ॥ ೨೭ ॥

---

೨೩. ಈರೀತಿ ವತ್ಸರಾಜನು ತನ್ನ ಮಗಳನ್ನು ಹಾರಿಸಿಕೊಂಡು ಹೋಗಲಾಗಿ ಜಿತೇಂದ್ರಿಯನೂ ವೀರನೂ ಆದ ಜಂಬುಕನು ತನ್ನ ಏಳುಲಕ್ಷ ಸೇನೆಯೊಡನೆ ಬಂದು ಪರಿಮಳನ ರಾಜಧಾನಿಯನ್ನು ಮುತ್ತಿದನು.

೨೪-೨೫ ವತ್ಸರಾಜ ದೇಶರಾಜರು ಮಹಾವತೀರಾಜ್ಯದ ಮೂರುಲಕ್ಷ ಸೇನೆಯೊಡನೆ ರಾಜಧಾನಿಯಿಂದ ಹೊರಟು ಏಳುಲಕ್ಷ ಸಂಖ್ಯೆಯುಳ್ಳ ಮಾಹಿಷ್ಮತೀ ಸೇನೆಯ ಮೇಲೆ ಬಿದ್ದು ಹೋರಾಡ ತೊಡಗಿ ಮೂರುದಿನ ಹಗಲೂ ರಾತ್ರಿ ಅವಿಚ್ಛಿನ್ನವಾಗಿ ಘೋರ ಯುದ್ಧಮಾಡಿದರು. ಇದರಿಂದ ಯಮಲೋಕವು ಭರ್ತಿಯಾಗುವಷ್ಟು ಮಟ್ಟಿಗೆ ಅನೇಕರು ಮೃತರಾದರು.

೨೬. ಮಾಹಿಷ್ಮತಿಯ ಜಂಬುಕರಾಜನು ಪರಮೇಶ್ವರನ ಅನುಗ್ರಹ ಪಡೆದಿದ್ದನಾದುದರಿಂದ ಸಹೋದರರಾದ ವತ್ಸರಾಜ ದೇಶರಾಜರಿಬ್ಬರನ್ನೂ ಸೋಲಿಸಿ, ಕೈಸೆರೆ ಹಿಡಿದನು.

೨೭. ಅಷ್ಟೇಅಲ್ಲದೆ ಆ ಮಹಾವತೀನಗರಕ್ಕೆ ನುಗ್ಗಿ ಲೂಟಿಹೊಡೆದು ಆ ರಾಜನ ವೇಶ್ಯೆಯಾದ ಲಕ್ಷಾವರ್ತಿಯನ್ನೂ ಅವನ ಕುದುರೆ, ಆನೆ, ಇವನ್ನೂ ಮಣಿರತ್ನಗಳಿಂದ ಯುಕ್ತವಾದ ಕಂಠಹಾರವನ್ನೂ ವಶಪಡಿಸಿಕೊಂಡನು.

ಗೃಹೀತ್ವಾ ನಗರೀಂ ಸರ್ವಾಂ ಭಸ್ಮಯಿತ್ವಾ ಗೃಹಂ ಯಯೌ ।
ಯೇ ಗುಪ್ತಾ ಭೂತಲೇ ಶೂರಾಸ್ತೇ ಶೇಷಾಶ್ಚ ತದಾSಭವನ್ ॥ ೨೮ ॥

ದುರ್ಗೇಷು ಯಾನಿ ರತ್ನಾನಿ ತಾನಿ ಪ್ರಾಪ್ಯ ಮುದಾ ಯಯೌ ।
ಲುಂಠಿತೇ ನಗರೇ ತಸ್ಮಿನ್ದೇವಕೀಗರ್ಭಮುತ್ತಮಂ ॥ ೨೯ ॥

ಕೃಷ್ಣಾಂಶಂ ಸಪ್ತಮಾಸ್ಯಂ ಹಿ ಚಾದಧಾದ್ದೈವತಪ್ರಿಯಾ ।
ಜ್ಞಾತ್ವಾ ಕುಲಾಧಮಂ ಪುತ್ರಂ ಚಾಮುಂಡಂ ದೇವಕೀ ಸತೀ ॥ ೩೦ ॥

ಕಲ್ಪಕ್ಷೇತ್ರಂ ಸಮಾಗಮ್ಯ ಕಾಲಿಂದ್ಯಾಂ ತಮಪಾತಯತ್ ।
ಯೋಜನಾಂತೇ ಗತೇ ತಸ್ಮಿನ್ಮಹೀರಾಜಪುರೋಹಿತಃ ॥ ೩೧ ॥

ಸಾಮಂತೋ ನಾಮ ತಂ ಗೃಹ್ಯ ಶ್ವಶುರಾಲಯಮಾಯಯೌ ।
ಜಾತಸ್ತು ದಶಮಾಸಾಂತೇ ರಾತ್ರೌ ಘೋರತಮೋವೃತೇ ॥ ೩೨ ॥

---

೨೮. ಬಳಿಕ ಆ ನಗರಕ್ಕೆ ಬೆಂಕಿಹತ್ತಿಸಿ ಅನಂತರ ತನ್ನ ಶಿಬಿರಕ್ಕೆಹೋದನು ಈ ಯುದ್ಧದಿಂದ ಒಡಿಹೋಗಿ ತಲೆತಪ್ಪಿಸಿಕೊಂಡವರೂ, ಯುದ್ಧದಲ್ಲಿ ಕಳೆದು ಉಳಿದವರೂ ಮಾತ್ರ ಅಲ್ಲಿ ನಿಂತರು.

೨೯. ಜಂಬುಕನು ದುರ್ಗದಲ್ಲಿ ಸಿಕ್ಕಿದ ರತ್ನಾಭರಣಗಳನ್ನೆಲ್ಲಾ ದೋಚಿಕೊಂಡು ತನ್ನ ಕಡೆಯುವರೊಡನೆ ಹರ್ಷದಿಂದ ಹಿಂದಿರುಗಿದನು. ಈರೀತಿ ನಗರವು ಲೂಟಿಯಾದಾಗ ರಾಜಪತ್ನಿಯಾದ ದೇವಕಿಯು ಕೃಷ್ಣಾಂಶನನ್ನು ತಳೆದ ಏಳು ತಿಂಗಳು ಗರ್ಭಿಣಿಯಾಗಿದ್ದಳು. ಇವಳು ದೇವತೆಗಳಲ್ಲಿ ಭಕ್ತಿಯುಳ್ಳವಳಾಗಿದ್ದಳು ಇದಕ್ಕೆ ಹಿಂದೆ ಗರ್ಭಿಣಿಯಾಗಿದ್ದಾಗ ಮೂಲಾನಕ್ಷತ್ರದಲ್ಲಿ ಜನಿಸಿದ ಚಾಮುಂಡನು ವಂಶನಾಶಕನಾಗುವ ನೆಂಬದಾಗಿ ದೈವಜ್ಞರು ಹೇಳಿದ್ದುದನ್ನು ಗ್ರಹಿಸಿದ್ದಳು.

೩೦. ಆ ಕಾರಣದಿಂದ ಪತಿವ್ರತೆಯಾದ ಆಕೆಯು ಕಲ್ಪವೆಂಬ ಕ್ಷೇತ್ರಕ್ಕೆ ಬಂದು, ಅಲ್ಲಿ ಆ ಹುಡುಗನನ್ನು ಕಾಲಿಂದೀನದಿಯಲ್ಲಿ ತೇಲಿಬಿಟ್ಟಳು. ಅದು ತೇಲಿಕೊಂಡು ಒಂದು ಯೋಜನದೂರ ಹೋಗುವುದರೊಳಗೆ ಪೃಥ್ವೀರಾಜನ ಪುರೋಹಿತನಾದ ಸಾಮಂತ ನೆಂಬವನು ಅದನ್ನುಕಂಡನು.

೩೨-೩೩. ಕೂಡಲೆ ಆ ಮಗುವನ್ನು ನದಿಯಿಂದ ಈಚೆಗೆ ತೆಗೆದು ಉಪಚರಿಸಿ ತನ್ನ ಮಾವನ ಮನೆಗೆ ಎತ್ತಿಕೊಂಡುಹೋದನು ಈರೀತಿ ಚಾಮುಂಡನನ್ನು

ಭಾದ್ರಕೃಷ್ಣಾಷ್ಟಮೀಸೌಮ್ಯೇ ಬ್ರಾಹ್ಮನಕ್ಷತ್ರಸಂಯುತೇ ।
ಪ್ರಾದುರಾಸೀಜ್ಜಗನ್ನಾಥೋ ದೇವಕ್ಯಾಂ ಚ ಮಹೋತ್ತಮಃ ॥ ೩೩ ॥

ಶ್ಯಾಮಾಂಗಃ ಸ ಚ ಪದ್ಮಾಕ್ಷ ಇಂದ್ರನೀಲಮಣಿದ್ಯುತಿಃ ।
ವಿಮಾನಾನಾಂ ಸಹಸ್ರಾಣಾಂ ಪ್ರಕಾಶಃ ಸಮಜಾಯತ ॥ ೩೪ ॥

ವಿಸ್ಮಿತಾ ಜನನೀ ತತ್ರ ದೃಷ್ಟ್ವಾ ಬಾಲಂ ತಮದ್ಭುತಂ ।
ನಗರೇ ಚ ಮಹಾಶ್ಚರ್ಯಂ ಜಾತಂ ಸರ್ವೇ ಸಮಾಯಯುಃ ॥ ೩೫ ॥

ಉದಯಃ ಕಿಮಹೋ ಜಾತೋ ದೇವಾನಾಂ ಸೂರ್ಯರೂಪಕಃ ।
ಇತ್ಯಾಶ್ಚರ್ಯಜುಷಾಂ ತೇಷಾಂ ವಾಗುವಾಚಾಶರೀರಿಣೀ ॥ ೩೬ ॥

ಕೃಷ್ಣಾಂಶೋ ಭೂತಲೇ ಜಾತಃ ಸರ್ವಾನಂದಪ್ರದಾಯಕಃ ।
ಸ ನಾಮ್ನೋದಯಸಿಂಹೋ ಹಿ ಸರ್ವಶತ್ರುಪ್ರಕಾಶಹಾ ॥ ೩೭ ॥

---

ನದಿಗೆ ಎಸೆದ ಹತ್ತುತಿಂಗಳು ಕಳೆದಮೇಲೆ ಭಾದ್ರಪದ ಬಹುಳ ಅಷ್ಟಮೀ ಬುಧವಾರ ರೋಹಿಣೀನಕ್ಷತ್ರ ಯುಕ್ತವಾಗಿರಲು ಗಾಢಾಂಧಕಾರ ಕವಿದ ಅರ್ಧರಾತ್ರಿಯಲ್ಲಿ ಜಗದೊಡೆಯನೂ, ಸರ್ವಶ್ರೇಷ್ಠನೂ ಆದ ಶ್ರೀ ಕೃಷ್ಣಾಂಶನು ಅವತರಿಸಿದನು.

೩೪. ಆ ಬಾಲಕನು ನೀಲವಾದ ಮೈಬಣ್ಣವುಳ್ಳವನೂ, ಪದ್ಮದಂತೆ ಕಣ್ಣುಳ್ಳವನೂ, ಇಂದ್ರನೀಲಮಣಿಯಂತೆ ಕಾಂತಿಯುಕ್ತನೂ, ಸಹಸ್ರ ಸೂರ್ಯಪ್ರಕಾಶನೂ ಆಗಿದ್ದನು

೩೫. ಈರೀತಿಯಾಗಿರುವ ಮಗನ ದಿವ್ಯತೇಜಸ್ಸನ್ನು ನೋಡಿ ತಾಯಿ ವಿಸ್ಮಿತೆಯಾದಳು. ಪುರಜನರೆಲ್ಲರೂ ಆಶ್ಚರ್ಯದಿಂದ ಮಗುವನ್ನು ನೋಡುವುದಕ್ಕೆ ಬಂದರು.

೩೬. ಹೀಗೆ ಬಂದವರೆಲ್ಲರೂ ಮಗುವನ್ನು ನೋಡಿ ಇದೇನು! ದೇವತೆಗಳಲ್ಲೆಲ್ಲಾ ಅತ್ಯಂತ ತೇಜಸ್ವಿಯಾದ ಸೂರ್ಯನೇ ಏನಾದರೂ ಅವತರಿಸಿದನೋ ಎಂದು ವಿಸ್ಮಯಪಡುತ್ತಿದ್ದರು.

೩೭. ಆಗ ಭೂಮಿಯಲ್ಲಿ ಸಕಲರಿಗೂ ಆನಂದವನ್ನುಂಟುಮಾಡುವ ಕೃಷ್ಣನ ಅಂಶವೇ ಅವತರಿಸಿದೆ. ಇದು ಮುಂದೆ ಉದಯಸಿಂಹನೆಂಬ ಹೆಸರಿನಿಂದ ಪ್ರಸಿದ್ಧ ಹೊಂದಿ ಸಕಲಶತ್ರುಗಳನ್ನೂ ಧ್ವಂಸ ಮಾಡುವುದು" ಎಂದು ಅಶರೀರವಾಣಿ ಕೇಳಿಸಿತು.

ಇತ್ಯಾಕಾಶವಚಃ ಶ್ರುತ್ವಾ ತೇ ಪರಂ ಹರ್ಷಮಾಯಯುಃ ।
ಯಸ್ಮಿನ್ಕಾಲೇ ಸುತೋ ಜಾತಸ್ತದಾ ಚ ಮಲನಾ ಸತೀ ॥ ೩೮ ॥

ಶ್ಯಾಮಾಂಗಂ ಸುದರಂ ಬಾಲಂ ಸರ್ವಲಕ್ಷಣಲಕ್ಷಿತಂ ।
ಸುಷುವೇ ಪರಮೋದಾರಂ ಫಾಲ್ಗುನಾಂಶಂ ಶಿವಾಜ್ಞಯಾ ॥ ೩೯ ॥

ತದಾ ತು ನಗರೀ ಸರ್ವಾ ಹರ್ಷಭೂತಾ ಬಭೂವ ಹ ।
ಷಷ್ಠಾಹನಿ ಸುತೇ ಜಾತೇ ಬ್ರಹ್ಮಾನಂದಗುಣಾಕರೇ ॥ ೪೦ ॥

ಬ್ರಾಹ್ಮೀ ತು ಸುಷುವೇ ಪುತ್ರಂ ಪಾರ್ಷದಾಂಶಂ ಮಹಾಬಲಂ ।
ಶ್ಯಾಮಾಂಗಂ ಕಮಲಾಕ್ಷಂ ಚ ದೃಢಸ್ಕಂಧಂ ಮಹಾಭುಜಂ ॥ ೪೧ ॥

ಬ್ರಾಹ್ಮಣಾಶ್ಚ ತದಾಗತ್ಯ ಜಾತಕರ್ಮ ವ್ಯಕಾರಯನ್ ।
ಸುಖಖಾನಿರ್ದ್ವಿಜೈರ್ನಾಮ್ನಾ ಕೃತಸ್ತು ಗಣಕೋತ್ತಮೈಃ ॥ ೪೨ ॥

---

೩೮-೩೯ ಈ ಅಶರೀರವಾಣಿಯನ್ನು ಕೇಳಿ ಎಲ್ಲರೂ ತುಂಬ ಸಂತೋಷ ಪಟ್ಟರು. ಈ ಮಗು ಹಟ್ಟಿದವೇಳೆಯಲ್ಲಿಯೇ ಅತ್ತ ಪತಿವ್ರತೆಯಾದ ಮಲನಾ ದೇವಿಯೂ ಸಹ, ಸಕಲ ಲಕ್ಷಣಗಳಿಂದ ಕೂಡಿ ಸುಂದರನೂ, ಶ್ಯಾಮಾಂಗನೂ, ಆದ ಬಾಲಕನನ್ನು ಪ್ರಸುವಿಸಿದಳು. ಇವನು ಬಹು ಉದಾರಿ ಎನಿಸಿ ಈಶ್ವರನ ಆಜ್ಞೆಯಂತೆ ಅರ್ಜುನಾಂಶದಿಂದ ಜನಿಸಿದನು.

೪೦-೪೧. ಆಗ ಊರಿಗೆ ಊರೇ ಸಂತೋಷಗೊಂಡಿತು. ಬ್ರಹ್ಮಾನಂದ ದಾಯಕವಾದ ಗುಣಗಳಿಗೆ ಗಣಿಯೆನಿಸಿದ ಈ ಮಗನು ಹುಟ್ಟಿ ಆರು ದಿನವಾಗುತ್ತಲೆ ಬ್ರಾಹ್ಮೀದೇವಿಯು ಪಾರ್ಷದಂಶದಿಂದ ಕೂಡಿದವನೂ, ಮಹಾಬಲಶಾಲಿಯೂ, ಕಪ್ಪಾದ ಅವಯುವವುಳ್ಳವನೂ, ಕಮಲನೇತ್ರನೂ, ಗಟ್ಟಿಯಾದ ಹೆಗಲೂ ದಪ್ಪವಾದ ಭುಜ ಶಿರಸ್ಸುಳ್ಳವನೂ, ಆದ ಮಗನನ್ನು ಹಡೆದಳು.

೪೨. ಜ್ಯೋತಿಷಶಾಸ್ತ್ರವಿಶಾರದರಾದ ಬ್ರಾಹ್ಮಣರು ಬಂದು ಜಾತಕರ್ಮಾದಿ ಸಂಸ್ಕಾರವನ್ನು ನಡೆಯಿಸಿ ಆ ಮಗುವಿಗೆ ಸುಖಖಾನಿಯೆಂದು ನಾಮಕರಣವನ್ನು ಮಾಡಿದರು.

ಕ್ರಮೇಣ ವರ್ಧಿತಾ ಬಾಲಾಃ ಸರ್ವಲೋಕಶಿವಂಕರಾಃ ।
ತೇಷಾಂ ಕಾಲೀ ಮಹಚ್ಛ್ರೇಷ್ಠಾ ಪಿತೃಮಾತೃಪ್ರಿಯಂಕರೀ ॥ ೪೩ ॥

ತೃತೀಯಾಬ್ದೇ ವಯಃ ಪ್ರಾಪ್ತೇ ಕೃಷ್ಣಾಂಶೇ ಬಲವತ್ತರೇ ।
ಶಕ್ರಸ್ತದ್ದರ್ಶನಾಕಾಂಕ್ಷೀ ಹಯಾರೂಢೋ ಜಗಾಮ ಹ ॥ ೪೪ ॥

ಕ್ರೀಡನ್ಸ ಚನ್ದನಾರಣ್ಯೇ ಕೃಷ್ಣಾಂಶೋ ಭ್ರಾತೃಭಿಃ ಸಹ ।
ನಭಸ್ಥಂ ಪುರುಷಂ ದೃಷ್ಟ್ವಾ ಸಹಸ್ರಾಕ್ಷಂ ಜಹಾಸ ವೈ ॥ ೪೫ ॥

ಅಶ್ವಿನೀ ಹರಿಣೀ ದಿವ್ಯಾ ಉಚ್ಚೈಃಶ್ರವಸಮಂತಿಕೇ ।
ಗತ್ವಾ ಗರ್ಭಮುಪಾದಾಯ ಸ್ವಗೇಹಂ ಪುನರಾಯಯೌ ॥ ೪೬ ॥

ವರ್ಷಾಂತರೇ ಚ ಸುಷುವೇ ಕಪೋತಂ ತನಯಂ ಶುಭಂ ।
ಪಂಚಾಬ್ದೇ ಚ ಸಮಾಯಾತೇ ವಿದ್ಯಾಧ್ಯಯನಮಾಸ್ಥಿತಾಃ ॥ ೪೭ ॥

---

೪೩. ಈ ಬಾಲಕರೆಲ್ಲರೂ ಲೋಕಕ್ಕೆ ಆನಂದವನ್ನುಂಟುಮಾಡುತ್ತಾ ದಿನ ದಿನಕ್ಕೆ ಬೆಳೆಯುತ್ತಿದ್ದರು. ಇವರೊಡನೆ ಹುಟ್ಟಿದ ಕಾಲೀಯೆಂಬುವಳು ಬಹಳ ಶ್ರೇಷ್ಠಳೂ ಮಾತಾಪಿತೃಗಳಿಗೆ ಪ್ರಿಯವನ್ನುಂಟುಮಾಡತಕ್ಕವಳೂ ಆಗಿದ್ದಳು.

೪೪. ಶೂರನೂ ಕೃಷ್ಣಾಂಶದಿಂದ ಹುಟ್ಟಿದವನೂ ಆದ ಬಾಲಕನಿಗೆ ಮೂರು ವರ್ಷವಾಗುತ್ತಲೆ ಇಂದ್ರನು ಅವನ ದರ್ಶನಾಕಾಂಕ್ಷಿಯಾಗಿ ಕುದುರೆಯನ್ನೇರಿಕೊಂಡು ಬಂದನು.

೪೫. ಈ ಸಮಯದಲ್ಲಿ ಕೃಷ್ಣಾಂಶ ಸಂಭೂತನಾದ ಆ ಬಾಲಕನು ಚಂದನ ಗಿಡಗಳು ಸಮೃದ್ಧಿಯಾಗಿದ್ದ ಚಂದನಾರಣ್ಯದಲ್ಲಿ ತನ್ನ ಅಣ್ಣನೊಡನೆ ಕ್ರೀಡಿಸುತ್ತಾ ಇದ್ದನು. ಆಗ ಅಂತರಿಕ್ಷದಲ್ಲಿ ಬರುತ್ತಿರುವ ಸಾವಿರಕಣ್ಣುಳ್ಳವನಾದ ಇಂದ್ರನನ್ನು ಈ ಬಾಲಕನು ನಕ್ಕನು.

೪೬. ಇಂದ್ರನು ಏರಿಕೊಂಡು ಬಂದಿದ್ದ ಹರಿಣಿಯೆಂಬ ಆ ಹೆಣ್ಣುಕುದುರೆಯು ಉಚ್ಚೈಃಶ್ರವಸ್ಸಿನಿಂದ ಗರ್ಭವನ್ನು ಧರಿಸಿ ಸ್ವಸ್ಥಾನಕ್ಕೆ ಹಿಂದಿರುಗಿ ಬಂದುದಾಗಿತ್ತು.

೪೭. ಹೀಗೆ ಒಂದುವರ್ಷ ಕಳೆದಮೇಲೆ ಈ ಕುದುರೆಯು ಕಪೋತವೆಂಬ ಒಂದು ಗಂಡುಮರಿಯನ್ನು ಪ್ರಸುವಿಸಿತು. ಕೃಷ್ಣಾಂಶ ರಾಮಾಂಶ ಮುಂತಾದ

ಬ್ರಾಹ್ಮಣಂ ಶಿವಶರ್ಮಾಣಂ ಸರ್ವವಿದ್ಯಾವಿಶಾರದಂ ।
ಸ್ವಭಕ್ತ್ಯಾ ಸೇವನಂ ಕೃತ್ವಾ ತೇ ಚಕ್ರುರ್ವೇದಪಾಠಿಕಾಂ ॥ ೪೮ ॥

ಷಷ್ಠಾಬ್ದೇ ಚೈವ ಕೃಷ್ಣಾಂಶೋ ನಾಮಪತ್ರಾದಿಕಾಂ ಕ್ರಿಯಾಂ ।
ಲಿಖತಾಂ ಬಾಲಕಾನಾಂ ಚ ಕೃಷ್ಣಾಂಶಃ ಶ್ರೇಷ್ಠತಾಮಗಾತ್ ॥ ೪೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ನವಮೋಽಧ್ಯಾಯಃ.



೪೮-೪೯. ಈ ಮಕ್ಕಳಿಗೆಲ್ಲಾ ಐದುವರ್ಷವಾದಮೇಲೆ ವಿದ್ಯಾಭ್ಯಾಸಕ್ಕಾಗಿ ಇವರೆಲ್ಲರೂ ಸರ್ವವಿದ್ಯಾಪರಿಣತನಾದ ಶಿವಶರ್ಮನೆಂಬ ವಿಪ್ರನಬಳಿಗೆ ಹೋಗಿ ಭಕ್ತಿಯಿಂದ ಗುರುಸೇವೆಮಾಡಿ ವೇದಾಧ್ಯಯನಮಾಡಿದರು. ಆರನೆಯವರ್ಷದ ವೇಳೆಗೆ ಕೃಷ್ಣಾಂಶನು ಬರೆಯುವ ಮತ್ತು ಓದುವ ಬಾಲಕರಲ್ಲಿ ಉತ್ತಮನೆನಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಒಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ದಶಮೋಽಧ್ಯಾಯಃ

॥ ಸೂತ ಉವಾಚ ॥

ಸಪ್ತಮಾಬ್ದಂ ವಯಃ ಪ್ರಾಪ್ತೇ ಕೃಷ್ಣಾಂಶೋ ಬಲವತ್ತರಃ ।
ಪಠಿತ್ವಾನ್ವೀಕ್ಷಿಕೀಂ ವಿದ್ಯಾಂ ಚತುಃಷಷ್ಟಿಕಲಾಸ್ತಥಾ ॥ ೧ ॥

ಧರ್ಮಶಾಸ್ತ್ರಂ ತಥೈವಾಪಿ ಸರ್ವಶ್ರೇಷ್ಠೋ ಬಭೂವ ಹ ।
ತಸ್ಮಿನ್ಕಾಲೇ ಭೃಗುಶ್ರೇಷ್ಠ ಮಹೀರಾಜೋ ನೃಪೋತ್ತಮಃ ॥ ೨ ॥

ಕರಾರ್ಥಂ ಪ್ರೇಷಯಾಮಾಸ ಸ್ವಸೈನ್ಯಂ ಚ ಮಹಾವತೀಂ ।
ತೇ ವೈ ಲಕ್ಷಂ ಮಹಾಶೂರಾಃ ಸರ್ವಶಸ್ತ್ರಾಸ್ತ್ರಧಾರಿಣಃ ॥ ೩ ॥

---

### ಹತ್ತನೆಯ ಅಧ್ಯಾಯ

೧. ಸೂತಮುನಿವರ್‍ಯನು ಹೇಳುತ್ತಾನೆ. ಬಲಶಾಲಿಯಾದ ಕೃಷ್ಣಾಂಶನು ಏಳು ವರ್ಷದವನಾಗುತ್ತಲೆ ರಾಜನೀತಿ, ದಂಡನೀತಿಯೇ ಮೊದಲಾದ ಎಲ್ಲಾ ವಿಧದ ಶಾಸ್ತ್ರಗಳನ್ನೂ ಅರವತ್ತುನಾಲ್ಕು ಕಲೆಗಳನ್ನೂ ಅಭ್ಯಾಸಮಾಡಿ ಸರ್ವ ಶ್ರೇಷ್ಠನೆನಿಸಿದನು.

೨-೩. ಎಲೈ ಶೌನಕನೇ ! ಕೇಳು ; ಈ ಸನ್ನಿವೇಶದಲ್ಲಿ ಸಮ್ರಾಟ್ ಪೃಥ್ವೀರಾಜನು ತನಗೆ ಬರಬೇಕಾದ ಕಪ್ಪವನ್ನು ವಸೂಲು ಮಾಡುವುದಕ್ಕಾಗಿ ತನ್ನ ಸೇನೆಯನ್ನು ಮಹಾವತೀ ನಗರಕ್ಕೆ ಕಳುಹಿಸಿದನು. ಆ ಸೇನೆಯಲ್ಲಿ ಸಕಲ ಶಸ್ತ್ರಾಸ್ತ್ರಗಳನ್ನೂ ಧರಿಸಿದ ಲಕ್ಷನುಂದಿ ಮಹಾಶೂರಯೋಧರಿದ್ದರು.

ಊಚುಃ ಪರಿಮಲಂ ಭೂಪಂ ಶೃಣು ಚಂದ್ರಕುಲೋದ್ಭವ ।
ಸರ್ವೇ ಚ ಭಾರತೇ ವರ್ಷೇ ಯೇ ರಾಜಾನೋ ಮಹಾಬಲಾಃ ॥ ೪ ॥

ಷಡಂಶಂ ಕರಮಾದಾಯಾಸ್ಮದ್ರಾಜಾಯ ದದಂತಿ ವೈ ।
ಭವಾನ್ಕರೇ ಹಿ ತಸ್ಮೈವ ಯೋಗ್ಯೋ ಭವತಿ ಸಾಂಪ್ರತಂ ॥ ೫ ॥

ಅದ್ಯಪ್ರಭೃತಿ ಚೇದ್ರಾಜ್ಞೇ ತಸ್ಮೈ ದದ್ಯಾತ್ಕರಂ ನ ಹಿ ।
ಮಹೀರಾಜಸ್ಯ ರೌದ್ರಾಸ್ತ್ರೈ ಕ್ಷಯಂ ಯಾಸ್ಯತಿ ಸೈನಿಕೈಃ ॥ ೬ ॥

ಯೇ ಭೂಪಾ ಜಯಚಂದ್ರಸ್ಯ ಪಕ್ಷಗಾಸ್ತೇ ಹಿ ತದ್ಭಯಾತ್ ।
ದದಂತೇ ಭೂಮಿರಾಜಾಯ ದಂಡಂ ತನ್ಮಾನಸತ್ಕೃತಾಃ ॥ ೭ ॥

ಇತಿ ಶ್ರುತ್ವಾ ಸ ನೃಪತಿಸ್ತಸ್ಮೈ ರಾಜ್ಞೇ ಮಹಾತ್ಮನೇ ।
ಕರಂ ಷಡಂಶಮಾದಾಯ ದದೌ ಪ್ರೀತಿಸಮನ್ವಿತಃ ॥ ೮ ॥

---

೪-೭. ಅವರು ಮಹಾವತೀ ರಾಜನಾದ ಪರಿಮಳರಾಜನ ಬಳಿಗೆ ಹೋಗಿ ಆತನನ್ನು ಕುರಿತು "ಚಂದ್ರವಂಶೋತ್ಪನ್ನನಾದ ಪ್ರಭುವೆ! ಕೇಳು ; ಈ ಭಾರತವರ್ಷದಲ್ಲಿರುವ ಮಹಾಬಲಶಾಲಿಗಳಾದ ರಾಜರುಗಳೆಲ್ಲಾ ತಮ್ಮ ರಾಜಾದಾಯದ ಆರರಲ್ಲಿ ಒಂದುಪಾಲನ್ನು ಸಮ್ರಾಜನೆನಿಸಿದ ಪೃಥ್ವೀರಾಜನಿಗೆ ಕೊಡುತ್ತಿದ್ದಾರೆ. ನೀನೂಕೂಡ ಈಗ ಅವನ ಸಾಮಂತನಾಗಿ ಕಪ್ಪವನ್ನು ಕೊಡಲು ಅರ್ಹನಾಗಿದ್ದೀ. ಇಂದು ಮೊದಲುಗೊಂಡು ನಮ್ಮ ರಾಜನಿಗೆ ಕಪ್ಪವನ್ನು ಸಲ್ಲಿಸದೆಹೋದರೆ ಪೃಥ್ವೀರಾಜನಕಡೆಯ ಭಯಂಕರಾಸ್ತ್ರಧಾರಿಗಳಾದ ಸೈನಿಕರಿಂದ ನೀನು ನಾಶಹೊಂದುವೆ. ಜಯಚಂದ್ರನ ಪಕ್ಷಕ್ಕೆಸೇರಿದ್ದ ರಾಜರು ಸಹ ಪೃಥ್ವೀರಾಜನ ಭಯದಿಂದ ಹೆದರಿ ಅವನ ಸಾಮಂತರಾಗಿ ಕಪ್ಪವನ್ನು ಸಲ್ಲಿಸಿ ಅವನ ಗೌರವಕ್ಕೆ ಪಾತ್ರರಾಗಿದ್ದಾರೆ. ಯೋಚಿಸಿನೋಡಿ" ಎಂಬದಾಗಿ ಹೇಳಿದರು.

೮. ಪರಿಮಳರಾಜನು ಈ ಮಾತನ್ನು ಕೇಳಿ ಮಹಾತ್ಮನೂ, ಅಧಿರಾಜನೂ, ಆದ ಪೃಥ್ವೀರಾಜನಿಗೆ ತನ್ನ ರಾಜಾದಾಯದ ಆರನೆಯ ಒಂದುಪಾಲನ್ನು ಪ್ರೀತಿಪೂರ್ವಕವಾಗಿ ಕಪ್ಪವಾಗಿಕೊಟ್ಟನು.

ದಶಲಕ್ಷಮಿತಂ ದ್ರವ್ಯಂ ಗೃಹೀತ್ವಾ ತೇ ಸಮಾಯಯುಃ ।
ಮಹೀರಾಜಃ ಪ್ರಸನ್ನಾತ್ಮಾ ಪೂರ್ವವೈರಮಪಾಹರತ್ ॥ ೯ ॥

ತದಾ ತೇ ಲಕ್ಷಶೂರಾಶ್ಚ ಕಾನ್ಯಕುಬ್ಜಮುಪಾಯಯುಃ ।
ಜಯಚಂದ್ರಂ ತು ನತ್ವೋಚುಃ ಶೃಣು ಲಕ್ಷಣಕೋವಿದ ॥ ೧೦ ॥

ಪೃಥ್ವೀರಾಜೋ ಮಹಾರಾಜೋ ದಂಡಂ ತ್ವತ್ತಃ ಸಮಿಚ್ಛತಿ ।
ಇತ್ಯುಕ್ತಸ್ತೈರ್ವೈಷ್ಣವಾಸ್ತ್ರೀ ಲಕ್ಷಣಸ್ತಾನುವಾಚ ಹ ॥ ೧೧ ॥

ಮದ್ದೇಶೇ ಮಂಡಲೀಕಾಶ್ಚ ಬಹವಃ ಸಂತಿ ಸಾಂಪ್ರತಂ ।
ಭೂಮಿರಾಜೋ ಮಾಂಡಲೀಕೋ ಮಯಿ ಜೀವತಿ ನೋ ಭವೇತ್ ॥ ೧೨ ॥

ಇತ್ಯುಕ್ತ್ವಾ ವೈಷ್ಣವಾಸ್ತ್ರಂ ತಾನ್ಕ್ರುದ್ಧಃ ಸ ಚ ಸಮಾದಧತ್ ।
ತದಸ್ತ್ರಜ್ವಾಲತಃ ಸರ್ವೇ ಭಯಭೀತಾಃ ಪ್ರದುದ್ರುವುಃ ॥ ೧೩ ॥

---

೯. ಕಪ್ಪವಾಗಿಬಂದ ಹತ್ತುಲಕ್ಷದ್ರವ್ಯಸಮೇತ ಅವರುಗಳೆಲ್ಲ ಪೃಥ್ವೀರಾಜನ ಬಳಿಗೆ ಹೋದರು. ಪೃಥ್ವೀರಾಜನು ಸಂತೋಷಯುಕ್ತನಾಗಿ ಪರಿಮಳರಾಜನ ವಿಷಯದಲ್ಲಿದ್ದ ಹಿಂದಿನ ವೈರವನ್ನು ಬಿಟ್ಟುಬಿಟ್ಟನು.

೧೦-೧೨ ಆಮೇಲೆ ಪೃಥ್ವೀರಾಜನು ಕಪ್ಪವನ್ನು ತರುವುದಕ್ಕಾಗಿ ಕನ್ಯಾಕುಬ್ಜ ರಾಜ್ಯಕ್ಕೆ ಆ ಲಕ್ಷಸೇನೆಯನ್ನೂ ಕಳುಹಿಸಿದನು. ಅವರು ಕನ್ಯಾಕುಬ್ಜಕ್ಕೆ ಬಂದು ಜಯಚಂದ್ರರಾಜನಿಗೆ ನಮಸ್ಕರಿಸಿ ಅವನನ್ನು ಕುರಿತು "ಲಕ್ಷಣಸ್ವರೂಪಜ್ಞನಾದ ಪ್ರಭುವೇ! ಸಮ್ರಾಟ್ ಪೃಥ್ವೀಶನು ಎಲ್ಲ ಸಾಮಂತರಾಜರಂತೆ ನೀನೂ ಕಪ್ಪವನ್ನು ಕೊಡಬೇಕೆಂದು ಅಪೇಕ್ಷಿಸುತ್ತಾನೆ" ಎಂದರು. ವೈಷ್ಣವಾಸ್ತ್ರವನ್ನು ಪಡೆದ ಧೀರನೂ ಜಯಚಂದ್ರನ ತಮ್ಮನಾದ ರತ್ನಭಾನುವಿನ ಪುತ್ರನೂ ಆದ ಲಕ್ಷಣನು ಈ ಮಾತನ್ನು ಕೇಳಿ "ನಮ್ಮ ಅಧೀನದಲ್ಲಿ ಈಗಲೂ ಅನೇಕಮಂದಿ ಸಾಮಂತರಾಜರು ಇದ್ದಾರೆ. ನಾವು ಅವರಿಗೆಲ್ಲಾ ಅಧಿರಾಜರಾಗಿ ಜೀವಿಸಿರುವಲ್ಲಿ ಪೃಥ್ವೀರಾಜನು ಎಂದಿಗೂ ಸಮ್ರಾಜನಾಗಲಾರನು" ಎಂದನು.

೧೩. ಹೀಗೆಂದುಹೇಳಿ ರೋಷಗೊಂಡು ಆ ಸೇನೆಯಮೇಲೆ ತನ್ನ ವೈಷ್ಣವಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದ ಜ್ವಾಲೆಯಿಂದ ಸೈನಿಕರೆಲ್ಲಾ ಭಯಭೀತರಾಗಿ ಓಡಿಹೋದರು.

ಮಹೀರಾಜಸ್ತು ತಚ್ಛ್ರುತ್ವಾ ಮಹದ್ಭಯಮುಪಾಗಮತ್ ।
ಅಷ್ಟಾಬ್ದಂ ಚ ವಯಃ ಪ್ರಾಪ್ತೇ ಕೃಷ್ಣಾಂಶೇ ಮಲ್ಲಕೋವಿದೇ ॥ ೧೪ ॥

ನಾನಾಮಲ್ಲಾಃ ಸಮಾಜಗ್ಮುಸ್ತೇನ ರಾಜ್ಞೈವ ಸತ್ಕೃತಾಃ ।
ತೇಷಾಂ ಮಧ್ಯೇ ಸ ಕೃಷ್ಣಾಂಶೋ ಬಾಹುಶಾಲೀ ಬಭೂವ ಹ ॥ ೧೫ ॥

ಉರ್ವೀಯಾಧಿಪತೇಃ ಪುತ್ರಃ ಷೋಡಶಾಬ್ದವಯಾ ಬಲೀ ।
ಶತಮಲ್ಲೈಶ್ಚ ಸಹಿತಃ ಕದಾಚಿತ್ಸ ಸಮಾಗತಃ ॥ ೧೬ ॥

ಪಿತೃಷ್ವಸೃಪತಿಂ ಭೂಪಂ ನತ್ವಾ ನಾಮ್ನಾಽಭಯೋ ಬಲೀ ।
ಉವಾಚ ಶೃಣು ಭೂಪಾಲ ಕೃಷ್ಣೋಽಯಂ ಮದಮತ್ತರಃ ॥ ೧೭ ॥

ತೇನ ಸಾರ್ದ್ಧಂ ಭವೇನ್ಮಲ್ಲಯುದ್ಧಂ ಮಮ ನೃಪೋತ್ತಮ ।
ಇತಿ ವಜ್ರಸಮಂ ವಾಕ್ಯಂ ಶ್ರುತ್ವಾ ರಾಜಾ ಭಯಾತುರಃ ॥ ೧೮ ॥

---

೧೪-೧೫. ಈ ವರ್ತಮಾನವನ್ನು ಕೇಳಿ ಪೃಥ್ವೀರಾಜನೂ ತುಂಬಾ ಭಯ ಚಕಿತನಾದನು. (ಜಟ್ಟಿಕಾಳಗ) ಮಲ್ಲಯುದ್ಧದಲ್ಲಿ ವಿಶಾರದನಾದ ಕೃಷ್ಣಾಂಶನು ಎಂಟು ವರ್ಷದವನಾದನು. ಈ ಅವಧಿಯಲ್ಲಿ ಅನೇಕಜನ ಜಟ್ಟಿಗಳು ಆ ನಗರಕ್ಕೆ ಬಂದು ರಾಜನಿಂದ ಗೌರವವನ್ನು ಪಡೆದು ಅಲ್ಲೇ ಇರುತ್ತಿದ್ದರು, ಆಜಟ್ಟಿಗಳನ್ನೆಲ್ಲಾ ಮೀರಿಸಿ ಮಹಾಬಾಹುವಾದ ಕೃಷ್ಣಾಂಶನು ಶ್ರೇಷ್ಠನೆನಿಸಿಕೊಂಡಿದ್ದನು.

೧೬. ಮಹೀಪತಿರಾಜನಿಗೆ ಹದಿನಾರುವರ್ಷ ವಯಸ್ಸಿನ ಅಭಯನೆಂಬ ಮಗನಿದ್ದನು. ಅವನು ಒಂದುಸಲ ನೂರಾರು ಜಟ್ಟಿಗಳೊಡನೆ ಜಯಚಂದ್ರರಾಜನ ಬಳಿಗೆಬಂದನು.

೧೭. ಶೂರನೂ ಬಲಶಾಲಿಯೂ ಆದ ಅಭಯನು ಬಂಧುತ್ವದಲ್ಲಿ ತನ್ನ ಸೋದರತ್ತೆಯ ಗಂಡನಾದ ಆ ಜಯಚಂದ್ರನಿಗೆ ನಮಸ್ಕರಿಸಿ ರಾಜನನ್ನು ಕುರಿತು “ಪ್ರಭೂ! ಈ ಕೃಷ್ಣಾಂಶನು ಮದದಿಂದ ಬಹು ಕೊಬ್ಬಿ ಮಾತಾಡುತ್ತಾನೆ.”

೧೮-೨೦. ಎಲೈ ರಾಜೇಂದ್ರನೆ! ನಾನು ಅವನೊಡನೆ ಮಲ್ಲಯುದ್ಧ ಮಾಡ ಬೇಕೆಂದಿದ್ದೇನೆ” ಎಂದು ಹೇಳಿದನು. ಸಿಡಿಲಿನಂತಿರುವ ಈ ವಾಕ್ಯವನ್ನು ಕೇಳಿ ರಾಜನು ಗಾಬರಿಗೊಂಡು ಭಾವಮೈದುನನ ಮಗನಾದ ಅಭಯನನ್ನು ಕುರಿತು

ಉವಾಚ ಶ್ಯಾಲಜಂ ಪ್ರೇಮ್ಣಾ ಭವಾನ್ಯುದ್ಧವಿಶಾರದಃ ।
ಅಷ್ಟಾಬ್ದೋಽಯಂ ಸುತಃ ಸ್ನಿಗ್ಧೋ ಮಮ ಪ್ರಾಣಸಮೋ ಭುವಿ ॥ ೧೯ ॥

ಕ್ವ ಭವಾನ್ವಜ್ರಸದೃಶಃ ಕ್ವ ಸುತೋಽಯಂ ಸುಕೋಮಲಃ ।
ಅನ್ಯೈರ್ಮಲ್ಲೈರ್ಮದೀಯೈಶ್ಚ ಸಾರ್ಧಂ ಯೋಗ್ಯೋ ಭವಾನ್ರಣೇ ೨೦ ॥

ಇತಿ ಶ್ರುತ್ವಾ ನೃಪಃ ಶ್ಯಾಲೋ ಮಹೀಪತಿರಿತಿ ಸ್ಮೃತಃ ।
ಸ ತಮಾಹ ರುಷಾವಿಷ್ಟೋ ಬಾಲೋಽಯಂ ಬಲವತ್ತರಃ ॥ ೨೧ ॥

ಶೃಣು ತತ್ಕಾರಣಂ ಭೂಪ ಯಥಾ ಜ್ಞಾತೋ ಮಯಾ ಶಿಶುಃ ।
ಆವಿಷ್ಕೃತಂ ಮಹೀರಾಜಂ ಮತ್ವಾ ಸ ತಿಲಕಃ ಸುತಂ ॥ ೨೨ ॥

ಪಂಡಿತಾಂಶ್ಚ ಸಮಾಹೂಯ ಮುಹೂರ್ತಂ ಪೃಷ್ಟವಾನ್ಮುದಾ ।
ಗಣೇಶೋ ನಾಮ ಮತಿಮಾನ್ ಜ್ಯೋತಿಶ್ಶಾಸ್ತ್ರವಿಶಾರದಃ ॥ ೨೩ ॥

---

ಪ್ರಿಯವಾಕ್ಕಿನಿಂದ "ಮಗೂ! ನೀನು ಯುದ್ಧವಿಶಾರದನು; ಕೃಷ್ಣಾಂಶನು ಇನ್ನೂ ಎಂಟುವರ್ಷದ ಬಾಲಕ, ಅವನು ನನ್ನ ಪ್ರಾಣಸಮಾನ, ಸುಕುಮಾರಶರೀರನು ನೀನಾದರೋ ವಜ್ರಶರೀರನು; ಅವನು ಕೋಮಲನು, ಆದುದರಿಂದ ನೀನು ನನ್ನ ಇತರ ಜಟ್ಟಿಗಳೊಡನೆ ಬೇಕಾದರೆ ಮಲ್ಲಯುದ್ಧಮಾಡಬಹುದು" ಎಂದನು.

೨೧. ಜಯಚಂದ್ರರಾಜನ ಭಾವಮೈದುನನಾದ ಮಹೀಪತಿಯು ಈ ಮಾತನ್ನು ಕೇಳಿ ಕೋಪಗೊಂಡು ರಾಜನನ್ನು ಕುರಿತು "ಈ ಕೃಷ್ಣಾಂಶನು ನೋಡುವುದಕ್ಕೆ ಹುಡುಗನಾದರೂ ಮಹಾಬಲಿಷ್ಠನು.

೨೨. ಎಲೈ ರಾಜನೆ! ನನಗೆ ಇದು ಗೊತ್ತಾದ ವಿಧಾನವನ್ನು ಹೇಳು ತ್ತೇನೆ ಕೇಳು ಸಂರಾಜತಿಲಕನು ತನ್ನ ಮಗನಾದ ಮಹೀರಾಜನು ಜನಿಸಿದನೆಂಬ ವರ್ತಮಾನ ತಿಳಿದು ಪಂಡಿತರನ್ನು ಕರೆಯಿಸಿ ಸಂತೋಷದಿಂದ ಮುಹೂರ್ತಬಲ ವನ್ನು ಕೇಳಿದನು.

೨೩-೨೫. ಗಣೇಶನೆಂಬ ಮೇಧಾವಿಯಾದ ಒಬ್ಬ ಜ್ಯೋತಿಷ್ಕನು ಮಹೀರಾಜ ನಲ್ಲಿ ಕಾಣುವ ಶ್ರೇಷ್ಠ ಲಕ್ಷಣಗಳ ವಿಚಾರವನ್ನು ಹೇಳತೊಡಗಿ "ಎಲೈ ಪ್ರಭುವೆ! ಇವನು ಶಿವನ ವರವನ್ನು ಪಡೆದು ಕುಬೇರ ಸದೃಶನಾಗಿ ಬಾಳುವನು. ದೇಶರಾಜನ ಎರಡನೆಯ ಮಗನಾದ ಕೃಷ್ಣಾಂಶನೊಬ್ಬನೇ ಇವನಿಗೆ ಸದೃಶನು. ಎಲೈ ರಾಜನೇ!

ಲಕ್ಷಣಂ ವಚನಂ ಪ್ರಾಹ ಮಹೀರಾಜಮನುತ್ತಮಂ ।
ಶಿವದತ್ತವರೋ ರಾಜನ್ನುಬೇರ ಇವ ಸಾಂಪ್ರತಂ ॥ ೨೪ ॥

ಕೃಷ್ಣಾಂಶಸ್ತಸ್ಯ ಯೋಗ್ಯೋಽಯಂ ದೇಶರಾಜಸುತೋಽವರಃ ।
ನಾನ್ಯೋಽಸ್ತಿ ಭೂತಲೇ ರಾಜನ್ಸತ್ಯಂಸತ್ಯಂ ಬ್ರವೀಮ್ಯಹಂ ॥ ೨೫ ॥

ತಚ್ಛ್ರುತ್ವಾ ಲಕ್ಷಣೋ ವೀರಃ ಪೂರ್ವೇ ಬರ್ಹಿಷ್ಮತೀಂ ಪ್ರತಿ ।
ಕಲ್ಪಕ್ಷೇತ್ರಂ ದಕ್ಷಿಣೇ ಚ ಭೂಮಿಗ್ರಾಮಂ ತು ಪಶ್ಚಿಮೇ ॥ ೨೬ ॥

ಉತ್ತರೇ ನೈಮಿಷಾರಣ್ಯಂ ಸ್ವಕೀಯಂ ರಾಷ್ಟ್ರಮಾದದತ್ ।
ಅತಃ ಶ್ರೇಷ್ಠಃ ಕುಮಾರೋಽಯಂ ಕಾನ್ಯಕುಬ್ಜೇ ಮಯಾ ಶ್ರುತಃ ॥೨೭॥

ನಾಗೋತ್ಸವೇ ಚ ಭೂಪಾಲ ಪಂಚಮ್ಯಾಂ ಚ ನಭಸ್ಸಿತೇ ।
ದೃಶ್ಯಮಾತ್ರಂ ಕುಮಾರಾಂಗಂ ತಸ್ಮಾದ್ಯೋಗ್ಯೋ ಹ್ಯಯಂ ಸುತಃ॥ ೨೮ ॥

ಇತಿ ಶ್ರುತ್ವಾ ಸ ಕೃಷ್ಣಾಂಶೋ ವಾಕ್ಶರೇಣ ಪ್ರಪೀಡಿತಃ ।
ಅಭಯಂ ಭುಜಯೋಃ ಶೀಘ್ರಂ ಗೃಹೀತ್ವಾ ಸೋಽಯುಧದ್ಬಲೀ ॥ ೨೯ ॥

---

ಭೂಮಂಡಲದಲ್ಲಿ ಇವನ ಸಮಾನ ರಾಜರು ಯಾರೂ ಇಲ್ಲವೆಂದು ನಾನು ದೃಢವಾಗಿ ಸಾರಿ ಸಾರಿ ಹೇಳುತ್ತೇನೆ " ಎಂದನು.

೨೬. " ಈ ಮಾತನ್ನು ಕೇಳಿ ವೀರನಾದ್ದ ಲಕ್ಷಣನು ಪೂರ್ವದಿಕ್ಕಿನಲ್ಲಿ ಬರ್ಹಿಷ್ಮತೀನಗರ, ದಕ್ಷಿಣಕ್ಕೆ ಕಲ್ಪಕ್ಷೇತ್ರ, ಪಶ್ಚಿಮದಲ್ಲಿ ಭೂಮಿಗ್ರಾಮ, ಉತ್ತರದಿಕ್ಕಿಗೆ ನೈಮಿಶಾರಣ್ಯ, ಈ ಮಧ್ಯೆ ಇರುವ ತನ್ನ ರಾಜ್ಯವನ್ನು ಅವನಿಗೆ ತಾನೇ ವಹಿಸಿದನು

೨೭-೨೮. ಅಂದಿನಿಂದ ಕುಮಾರನಾದ ಈ ಕೃಷ್ಣಾಂಶನು ಕನ್ಯಕುಬ್ಜದಲ್ಲಿ ಶ್ರೇಷ್ಠನೆನಿಸಿ ಪ್ರಸಿದ್ಧಿಪಡೆದಿದ್ದಾನೆ. ಎಲೈ ರಾಜನೆ! ಶ್ರಾವಣ ಶುಕ್ಲಪಕ್ಷದಲ್ಲಿ ನಡೆವ ನಾಗಪಂಚಮಿಯ ಉತ್ಸವದದಿನ ಕುಮಾರನ ರೂಪನ್ನು ನೋಡಲು ಚನ್ನಾಗಿತ್ತು. ಉತ್ಸವದಲ್ಲಿ ಭಾಗಿಯಾಗಿದ್ದ ಅವನ್ನು ನೋಡಿದೆ. ಆ ಹುಡುಗನು ಅಭಯನೊಡನೆ ಯುದ್ಧ ಮಾಡಲು ತಕ್ಕವನಾಗಿದ್ದಾನೆ " ಎಂದು ಹೇಳಿದನು.

೨೯-೩೦. ಈ ಮಾತನ್ನು ಕೇಳಿ ಕೃಷ್ಣಾಂಶನು ಕ್ರೂರವಾದ ವಾಗ್ಬಾಣದಿಂದ ನೊಂದುಕೊಂಡು ಸಹಜಶೂರನಾದ ಅವನು ನಿರ್ಭಯನಾಗಿ ತನ್ನ ಬಾಹುಗಳಿಂದ

ಕ್ಷಣಮಾತ್ರಂ ರಣಂ ಕೃತ್ವಾ ಭೂಮಿಮಧ್ಯೇ ತಮಕ್ಷಿಪತ್ ।
ಅಭಯಸ್ಯ ಭುಜೋ ಭಗ್ನಸ್ತತ್ರ ಜಾತೋ ಬಲೇನ ವೈ ॥ ೩೦ ॥

ಮೂರ್ಛಿತಂ ಸ್ವಸುತಂ ಜ್ಞಾತ್ವಾ ಖಡ್ಗಹಸ್ತೋ ಮಹೀಪತಿಃ ।
ಪ್ರೇಷಯಾಮಾಸ ತಾನ್ಮಲ್ಲಾನ್ಕೃಷ್ಣಾಂಶಸ್ಯ ಪ್ರಹಾರಣೇ ॥ ೩೧ ॥

ರುಷಾವಿಷ್ಟಾಂಶ್ಚ ತಾನ್ ಜ್ಞಾತ್ವಾ ಕೃಷ್ಣಾಂಶೋ ಬಲವತ್ತರಃ ।
ತಾನೇಕೈಕಂ ಸಮಾಕ್ಷಿಪ್ಯ ವಿಜಯೀ ಸ ಬಭೂವ ಹ ॥ ೩೨ ॥

ಪರಾಜಿತೇ ಮಲ್ಲಬಲೇ ಖಡ್ಗಹಸ್ತೋ ಮಹೀಪತಿಃ ।
ಮರಣಾಯ ಮತಿಂ ಚಕ್ರೇ ಕೃಷ್ಣಾಂಶಸ್ಯ ಪ್ರಭಾವತಃ ॥ ೩೩ ॥

ಜ್ಞಾತ್ವಾ ತಮಿಮಾವೃಶಂ ಭೂಪಂ ವಾರಯಾಮಾಸ ಭೂಪತಿಃ ।
ಅಭಯಂ ನೀರುಜಂ ಕೃತ್ವಾ ಪ್ರೇಮ್ಣಾ ಗೇಹಮುವಾಸಯತ್ ॥ ೩೪ ॥

---

ಅಭಯನನ್ನು ಹಿಡಿದೆಳೆದು ಭಯಂಕರವಾಗಿ ಕಾಳಗಮಾಡತೊಡಗಿ ಒಂದು ಕ್ಷಣ ಮಾತ್ರದಲ್ಲಿ ಅಭಯನನ್ನು ಸೋಲಿಸಿ ನೆಲದಮೇಲೆ ಉರುಳಿಸಿದನು. ಇವನ ಏಟಿ ನಿಂದ ಅಭಯನ ಒಂದು ಭುಜ ಮುರಿದುಹೋಯಿತು.

೩೧. ತನ್ನ ಮಗನು ಮೂರ್ಛೆಬಿದ್ದುದನ್ನು ಕಂಡು ಮಹೀಪತಿರಾಜನು ಕತ್ತಿಯನ್ನು ಹಿರಿದು ನಿಂತುಕೊಂಡು ಕೃಷ್ಣಾಂಶನಮೇಲೆ ಬಿದ್ದು ಹೊಡೆಯುವಂತೆ ಆ ಜಟ್ಟಿಗಳನ್ನೆಲ್ಲಾ ಪ್ರೇರೇಪಿಸಿ ಕಳುಹಿಸಿದನು.

೩೨. ಅವರು ರೋಷಾವೇಶಯುಕ್ತರಾಗಿ ಬಂದುದನ್ನು ನೋಡಿ, ಬಲಶಾಲಿ ಯಾದ ಕೃಷ್ಣಾಂಶನು ಆ ಜಟ್ಟಿಗಳನ್ನು ಒಬ್ಬೊಬ್ಬರನ್ನಾಗಿ ಎಳೆದುಕೊಂಡು ಹೊಡೆದು ಕೆಡವಿ ತಾನು ಜಯಶಾಲಿಯಾದನು.

೩೩. ಕೃಷ್ಣಾಂಶನ ಶಕ್ತಿಪ್ರಭಾವದಿಂದ ಹೀಗೆ ಜಟ್ಟಿಗಳೆಲ್ಲರೂ ಸೋತುಹೋಗ ಲಾಗಿ ಮಹೀಪತಿರಾಜನು (ಪ್ರಾಣಹೋದರೂ ಹೋಗಲೆಂದು) ದೇಹದಪರಿವೆಯಿಲ್ಲದೆ ಖಡ್ಗಹಸ್ತನಾಗಿ ತಾನೇ ಹೋರಾಡುವುದಕ್ಕೆ ಮನಸ್ಸು ಮಾಡಿದನು.

೩೪. ಮಹೀಪತಿರಾಜನು ಹೀಗೆ ಪ್ರಯತ್ನಿಸಿದುದನ್ನು ನೋಡಿ ಜಯಚಂದ್ರ ಭೂಪತಿಯು ಅವನನ್ನು ತಡೆದು ನಿಲ್ಲಿಸಿದುದಲ್ಲದೆ ಅಭಯನಿಗೆ ಸಂಪೂರ್ಣವಾಗಿ ಗುಣಪಡಿಸಿ ಪ್ರೇಮಪೂರ್ವಕವಾಗಿ ಅವರ ಮನೆಗೆ ಕಳುಹಿಸಿಕೊಟ್ಟನು.

ನವಾಬ್ದಾಂಗೇ ಚ ಕೃಷ್ಣಾಂಶೋ ಚಾಹ್ಲಾದಾದ್ಯಾಃ ಕುಮಾರಕಾಃ ।
ಮೃಗಯಾರ್ಥೇ ದಧುಶ್ಚಿತ್ತಂ ತಮೂಚುರ್ಭೂಪತಿಂ ಪ್ರಿಯಂ ॥ ೩೫ ॥

ನಮಸ್ತೇ ತಾತ ಭೂಪಾಗ್ರ್ಯ ಸರ್ವಾನಂದಪ್ರದಾಯಕ ।
ಅಸ್ಮಭ್ಯಂ ತ್ವಂ ಹಯಾನ್ದೇಹಿ ಮತ್ಪ್ರಿಯಾನ್ಕರುಣಾಕರ ॥ ೩೬ ॥

ಇತಿ ಶ್ರುತ್ವಾ ವಚಸ್ತೇಷಾಂ ತಥೇತ್ಯುಕ್ತ್ವಾ ಮಹೀಪತಿಃ ।
ಭೂತಲೇ ವಾಸಿನೋಽಶ್ವಾನ್ಸ್ವೈ ದಿವ್ಯಾನ್ಸ್ರಾಟ್ ಚತುರೋ ವರಾನ್ ॥೩೭ ॥

ದದೌ ತೇಭ್ಯೋ ಮುದಾ ಯುಕ್ತೋ ಹರಿಣೀಗರ್ಭಸಂಭವಾನ್ ।

॥ ಋಷಯ ಊಚುಃ ॥

ತ್ವನ್ಮುಖೇನ ಶ್ರುತಂ ಸೂತ ಹರಣೀ ವಡವಾ ಯಥಾ ॥ ೩೮ ॥

ಭೀಷ್ಮಸಿಂಹಾಯ ಸಂಪ್ರಾಪ್ತಾ ಶಕ್ರಾದ್ದೇವೇಶತೋ ಮುನೇ ।
ಇದಾನೀಂ ಶ್ರೋತುಮಿಚ್ಛಾಮಃ ಕುತೋ ಜಾತಾಸ್ತುರಂಗಮಾಃ ॥ ೩೯ ॥

---

೩೫-೩೬. ಕೃಷ್ಣಾಂಶನಿಗೆ ಒಂಭತ್ತುವರ್ಷ ತುಂಬಿತು ಆಹ್ಲಾದ ಮುಂತಾದ ಮಕ್ಕಳೆಲ್ಲರೂ ಬೇಟೆಗೆ ಹೋಗಬೇಕೆಂದು ಆಶೆಪಟ್ಟು ರಾಜನ ಬಳಿಗೆ ಹೋಗಿ “ ಸರ್ವ ಜನಗಳಿಗೂ ಆನಂದದಾಯಕನೂ, ರಾಜಾಗ್ರಣಿಯೂ, ಆದ ತಂದೆಯೇ! ನಿನಗೆ ನಮಸ್ಕಾರ, ನಾವೆಲ್ಲರೂ ಬೇಟೆಗೆ ಹೋಗಬೇಕೆಂದು ಮನಸ್ಸಾಗಿದೆ. ದಯಾಳುವಾದ ನೀನು ನಮಗೆ ಸವಾರಿಗೆ ಉತ್ತಮವಾದ ಕುದುರೆಗಳನ್ನು ಕೊಡಿಸು ” ಎಂಬದಾಗಿ ಕೇಳಿಕೊಂಡರು.

೩೭. ಆಗ ದೇಶರಾಜನು “ ಹಾಗೆಯೇ ಆಗಲಿ ಎಂದು ಒಪ್ಪಿ ದೇವಲೋಕದ ಹರಿಣಿಯೆಂಬ ಅಶ್ವದ ಗರ್ಭದಲ್ಲಿ ಜನಿಸಿದುವುಗಳಾಗಿ ಭೂಮಿಯಲ್ಲಿ ವಾಸಿಸುತ್ತಿರುವ ಶ್ರೇಷ್ಠವಾದ ನಾಲ್ಕುಅಶ್ವಗಳನ್ನು ತರಿಸಿ ಸಂತೋಷದಿಂದ ಅವರಿಗೆ ಕೊಟ್ಟನು ” ಎಂದನು.

೩೮-೪೦. ಆಗ ಋಷಿಗಳು ಪ್ರಶ್ನೆಮಾಡುತ್ತಾರೆ. “ ಎಲೈ ಸೂತಮಹರ್ಷಿಯೇ! ನೀನು ಹೇಳಿದ ಹರಿಣಿಯೆಂಬ ಅಶ್ವವು ದೇವಾಧಿಪನಾದ ಇಂದ್ರನಿಂದ ಭೀಷ್ಮಸಿಂಹನಿಗೆ ಲಭಿಸಿದುದು ಹೇಗೆ? ಅದರ ಮರಿಗಳು ದೇವಲೋಕಾಶ್ವದ ಲಕ್ಷಣವುಳ್ಳವೂ

ದಿವ್ಯಾಂಗಾ ಭೂಷಣಾಪನ್ನಾ ನಭಸ್ಸಲಿಲಗಾಮಿನಃ ।

॥ ಸೂತ ಉವಾಚ ॥

ದೇಶರಾಜೇನ ಭೂಪೇನ ಪುರಾ ಧರ್ಮಯುತೇನ ವೈ ॥ ೪೦ ॥

ಸೇವನಂ ಭಾಸ್ಕರಸ್ಯೈವ ಕೃತಂ ಚ ದ್ವಾದಶಾಬ್ದಿಕಂ ।
ಸೇವಾನ್ತೇ ಭಗವಾನ್ಸೂರ್ಯೋ ವರಂ ಬ್ರೂಹಿ ತಮಬ್ರವೀತ್ ॥ ೪೧ ॥

ಪ್ರಾಹ ದೇವ ನಮಸ್ತುಭ್ಯಂ ಯದಿ ದೇಯೋ ವರಸ್ತ್ವಯಾ ।
ಹಯಂ ದಿವ್ಯಮಯಂ ದೇಹಿ ನಭಸ್ಥಲಜಲಾತಿಗಂ ॥ ೪೨ ॥

ತಥೇತ್ಯುಕ್ತ್ವಾ ರವಿಃ ಸಾಕ್ಷಾದ್ದದೌ ತಸ್ಮೈ ಪಪೀಹಕಂ ।
ಲೋಕಾನ್ಪಾತಿ ಪಪೀಜ್ಜ್ಞೇಯಸ್ತಸ್ಯೇದಂ ನಾಮ ಚೋತ್ತಮಂ ॥ ೪೩ ॥

ಅತಃ ಪಪೀಹಪ್ರೋ ನಾಮ ಲೋಕಪಾಲನ ಕರ್ಮವಾನ್ ।
ಸ ಹಯೋ ಮದಮತ್ತಶ್ಚ ಹರಿಣೀಂ ದಿವ್ಯರೂಪಿಣೀಂ ॥ ೪೪ ॥

---

ಸಮಸ್ತಆಭರಣಯುಕ್ತವಾದುವೂ ಸಮುದ್ರಗಮನ ಆಕಾಶಗಮನದ ಶಕ್ತಿಯುಳ್ಳವೂ ಹೇಗೆ ಆದುವು ಎಂಬುದನ್ನು ಕೇಳಲು ಕುತೂಹಲವಾಗಿದೆ" ಎಂದರು.

೪೧-೪೨. ಬಳಿಕ ಸೂತಮುನಿವರ್ಯನು ಹೇಳುತ್ತಾನೆ:—ಧರ್ಮಜ್ಞನಾದ ದೇಶರಾಜನು ಹಿಂದೆ ಹನ್ನೆರಡುವರ್ಷಕಾಲ ಸೂರ್ಯನನ್ನು ಆರಾಧಿಸಿ ಸೇವೆಮಾಡಿದನು. ಆಗ ಸೂರ್ಯನು ಪ್ರಸನ್ನನಾಗಿ "ನಿನಗೆಬೇಕಾದ ವರವನ್ನು ಕೇಳು" ಎಂದು ಹೇಳಿದನು. ಆಗ ದೇಶರಾಜನು "ಸೂರ್ಯದೇವ! ನಿನಗೆ ನಮಸ್ಕಾರ. ನೀನು ನನ್ನಲ್ಲಿ ಪ್ರಸನ್ನನಾಗಿ ವರಕೊಡುವುದಾದರೆ ಸಮುದ್ರಗಮನ ಆಕಾಶಗಮನ ಶಕ್ತಿಯುಳ್ಳ ದೇವಲೋಕದ ಅಶ್ವವನ್ನು ಕೊಡು" ಎಂದು ಕೇಳಿದನು.

೪೩-೪೪. ಆಗ ಸೂರ್ಯನು "ಹಾಗೆಯೇ ಆಗಲಿ" ಎಂದು ಹೇಳಿ, ಪಪೀಹಕವೆಂಬ ಕುದುರೆಯನ್ನು ಸಾಕ್ಷಾತ್ತಾಗಿ ಅವನಿಗೆ ಕೊಟ್ಟನು. ಪಪೀ ಎಂದರೆ ಲೋಕಗಳನ್ನು ಪಾಲಿಸತಕ್ಕದ್ದು ಎಂದು ಅರ್ಥ. ಆದರಿಂದ ಅದಕ್ಕೆ ಪಪೀಹಕ ಎಂಬ ಉತ್ತಮವಾದ ಹೆಸರುಬಂದಿತು. ಆ ಪಪೀಹಕವು ಕಾಮೋದ್ರೇಕದಿಂದ ಮದಯುಕ್ತವಾಗಿ ದಿವ್ಯರೂಪಿಣಿಯಾದ ಹರಿಣಿಯಲ್ಲಿ ಭೋಗಿಸಿತು.

ಬುಭುಜೇ ಸ್ಮರವೇಗೇನ ತಸ್ಯಾಂ ಜಾತಾಸ್ತುರಂಗಮಾಃ ।
ಮನೋರಥಶ್ಚ ಪೀತಾಂಗಃ ಕರಾಲಃ ಕೃಷ್ಣರೂಪಕಃ ॥ ೪೫ ॥

ಏಕಗರ್ಭೇ ಸಮುದ್ಭೂತೌ ಶೈಬ್ಯಸುಗ್ರೀವಕಾಂಶಕೌ ।
ಯಸ್ಮಿನ್‌ದಿನೇ ಸಮುದ್ಭೂತೌ ಜಿಷ್ಣುವಿಷ್ಣುಕಲಾಂಶತಃ ॥ ೪೬ ॥

ತದಾ ಜಾತೌ ಹರಿಣ್ಯಾಶ್ಚ ಮೇಘಪುಷ್ಪಬಲಾಹಕೌ ।
ಬಿನ್ದುಲಶ್ಚ ಸುವರ್ಣಾಂಗಃ ಶ್ವೇತಾಂಗೋ ಹರಿನಾಗರಃ ॥ ೪೭ ॥

ದಿವ್ಯಾಂಗಾಸ್ತೇ ಹಿ ಚತ್ವಾರಃ ಪೂರ್ವಂ ಜಾತಾ ಮಹಾಬಲಾಃ ।
ಪಶ್ಚಾದಂಶಾವತಾರಾಶ್ಚ ಜಾತಾಸ್ತೇಷಾಂ ಮಹಾತ್ಮನಾಂ ॥ ೪೮ ॥

ಇತಿ ತೇ ಕಥಿತಂ ವಿಪ್ರ ಶೃಣು ತತ್ರ ಕಥಾಂ ಶುಭಾಂ ।
ಭೂತಲೇ ತೇ ಹಯಾಃ ಸರ್ವೇ ಸ್ಪ್ರಾಪ್ತಾಶ್ಚೋಪರಿಭೂಮಿಗಾ॥ ॥ ೪೯ ॥

ದೇವಸಿಂಹಾಯ ಬಲಿನೇ ದದೌ ಚಾಶ್ವಂ ಮನೋರಥಂ ।
ಆಹ್ಲಾದಾಯ ಕರಾಲಂ ಚ ಕೃಷ್ಣಾಂಶಾಯೈವ ಬಿಂದುಲಂ ॥ ೫೦ ॥

---

೪೫-೪೯. ಅದರಿಂದ ಪರಮಾತ್ಮನ ರಥಾಶ್ವಗಳಾದ ಶೈಬ್ಯ ಸುಗ್ರೀವ ಇವು ಗಳ ಅಂಶವಾಗಿ ಹಳದಿಬಣ್ಣವುಳ್ಳ ಮನೋರಥವೆಂಬ ಅಶ್ವವೂ, ಕಪ್ಪುಬಣ್ಣವುಳ್ಳ ಕರಾಳವೆಂಬ ಅಶ್ವವೂ, ಜಿಷ್ಣುವಿಷ್ಣುಗಳ ಅಂಶಪುರುಷರು ಹುಟ್ಟಿದ ದಿನವೇ ಒಂದೇ ಗರ್ಭದಲ್ಲಿ ಜನಿಸಿದುವು. ಪರಮಾತ್ಮನ ರಥಾಶ್ವಗಳಲ್ಲಿ ಇನ್ನೆರಡಾದ ಆ ಮೇಘಪುಷ್ಪ ಬಲಾಹಕ ಎಂಬುವು ಚಿನ್ನದ ಬಣ್ಣವುಳ್ಳ ಬಿಂದುಲ, ಬಿಳಿಯಬಣ್ಣವುಳ್ಳ ಹರಿನಾಗರ ಎಂಬ ಹೆಸರುಳ್ಳದ್ದಾಗಿ ಜನಿಸಿದುವು. ಬಲಶಾಲಿಗಳಾದ ಈ ನಾಲ್ಕು ಕುದುರೆಗಳೂ ದೇವಲೋಕಶರೀರಿಗಳಾಗಿ ಮುಂಚೆಯೇ ಹುಟ್ಟಿದ್ದುವು. ಅವು ಹುಟ್ಟಿದಮೇಲೆ ಅಂಶಪುರುಷರಾದ ಈ ಮಹಾತ್ಮರೂ ಅವತರಿಸಿದರು. ಇವುಗಳ ಉತ್ಪತ್ತಿಕ್ರಮವನ್ನು ನಿನಗೆ ತಿಳಿಸಿದೆ. ದೇವಲೋಕದವುಗಳಾದ ಈ ಕುದುರೆಗಳು ಭೂಮಿಯಲ್ಲಿ ಅವತ ರಿಸಲು ಇದೇ ಕಾರಣ ಎಂದು ಹೇಳಿ ಅವರ ಕುತೂಹಲವನ್ನು ತೃಪ್ತಿಗೊಳಿಸಿ ಪ್ರಕೃತ ವಿಷಯವನ್ನು ಮುಂದುವರಿಸಿದನು.

೫೦. ದೇಶರಾಜನು ಬಲಶಾಲಿಯಾದ ದೇವಸಿಂಹನಿಗೆ ಮನೋರಥವೆಂಬ ಅಶ್ವವನ್ನೂ, ಆಹ್ಲಾದನಿಗೆ ಕರಾಳಾಶ್ವವನ್ನೂ ಕೃಷ್ಣಾಂಶನಿಗೆ ಬಿಂದುಲವೆಂಬುದನ್ನೂ ಬ್ರಹ್ಮಾನಂದನಿಗೆ ಹರಿನಾಗರವನ್ನೂ ಕೊಟ್ಟನು.

ಬ್ರಹ್ಮಾನಂದಾಯ ಪುತ್ರಾಯ ಪ್ರದದೌ ಹರಿನಾಗರಂ ।
ತೇ ಚತ್ವಾರೋ ಹಯಾರೂಢಾ ಮೃಗಯಾರ್ಥಂ ವನಂ ಯಯುಃ ॥ ೫೧ ॥

ಹರಿಣೀಂ ವಡವಾಂ ಶುಭ್ರಾಂ ಬಲಖಾನಿಃ ಸಮಾರುಹತ್ ।
ತದನು ಪ್ರಯಯೌ ವೀರೋ ವನಂ ಸಿಂಹನಿಷೇವಿತಂ ॥ ೫೨ ॥

ಆಹ್ಲಾದೇನೈವ ಶಾರ್ದೂಲೋ ಹತಃ ಪ್ರಾಣಿಭಯಂಕರಃ ।
ದೇವಸಿಂಹೇನ ಸಿಂಹಶ್ಚ ಸೂಕರೋ ಬಲಖಾನಿನಾ ॥ ೫೩ ॥

ಬ್ರಹ್ಮಾನಂದೇನ ಹರಿಣೋ ಹತಸ್ತತ್ರ ಮಹಾವನೇ ।
ಮೃಗಾಃ ಶತಂ ಹತಾಸ್ತೈಶ್ಚ ತಾನ್ಗೃಹೀತ್ವಾ ಗೃಹಂ ಯಯುಃ ॥ ೫೪ ॥

ಏತಸ್ಮಿನ್ನಂತರೇ ದೇವೀ ಶಾರದಾ ಚ ಶುಭಾನನಾ ।
ಮೃಗೀ ಸ್ವರ್ಣಮಯೀ ಭೂತ್ವಾ ತೇಷಾಮಗ್ರೇ ಪ್ರಧಾವಿತಾ ॥ ೫೫ ॥

---

೫೧-೫೨ ತಮ್ಮತಮ್ಮ ಕುದುರೆಗಳನ್ನು ಏರಿಕೊಂಡು ಆ ನಾಲ್ವರೂ ಸಿಂಹಾದಿ ದುಷ್ಟಮೃಗಭರಿತವಾದ ಅರಣ್ಯಕ್ಕೆ ಬೇಟೆಗಾಗಿ ಹೋದರು. ಶುಭ್ರವರ್ಣವುಳ್ಳ ಹರಿಣೀ ಅಶ್ವವನ್ನು ಏರಿಕೊಂಡು ಬಲಖಾನಿಯೂ ಅವರ ಜೊತೆಯಲ್ಲಿಯೇ ಕಾಡಿನೊಳಕ್ಕೆ ನುಗ್ಗಿದನು.

೫೩. ಆ ಮಹಾರಣ್ಯದಲ್ಲಿ ಪ್ರಾಣಿಭಯಂಕರವಾದ ಒಂದು ಹುಲಿಯನ್ನು ಆಹ್ಲಾದನು ಸಂಹರಿಸಿದನು. ದೇವಸಿಂಹನು ಒಂದು ಸಿಂಹವನ್ನು ಹೊಡೆದನು. ಬಲಖಾನಿಯು ಕಾಡುಹಂದಿಯನ್ನು ಇರಿದನು.

೫೪. ಬ್ರಹ್ಮಾನಂದನು ಜಿಂಕೆಯನ್ನು ಬೆನ್ನಟ್ಟಿಹೋಗಿ ಕೊಂದನು. ಈರೀತಿ ಅವರು ನೂರಾರು ಮೃಗಗಳನ್ನು ಕೊಂದು ಅವುಗಳನ್ನೆಲ್ಲಾ ತೆಗೆದುಕೊಂಡು ಮನೆಗೆ ಹೊರಡುವುದರಲ್ಲಿದ್ದರು.

೫೫. ಈ ಸನ್ನಿವೇಶದಲ್ಲಿ ಪ್ರಸನ್ನವದನೆಯಾದ ಶಾರದಾದೇವಿಯು ಸುವರ್ಣ ಮೃಗೀ (ಚಿನ್ನದಜಿಂಕೆ) ರೂಪವನ್ನು ಧರಿಸಿ ಅವರೆದುರಿಗೆ ಸುಳಿದಳು.

ದೃಷ್ಟ್ವಾ ತಾಂ ಮೋಹಿತಾಃ ಸರ್ವೇ ಸ್ವೈಃಸ್ವೈರ್ಬಾಣೈರತಾಡಯನ್ ।
ಶರಾಸ್ತು ಸಂಕ್ಷಯಂ ಜಗ್ಮುರ್ಮೃಗ್ಯಂಗೇ ಬಲವತ್ತರಾಃ ॥ ೫೬ ॥

ಆಹ್ಲಾದಾದ್ಯಾಶ್ಚ ತೇ ಶೂರಾ ವಿಸ್ಮಿತಾಶ್ಚ ಬಭೂವಿರೇ ।
ತಸ್ಮಿನ್ ಕಾಲೇ ಸ ಕೃಷ್ಣಾಂಗೋ ಬಾಣೇನೈವ ಹ್ಯತಾಡಯತ್ ॥ ೫೭ ॥

ತದಾ ಚ ಪೀಡಿತಾ ದೇವೀ ಭಯಭೀತಾ ಯಯೌ ವನಂ ।
ಕೃಷ್ಣಾಂಶಃ ಕ್ರೋಧತಾಮ್ರಾಕ್ಷಸ್ತತ್ಪಶ್ಚಾತ್ಪ್ರಯಯೌ ಬಲೀ ॥ ೫೮ ॥

ವನಾಂತರಂ ಚ ಸಂಪ್ರಾಪ್ಯ ದೇವೀ ಧೃತ್ವಾ ಸ್ವಕಂ ವಪುಃ ।
ತಮುವಾಚ ಪ್ರಸನ್ನಾಕ್ಷೀ ಪರೀಕ್ಷಾ ತೇ ಮಯಾ ಕೃತಾ ॥ ೫೯ ॥

ಯದಾ ತೇ ಚ ಭಯಂ ಭೂಯಾತ್ತದಾ ತ್ವಂ ಮಾಂ ಸದಾ ಸ್ಮರ ।
ಸಾಧಯಿಷ್ಯಾಮಿ ತೇ ಕಾರ್ಯಂ ಕೃಷ್ಣಾಂಶೋ ಹಿ ಭವಾನ್ವಿಭುಃ ॥ ೬೦ ॥

---

೫೬. ಆ ಪ್ರಕಾರದ ಚಿನ್ನದ ಜಿಂಕೆಯನ್ನು ನೋಡಿ ಆಶೆಗೊಂಡು ಅವರೆಲ್ಲರೂ ಅದರ ಬೆನ್ನಟ್ಟಿಹೋಗಿ ತಮ್ಮ ಬಾಣಗಳನ್ನು ಅದಕ್ಕೆ ಪ್ರಯೋಗಿಸಿದರು. ಇವರ ಮಹಾಬಾಣಗಳು ತೀಕ್ಷ್ಣಧಾರೆಗಳಾಗಿ ಇದ್ದರೂ ಆ ಜಿಂಕೆಯ ದೇಹದಲ್ಲಿಯೇ ಮಾಯವಾದುವು.

೫೭-೫೮. ತಮ್ಮ ಬಾಣ ಹೀಗಾದ್ದನ್ನು ನೋಡಿ ಆಹ್ಲಾದನೇ ಮೊದಲಾದವರು ಆಶ್ಚರ್ಯಚಕಿತರಾದರು. ಆಗ ಕೃಷ್ಣಾಂಶನು ತನ್ನ ಬಾಣದಿಂದ ಹೊಡೆಯಲಾಗಿ ಶಾರದಾಸ್ವರೂಪಿನ ಆ ಸ್ವರ್ಣಮೃಗವು ನೊಂದು ಭೀತಿಪಟ್ಟು ನಡುಗಾಡಿಗೆ ಓಡಿತು. ಬಲಶಾಲಿಯೂ ರೋಷದಿಂದ ಕೆಂಪೇರಿದ ಕಣ್ಣುಗಳುಳ್ಳವನೂ ಆದ ಕೃಷ್ಣಾಂಶನು ಅದನ್ನು ಬೆನ್ನಟ್ಟಿಕೊಂಡು ತಾನೂ ಹೋದನು.

೫೯-೬೦. ವನಮಧ್ಯಕ್ಕೆ ಹೋಗುತ್ತಲೆ ಶಾರದಾದೇವಿಯು ಜಿಂಕೆಯರೂಪನ್ನು ಬಿಟ್ಟು ನಿಜರೂಪನ್ನು ಧರಿಸಿ ನಗೆಗೂಡಿದ ಮುಖವುಳ್ಳವಳಾಗಿ “ ಅಯ್ಯಾ ಶೂರನೆ! ನಾನು ನಿನ್ನನ್ನು ಪರೀಕ್ಷಿಸುವುದಕ್ಕಾಗಿಯೇ ಹೀಗೆಮಾಡಿದೆನು. ನಿನಗೆ ಮಹಾಭಯ ಪ್ರಾಪ್ತಿಯಾದ ಕಾಲದಲ್ಲಿ ನನ್ನನ್ನು ಸ್ಮರಿಸು ನಾನು ನಿನ್ನ ಕಾರ್ಯವನ್ನು ಸಾಧಿಸುತ್ತೇನೆ.

ಇತ್ಯುಕ್ತ್ವಾಂತರ್ಹಿತಾ ದೇವೀ ಶಾರದಾ ಸರ್ವಮಂಗಲಾ ।
ಕೃಷ್ಣಾಂಶಸ್ತು ಯಯೌ ಗೇಹಂ ತೈಶ್ಚ ಸಾರ್ಧಂ ಮುದಾ ಯುತಃ ॥ ೬೧ ॥

ತದಾ ಪರಾಕ್ರಮಂ ತೇಷಾಂ ದೃಷ್ಟ್ವಾ ರಾಜಾ ಸುಖೋಽಭವತ್ ।
ಗೃಹೇಗೃಹೇ ಚ ಸರ್ವೇಷಾಂ ಲಕ್ಷ್ಮೀರ್ದೇವೀ ಸಮಾವಿಶತ್ ॥ ೬೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ದಶಮೋಽಧ್ಯಾಯಃ



---

ಕೃಷ್ಣಾಂಶನಾದ ನೀನು ಅವರಿಗೆಲ್ಲಾ ವಿಭುವಾಗುತ್ತೀಯೆ" ಎಂದು ಹೇಳಿ ಸರ್ವ ಮಂಗಳೆಯಾದ ಶಾರದಾದೇವಿಯು ಅಲ್ಲಿಯೇ ಅದೃಶ್ಯಳಾದಳು.

೬೧-೬೨. ಬಳಿಕ ಕೃಷ್ಣಾಂಶನು ಈ ಮಾತನ್ನು ಕೇಳಿ ಸಂತೋಷಹೊಂದಿ ತನ್ನವರಿದ್ದ ಸ್ಥಳಕ್ಕೆ ಬಂದು ಅವರೆಲ್ಲರೊಡನೆ ಮನೆಗೆಬಂದನು. ಅವರುಗಳ ಪರಾಕ್ರಮವನ್ನು ತಿಳಿದು ರಾಜನು ಸುಖಿಯಾದನು. ಎಲ್ಲರ ಮನೆಯಲ್ಲಿಯೂ ಲಕ್ಷ್ಮೀದೇವಿಯು ನೆಲಸಿದಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಏಕಾದಶೋಽಧ್ಯಾಯಃ

॥ ಸೂತ ಉವಾಚ ॥

ದಶಾಬ್ದೇ ಚ ವಯಃ ಪ್ರಾಪ್ತೇ ವಿಷ್ಣೋಃ ಶಕ್ತ್ಯವತಾರಕೇ ।
ವಸನ್ತಸಮಯೇ ರಮ್ಯೇ ಯಯುಸ್ತೇ ಪ್ರಮದಾವನಮ್ ॥ ೧ ॥

ಊಷುಸ್ತತ್ರ ವ್ರತಾಚಾರೇ ಮಾಧವೇ ಕೃಷ್ಣವಲ್ಲಭೇ ।
ಸ್ನಾತ್ವಾ ಚ ಸಾಗರೇ ಪ್ರಾತಃ ಪೂಜಯಾಮಾಸುರಂಬಿಕಾಮ್ ॥ ೨ ॥

ಋತುಕಾಲೋದ್ಭವೈಃ ಪುಷ್ಪೈರ್ಧೂಪೈರ್ದೀಪೈರ್ವಿಧಾನತಃ ।
ಜಪ್ತ್ವಾ ಸಪ್ತಶತೀಸ್ತೋತ್ರಂ ದಧ್ಯುಃ ಸರ್ವಕರೀಂ ಶಿವಾಮ್ ॥ ೩ ॥

---

### ಹನ್ನೊಂದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ವಿಷ್ಣುಶಕ್ತಿಯ ಅವತಾರನೆನಿಸಿದ ಕೃಷ್ಣಾಂಶನಿಗೆ ಹತ್ತುವರ್ಷ ತುಂಬುತ್ತಲೆ ಮನೋಹರವಾದ ವಸಂತಕಾಲದಲ್ಲಿ ಒಂದು ದಿನ ಇವರೆಲ್ಲರೂ ಪ್ರಮದಾವನಕ್ಕೆ ಹೋದರು.

೨. ಅಲ್ಲಿ ಕೃಷ್ಣನಿಗೆ ಪ್ರಿಯವಾದ ವಸಂತೋತ್ಸವ ವ್ರತವನ್ನು ಆಚರಿಸುತ್ತಿದ್ದರು. ಬೆಳಗ್ಗೆ ಸಮುದ್ರಸ್ನಾನಮಾಡಿ ಆ ಋತುವಿನಲ್ಲಿ ಸಂಮೃದ್ಧಿಯಾಗಿ ಸಿಕ್ಕುವ ಹೂವುಗಳಿಂದಲೂ, ಧೂಪ ದೀಪಗಳಿಂದಲೂ, ಅಂಬಿಕೆಯನ್ನು ವಿಧಿಪ್ರಕಾರ ಪೂಜಿಸಿದರು.

೩. ಆಮೇಲೆ ಸಪ್ತಶತೀ ಜಪವನ್ನುಮಾಡಿ ಸರ್ವಕಾರ್ಯನಿಯಾಮಿಕೆಯಾದ ಆದಿಶಕ್ತಿಯನ್ನು ಧ್ಯಾನಿಸುತ್ತಿದ್ದರು.

ಕಂದಮೂಲಫಲಾಹಾರಾ ಜೀವಹಿಂಸಾವಿವರ್ಜಿತಾಃ ।
ತೇಷಾಂ ಭಕ್ತಿಂ ಸಮಾಲೋಕ್ಯ ಮಾಸಾನ್ತೇ ಜಗದಂಬಿಕಾ ॥ ೪ ॥

ದದೌ ತೇಭ್ಯೋ ವರಂ ರಮ್ಯಂ ತಚ್ಛೃಣುಧ್ವಂ ಸಮಾಹಿತಾಃ ।
ಆಹ್ಲಾದಾಯ ಸುರತ್ವಂ ಚ ಬಲತ್ವಂ ಬಲಖಾನಯೇ ॥ ೫ ॥

ಕಾಲಜ್ಞತ್ವಂ ಚ ದೇವಾಯ ಬ್ರಹ್ಮಜ್ಞತ್ವಂ ನೃಪಾಯ ಚ ।
ಕೃಷ್ಣಾಂಶಾಯೈವ ಯೋಗತ್ವಂ ದತ್ತ್ವಾ ಚಾಂದರ್ಧೇ ಶಿವಾ ॥ ೬ ॥

ಕೃತಕೃತ್ಯಾಸ್ತದಾ ತೇ ವೈ ಸ್ವಗೇಹಂ ಪುನರಾಯಯುಃ ।
ತೇಷಾಂ ಪ್ರಾಪ್ತೇ ವರೇ ರಮ್ಯೇ ಮಲನಾ ಪುತ್ರಮೂರ್ಜಿತಂ ॥ ೭ ॥

ಶ್ಯಾಮಾಂಗಂ ಸಾತ್ಯಕೇರಂಶಂ ಸುಷುವೇ ಶುಭಲಕ್ಷಣಂ ।
ಸ ಜ್ಞೇಯೋ ರಣಜಿಚ್ಛೂರೋ ರಾಜನ್ಯಪ್ರಿಯಕಾರಕಃ ॥ ೮ ॥

---

೪. ಸುಖದಲ್ಲಿ ಬೆಳೆದ ಅವರು ನಿತ್ಯವೂ ಗೆಡ್ಡೆಗೆಣಸುಗಳನ್ನು ಆಹಾರವಾಗಿ ಸೇವಿಸುತ್ತಾ, ಅಹಿಂಸಾನಿಯಮವಿಶಿಷ್ಟರಾಗಿದ್ದರು. ಅವರುಗಳ ಈ ನಿಶ್ಚಲಭಕ್ತಿಯನ್ನು ನೋಡಿದ ಜಗದಂಬಿಕೆಯು ಒಂದು ತಿಂಗಳಾಗುತ್ತಲೆ ಅವರಿಗೆ ಪ್ರಸನ್ನೆಯಾದಳು.

೫. ಆ ದೇವಿಯು ಅವರೆಲ್ಲರಿಗೂ ವರವನ್ನು ಕೊಟ್ಟಳು. ಅದರ ವಿಷಯವನ್ನು ಹೇಳುತ್ತೇನೆ ಸಾವಧಾನದಿಂದ ಕೇಳಿ. ಆಹ್ಲಾದನಿಗೆ ದೇವತ್ವವನ್ನೂ, ಬಲಖಾನಿಗೆ ಬಲಶಾಲಿತ್ವವನ್ನೂ, ಕರುಣಿಸಿದಳು.

೬. ದೇವಸಿಂಹನಿಗೆ ತ್ರಿಕಾಲ (ದಿವ್ಯ) ಜ್ಞಾನವನ್ನೂ, ರಾಜನಿಗೆ ಪರಬ್ರಹ್ಮ ಸ್ವರೂಪದ ಜ್ಞಾನವನ್ನೂ, ಕೃಷ್ಣಾಂಶನಿಗೆ ಯೋಗಶಕ್ತಿಯನ್ನು, ಕರುಣಿಸಿ ದೇವಿಯು ಅಲ್ಲಿಯೇ ಅದೃಶ್ಯಳಾದಳು.

೭. ಈ ವರಗಳನ್ನು ಪಡೆದು ಅವರು ತಾವೇ ಧನ್ಯರೆಂದುಕೊಂಡು ತಮ್ಮ ತಮ್ಮ ನಿವಾಸವನ್ನು ಸೇರಿದರು. ಈರೀತಿ ಶ್ರೇಷ್ಠವೂ, ಸೊಗಸೂ, ಆದ ವರಗಳು ಅವರಿಗೆ ಲಭಿಸಿದುವು.

೮. ಬಳಿಕ ಮಲನಾದೇವಿಯು ನೀಲವರ್ಣದ ದೇಹವೂ, ಶುಭಕರವಾದ ಲಕ್ಷಣವೂ ಉಳ್ಳ ಸಾತ್ಯಕಿಯ ಅಂಶದ ಪುತ್ರರತ್ನವನ್ನು ಹೆತ್ತಳು. ರಣಜಿತ್ ಎಂಬ ಹೆಸರಿನ ಆತನು ಶೂರನೂ ರಾಜಸಮೂಹಕ್ಕೆ ಪ್ರಿಯಕರನೂ ಎನಿಸಿದನು.

ಆಷಾಢೇ ಮಾಸಿ ಸಂಪ್ರಾಪ್ತೇ ಕೃಷ್ಣಾಂಶೋ ಹಯವಾಹನಃ ।
ಉರ್ವೀಯಾಂ ನಗರೀಂ ಪ್ರಾಪ್ತ ಏಕಾಕೀ ನಿರ್ಭಯೋ ಬಲೀ ॥ ೯ ॥

ದೃಷ್ಟ್ವಾ ಸ ನಗರೀಂ ರಮ್ಯಾಂ ಚತುರ್ವರ್ಣನಿಷೇವಿತಾಂ ।
ದ್ವಿಜಶಾಲಾಂ ಯಯೌ ಶೂರೋ ದ್ವಿಜಧೇನುಪ್ರಪೂಜಕಃ ॥ ೧೦ ॥

ದತ್ವಾ ಸ್ವರ್ಣಂ ದ್ವಿಜಾತಿಭ್ಯಃ ಸಂತರ್ಪ್ಯ ದ್ವಿಜದೇವತಾಃ ।
ಮಹೀಪತಿಗೃಹಂ ರಮ್ಯಂ ಜಗಾಮ ಬಲವತ್ತರಃ ॥ ೧೧ ॥

ನತ್ವಾ ಸ ಮಾತುಲಂ ಧೀಮಾಂಸ್ತಥಾನ್ಯಾಂಶ್ಚ ಸಭಾಸದಃ ॥ ೧೨ ॥

ತದಾ ನೃಪಾಜ್ಞಯಾ ಶೂರಾ ಬಂಧನಾಯ ಸಮುದ್ಯತಾಃ ।
ಖಡ್ಗಹಸ್ತಾಃ ಸಮಾಜಗ್ಮುರ್ಯಥಾ ಸಿಂಹಂ ಗಜಾಃ ಶಶಾಃ ॥ ೧೩ ॥

---

೯. ಆಷಾಢಮಾಸದಲ್ಲಿ ಒಂದುದಿನ ಬಲಶಾಲಿಯಾದ ಕೃಷ್ಣಾಂಶನೊಬ್ಬನೇ ಕುದುರೆಯನ್ನೇರಿಕೊಂಡು ನಿರ್ಭಯದಿಂದ ಮಹೀಪತಿರಾಜನ ರಾಜಧಾನಿಗೆ ಹೋದನು.

೧೦. ಚಾತುರ್ವರ್ಣ್ಯದ ಜನಗಳಿಂದ ನಿಬಿಡವಾಗಿ ಸಂದರವಾದ ಆ ಪಟ್ಟಣವನ್ನೆಲ್ಲಾ ಸುತ್ತಿ ನೋಡಿದನು. ಗೋಬ್ರಾಹ್ಮಣಸೇವೆಯಲ್ಲಿ ನಿರತನೂ, ಶೂರನೂ, ಆದ ಅವನು ಬ್ರಾಹ್ಮಣಶ್ರೇಣಿಯನ್ನು ಪ್ರವೇಶಿಸಿದನು.

೧೧. ಅಲ್ಲಿ ಅವರುಗಳಿಗೆಲ್ಲಾ ಸಮೃದ್ಧಿಯಾಗಿ ಸುವರ್ಣನಾಣ್ಯಗಳನ್ನು ಕೊಟ್ಟು ದೇವಬ್ರಾಹ್ಮಣರನ್ನು ಸಂತುಷ್ಟಿಪಡಿಸಿ ಬಳಿಕ ಬಲವಾದ ಕಾವಲುಳ್ಳ ಮಹೀಪತಿ ರಾಜನ ಸುಂದರವಾದ ಅರಮನೆಗೆ ಹೋದನು.

೧೨. ಮೇಧಾವಿಯಾದ ಆ ಕುಮಾರನು ಅಲ್ಲಿಹೋಗಿ ಸೋದರಮಾವನಿಗೂ ಅಲ್ಲಿಯೇ ಸಮೀಪದಲ್ಲಿದ್ದ ಸಭಾಸದರಿಗೂ ನಮಸ್ಕರಿಸಿದನು.

೧೩. ಆಗ ರಾಜನ ಸೂಚನೆಯಂತೆ ಕೆಲವರು ಶೂರರು ಈ ಕುಮಾರನನ್ನು ಬಂಧಿಸಲು ಪ್ರಯತ್ನಮಾಡಿ ಕೈಯಲ್ಲಿ ಕತ್ತಿಯನ್ನು ಹಿಡಿದು ಇವನ ಮೇಲೆ ನುಗ್ಗಿದರು. ಆಗ ಅವರ ಸ್ಥಿತಿಯು ಸಿಂಹವನ್ನು ಎದುರಿಸುವ ಆನೆಯಂತೆಯೂ ಮೊಲಗಳಂತೆಯೂ ಇದ್ದಿತು.

ಮೋಹಿತಂ ತಂ ನೃಪಂ ಕೃತ್ವಾ ದುಷ್ಟಬುದ್ಧಿರ್ಮಹೀಪತಿಃ ।
ಕೃತ್ವಾ ಲೋಹಮಯಂ ಜಾಲಂ ತಸ್ಯೋಪರಿ ಸಮಾದಧೇ ॥ ೧೪ ॥

ಏತಸ್ಮಿನ್ನಂತರೇ ವೀರೋ ಬೋಧಿತೋ ದೇವಮಾಯಯಾ ।
ಆಗಸ್ಕೃತಾನ್ರಿಪೂನ್ ಜ್ಞಾತ್ವಾ ಖಡ್ಗಹಸ್ತಃ ಸಮಾವಧೀತ್ ॥ ೧೫ ॥

ಹತ್ವಾ ಪಂಚಶತಂ ಶೂರೋ ಹಯಾರೂಢೋ ಮಹಾಬಲೀ ।
ಉರ್ವೀಯಾಂ ನಗರೀಂ ಪ್ರಾಪ್ಯ ಜಲಪಾನೇ ಮನೋ ದಧೌ ॥ ೧೬ ॥

ಕೂಪೇ ದೃಷ್ಟ್ವಾ ಶುಭಾ ನಾರ್ಯೋ ಘಟಪೂರ್ತಿಕರೀಸ್ತದಾ ।
ಉವಾಚ ಮಧುರೋ ವಾಕ್ಯಂ ದೇಹಿ ಸುಂದರಿ ಮೇ ಜಲಂ ॥ ೧೭ ॥

---

೧೪. ದುಷ್ಟಬುದ್ಧಿಯುಳ್ಳ ಆ ರಾಜನು ಏನೋ ಮೋಸದಿಂದ ಕೃಷ್ಣಾಂಶನಿಗೆ ವ್ಯಾಮೋಹ ಎಚ್ಚರತಪ್ಪುವಂತೆ ಮಾಡಿ ಅವನ ಸುತ್ತಲೂ ಲೋಹನಿರ್ಮಿತವಾದ ಬಲೆಯನ್ನು ರಚಿಸಿದನು.

೧೫ ಇಷ್ಟರೊಳಗೆ ದೇವಮಾಯೆಯಿಂದ ಆ ವೀರನು ಎಚ್ಚರಗೊಂಡು ತನ್ನ ವಿಷಯದಲ್ಲಿ ಶತ್ರುಗಳು ಅಪರಾಧಮಾಡಿರುವುದನ್ನು ತಿಳಿದು ಕೈಯಲ್ಲಿ ಕತ್ತಿಯನ್ನು ಹಿಡಿದು ಅವರನ್ನು ಕೊಲ್ಲಲು ಉದ್ಯುಕ್ತನಾದನು.

೧೬ ಮಹಾಬಲಶಾಲಿಯಾದ ಅವನು ಐನೂರುಮಂದಿ ವೀರರನ್ನು ಕೊಂದು ಹಾಕಿ, ಕೂಡಲೆ ತನ್ನ ಕುದುರೆಯನ್ನೇರಿಕೊಂಡು ಅರಮನೆಯಿಂದ ಹೊರಟು ಆ ನಗರದ ರಾಜಬೀದಿಗೆ ಬಂದನು.

೧೭. ಈ ಹೋರಾಟದಲ್ಲಿ ದಣಿದು ಬಾಯಾರಿಕೆಯಾಗಿ ಎಲ್ಲಾದರೂ ಸಿಕ್ಕಿದರೆ ನೀರನ್ನು ಕುಡಿಯಬೇಕೆಂದಿರಲು ಸಮೀಪದಲ್ಲಿದ್ದ ಬಾವಿಯಿಂದ ಕೆಲವರು ಸುಮಂಗಲಿಸ್ತ್ರೀಯರು ಕೊಡಗಳಲ್ಲಿ ನೀರು ತುಂಬಿಕೊಂಡು ಬರುವುದನ್ನು ನೋಡಿದನು. ಅವರಲ್ಲಿ ಒಬ್ಬಾಕೆಯನ್ನು ಕುರಿತು "ಸುಂದರಿ! ನನಗೆ ಸ್ವಲ್ಪ ನೀರನ್ನು ಕೊಡು" ಎಂದು ಸವಿನುಡಿಯಿಂದ ಕೇಳಿದನು.

ದೃಷ್ಟ್ವಾ ತಾಃ ಸುಂದರಂ ರೂಪಂ ಮೋಹನಾಯೋಪಚಕ್ರಿರೇ ।
ಭಿತ್ವಾ ತಾಸಾಂ ತು ವೈ ಕುಂಭಾನ್ಪಾಯಯಿತ್ವಾ ಹಯಂ ಜಲಂ ॥ ೧೮ ॥

ವನಂ ಗತ್ವಾ ರಿಪುಂ ಜಿತ್ವಾ ಬದ್ಧ್ವಾ ತಮುಭಯಂ ಬಲೀ ।
ಚಂಡಿಕಾಪಾರ್ಶ್ವಮಾಗಮ್ಯ ತದ್ವಧಾಯ ಮನೋ ದಧೇ ॥ ೧೯ ॥

ಶ್ರುತ್ವಾ ಸ ಕರುಣಂ ವಾಕ್ಯಂ ತ್ಯಕ್ತ್ವಾ ಸ್ವನಗರಂ ಯಯೌ ।
ನೃಪಾಂತಿಕಮುಪಾಗಮ್ಯ ವರ್ಣಯಾಮಾಸ ಕಾರಣಂ ॥ ೨೦ ॥

ಶ್ರುತ್ವಾ ಪರಿಮಲೋ ರಾಜಾ ದ್ವಿಜಾತಿಭ್ಯೋ ದದೌ ಧನಂ ।
ಸಮಾಘ್ರಾಯ ಸ ಕೃಷ್ಣಾಂಶಂ ಕೃತಕೃತ್ಯೋಽಭವನ್ನೃಪಃ ॥ ೨೧ ॥

---

೧೮. ಆ ಸ್ತ್ರೀಯರು ಇವನ ಮನೋಹರಾಕಾರವನ್ನು ಕಂಡು ಮೋಹಗೊಂಡು ತಾವು ತಂದ ಗಡಿಗೆಗಳ ನೀರನ್ನು ಕೊಟ್ಟರು. ಕೃಷ್ಣಾಂಶನು ತಾನು ಜಲಪಾನಮಾಡಿ ಅನಂತರ ಅವರ ಅನುಮತಿಯಿಂದ ಒಂದು ಹರವಿಯನ್ನು ಎರಡು ಹೋಳುಮಾಡಿ ಆ ಹೋಡಿನಲ್ಲಿ ತನ್ನ ಕುದುರೆಗೂ ನೀರು ಕುಡಿಸಿದನು.

೧೯. ಅನಂತರ ಆ ಬಲಶಾಲಿಯು ವನಕ್ಕೆ ಹೋಗಿ ಶತ್ರುಪಕ್ಷದವರನ್ನು ಜಯಿಸಿ ಅವರಲ್ಲಿ ಇಬ್ಬರನ್ನು ಬಂಧಿಸಿ, ಚಂಡಿಕಾ ದೇವಾಲಯಕ್ಕೆ ಕರೆತಂದು ಅವರಿಬ್ಬರನ್ನೂ ಬಲಿಕೊಡಬೇಕೆಂದು ಮನಸ್ಸುಮಾಡಿದನು.

೨೦ ಇದನ್ನು ತಿಳಿದು ಅವರು ಗೋಳಾಡತೊಡಗಲು ಅವರ ದೀನವಾಕ್ಯದಿಂದ ಅವರಲ್ಲಿ ದಯೆಹುಟ್ಟಿ ಅವರಿಬ್ಬರನ್ನೂ ಬಿಟ್ಟುಬಿಟ್ಟು ತನ್ನ ರಾಜಧಾನಿಗೆ ಬಂದನು. ಕೂಡಲೇ ಪರಿಮಳರಾಜನ ಸಮೀಪಕ್ಕೆಹೋಗಿ ಅಲ್ಲಿ ನಡೆದುದನ್ನೂ ಅವರನ್ನು ತಾನು ಉಳಿಸಿಬಂದುದಕ್ಕೆ ಕಾರಣವನ್ನೂ ವರ್ಣಿಸಿದನು.

೨೧ ಪರಿಮಳರಾಜನು ಇದನ್ನೆಲ್ಲಾ ಕೇಳಿ, ತನ್ನ ಮಗನು ಶತ್ರುವಿನ ಗಂಡಾಂತರದಿಂದ ಪಾರಾಗಿ ಸುರಕ್ಷಿತವಾಗಿ ಬಂದುದಕ್ಕಾಗಿ ಬ್ರಾಹ್ಮಣರಿಗೆ ಬೇಕಾದಷ್ಟು ಧನವನ್ನು ದಾನಮಾಡಿದನು. ಮತ್ತು ಪುತ್ರವಾತ್ಸಲ್ಯದಿಂದ ಕೃಷ್ಣಾಂಶನ ಶಿರಸ್ಸನ್ನು ಆಘ್ರಾಣಿಸಿ ಸದ್ಯಕ್ಕೆ ನಾನೇ ಧನ್ಯನು ಎಂದುಕೊಂಡನು.

ಸಂಪ್ರಾಪ್ತ್ಯೈಕಾದಶಾಬ್ದೇ ತು ಕೃಷ್ಣಾಂಶೋ ಯುದ್ಧದುರ್ಮದೇ ।
ಮಹೀಪತಿರ್ನಿರುತ್ಸಾಹಃ ಪ್ರಯಯೌ ದೇಹಲೀಂ ಪ್ರತಿ ॥ ೨೨ ॥

ಬಲಿಂ ಯಥೋಚಿತಂ ದತ್ವಾ ಭಗಿನ್ಯೈ ಭಯಕಾತರಃ ।
ರುರೋದ ಬಹುಧಾ ದುಃಖಂ ದೇಶರಾಜಾತ್ಮಜಪ್ರಜಂ ॥ ೨೩ ॥

ಅಗಮಾ ಭಗಿನೀ ತಸ್ಯ ದೃಷ್ಟ್ವಾ ಭ್ರಾತರಮಾತುರಂ ।
ಸ್ವಪತಿಂ ವರ್ಣಯಾಮಾಸ ಶ್ರುತ್ವಾ ರಾಜಾಬ್ರವೀದಿದಂ ॥ ೨೪ ॥

ಅದ್ಯಾಹಂ ಸ್ವಬಲೈಃ ಸಾರ್ಧಂ ಗತ್ವಾ ತತ್ರ ಮಹಾವತೀಂ ।
ಹನಿಷ್ಯಾಮಿ ಮಹಾದುಷ್ಟಂ ದೇಶರಾಜಸುತಂ ರಿಪುಂ ॥ ೨೫ ॥

ಇತ್ಯುಕ್ತ್ವಾ ಧುಂಧುಕಾರಂ ಚ ಸಮಾಹೂಯ ಮಹಾಬಲಂ ।
ಸೈನ್ಯಮಾಜ್ಞಾಪಯಾಮಾಸ ಸಪ್ತಲಕ್ಷಂ ತನುತ್ಯಜಂ ॥ ೨೬ ॥

---

೨೨. ಆ ಕೃಷ್ಣಾಂಶನು ಹನ್ನೊಂದು ವರ್ಷದವನಾಗುತ್ತಲೆ ಸಹಜಶೌರ್ಯದಿಂದ ಯುದ್ಧೋತ್ಸಾಹವುಳ್ಳವನಾಗಿರುವುದನ್ನು ತಿಳಿದು ಮಹೀಪತಿರಾಜನು ನಿರುತ್ಸಾಹದಿಂದ ದೇಹಲಿಗೆ ಹೋದನು.

೨೩. ಅಲ್ಲಿ ತನ್ನ ತಂಗಿಗೆ ಉಚಿತಪ್ರಕಾರವಾಗಿ ಗೌರವದಿಂದ ಕಾಣಿಕೆಯನ್ನು ಸಮರ್ಪಿಸಿ, ಭಯದಿಂದ ನಡುಗುತ್ತ ದೇಶರಾಜನ ಮಗನಾದ ಕೃಷ್ಣಾಂಶನಿಂದ ತನಗೆ ಒದಗಿದ ಉಪದ್ರವವನ್ನು ಹೇಳಿಕೊಂಡು ಬಹುವಾಗಿ ದುಃಖಿಸಿದನು.

೨೪. ಆಗ ಅವನ ತಂಗಿಯಾದ ಅಗಮಾದೇವಿಯು ತನ್ನ ಅಣ್ಣನು ದುಃಖಪಡುವುದನ್ನು ನೋಡಿ ಈ ವಿಚಾರವನ್ನೆಲ್ಲಾ ತನ್ನ ಗಂಡನಿಗೆ ಹೇಳಿದಳು. ಆಗ ಪೃಥ್ವೀರಾಜನು ಅದನ್ನು ಕೇಳಿ ಇಂತೆಂದನು.

೨೫. "ಈಕ್ಷಣವೇ ನಾನು ನನ್ನ ಸೇನಾಸಮೇತನಾಗಿ ಮಹಾವತಿಗೆ ಹೋಗಿ ದೇಶರಾಜನ ಪುತ್ರನಾದ ಆ ಮಹಾದುಷ್ಟ ಶತ್ರುವನ್ನು ಕೊಂದುಹಾಕಿಬಿಡುತ್ತೇನೆ."

೨೬. ಹೀಗೆಂದುಹೇಳಿ ಪೃಥ್ವೀರಾಜನು ಸಹೋದರನಾದ ಧುಂಧುಕಾರನನ್ನು ಕರೆದು "ಪ್ರಾಣದಮೇಲೆ ಲಕ್ಷ್ಯವಿಲ್ಲದೆ ಹೋರಾಡುವ ಏಳುಲಕ್ಷ ಮಹಾಸೇನೆಯನ್ನು ಯುದ್ಧಕ್ಕೆ ಹೊರಡಿಸು" ಎಂದು ಆಜ್ಞಾಪಿಸಿದನು.

**ಕೇಚಿಚ್ಛೂರಾ ಹಯಾರೂಢಾ ಉಷ್ಟ್ರಾರೂಢಾ ಮಹಾಬಲಾಃ ।**
**ಗಜಾರೂಢಾ ರಥಾರೂಢಾಃ ಸಂಯಯುಶ್ಚ ಪದಾತಯಃ ॥ ೨೭ ॥**

**ದೇವಸಿಂಹಸ್ತು ಕಾಲಜ್ಞಃ ಶ್ರುತ್ವಾ ಚಾಗಮನಂ ರಿಪೋಃ ।**
**ನೃಪಪಾರ್ಶ್ವಂ ಸಮಾಗಮ್ಯ ಸರ್ವಂ ರಾಜ್ಞೇ ನ್ಯವೇದಯತ್ ॥ ೨೮ ॥**

**ಶ್ರುತ್ವಾ ಪರಿಮಲೋ ರಾಜಾ ವಿಹ್ವಲೋಽಭೂದ್ಭಯಾತುರಃ ।**
**ಬಲಖಾನಿಸ್ತಮುತ್ಥಾಪ್ಯ ಹರ್ಷಯುಕ್ತ ಇವಾಹ ಚ ॥ ೨೯ ॥**

**ಅದ್ಯಾಹಂ ಚ ಮಹೀರಾಜಂ ಧುಂಧುಕಾರಂ ಸಸೈನ್ಯಕಂ ।**
**ಜಿತ್ವಾ ದಂಡ್ಯಂ ಚ ಭವತಃ ಕರಿಷ್ಯಾಮಿ ತವಾಜ್ಞಯಾ ॥ ೩೦ ॥**

**ಇತ್ಯುಕ್ತ್ವಾ ತಂ ನಮಸ್ಕೃತ್ಯ ಸೇನಾಪತಿರಭೂನ್ಮನೇ ।**
**ತದಾ ತು ನಿರ್ಭಯಾ ವೀರಾ ದೃಷ್ಟ್ವಾ ರಾಜಾನಮಾತುರಂ ॥ ೩೧ ॥**

---

೨೭. ಕೂಡಲೇ ಮಹಾಬಲಶಾಲಿಗಳಾದ ಕೆಲವರು ಆನೆಗಳಮೇಲೂ, ಒಂಟೆಗಳಮೇಲೂ, ಕುದುರೆಗಳಮೇಲೂ, ರಥಗಳಮೇಲೂ, ಏರಿಕೊಂಡರು. ಪದಾತಿ ಸೈನಿಕರು ಪಾದಚಾರಿಗಳಾಗಿ ಹೊರಟರು.

೨೮. ದೇವಿಯಿಂದ ತ್ರಿಕಾಲಜ್ಞತೆಯ ವರವನ್ನು ಪಡೆದುಬಂದಿದ್ದ ದೇವಸಿಂಹನು ಶತ್ರುವು ತಮ್ಮಮೇಲೆ ಯುದ್ಧಕ್ಕೆ ಬರುತ್ತಿರುವುದನ್ನು ತಿಳಿದುಕೊಂಡು ಪರಿಮಳ ರಾಜನಬಳಿಗೆ ಬಂದು ತನಗೆ ಜ್ಞಾನದೃಷ್ಟಿಯಿಂದ ತಿಳಿದ ಆ ವಿಚಾರವನ್ನು ಹೇಳಿದನು.

೨೯. ಆಗ ಪರಿಮಳರಾಜನು ಭಯದಿಂದ ಧೈರ್ಯಗುಂದಿ ಮೂರ್ಛಿತನಾದನು. ಆಗ ಬಲಖಾನಿಯು ಅವನಿಗೆ ಮೂರ್ಛೆತಿಳಿಯುವಂತೆ ಮಾಡಿ, ಸಂತೋಷ ಹುಟ್ಟಿಸುವುದಕ್ಕಾಗಿ ಮಾತಾಡತೊಡಗಿ,

೩೦ "ನಿನ್ನ ಅಪ್ಪಣೆಯಾದರೆ ಈಕ್ಷಣದಲ್ಲಿ ನಾನು ಸೇನಾಸಮೇತನಾಗಿ ಹೋಗಿ, ಪೃಥ್ವೀರಾಜ ಧುಂಧುಕಾರರನ್ನು ಜಯಿಸಿ ನಿನ್ನದಂಡನೆಗೆ ಗುರಿಯಾಗುವಂತೆ ಮಾಡುವೆನು" ಎಂದನು.

೩೧. ಅಯ್ಯಾ ಮುನಿಯೇ! ಬಲಖಾನಿಯು ಈರೀತಿಹೇಳಿ ಅವನನ್ನು ಸಂತೈಸಿ ಬಳಿಕ ಅವನಿಂದ ಸನ್ಮಾನಿತನಾಗಿ ನಮಸ್ಕರಿಸಿ ತಾನು ಸೇನಾಪತಿ ಪದವಿಯನ್ನು ವಹಿಸಿಕೊಂಡನು. ರಾಜನು ಚಿಂತಾಕ್ರಾಂತನಾಗಿರುವುದನ್ನು ನೋಡಿ, ರಣಮತ್ತರಾದ ನಾಲ್ಕುಲಕ್ಷ-ಮಂದಿ ವೀರರು ಯುದ್ಧಕ್ಕಾಗಿ ಹೊರಟರು.

ಚತುರ್ಲಕ್ಷಬಲೈ ಸಾರ್ಧಂ ತೇ ಯುದ್ಧಾಯ ಸಮಾಯಯುಃ ।
ಶಿಂಶಪಾಖ್ಯಂ ವನಂ ಘೋರಂ ಭೇದಯಿತ್ವಾ ರಿಪೋಸ್ತದಾ ॥ ೩೨ ॥

ಊಷುಸ್ತತ್ರ ರಣೇ ಮತ್ತಾಃ ಸರ್ವಶತ್ರುಭಯಂಕರಾಃ ।
ಏತಸ್ಮಿನ್ನಂತರೇ ತತ್ರ ಧುಂಧುಕಾರಾದಯೋ ಬಲಾಃ ॥ ೩೩ ॥

ಕೃತ್ವಾ ಕೋಲಾಹಲಂ ಶಬ್ದಂ ಯುದ್ಧಾಯ ಸಮುಪಾಯಯುಃ ।
ಪೂರ್ವಾಹ್ಣೇ ತು ಭೃಗುಶ್ರೇಷ್ಠ ಸನ್ನದ್ಧಾಸ್ತೇ ಶತಘ್ನಿಪಾಃ ॥ ೩೪ ॥

ಶತಘ್ನೀಭಿ ಸ್ತ್ರಿಸಾಹಸ್ರೈಃ ಪಂಚಸಾಹಸ್ರಕಾ ಯಯುಃ ।
ದ್ವಿಸಹಸ್ರಶತಘ್ನೀಭಿಃ ಸಹಿತಾಶ್ಚಂದ್ರವಂಶಿನಃ ॥ ೩೫ ॥

ಸೈನ್ಯಂ ಷಷ್ಟಿಸಹಸ್ರಂ ಚ ಸ್ವರ್ಗಲೋಕಮುಪಾಯಯೌ ।
ತದರ್ಧಂ ಚ ತಥಾ ಸೈನ್ಯಂ ಮಹೀರಾಜಸ್ಯ ಸಂಕ್ಷಿತಂ ॥ ೩೬ ॥

---

೩೨. ಸರ್ವಶತ್ರು ಭಯಂಕರರಾದ ಮದಶಾಲಿಗಳಿಂದ ಕೂಡಿದ ಈ ಸೇನೆಯು, ಶತ್ರುವಿಗೆ ಸೇರಿದ ಶಿಂಶುಪಾ ವನಪ್ರದೇಶವನ್ನು ಕತ್ತರಿಸಿ ಅದನ್ನು ಆಕ್ರಮಿಸಿ ಕೊಂಡು ಅಲ್ಲಿ ನಿಂತರು

೩೩. ಇಷ್ಟರಲ್ಲಿ ದುಂಧುಕಾರ ಮುಂತಾದ ಮಹಾಬಲಶಾಲಿಗಳೂ ಅವರ ಸೇನೆಯವರೂ ಕೋಲಾಹಲಧ್ವನಿ ಮಾಡಿಕೊಂಡು ಇವರನ್ನು ಸಮೀಪಿಸಿ ಯುದ್ಧಕ್ಕೆ ಬಂದರು.

೩೪-೩೬. ಅಯ್ಯಾ ಭೃಗುವಂಶಶ್ರೇಷ್ಠನೇ ! ಕೇಳು. ಮೂರುಸಾವಿರ ಫಿರಂಗಿಗಳ ಸಮೇತ ಐದುಸಾವಿರಮಂದಿ ಫಿರಂಗಿಸೇನೆಯವರು ಮಧ್ಯಾಹ್ನಕ್ಕೆ ಮುಂಚೆಯೇ ಯುದ್ಧಸನ್ನದ್ಧರಾಗಿ ಬಂದರು. ಇತ್ತ ಚಂದ್ರವಂಶರಾಜರಬಳಿ ಎರಡು ಸಹಸ್ರ ಫಿರಂಗಿ ಇದ್ದಿತು. ಸ್ವಲ್ಪಹೊತ್ತು ಯುದ್ಧ ನಡೆಯುವಷ್ಟರಲ್ಲಿಯೇ ಅರವತ್ತುಸಾವಿರ ಸೇನೆಯು ನಿರ್ನಾಮವಾಯ್ತು ಪೃಥ್ವೀರಾಜನ ಸೇನೆಯಲ್ಲೂ ಇದರ ಅರ್ಧದಷ್ಟು ಭಾಗ ನಾಶವಾಯ್ತು

**ದುದ್ರುವುರ್ಭೀರುಕಾಃ ಶೂರಾ ಬಲಖಾನೇರ್ದಿಶೋ ದಶ ।**
**ರಥಾ ರಥೈ ರಣೇ ಹನ್ಯುರ್ಗಜಾಶ್ಚೈವ ಗಜೈಸ್ತಥಾ ॥ ೩೭ ॥**

**ಹಯಾ ಹಯೈಸ್ತಥಾ ಉಷ್ಟ್ರಾ ಉಷ್ಟ್ರೈಶ್ಚ ಸಮಾಹನನ್ ।**
**ಏವಂ ಸುತುಮುಲೇ ಜಾತೇ ದಾರುಣೇ ರೋಮಹರ್ಷಣೇ ॥ ೩೮ ॥**

**ಹಾಹಾಭೂತಾನ್ಸ್ವಕೀಯಾಂಶ್ಚ ಸೈನ್ಯಾನ್ ದೃಷ್ಟ್ವಾ ಮಹಾಬಲಾನ್ ।**
**ಅಪರಾಹ್ಣೇ ಭೃಗುಶ್ರೇಷ್ಠ ಪಂಚ ಶೂರಾಃ ಸಮಾಯಯುಃ ॥ ೩೯ ॥**

**ಬ್ರಹ್ಮಾನಂದಃ ಶರೈಃ ಶತ್ರೂನನಯದ್ಯಮಸಾದನಂ ।**
**ದೇವಸಿಂಹಸ್ತಥಾ ಭಲ್ಲೈರಾಹ್ಲಾದಸ್ತತ್ರ ತೋಮರೈಃ ॥ ೪೦ ॥**

**ಬಲಖಾನಿಃ ಸ್ವಖಡ್ಗೇನ ಕೃಷ್ಣಾಂಶಸ್ತು ತಥೈವ ಚ ।**
**ದ್ವಿಲಕ್ಷಾನ್ ಕ್ಷತ್ರಿಯಾಞ್ಜಘ್ನುಃ ಸರ್ವಸೈನ್ಯೈಃ ಸಮಂತತಃ ॥ ೪೧ ॥**

---

೩೭-೩೮. ಬಲಖಾನಿಯ ಪಕ್ಷದ ಶೂರರು ಹೆದರಿ ದಿಕ್ಕುದಿಕ್ಕಿಗೆ ಓಡತೊಡಗಿದರು. ರಥಿಕರು ರಥವೀರರನ್ನೂ, ಮಾವುತರು ಗಜಾರೋಹಕರನ್ನೂ ರಾಹುತರು ರಾಹುತರನ್ನೂ ಒಂಟೆಸವಾರರು ಒಂಟೆಸವಾರರನ್ನೂ ಕೊಂದರು. ಆ ಯುದ್ಧವು ಘೋರದಲ್ಲಿ ನೋಡಿದವರಿಗೂ ರೋಮಾಂಚವಾಗುವಷ್ಟು ಭಯಂಕರವಾಗಿತ್ತು.

೩೯. ಮಹಾಬಲಶಾಲಿಗಳಾದ ಪ್ರತಿಪಕ್ಷದ ವೀರರನ್ನು ನೋಡಿ ಇವರು ಹಾಹಾಕಾರಮಾಡಿದರು. ಮಧ್ಯಾಹ್ನಾತ್ಪರ ಪರಿಮಳರಾಜನ ಐದುಮಂದಿ ವೀರ ಪುತ್ರರು ಯುದ್ಧಕ್ಕೆ ಬಂದರು.

೪೦ ಬ್ರಹ್ಮಾನಂದನು ಬಾಣಪ್ರಯೋಗಮಾಡಿ ಶತ್ರುಗಳನ್ನು ಯಮಪುರಿಗೆ ಅಟ್ಟುತ್ತಿದ್ದನು. ದೇವಸಿಂಹನು ಭಲ್ಲೆಯದಿಂದ ಇರಿಯುತ್ತ ಬಂದನು. ಆಹ್ಲಾದನು ತೋಮರಾಯುಧವನ್ನು ಪ್ರಯೋಗಿಸುತ್ತಿದ್ದನು.

೪೧ ಬಲಖಾನಿಯೂ, ಕೃಷ್ಣಾಂಶನೂ, ಖಡ್ಗಯುದ್ಧಮಾಡುತ್ತಾ ಶತ್ರು ಸೈನ್ಯವನ್ನು ಪ್ರಹರಿಸಿ, ಎರಡುಲಕ್ಷ ಕ್ಷತ್ರಿಯಯೋಧರನ್ನು ಸಂಹರಿಸಿದರು.

ದೃಷ್ಟ್ವಾ ಪರಾಜಿತಂ ಸೈನ್ಯಂ ಧುಂಧುಕಾರೋ ಮಹಾಬಲಃ ।
ಆಹ್ಲಾದಂ ಚ ಸ್ವಭಲ್ಲೇನ ಗಜಾರೂಢಃ ಸಮಾವಧೀತ್ ॥ ೪೨ ॥

ಆಹ್ಲಾದೇ ಮೂರ್ಚ್ಛಿತೇ ತತ್ರ ದೇವಸಿಂಹೋ ಮಹಾಬಲಃ ।
ಭಲ್ಲೇನ ಭ್ರಾತರಂ ತಸ್ಯ ದಂಶಯಾಮಾಸ ವೇಗತಃ ॥ ೪೩ ॥

ಸ ತೀಕ್ಷ್ಣವ್ರಣಮಾಸಾದ್ಯ ಗಜಸ್ಥಃ ಸಂಮುಮೋಹ ವೈ ।
ಆಗತಾಃ ಶತರಾಜಾನೋ ನಾನಾದೇಶ್ಯಾ ಮಹಾಬಲಾಃ ॥ ೪೪ ॥

ಶಸ್ತ್ರಾಣ್ಯಸ್ತ್ರಾಣಿ ತೇಷಾಂ ತು ಛಿತ್ವಾ ಖಡ್ಗೇನ ವತ್ಸಜಃ ।
ಸ್ವಖಡ್ಗೇನ ಶಿರಾಂಸ್ಯೇಷಾಂ ಪಾತಯಾಮಾಸ ಭೂತಲೇ ॥ ೪೫ ॥

ಹತೇ ಶತ್ರುಸಮೂಹೇ ತು ತಚ್ಛೇಷಾಸ್ತು ಪ್ರದುದ್ರುವುಃ ।
ಮಹೀರಾಜಸ್ತು ಬಲವಾನ್ದೃಷ್ಟ್ವಾ ಭಗ್ನಂ ಸ್ವಸೈನ್ಯಕಂ ॥ ೪೬ ॥

---

೪೨ ಮಹಾಬಲಶಾಲಿಯಾದ ಧುಂಧುಕಾರನು ಎಲ್ಲಕಡೆಯಲ್ಲೂ ತಮ್ಮ ಸೇನೆ ಹಿಮ್ಮೆಟ್ಟುತ್ತಿರುವುದನ್ನು ನೋಡಿ ಗಜಾರೂಢನಾಗಿ ರೋಷದಿಂದ ತನ್ನ ಭಲ್ಲೆಯನ್ನು ಆಹ್ಲಾದನಿಗೆ ಗುರಿಯಿಟ್ಟು ಪ್ರಯೋಗಿಸಿದನು.

೪೩. ಆ ಏಟು ತಗಲಿ ಆಹ್ಲಾದನು ಕೆಳಗೆ ಬಿದ್ದು ಮೂರ್ಛಿತನಾದುದನ್ನು ಕಂಡು ಬಲಶಾಲಿಯಾದ ದೇವಸಿಂಹನು ಧುಂಧುಕಾರನ ತಮ್ಮನನ್ನು ತೀಕ್ಷ್ಣವಾದ ಭಲ್ಲೆಯದಿಂದ ಚುಚ್ಚಿದನು.

೪೪. ಆನೆಯಮೇಲಿದ್ದ ಅವನಿಗೆ ಬಲವಾದ ಘಾಯವಾಗಿ ಅವನು ಅಲ್ಲೇ ಮೂರ್ಛೆಹೋದನು ಆಗ ಅವನ ಸಾಮಂತರೂ ಬಲಶಾಲಿಗಳೂ ನಾನಾದೇಶದವರೂ ಆದ ನೂರಾರುಮಂದಿ ರಾಜರು ಬಂದು ಕವಿದರು

೪೫. ವತ್ಸರಾಜಪುತ್ರನಾದ ದೇವಸಿಂಹನು ಅವರುಗಳ ಶಸ್ತ್ರಾಸ್ತ್ರವನ್ನು ತುಂಡರಿಸಿ ತನ್ನ ಖಡ್ಗದಿಂದ ಅವರ ಶಿರಸ್ಸನ್ನು ಛೇದಿಸಿ ಭೂಮಿಗೆ ಕೆಡವಿದನು.

೪೬. ಹೀಗೆ ಶತ್ರುಸೇನಾಸಮೂಹದ ಪ್ರಮುಖರು ಹತರಾಗಲು ಮಿಕ್ಕವರು ರಣರಂಗದಿಂದ ಓಡಿಹೋದರು. ಶಿವನಿಂದ ವರಪಡೆದವನೂ, ಬಲಿಷ್ಠನೂ, ಎನಿಸಿದ ಪೃಥ್ವೀರಾಜನು ತನ್ನ ಸೇನೆಗೆ ಹೀಗೆ ಸೋಲಾದುದನ್ನು ನೋಡಿದನು.

ಆಜಗಾಮ ಗಜಾರೂಢಃ ಶಿವದತ್ತವರೋ ಬಲೀ ।
ರೌದ್ರೇಣಾಸ್ತ್ರೇಣ ಹೃದಯೇ ಚಾವಧೀದ್ವತ್ಸಜಂ ರಿಪುಂ ॥ ೪೭ ॥

ಆಹ್ಲಾದಂ ಚ ತಥಾ ವೀರಂ ದೇವಂ ಪರಿಮಲಾತ್ಮಜಂ ।
ಮೂರ್ಛಯಿತ್ವಾ ಮಹಾವೀರಾಞ್ಛತ್ರುಸೈನ್ಯಮುಪಾಗಮತ್ ॥ ೪೮ ॥

ಪೂಜಯಿತ್ವಾ ಶತಘ್ನೀಶ್ಚ ಮಹಾವಧಮಕಾರಯತ್ ।
ರೋಪಣಸ್ತ್ವರಿತೋ ಗತ್ವಾ ರಾಜ್ಞೇ ಸರ್ವಮವರ್ಣಯತ್ ॥ ೪೯ ॥

ಏತಸ್ಮಿನ್ನಂತರೇ ವೀರಃ ಸುಖಾನಿರ್ಮಹಾಬಲಃ ।
ಕಪೋತಂ ಹಯಮಾರುಹ್ಯ ನಭೋಮಾರ್ಗೇಣ ಚಾಗಮತ್ ॥ ೫೦ ॥

ಮೂರ್ಛಯಿತ್ವಾ ಮಹೀರಾಜಂ ಸ್ವಬಂಧೂಂಶ್ಚ ಸವಾಹನಾನ್ ।
ಕೃತ್ವಾ ನೃಪಾಂತಮಾಗಮ್ಯ ಬಂಧನಾಯ ಸಮುದ್ಯತಃ ॥ ೫೧ ॥

---

೪೭. ಕೂಡಲೆ ಆತನು ಗಜಾರೂಢನಾಗಿ ಬಂದು ಎದುರಾಳಿಯಾದ ದೇವಸಿಂಹನ ಹೃದಯಕ್ಕೆ ಶಿವಸಂಬಂಧವಾದ ರೌದ್ರಾಸ್ತ್ರವನ್ನು ಪ್ರಯೋಗಿಸಿ ಅವನನ್ನು ಬೀಳಿಸಿದನು

೪೮. ಪರಿಮಳರಾಜನ ಮಗನೂ, ವೀರನೂ, ಆದ ಆಹ್ಲಾದನನ್ನೂ ಇತರ ಮಹಾವೀರರನ್ನೂ ಅದೇರೀತಿ ಮೂರ್ಛೆಬೀಳಿಸಿ ಶತ್ರುಸೇನೆಯಮೇಲೆ ಪರಾಕ್ರಮ ತೋರಿಸಿದನು.

೪೯. ಫಿರಂಗಿಗಳನ್ನು ಪೂಜೆಮಾಡಿ ಶತ್ರುಸೇನೆಯಮೇಲೆ ಪ್ರಯೋಗಿಸಿ ತುಂಬಾ ಜನಗಳನ್ನು ವಧೆಮಾಡಿಸಿದನು. ಆಗ ರೋಪಣನೆಂಬವನು ಶೀಘ್ರವಾಗಿ ರಾಜನ ಬಳಿಗೆಹೋಗಿ ಯುದ್ಧಪರಿಸ್ಥಿತಿಯೆಲ್ಲವನ್ನೂ ವಿವರವಾಗಿ ತಿಳಿಸಿದನು.

೫೦. ಇಷ್ಟರೊಳಗೆ ಮಹಾಬಲಶಾಲಿಯಾದ ಸುಖಖಾನಿಯು ಕಪೋತವೆಂಬ ಕುದುರೆಯನ್ನು ಏರಿ ಆಕಾಶಮಾರ್ಗದಿಂದ ಬಂದನು.

೫೧. ಹಾಗೆಬಂದು ಪೃಥ್ವೀರಾಜನನ್ನು ಹೊಡೆದು ಮೂರ್ಛೆಗೊಳಿಸಿದನು. ತನ್ನ ಬಂಧುಗಳನ್ನು ಎಚ್ಚರಗೊಳಿಸಿ ಕೂಡಲೆ ಅವರವರ ವಾಹನವನ್ನು ಏರಿಸಿ ಕಳುಹಿಸಿ, ಪೃಥ್ವೀರಾಜನ ಸಮೀಪಕ್ಕೆಬಂದು ಅವನನ್ನು ಬಂಧಿಸಲು ಪ್ರಯತ್ನಿಸಿದನು.

ತದೋತ್ಥಾಯ ಮಹೀರಾಜೋ ಮಹಾದೇವೇನ ಬೋಧಿತಃ ।
ಪುನಸ್ತಾನ್ಸ್ವಶರೈ ರೌದ್ರೈರ್ಮೂರ್ಛಯಾಮಾಸ ಕೋಪವಾನ್ ॥ ೫೨ ॥

ಸುಖಖಾನ್ಯಾದಿಕಾಂಶ್ಚೂರಾನ್ಸಂಬಧ್ಯ ನಿಗಡೈರ್ದೃಢೈಃ ।
ಸ್ವಪಂ ಪರಿಮಲಂ ಪ್ರಾಪ್ಯ ಪುನರ್ಯುದ್ಧಮಚೀಕರತ್ ॥ ೫೩ ॥

ಹಾಹಾಭೂತಂ ಸ್ವಸೈನ್ಯಂ ಚ ದೃಷ್ಟ್ವಾ ಸ ಉದಯೋ ಹರಿಃ ।
ನಭೋಮಾರ್ಗೇ ಹಯಂ ಕೃತ್ವಾ ತಾಃ ಶತಘ್ನೀರನಾಶಯತ್ ॥ ೫೪ ॥

ಮಹೀರಾಜಗಜಂ ಪ್ರಾಪ್ಯ ಬದ್ಧ್ವಾ ತಂ ನಿಗಡೈರ್ಬಲೀ ।
ಆಹ್ಲಾದಪಾರ್ಶ್ವಮಾಗಮ್ಯ ಭ್ರಾತ್ರೇ ಭೂಪಂ ಸಮರ್ಪಯತ್ ॥ ೫೫ ॥

ತದಾ ತು ಪೃಥಿವೀರಾಜೋ ಲಜ್ಜಿತಸ್ತೇನ ನಿರ್ಜಿತಃ ।
ಪಂಚಕೋಟಿಧನಂ ದತ್ವಾ ಸ್ವಗೇಹಂ ಪುನರಾಯಯೌ ॥ ೫೬ ॥

---

೫೨. ಅಷ್ಟರಲ್ಲಿ ಪೃಥ್ವೀರಾಜನು ಶಿವನ ಪ್ರಭಾವದಿಂದ ಎಚ್ಚರಗೊಂಡು ಕೋಪಾವಿಷ್ಟನಾಗಿ ಕ್ರೂರವಾದ ತನ್ನ ಬಾಣಗಳನ್ನು ಪ್ರಯೋಗಿಸಿ ಸುಖಖಾನಿ ಮೊದಲಾದವರನ್ನೆಲ್ಲಾ ಮೂರ್ಛೆಬೀಳಿಸಿದನು.

೫೩. ಬಳಿಕ ಗಟ್ಟಿಯಾದ ಸಂಕೋಲೆಗಳಿಂದ ಸುಖಖಾನಿ ಮುಂತಾದವರನ್ನು ಬಂಧಿಸಿ ಅನಂತರ ಪರಿಮಳಮಹಾರಾಜನ ಬಳಿಗೆ ಬಂದು ಅವನನ್ನೇ ಎದುರಿಸಿ ಯುದ್ಧಕ್ಕೆ ನಿಂತನು.

೫೪ ತನ್ನ ಸೈನ್ಯವು ದಿಗಿಲಿನಿಂದ ಹಾಹಾಕಾರ ಮಾಡುವುದನ್ನು ನೋಡಿ ಉದಯಸಿಂಹನು ತನ್ನ ಕುದುರೆಯನ್ನು ಏರಿ ಆಕಾಶಕ್ಕೆ ಹಾರಿಹೋಗಿ ಅಲ್ಲಿಂದ ಹೊಡೆದು ಆ ಫಿರಂಗಿಗಳನ್ನು ಧ್ವಂಸಮಾಡಿಬಿಟ್ಟನು.

೫೫. ಬಳಿಕ ಪೃಥ್ವೀರಾಜನ ಆನೆಯನ್ನು ಆಕ್ರಮಿಸಿ ಆನೆಯಮೇಲಿದ್ದ ಅವನನ್ನು ಸೆರೆಹಿಡಿದು ಬಲವಾದ ಸರಪಣಿಗಳಿಂದ ಬಿಗಿಸಿದನು. ಬಳಿಕ ಸೆರೆಯಾಳಾದ ಪೃಥ್ವೀರಾಜನನ್ನು ಕರೆತಂದು ಅಣ್ಣನಾದ ಆಹ್ಲಾದನಿಗೆ ಒಪ್ಪಿಸಿದನು.

೫೬. ಪೃಥ್ವೀರಾಜನು ತಾನು ಪರಾಜಿತನಾದುದಕ್ಕೆ ನಾಚಿಕೊಂಡು ಐದು ಕೋಟಿದ್ರವ್ಯವನ್ನು ದಂಡವಾಗಿ ಕೊಟ್ಟು ತನ್ನ ರಾಜಧಾನಿಗೆ ಬಂದು ಸೇರಿಕೊಂಡನು.

ದೇವಸಿಂಹಾಜ್ಞಯಾ ಶೂರೋ ಬಲಖಾನಿರ್ಹಿ ವತ್ಸಜಃ ।
ಶ್ವೈದ್ರ್ರವ್ಯೈರ್ನಗರೀಂ ರಮ್ಯಾಂ ಕಾರಯಾಮಾಸ ಸುಂದರೀಂ ॥ ೫೭ ॥

ಶಿರೀಷಾಖ್ಯಂ ಪುರಂ ನಾಮ ತೇನ ವೀರೇಣ ವೈ ಕೃತಂ ।
ಸರ್ವವರ್ಣಸಮಾಯುಕ್ತಂ ದ್ವಿಕ್ರೋಶಾಯಾಮಸಂಮಿತಂ ॥ ೫೮ ॥

ತತ್ರೈವ ನ್ಯವಸದ್ವೀರೋ ವತ್ಸಜಃ ಸ್ವಕುಲ್ಯೈಃ ಸಹ
ತ್ರಿಂಶತ್ಕ್ರೋಶೇ ಕೃತಂ ರಾಷ್ಟ್ರಂ ತತ್ರೈವ ಬಲಖಾನಿನಾ ॥ ೫೯ ॥

ಶ್ರುತ್ವಾ ಪರಿಮಲೋ ರಾಜಾ ತತ್ರಾಗತ್ಯ ಮುದಾನ್ವಿತಃ ।
ಆಘ್ರಾಯ ವತ್ಸಜಂ ಶೂರಂ ದೇಶರಾಜಸುತಂ ತಥಾ ॥ ೬೦ ॥

---

೫೭. ಶೂರನೂ ವತ್ಸರಾಜಪುತ್ರನೂ ಆದ ಬಲಖಾನಿಯು ದೇವಸಿಂಹನ ಅಪ್ಪಣೆಯ ಪ್ರಕಾರ ಆ ಹಣವನ್ನು ವೆಚ್ಚಮಾಡಿ ದಿವ್ಯಸುಂದರವಾದ ಶಿರೀಷಪುರವೆಂಬ ಒಂದು ನಗರವನ್ನು ನಿರ್ಮಿಸಿದನು.

೫೮. ಚಾತುರ್ವರ್ಣ್ಯದವರೂ ಆ ನಗರದಲ್ಲಿ ವಾಸಿಸುತ್ತಿದ್ದರು. ಶೂರನಿಂದ ನಿರ್ಮಿತವಾದ ಆ ನಗರವು ಎರಡುಹರಿದಾರಿ ವಿಸ್ತೀರ್ಣವುಳ್ಳದ್ದಾಗಿತ್ತು

೫೯. ವತ್ಸರಾಜಪುತ್ರನಾದ ಬಲಖಾನಿಯು ತನ್ನ ಅನುಬಂಧಿಗಳೊಡನೆ ಅಲ್ಲೇ ವಾಸಿಸತೊಡಗಿದನು. ಅವನ ರಾಜ್ಯವು ಮೂವತ್ತು ಹರಿದಾರಿ ಇದ್ದ. ಇಷ್ಟೇ ಅಗಲ ವಿಸ್ತಾರ ಉಳ್ಳದಾಯಿತು.

೬೦. ಪರಿಮಳರಾಜನು ಸಂತೋಷದಿಂದ ಅಲ್ಲಿಗೆ ಬಂದು ವತ್ಸರಾಜನ ಮಗನಾದ ಬಲಖಾನಿಯನ್ನೂ, ದೇಶರಾಜಪುತ್ರನಾದ ಕೃಷ್ಣಾಂಶನನ್ನೂ, ವಾತ್ಸಲ್ಯದಿಂದ ಶಿರಸ್ಸನ್ನು ಆಘ್ರಾಣಿಸಿದನು.

ಬ್ರಹ್ಮಾನಂದೇನ ಸಹಿತಃ ಸ್ವಗೇಹಂ ಪುನರಾಯಯೌ ॥ ೬೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಏಕಾದಶೋಽಧ್ಯಾಯಃ



೬೧. ಮತ್ತು ಅವರಿಂದ ಸನ್ಮಾನಿತನಾಗಿ ತನ್ನ ಪುತ್ರನಾದ ಬ್ರಹ್ಮಾನಂದನ ಸಮೇತ ಮತ್ತೆ ತನ್ನ ರಾಜಧಾನಿಗೆಬಂದು ಸೇರಿದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದೊಳಗಿನ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಹನ್ನೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ದ್ವಾದಶೋಽಧ್ಯಾಯಃ

---

॥ ಸೂತ ಉವಾಚ ॥

ದ್ವಾದಶಾಬ್ದೇ ಹಿ ಕೃಷ್ಣಾಂಶೋ ಯಥಾಜಾತಂ ತಥಾ ಶೃಣು ।
ಇಷಶುಕ್ಲದಶಮ್ಯಾಂ ಚ ರಾಜ್ಞಾಂ ಜಾತಃ ಸಮಾಗಮಃ ॥ ೧ ॥

ಕಾನ್ಯಕುಬ್ಜೇ ಮಹಾರಮ್ಯೇ ನಾನಾಭೂಪಾಃ ಸಮಾಯಯುಃ ।
ಶ್ರುತ್ವಾ ಪರಾಜಯಂ ರಾಜ್ಞೋ ಮಹೀರಾಜಸ್ಯ ಲಕ್ಷಣಃ ॥ ೨ ॥

ಕೃಷ್ಣಾಂಶದರ್ಶನೇ ವಾಂಛಾ ತಸ್ಯಚಾಸೀತ್ತದಾ ಮುನೇ ।
ಪಿತೃವ್ಯಂ ಭೂಪತಿಂ ಪ್ರಾಹ ದ್ರಷ್ಟುಂ ಯಾಸ್ಯಾಮಿ ತಂ ಶುಭಂ ॥ ೩ ॥

---

### ಹನ್ನೆರಡನೆಯ ಅಧ್ಯಾಯ

೧. ಸೂತಮುನಿಯು ಹೇಳುತ್ತಾನೆ—ಕೃಷ್ಣಾಂಶನಿಗೆ ಹನ್ನೆರಡು ವರ್ಷ ತುಂಬುತ್ತಲೆ ನಡೆದಸಂಗತಿಯನ್ನು ಈಗ ಹೇಳುತ್ತೇನೆ. ಆಶ್ವೀಜ ಶುದ್ಧ ನವಮಿ (ಮಹಾನವಮಿಯದಿನ) ದಿನ ರಮ್ಯವಾದ ಕನ್ಯಾಕುಬ್ಜ ನಗರದಲ್ಲಿ ರಾಜರುಗಳ ಸಭೆ ಸೇರಬೇಕೆಂದು ನಿಶ್ಚಯವಾಯಿತು.

೨. ಅನೇಕ ರಾಜರುಗಳು ಆ ನಗರಕ್ಕೆ ಬಂದರು ಅಯ್ಯಾ ಮುನಿಯೆ ! ಕೇಳು, ಪೃಥ್ವೀರಾಜನಿಗೆ ಆದ ಪರಾಜಯವನ್ನು ಕೇಳಿ ಅವನನ್ನು ಗೆದ್ದ ಕೃಷ್ಣಾಂಶನನ್ನು ದರ್ಶನಮಾಡಬೇಕೆಂದು ಕನ್ಯಾಕುಬ್ಜದ ಯುವರಾಜನಾದ ಲಕ್ಷಣನಿಗೆ ಆಶೆಹುಟ್ಟಿತು.

೩. ಅವನು ತನ್ನ ದೊಡ್ಡಪ್ಪನಾದ ಜಯಚಂದ್ರನನ್ನು ಕುರಿತು “ ನಾನು ಶುಭಸ್ವರೂಪನಾದ ಕೃಷ್ಣಾಂಶನ ಸಂದರ್ಶನಕ್ಕೆ ಹೋಗಬೇಕು. ಸರ್ವಶ್ರೇಷ್ಠನೂ, ಅಧಿರಾಜನೂ, ಆದ ಪೃಥ್ವೀರಾಜನನ್ನು ಅವನು ಗೆದ್ದಿದ್ದಾನೆ ” ಎಂದು ಹೇಳಿದನು.

ಜಿತೋ ಯೇನ ಮಹೀರಾಜಃ ಸರ್ವಲೋಕಪ್ರಪೂಜಿತಃ ।
ಇತಿ ಶ್ರುತ್ವಾ ವಚಸ್ತಸ್ಯ ಜಯಚಂದ್ರೋ ಮಹೀಪತಿಃ ।
ಭ್ರಾತೃಜಂ ಪ್ರಣತಂ ಪ್ರಾಹ ಶೃಣು ಶುಕ್ಲಯಶಸ್ಕರ ॥ ೪ ॥

ರಾಜರಾಜಪದಂ ತೇ ಹಿ ಕಥಂ ಸಂಹರ್ತುಮಿಚ್ಛಸಿ ।
ಇತ್ಯುಕ್ತ್ವಾ ಜಯಚಂದ್ರಸ್ತು ತದಾಜ್ಞಾಂ ನೈವ ದತ್ತವಾನ್ ॥ ೫ ॥

ರಾಜಾನಸ್ತೇ ಚ ಸಹಿತಾಃ ಸ್ವಸೈನ್ಯೈಃ ಪರಿವಾರಿತಾಃ ।
ಕೃಷ್ಣಾಂಶಂ ದ್ರಷ್ಟುಮಿಚ್ಛಂತಃ ಸಂಯಯುಶ್ಚ ಮಹೀಪತಿಂ ॥ ೬ ॥

ಶಿರೀಷಾಖ್ಯಪುರಸ್ಥಂ ಚ ಜ್ಞಾತ್ವಾ ಕೃಷ್ಣಾಂಶಮುತ್ತಮಂ ।
ಮಹೀಪತಿಂ ಪುರಸ್ಕೃತ್ಯ ಸಮಾಜಗ್ಮುರ್ನೃಪಾಸ್ತದಾ ॥ ೭ ॥

ದದೃಶುಸ್ತಂ ಮಹಾತ್ಮಾನಂ ಪುಂಡರೀಕನಿಭಾನನಂ ।
ಪ್ರಸನ್ನವದನಾಃ ಸರ್ವೇ ಪ್ರಶಶಂಸುಃ ಸಮಂತತಃ ॥ ೮ ॥

---

೪-೫. ರಾಜನಾದ ಜಯಚಂದ್ರನು ತನ್ನ ತಮ್ಮನಮಗನು ವಿನೀತನಾಗಿ ಹೇಳಿದ ಈ ಮಾತನ್ನು ಕೇಳಿ " ಅಯ್ಯಾ ಪರಿಶುದ್ಧಯಶಸ್ವಿಯೇ ! ನಿನ್ನ ಅಧಿರಾಜ ಪದವಿಯನ್ನು ನೀನಾಗಿಯೇ ಹೋಗಲಾಡಿಸಿಕೊಳ್ಳಬಹುದೆ? ಚೆನ್ನಾಗಿ ಯೋಚಿಸು ' ಎಂದು ಹೇಳಿ ಆ ಕೆಲಸಮಾಡಲು ಅನುಜ್ಞೆಕೊಡಲಿಲ್ಲ.

೬ ಇತರ ರಾಜರುಗಳು ಕೃಷ್ಣಾಂಶನನ್ನು ನೋಡಲು ಆಶೆಯುಳ್ಳವರಾಗಿ ಮಹೀಪತಿರಾಜನಬಳಿಗೆ ಬಂದರು.

೭. ಶ್ರೇಷ್ಠನಾದ ಕೃಷ್ಣಾಂಶನು ಶೀರೀಷನಗರದಲ್ಲಿ ಇರುವುದನ್ನು ತಿಳಿದು ಅವರೆಲ್ಲರೂ ಮಹೀಪತಿರಾಜನನ್ನು ಮುಂದುಮಾಡಿಕೊಂಡು ಅಲ್ಲಿಗೆಬಂದರು.

೮. ಅವರೆಲ್ಲರೂ ಕಮಲದಂತೆ ಮುಖವುಳ್ಳ ಆ ಮಹಾತ್ಮನನ್ನು ನಗೆಮುಖ ದಿಂದ ಬಳಸಿ ನಿಂತು ಬಹುವಾಗಿ ಪ್ರಶಂಸೆಮಾಡಿದರು.

ತದಾ ಮಹೀಪತಿಃ ಕ್ರುದ್ಧೋ ವಚನಂ ಪ್ರಾಹ ಭೂಪತೀನ್ ।
ಯಸ್ಯೇಯಂ ಚ ಕೃತಾ ಶ್ಲಾಘಾ ಯುಷ್ಮಾಭಿರ್ದೂರವಾಸಿಭಿಃ ।
ಪಿತರೌ ತಸ್ಯ ಬಲಿನೌ ಮಾಹಿಷ್ಮತ್ಯಾಂ ಮೃತಿಂ ಗತೌ ॥ ೯ ॥

ಜಂಬುಕೋ ನಾಮ ಭೂಪಾಲೋ ನಾರ್ಮದೀಯೈಃ ಸಮನ್ವಿತಃ ।
ಬದ್ಧ್ವಾ ತೌ ಪ್ರಯಯೌ ಗೇಹಂ ಲುಂಠಯಿತ್ವಾ ಧನಂ ಬಹು ।
ಶಿಲಾಪತ್ರೇ ಸಮಾರೋಪ್ಯ ತಯೋರ್ಗಾತ್ರಮಚೂರ್ಣಯತ್ ।
ಶಿರಸೀ ಚ ತಯೋಃಶ್ಛಿತ್ವಾ ವಟವೃಕ್ಷೇ ಸಮಾರುಹತ್ ॥ ೧೦ ॥

ಅದ್ಯಾಪಿ ತೌ ಸ್ಥಿತೌ ವೀರೌ ಹಾ ಪುತ್ರೇತಿ ಪ್ರಭಾಷಿಣೌ ।
ಪ್ರೇತದೇಹೇ ಚ ಪಿತರೌ ಯಸ್ಯ ಪ್ರಾಪ್ತೌ ಮಹಾಬಲೌ ।
ತಸ್ಯೋದಯೋ ವೃಥಾ ಜ್ಞೇಯೋ ವ್ಯಥಾಕೀರ್ತಿಃ ಪ್ರಿಯಂಕರೀ ॥ ೧೧ ॥

ಇತಿ ಶ್ರುತ್ವಾ ಸ ಕೃಷ್ಣಾಂಶೋ ಭೂಪತೀನ್ಪ್ರಾಹ ನಮ್ರಧೀಃ ।
ಗತೌ ಮತ್ಪಿತರೌ ಸಾರ್ಧಂ ಗುರ್ಜರೇ ಯತ್ರ ವೈ ರಣಃ ॥ ೧೨ ॥

---

೯. ಅದನ್ನು ಕೇಳಿ ಆ ಮಹೀಪತಿರಾಜನು ಕೋಪಾವಿಷ್ಟನಾಗಿ "ದೂರದೇಶ ನಿವಾಸಿಗಳಾದ ನೀವು ಯಾರನ್ನು ಇಷ್ಟು ಶ್ಲಾಘಿಸಿದರೋ ಅವನ ತಂದೆ ಚಿಕ್ಕಪ್ಪ ಇಬ್ಬರು ವೀರರೂ ಮಾಹೀಷ್ಮತಿಯಲ್ಲಿ ಮೃತರಾದರು.

೧೦. ನರ್ಮದಾತೀರದೇಶದ ರಾಜನಾದ ಜಂಬುಕನೆಂಬಾತನು ತನ್ನ ಸೇನೆಯೊಡನೆ ಬಂದು ಅವರಿಬ್ಬರನ್ನೂ ಸೋಲಿಸಿ ಸೆರೆಯಲ್ಲಿಟ್ಟು, ಬಹುಹಣವನ್ನು ಲೂಟಿ ಮಾಡಿದುದಲ್ಲದೆ ಅವರ ಶರೀರವನ್ನೂ ಛಿದ್ರಮಾಡಿ ಕಲ್ಲಿನಮೇಲೆಸೆದು ತಲೆಯನ್ನು ಕತ್ತರಿಸಿ ಆಲದಮರಕ್ಕೆ ನೇತುಹಾಕಿದನು.

೧೧. ಈಗಲೂ ಸಹ ಆ ವೀರರ ತಲೆಗಳು ಪ್ರೇತರೂಪದಲ್ಲಿದ್ದುಕೊಂಡು 'ಅಯ್ಯೋ ಮಗು' ಎಂದು ಪ್ರಲಾಪಿಸುತ್ತಾ ತಮ್ಮ ಮಗನ ಬರುವಿಕೆಯನ್ನೇ ನಿರೀಕ್ಷಿಸುತ್ತಿವೆ. ಅವರ ಹೊಟ್ಟೆಯಲ್ಲಿ ಜನ್ಮವೆತ್ತಿ ಅವರುಗಳಿಗೆ ಈರೀತಿ ತೊಂದರೆಯೊದಗಿದ್ದರೂ ಗಮನಿಸದೆ ಜನ್ಮಸಾರ್ಥಕವಿಲ್ಲದೆ ಸುಮ್ಮನೆ ಇರುವ ಇವನನ್ನು ಮಹಾಕೀರ್ತಿವಂತನೆಂದು ನೀವು ಹೊಗಳುವುದು ವ್ಯರ್ಥ" ಎಂದನು.

೧೨-೧೩. ಕೃಷ್ಣಾಂಶನು ಈ ಮಾತನ್ನು ಕೇಳಿ ವಿನಯದಿಂದ ರಾಜರನ್ನು ಕುರಿತು "ನಮ್ಮತಂದೆ ಚಿಕ್ಕಪ್ಪ ಇಬ್ಬರೂ ಒಟ್ಟಿಗೆ ಗುರ್ಜರದೇಶದ ಮೇಲೆ ಯುದ್ಧಕ್ಕೆ

ಮ್ಲೇಚ್ಛೈರ್ನರಾಶನೈಃ ಸಾರ್ಧಂ ತನ್ನೃಪೇಣ ರಣೋಽಭವತ್ ।
ದೇಶರಾಜೋ ವತ್ಸರಾಜೋ ಯುದ್ಧಂ ಕೃತ್ವಾ ಭಯಂಕರಂ ।
ಮ್ಲೇಚ್ಛೈಸ್ತೈಶ್ಚ ಹತೌ ತತ್ರ ಶ್ರುತೇಯಂ ವಿಶ್ರುತಾ ಕಥಾ ॥ ೧೩ ॥

ಮಾತುಲೇನಾದ್ಯ ಕಥಿತಂ ನವೀನಂ ಮರಣಂ ತಯೋಃ ।
ಚೇತ್ಸತ್ಯಂ ವಚನಂ ತಸ್ಯ ಪೌರುಷಂ ಮಮ ಪಶ್ಯತ ॥ ೧೪ ॥

ಇತ್ಯುಕ್ತ್ವಾ ತಾನ್ಸ ಕೃಷ್ಣಾಂಶೋ ಮಾತರಂ ಪ್ರಾಹ ಸತ್ವರಂ ।
ಹೇತುಂ ಚ ವರ್ಣಯಾಮಾಸ ಭಾಷಿತಂ ಚ ಮಹೀಪತೇಃ ॥ ೧೫ ॥

ಶ್ರುತ್ವಾ ವಜ್ರಸಮಂ ವಾಕ್ಯಂ ರುರೋದ ಜನನೀ ತದಾ ।
ನೋತ್ತರಂ ಪ್ರದದೌ ಮಾತಾ ಪತಿದುಃಖೇನ ದುಃಖಿತಾ ॥ ೧೬ ॥

---

ಹೋದರೆಂದೂ, ನರಮಾಂಸ ಭಕ್ಷಕರಾದ ಮ್ಲೇಚ್ಛರೊಡನೆಯೂ, ಅವರ ರಾಜರೊಡನೆಯೂ, ಘೋರವಾಗಿ ಯುದ್ಧಮಾಡುತ್ತಾ ಅಲ್ಲಿ ದೇಶರಾಜ ವತ್ಸರಾಜ ಇಬ್ಬರೂ ಮೃತಿಹೊಂದಿದರೆಂದು ನಾನು ಕೇಳಿದ್ದೇನೆ.

೧೪. ಸಾಕ್ಷಾತ್ ಸೋದರಮಾವನಾದ ಈತನು ಅವರ ಮರಣವೃತ್ತಾಂತವನ್ನು ಹೊಸರೀತಿಯಲ್ಲಿ ಹೇಳುತ್ತಿದ್ದಾನೆ. ಇದು ನಿಜವೇ ಆದಪಕ್ಷದಲ್ಲಿ ನನ್ನ ಪರಾಕ್ರಮವನ್ನಾದರೂ ನೋಡಿರಿ " ಎಂದನು.

೧೫. ಹೀಗೆಂದು ಆ ರಾಜರೊಡನೆ ಹೇಳಿ ಅಲ್ಲಿಂದ ಜಾಗ್ರತೆ ತನ್ನ ತಾಯಿಯ ಸಮೀಪಕ್ಕೆ ಬಂದು ಮಹೀಪತಿರಾಜನು ಹೇಳಿದ ಮಾತನ್ನೂ ಅದಕ್ಕೆ ತಾನು ಆಡಿದ ಪ್ರತಿ ವಚನವನ್ನೂ ವಿವರವಾಗಿ ತಿಳಿಸಿದನು.

೧೬. ವಜ್ರಸದೃಶವಾದ ಈ ಮಾತನ್ನು ಕೇಳಿ ಅವನ ತಾಯಿಯು ತನ್ನ ಪತಿಯ ಮರಣದಿಂದ ದುಃಖಿತಳಾಗಿ ಯಾವಮಾತನ್ನೂ ಆಡದೆ ರೋದನಮಾಡ ತೊಡಗಿದಳು.

ಜ್ಞಾತ್ವಾ ಪಿತೃವಧಂ ಶ್ರುತ್ವಾ ಜಂಬುಕಂ ಶಿವಕಿಂಕರಂ ।
ಮನಸಾ ಸ ಚ ಕೃಷ್ಣಾಂಶಸ್ತುಷ್ಟಾವ ಪರಮೇಶ್ವರೀಂ॰ ॥ ೧೭ ॥

ಜಯ ಜಯ ಜಯ ಜಗದಮ್ಬ ಭವಾನಿ ।
ಹ್ಯಖಿಲಲೋಕಸುರಪಿತೃಮುನಿಖಾನಿ ॥
ತ್ವಯಾತತಂ ಸಚರಾಚರಮೇವ ।
ವಿಶ್ವಂ ಪಾತಮಿದಂ ಹೃತಮೇವ ॥ ೧೮ ॥

ಇತಿ ಧ್ಯಾತ್ವಾ ಸ ಕೃಷ್ಣಾಂಶಃ ಸುಷ್ವಾಪ ನಿಜಸದ್ಮನಿ ।
ತದಾ ಭಗವತೀ ತುಷ್ಟಾ ತಾಲನಂ ಬಲವತ್ತರಂ ।
ಮೋಹಯಿತ್ವಾಶು ತತ್ಪಾರ್ಶ್ವೇ ಪ್ರೇಷಯಾಮಾಸ ಸರ್ವಗಾ ॥ ೧೯ ॥

ಚತುರ್ಲಕ್ಷಬಲೈಃ ಸಾರ್ಧಂ ತಾಲನಃ ಶೀಘ್ರಮಾಗತಃ ।
ಸ್ವಸೈನ್ಯಂ ಚೋದಯಾಮಾಸ ಚೈಕಲಕ್ಷಂ ಮಹಾಬಲಂ ॥ ೨೦ ॥

---

೧೭. ಶಿವಭಕ್ತನಾದ ಜಂಬುಕನೇ ತನ್ನ ತಂದೆಯ ವಧೆಗೆ ಕಾರಣನೆಂಬುದನ್ನು ಹೇಗೋ ತಿಳಿದು, ಆ ಸೇಡುತೀರಿಸಿಕೊಳ್ಳುವುದಕ್ಕೆ ಆಶಿಸಿ ಕೃಷ್ಣಾಂಶನು ತನ್ನ ಮನಸ್ಸಿನಲ್ಲಿ ಜಗನ್ಮಾತೆಯಾದ ಪರಮೇಶ್ವರಿಯನ್ನು ಈರೀತಿ ಸ್ತುತಿಸಿದನು.

೧೮. ಜಗನ್ಮಾತೆಯೂ, ಶಿವನಪತ್ನಿಯೂ, ಆದ ಎಲೌ ದೇವಿಯೇ! ದೇವತೆಗಳು, ಪಿತೃಗಳು, ಸಮಸ್ತಮಾನವರು ಇವರುಗಳಿಗೆಲ್ಲ ಆಶ್ರಯಪ್ರದಳಾದ ದೇವಿಯೇ! ನೀನು ಸರ್ವೋತ್ಕೃಷ್ಟಳಾಗು. ಸ್ಥಾವರಜಂಗಮಾತ್ಮಕವಾದ ಈ ಜಗತ್ತು ನಿನ್ನಿಂದ ವ್ಯಾಪ್ತವಾಗಿ ರಕ್ಷಿತವಾಗಿದೆ.

೧೯-೨೦. ಹೀಗೆಂಬದಾಗಿ ಕೃಷ್ಣಾಂಶನು ದೇವಿಯನ್ನು ಸ್ತುತಿಸಿ ತನ್ನ ಮನೆಯಲ್ಲಿ ಮಲಗಿ ನಿದ್ರಿಸಿದನು. ಸರ್ವವ್ಯಾಪಿನಿಯಾದ ದೇವಿಯು ಇವನಲ್ಲಿ ಪ್ರಸನ್ನೆಯಾಗಿ, ಬಲಶಾಲಿಯಾದ ತಾಲನನ ಅಂತರಂಗದಲ್ಲಿ ಪ್ರೇರಿಸಿ ಅವನನ್ನು ಇವನ ಬಳಿಗೆ ಬರುವಂತೆ ಮಾಡಿದಳು. ತಾಲನನು ನಾಲ್ಕುಲಕ್ಷ ಸೇನೆಯೊಡನೆ ಜಾಗ್ರತೆಯಾಗಿ ಬಂದು ಕೃಷ್ಣಾಂಶನ ಒಂದುಲಕ್ಷ ಸೇನೆಯೊಂದಿಗೆ ಸೇರಿದನು.

ಬಲಖಾನಿಸ್ತದಾ ಪ್ರಾಪ್ತಶ್ಚೈಕಲಕ್ಷಬಲಾನ್ವಿತಃ ।
ಅನುಜಂ ತತ್ರ ಸಂಸ್ಥಾಪ್ಯ ಶಿರೀಷಾಖ್ಯೇ ಮಹಾಬಲಃ ॥ ೨೧ ॥

ಸಜ್ಜೀಭೂತಾನ್ಸಮಾಲೋಕ್ಯ ತಾನುದ್ಯಾನೇ ಸಸೈನ್ಯಕಾನ್ ।
ಭೀತಃ ಪರಿಮಲೋ ರಾಜಾ ಕೃಷ್ಣಾಂಶಂ ಪ್ರತಿಚಾಯಯೌ ॥ ೨೨ ॥

ವಿಹ್ವಲಂ ನೃಪಮಾಲೋಕ್ಯ ಕೃಷ್ಣಾಂಶೋಽಽಶ್ವಾಸಯನ್ಮುದಾ ॥ ೨೩ ॥

ಲಕ್ಷಸೈನ್ಯಂ ತದೀಯಂ ಚ ಗೃಹೀತ್ವಾ ಚಾಧಿಪೋಽಭವತ್ ।
ಶತಘ್ನ್ಯಃ ಪಂಚಸಾಹಸ್ರಾ ನಾನಾವರ್ಣಾಃ ಸುವಾಹನಾಃ ॥ ೨೪ ॥

ಪತಾಕಾಃ ಪಂಚಸಾಹಸ್ರಾಃ ಸಾಹಸ್ರಂ ಕಾಷ್ಠಕಾರಿಣಃ ।
ಗಜಾ ದಶಸಹಸ್ರಾಶ್ಚ ರಥಾಃ ಪಂಚಸಹಸ್ರಕಾಃ ॥ ೨೫ ॥

ತ್ರಿಲಕ್ಷಾಶ್ಚ ಹಯಾಃ ಸರ್ವೇ ಉಷ್ಟ್ರಾ ದಶಸಹಸ್ರಕಾಃ ।
ಶೇಷಾಃ ಪದಾತಯೋ ಜ್ಞೇಯಾಸ್ತಸ್ಮಿನ್ ಸೈನ್ಯೇ ಭಯಾನಕೇ ॥ ೨೬ ॥

---

೨೧. ಇದೇವೇಳೆಗೆ ಬಲಶಾಲಿಯಾದ ಬಲಖಾನಿಯು ತನ್ನ ತಮ್ಮನನ್ನು ಶೀರೀಷನಗರದ ಕಾವಲಿಗಿರಿಸಿ ತಾನು ಒಂದುಲಕ್ಷ ಸೇನೆಯೊಡನೆ ಬಂದು ಸೇರಿದನು.

೨೨-೨೩. ಈರೀತಿಯಲ್ಲಿ ಉದ್ಯಾನದಲ್ಲಿ ಸೇನೆಗಳೊಡನೆ ಸಿದ್ಧರಾಗಿರುವ ಇವರನ್ನು ನೋಡಿ ಪರಿಮಳರಾಜನು ಭಯಪಟ್ಟು ಕೃಷ್ಣಾಂಶನಬಳಿಗೆ ಬಂದನು. ರಾಜನು ಈರೀತಿ ಗಾಬರಿಯಾಗಿ ಬಂದಿರುವುದನ್ನು ನೋಡಿ ಕೃಷ್ಣಾಂಶನು ನಗುತ್ತಾ ಅವನನ್ನು ಸಮಾಧಾನಪಡಿಸಿದನು.

೨೪-೨೬. ಅನಂತರ ಅವನ ಒಂದುಲಕ್ಷ ಸೇನೆಯನ್ನೂ ಜೊತೆಗೆಕೂಡಿಸಿ ಕೊಂಡು ಅದಕ್ಕೂ ತಾನೇ ಸೇನಾಪತಿಯಾಗಿ ನಡೆಯಿಸತೊಡಗಿದನು. ಆ ಅದ್ಭುತ ಸೇನೆಯಲ್ಲಿ ನಾನಾಬಣ್ಣದ ವಾಹನಗಳುಳ್ಳ ಐದುಸಾವಿರ ಶತಘ್ನಿಗಳು, ಐದುಸಾವಿರ ಪತಾಕೆಗಳು, ಸಾವಿರಮಂದಿ ಮಾರ್ಗನಿರ್ಮಾಪಕರು, ಹತ್ತುಸಾವಿರ ಆನೆ, ಹತ್ತು ಸಾವಿರ ಒಂಟೆಗಳು, ಐದುಸಾವಿರ ರಥ, ಮೂರುಲಕ್ಷ ಕುದುರೆಗಳು, ಸಮಸ್ತವಾದ ಪದಾತಿಸೈನ್ಯಗಳು, ಎಲ್ಲಾ ಸೇರಿ ಒಟ್ಟು ಏಳುಲಕ್ಷಸೇನೆ ಭಯಂಕರವಾಗಿದ್ದಿತು.

ತಾಲನಶ್ಚ ಸಮಾಯಾತಃ ಸರ್ವಸೇನಾಧಿಪೋಽಭವತ್ ।
ದೇವಸಿಂಹೋ ರಥಾನಾಂ ಚ ಸರ್ವೇಷಾಮೀಶ್ವರೋಽಭವತ್ ॥ ೨೭ ॥

ಬಲಖಾನಿರ್ಹಯಾನಾಂ ಚ ಸರ್ವೇಷಾಮಧಿಪೋಽಭವತ್ ।
ಆಹ್ಲಾದಶ್ಚ ಗಜಾನಾಂ ಚ ಸರ್ವೇಷಾಮಧಿಪೋಽಭವತ್ ।
ಪತ್ತೀನಾಂ ಚೈವ ಸರ್ವೇಷಾಂ ಕೃಷ್ಣಾಂಶಶ್ಚಾಧಿಪೋಽಭವತ್ ॥ ೨೮ ॥

ನತ್ವಾ ತೇ ಮಲನಾಂ ಭೂಪೋ ದತ್ವಾ ದಾನಾನ್ಯನೇಕಶಃ ।
ಸಮಾಯಯುಶ್ಚ ತೇ ಸರ್ವೇ ದಕ್ಷಿಣಾಶಾಂ ಬಲಾನ್ವಿತಾಃ ॥ ೨೯ ॥

ಪಕ್ಷಮಾತ್ರಗತಃ ಕಾಲೋ ಮಾರ್ಗೇ ತಸ್ಮಿನ್ನೃಣೈಷಿಣಾಂ ।
ಛಿತ್ವಾ ತತ್ರ ವನಂ ಘೋರಂ ನಾನಾಕಂಟಕಸಂಯುತಂ ।
ಸೇನಾಂ ನಿವಾಸಯಾಮಾಸುರ್ನಿರ್ಭಯಾಸ್ತೇ ಮಹಾಬಲಾಃ ॥ ೩೦ ॥

---

೨೭. ದೇವಿಯ ಪ್ರೇರಣೆಯಿಂದ ಬಂದ ತಾಲನನೇ ಸರ್ವಸೇನಾಪತಿಯಾದನು ದೇವಸಿಂಹನು ರಥಸೇನೆಗೆಲ್ಲಾ ಅಧಿಪತಿಯಾದನು.

೨೮. ಬಲಖಾನಿಯು ಸಮಸ್ತ ಅಶ್ವಸೇನೆಗೂ ಅಧ್ಯಕ್ಷನಾದನು. ಆಹ್ಲಾದನು ಗಜಸೈನ್ಯಕ್ಕೆಲ್ಲಾ ಅಧ್ಯಕ್ಷನಾದನು. ಕೃಷ್ಣಾಂಶನು ಪದಾತಿಸೇನೆಯ ನಾಯಕನಾನಾದನು

೨೯. ರಣಭೂಮಿಗೆ ಹೊರಡುವಾಗ ಇವರೆಲ್ಲರೂ ತಾಯಿಯಾದ ಮಲನಾದೇವಿಗೆ ನಮಸ್ಕರಿಸಿ ಬ್ರಾಹ್ಮಣರಿಗೆ ನಾನಾ ದಾನಗಳನ್ನು ಮಾಡಿ ತಮ್ಮಸೇನೆಯೊಡನೆ ದಕ್ಷಿಣದಕಡೆಗೆ ಪ್ರಯಾಣಮಾಡಿದರು.

೩೦. ಯುದ್ಧಾಪೇಕ್ಷಿಗಳಾದ ಇವರು ಹದಿನೈದುದಿನ ನಿಲ್ಲದೆ ಪ್ರಯಾಣ ಮಾಡುತ್ತಾ ದಾರಿಯಲ್ಲಿ ಸಿಕ್ಕಿದ ಮುಳ್ಳುಪೊದೆಗಳುಳ್ಳ ಘೋರಾರಣ್ಯವನ್ನು ಕತ್ತರಿಸಿ ನಿರ್ಭಯವಾಗಿ ತಮ್ಮಸೇನೆಯನ್ನು ತಂದು ಮಾಹಿಷ್ಮತೀ ನಗರಕ್ಕೆ ಸ್ವಲ್ಪ ದೂರದಲ್ಲಿ ಇಳಿಸಿದರು.

ದೇವಸಿಂಹಮತೇನೈವ ಯೋಗಿನಸ್ತೇ ತದಾಭವನ್ ।
ನರ್ತಕಶ್ಚೈವ ಕೃಷ್ಣಾಂಶಶ್ಚಾಹ್ಲಾದೋ ಡಮರುಪ್ರಿಯಃ ॥ ೩೧ ॥
ಮಡ್ಡುಧಾರೀ ತದಾ ದೇವೋ ವೀಣಾಧಾರೀ ಚ ತಾಲನಃ ।
ವತ್ಸಜಃ ಕಾಂಸ್ಯಧಾರೀ ಚ ಬಲಖಾನಿರ್ಮಹಾಬಲಃ ॥ ೩೨ ॥
ಮಾತುರಗ್ರೇ ಸ್ಥಿತಾಸ್ತೇ ವೈ ನನೃತುಃ ಪ್ರೇಮವಿಹ್ವಲಾಃ ।
ಮೋಹಿತಾ ದೇವಕೀ ಚಾಸೀನ್ನ ಜ್ಞಾತಂ ತತ್ರ ಕಾರಣಂ ॥ ೩೩ ॥
ಮೋಹಿತಾಂ ಮಾತರಂ ದೃಷ್ಟ್ವಾ ಪರಂ ಹರ್ಷಮುಪಾಯಯುಃ ।
ತದಾ ತಾಂ ಕಥಯಾಮಾಸುರ್ವಯಂ ತೇ ತನಯಾ ಹಿ ಭೋಃ ॥ ೩೪ ॥
ನತ್ವಾ ತಾಂ ಪ್ರಯಯುಃ ಸರ್ವೇ ಪುರೀಂ ಮಾಹಿಷ್ಮತೀಂ ಶುಭಾಂ ।
ನಗರಂ ಮೋಹಯಾಮಾಸುರ್ವಾದ್ಯಗಾನವಿಶಾರದಾಃ ॥ ೩೫ ॥

---

೩೧-೩೨. ಅನಂತರ ದೇವಸಿಂಹನು ಸೂಚಿಸಿದಂತೆ ಅವರೆಲ್ಲರೂ ನಾನಾ ಯೋಗಿಗಳ ವೇಷಗಳನ್ನು ಧರಿಸಿದರು. ಕೃಷ್ಣಾಂಶನು ನರ್ತಕನ ವೇಷವನ್ನೂ, ಆಹ್ಲಾದನು ಡಮರುಕ ಬಾರಿಸುವನ ವೇಷವನ್ನೂ, ದೇವಸಿಂಹನು ಮಡ್ಡುಎಂಬ ವಾದ್ಯವನ್ನು ಬಾರಿಸುವವನ ವೇಷವನ್ನೂ, ತಾಲನನು ವೈಣಿಕನವೇಷವನ್ನೂ, ವತ್ಸ ರಾಜಸುತನಾದ ಬಲಖಾನಿಯು ತಾಳ (ಜಾಗಟೆ) ಬಾರಿಸುವವನ ವೇಷವನ್ನೂ ಧರಿಸಿದರು.

೩೩. ಅನಂತರ ಅವರು ತಮ್ಮ ವೇಷಕ್ಕೆ ತಕ್ಕಂತೆ ವಾದ್ಯಗಳನ್ನು ಹಿಡಿದು ತಾಯಿಯಾದ ದೇವಕಿಯ ಮುಂದೆ ನಿಂತುಕೊಂಡು ಅವಳೆದುರಿಗೆ ನರ್ತನಮಾಡಿದರು. ಆಗ ದೇವಕಿದೇವಿಯು ಇದರಿಂದ ಮೂರ್ಛೆಹೊಂದಿದಳು. ಇದಕ್ಕೆ ಕಾರಣಮಾತ್ರ ಯಾರಿಗೂ ತಿಳಿಯಲಿಲ್ಲ.

೩೪. ತಾಯಿಗೆ ಈರೀತಿ ಮೂರ್ಛೆಯಾದುದನ್ನು ಕಂಡು ಕೃಷ್ಣಾಂಶನೇ ಮುಂತಾದವರೆಲ್ಲರೂ ತಮ್ಮ ವೇಷವು ಜನರನ್ನು ಮರುಳುಗೊಳಿಸಬಲ್ಲದೆಂದು ಸಂತೋಷದಿಂದ ಹಿಗ್ಗಿದರು. ಆಮೇಲೆ ಅವರೆಲ್ಲರೂ ದೇವಕಿಯನ್ನು ಕುರಿತು "ಅಮ್ಮ! ನಾವೆಲ್ಲರೂ ನಿನ್ನ ಮಕ್ಕಳು ಚೆನ್ನಾಗಿನೋಡು" ಎಂದು ಹೇಳಿದರು.

೩೫. ಹೀಗೆಹೇಳಿ ಅವಳಿಗೆ ನಮಸ್ಕಾರಮಾಡಿ ಶುಭಕರವಾದ ಮಾಹೀಷ್ಮತೀ ನಗರಕ್ಕೆ ಪ್ರಯಾಣಮಾಡಿದರು. ವಾದ್ಯ ಗಾನ, ನರ್ತನಾದಿಗಳಲ್ಲಿ ನಿಪುಣರಾದ ಇವರು ಆ ಪಟ್ಟಣವನ್ನುಸೇರಿ ಅಲ್ಲಿ ತಮ್ಮ ಕುಶಲವಿದ್ಯೆಗಳಿಂದ ಆ ನಗರವನ್ನೇ ಮೋಹಗೊಳಿಸಿದರು.

ದೂತ್ಯಾ ಸಾರ್ಧಂ ರಿಪೋರ್ಗೇಹಂ ಯಯುಸ್ತೇ ಕಾರ್ಯತತ್ಪರಾಃ ।
ನೃತ್ಯಗಾನಸುವಾದ್ಯೈಶ್ಚ ರಾಜ್ಞಸ್ತೇ ಮೋಹನೇ ರತಾಃ ॥ ೩೬ ॥

ವಿಸಂಜ್ಞಾಂ ಮಹಿಷೀಂ ಕೃತ್ವಾ ಕೃಷ್ಣಾಂಶಃ ಸರ್ವಮೋಹನಃ ।
ಪ್ರಾಪ್ತವಾಂಸ್ತತ್ರ ಯತ್ರಾಸೌ ತತ್ಸುತಾ ವಿಜಯೈಷಿಣೀ ॥ ೩೭ ॥

ದೃಷ್ಟ್ವಾ ಸಾ ಸುಂದರಂ ರೂಪಂ ಶ್ಯಾಮಾಂಗಂ ಪುರುಷೋತ್ತಮಂ ।
ಮುಮೋಹ ವಶಮಾಪನ್ನಾ ಮೈಥುನಾರ್ಥಂ ಸಮುದ್ಯತಾ ॥ ೩೮ ॥

ದೃಷ್ಟ್ವಾ ತಥಾ ಗತಾಂ ನಾರೀಂ ಕೃಷ್ಣಾಂಶಃ ಶ್ಲಕ್ಷ್ಣಯಾ ಗಿರಾ ।
ಶತ್ರೋರ್ಭೇದಂ ಚ ಪಪ್ರಚ್ಛ ಕಾಮಿನೀಂ ಮದವಿಹ್ವಲಾಂ ॥ ೩೯ ॥

ಸಾಹ ಭೋ ದೇವಕೀಪುತ್ರ ಯದಿ ಪಾಣಿಂ ಗ್ರಹೀಷ್ಯಸಿ ।
ತರ್ಹಿ ತೇ ಕಥಯಿಷ್ಯಾಮಿ ಪಿತುರ್ಭೇದಂ ಹಿ ದಾರುಣಂ ॥ ೪೦ ॥

---

೩೬. ಬಳಿಕ ಗೂಢಚಾರಿಣಿಯೊಬ್ಬಳ ಮುಖಾಂತರ ಪ್ರಯತ್ನಿಸಿ ಅವಳ ಸಹಾಯದಿಂದ ಶತ್ರುವಿನ ಮನೆಯನ್ನು ಹೊಕ್ಕು, ನೃತ್ಯಗೀತವಾದ್ಯಗಳಿಂದ ಆ ಶತ್ರು ರಾಜನನ್ನು ಮೋಹಗೊಳಿಸುವುದಕ್ಕೆ ಪ್ರಯತ್ನಮಾಡಿದರು.

೩೭. ಸರ್ವರನ್ನೂ ಮೋಹಗೊಳಿಸುವಷ್ಟು ಸಾಮರ್ಥ್ಯವುಳ್ಳ ಕೃಷ್ಣಾಂಶನು ತನ್ನ ವಿದ್ಯಾಚಾತುರ್ಯದಿಂದ ರಾಣಿಯನ್ನು ಮೂರ್ಛಿತೆಯಾಗಿಮಾಡಿ, ಅವಳ ಮಗಳಾದ ವಿಜಯೈಷಿಣಿ ಯಿದ್ದೆಡೆಗೆ ಹೋದನು.

೩೮. ಸುಂದರಾಕಾರನೂ, ನೀಲವರ್ಣದೇಹನೂ, ಪುರುಷಶ್ರೇಷ್ಠನೂ ಆದ ಈ ಕೃಷ್ಣಾಂಶನನ್ನು ವಿಜಯೈಷಿಣಿಯು ನೋಡಿ, ಅವನಲ್ಲಿ ಮೋಹಗೊಂಡು ಅವನೊಡನೆ ಭೋಗಿಸಲು ಅಪೇಕ್ಷಿಸಿ ಪ್ರಯತ್ನಪಟ್ಟಳು.

೩೯. ಇವಳು ಈರೀತಿ ಕಾಮಪೀಡಿತೆಯಾದುದನ್ನು ನೋಡಿ ಕೃಷ್ಣಾಂಶನು ಸವಿಮಾತಿನಿಂದ "ನಮ್ಮ ಶತ್ರುವೆನಿಸಿದ ಈ ರಾಜನನ್ನು ಭೇದಿಸುವ ಉಪಾಯವು ಯಾವುದು ? ಹೇಳು" ಎಂದು ಮದಕಾತರೆಯಾದ ಆ ವಿಜಯೈಷಿಣಿಯನ್ನು ಕೇಳಿದನು.

೪೦. ಆ ಮಾತನ್ನು ಕೇಳಿ ವಿಜಯೈಷಿಣಿಯು "ಎಲೈ ದೇವಕೀಪುತ್ರನೇ ! ನೀನು ನನ್ನನ್ನು ಪಾಣಿಗ್ರಹಣ ಮಾಡಿಕೊಳ್ಳುವುದಾದರೆ ಭಯಂಕರನಾದ ನನ್ನ ತಂದೆಯನ್ನು ಭೇದಿಸುವ ಉಪಾಯವನ್ನು ನಿನಗೆ ತಿಳಿಸುವೆನು" ಎಂದಳು.

ತಥೇತ್ಯುಕ್ತ್ವಾ ಸ ಬಲವಾಂಸ್ತಸ್ಯಾಃ ಪಾಣಿಂ ಗೃಹೀತವಾನ್ ।
ಜ್ಞಾತ್ವಾ ಬೇಧಂ ರಿಪೋಃ ಸರ್ವಂ ತಾಮಾಶ್ವಾಸ್ಯ ಯಯೌ ಮುದಾ ॥ ೪೧ ॥

ಏತಸ್ಮಿನ್ನಂತರೇ ರಾಜ್ಞೀ ಬಾಧಿತಾ ಪ್ರಾಹ ಯೋಗಿನಂ ।
ದೇಶರಾಜಪ್ರಿಯಂ ಹಾರಂ ನವಲಕ್ಷಸ್ಯ ಮೂಲ್ಯಕಂ ।
ತುಭ್ಯಂ ದಾಸ್ಯಾಮಿ ಸಂತುಷ್ಟಾ ನೃತ್ಯಗಾನವಿಮೋಹಿತಾ ॥ ೪೨ ॥

ಇತಿ ಶ್ರುತ್ವಾ ವತ್ಸಸುತಸ್ತಾಂ ಪ್ರಶಸ್ಯ ಗೃಹೀತವಾನ್ ।
ಪ್ರಯಯೌ ಬಂಧುಭಿಃ ಸಾರ್ಧಂ ಜಂಬುಕೋ ಯತ್ರ ತಿಷ್ಠತಿ ॥ ೪೩ ॥

ನನರ್ತ ತತ್ರ ಕೃಷ್ಣಾಂಶೋ ಬಲಖಾನಿರಗಾಯತ ।
ಆಹ್ಲಾದಸ್ತಾಲನೋ ದೇವೋ ದಧ್ಮುರ್ವಾದ್ಯಗತೀರ್ಮುದಾ ॥ ೪೪ ॥

---

೪೧. ಕೃಷ್ಣಾಂಶನು ' ಹಾಗೆಯೇ ಆಗಲಿ ' ಎಂದು ಅವಳನ್ನು ವಿವಾಹಮಾಡಿಕೊಂಡು ಅವಳಿಂದ ಶತ್ರುವನ್ನು ಭೇದಿಸುವ ಉಪಾಯವನ್ನು ತಿಳಿದುಕೊಂಡು ಆನಂತರ ವಿಜಯೈಷಿಣಿಯನ್ನು ಸಮಾಧಾನಮಾಡಿಸಿ ಸಂತೋಷದಿಂದ ಹಿಂದಿರುಗಿ ಬಂದನು.

೪೨. ಇಷ್ಟರಲ್ಲಿ ರಾಣಿಯು ಯೋಗಿವೇಷಧಾರಿಗಳಾಗಿರುವ ಇವರನ್ನು ಕುರಿತು "ನಿಮ್ಮ ನೃತ್ಯಗೀತವಾದ್ಯಕೌಶಲಕ್ಕೆ ನಾನು ಮೆಚ್ಚಿದೆನು. ಒಂಬತ್ತುಲಕ್ಷ ವರಹ ಬೆಲೆಬಾಳುವ ಈ ಹಾರವನ್ನು ನಿಮಗೆ ಕೊಡುತ್ತೇನೆ. ಈ ಹಾರವು ದೇಶರಾಜನಿಗೆ ಅತ್ಯಂತಪ್ರಿಯವಾಗಿತ್ತು" ಎಂದು ಅವರಮೇಲಿನ ಮೋಹದಿಂದ ಹೇಳಿದಳು.

೪೩. ರಾಣಿಯು ಈರೀತಿ ಹೇಳಿದುದನ್ನು ಕೇಳಿ ವತ್ಸರಾಜನ ಮಗನು ಅವಳನ್ನು ಹೊಗಳಿ, ಆ ಹಾರವನ್ನು ಅವಳಿಂದ ತೆಗೆದುಕೊಂಡು ತನ್ನ ವೇಷಧಾರಿ ಸಹೋದರರೊಡನೆ ಜಂಬುಕನು ಇದ್ದ ಸ್ಥಳಕ್ಕೆ ಬಂದನು.

೪೪. ಅಲ್ಲಿ ಕೃಷ್ಣಾಂಶನು ನರ್ತನಮಾಡತೊಡಗಿದನು. ಬಲಖಾನಿಯು ಸಂಗೀತ ಹಾಡಿದನು. ಆಹ್ಲಾದನೂ ತಾಲನನೂ ದೇವಸಿಂಹನೂ ವೀಣೆ, ಮದ್ದು ದಿಂಡಿಮ ಮೊದಲಾವ ವಾದ್ಯಗಳನ್ನು ಬಹಳ ಕೌಶಲದಿಂದಲೂ ಸಂತೋಷದಿಂದಲೂ ಬಾರಿಸಿದರು.

ಮೋಹಿತೋಽಭೂನ್ನೃಪಸ್ತತ್ರ ಕಾಲಿಯಃ ಸ್ವಜನೈಃ ಸಹ ।
ಕಾಮಂ ವರಯ ಕೃಷ್ಣಾಂಗ ಯಚ್ಚ ತೇ ಹೃದಯೇ ಸ್ಥಿತಂ ॥ ೪೫ ॥

ಇತಿ ಶ್ರುತ್ವಾ ವಚಃ ಶತ್ರೋರ್ಬಲಖಾನಿರ್ಮಹಾಬಲಃ ।
ತಮಾಹ ಭೋ ಮಹೀಪಾಲ ಲಕ್ಷಾವರ್ತಿರ್ವರಾಂಗನಾ ।
ಸ್ವವಿದ್ಯಾಂ ದರ್ಶಯೇನ್ಮಹ್ಯಂ ತದಾ ತೃಪ್ತಿಂ ವ್ರಜಾಮ್ಯಹಂ ॥ ೪೬ ॥

ಇತಿ ಶ್ರುತ್ವಾ ತಥಾ ಮತ್ವಾ ಲಕ್ಷಾವರ್ತಿಂ ನೃಪೋತ್ತಮಃ ।
ಸಭಾಯಾಂ ನರ್ತಯಾಮಾಸ ದೇಶರಾಜಪ್ರಿಯಾಂ ತಥಾ ॥ ೪೭ ॥

ಸಾ ವೇಶ್ಯಾ ಸುತಮಾಹ್ಲಾದಂ ಜ್ಞಾತ್ವಾ ಯೋಗಿತ್ವಮಾಗತಂ ।
ರುರೋದ ತತ್ರ ದುಃಖಾರ್ತಾ ನೇತ್ರಾದಶ್ರೂಣಿ ಮುಂಚತೀ ॥ ೪೮ ॥

---

೪೫. ತನ್ನ ಜನಗಳು ಮತ್ತು ತನ್ನ ಮಗ ಕಾಲಿಯನ ಸಮೇತ ಕುಳಿತು ಈ ದೃಶ್ಯವನ್ನು ನೋಡುತ್ತಿದ್ದ ರಾಜನು ಸಂತೋಷಗೊಂಡು ಮೋಹವಶನಾಗಿ " ಅಯ್ಯಾ ಪ್ರಾಜ್ಞನೇ ! ನಿನ್ನ ಕೌಶಲಕ್ಕೆ ನಾನು ಮೆಚ್ಚಿದೆನು. ನಿನಗೇನು ಬಹು ಮಾನ ಮಾಡಬೇಕು ಎಂಬುದನ್ನು ನಿನ್ನ ಮನಬಿಚ್ಚಿ ಹೇಳು ; ಸಂಕೋಚ ಪಡ ಬೇಡ ; ಕೊಡುವೆನು " ಎಂದು ಹೇಳಿದನು.

೪೬. ತನ್ನ ಶತ್ರುರಾಜನು ಹೇಳಿದ ಈ ಮಾತನ್ನು ಕೇಳಿ ಮಹಾವೀರನಾದ ಬಲಖಾನಿಯು ಅವನನ್ನು ಕುರಿತು " ಎಲೈ ರಾಜನೇ ! ನಿನ್ನ ವೇಶ್ಯೆಯೂ ಸುಂದ ರಾಂಗಿಯೂ ಆದ ಲಕ್ಷಾವರ್ತಿಯು ತನ್ನ ನರ್ತನ ವಿದ್ಯೆಯನ್ನು ನನಗೆ ತೋರಿಸಿದರೆ ನಾನು ತೃಪ್ತಿಹೊಂದುವೆನು " ಎಂದು ಹೇಳಿದನು.

೪೭. ಈ ಮಾತನ್ನು ಕೇಳಿ ರಾಜನು " ಹಾಗೆಯೇ ಆಗಲಿ " ಎಂದು ಹೇಳಿ, ದೇಶರಾಜನ ಪ್ರಿಯಳಾಗಿದ್ದ ಲಕ್ಷಾವರ್ತಿಯನ್ನು, ಸಭೆಗೆ ಬಂದು ನರ್ತನಮಾಡುವಂತೆ ಆಜ್ಞಾಪಿಸಲು, ಅವಳು ಅದೇರೀತಿ ಬಂದು ಸಭಾಮಧ್ಯದಲ್ಲಿ ನರ್ತಿಸಿದಳು.

೪೮ ಹೀಗೆ ನರ್ತಿಸುತ್ತಾ ಇರುವಾಗ ಅಲ್ಲಿ ಕುಳಿತಿದ್ದ ಈ ವಾದ್ಯವಿದರನ್ನು ನೋಡಿ ಲಕ್ಷಾವರ್ತಿಯು ತನ್ನ ಪುತ್ರನಾದ ಆಹ್ಲಾದನೇ ಯೋಗಿರೂಪದಿಂದ ಬಂದಿರು ವುದನ್ನು ತಿಳಿದು ದುಃಖಪೀಡಿತೆಯಾಗಿ ದುಃಖಾಶ್ರುಧಾರಾಪೂರ್ವಕವಾಗಿ ಅಳುವು ದಕ್ಕೆ ಪ್ರಾರಂಭಿಸಿದಳು.

ರುದಿತಾಂ ತಾಂ ಸಮಾಲೋಕ್ಯ ರುದನ್ನಾಹ್ಲಾದ ಏವ ಸಃ ।
ಸ್ವಭುಜೌ ತಾಡಯಾಮಾಸ ತತ್ಪ್ರಿಯಾರ್ಥೇ ಮಹಾಬಲಃ ॥ ೪೯ ॥

ಕೃಷ್ಣಾಂಶಸ್ತತ್ರ ತಂ ಹಾರಂ ತಸ್ಯಾಃ ಕಂಠೇ ಪ್ರದತ್ತವಾನ್ ।
ಉವಾಚ ಕ್ರೋಧತಾಮ್ರಾಕ್ಷಸ್ತಾಮಾಶ್ವಾಸ್ಯ ಪುನಃಪುನಃ ॥ ೫೦ ॥

ಅಹಂ ಚೋದಯಸಿಂಹೋऽಯಂ ಪಿತುರ್ವೈರಾರ್ಥಮಾಗತಃ ।
ಹನಿಷ್ಯಾಮಿ ರಿಪುಂ ಭೂಪಂ ಸಾತ್ಮಜಂ ಸಬಲಂ ತಥಾ ॥ ೫೧ ॥

ಇತಿ ಶ್ರುತ್ವಾ ವಚಸ್ತಸ್ಯ ಕಾಲಿಯೋ ಬಲವತ್ತರಃ ।
ಪಿತುರಾಜ್ಞಾಂ ಪುರಸ್ಕೃತ್ಯ ಶತವ್ಯೂಹಸಮನ್ವಿತಃ ॥ ೫೨ ॥

ತೇಷಾಂ ಚ ಬಂಧನಾಯೈವ ಕಪಾಟಂ ಸಮುರುದ್ಧ ಸಃ ।
ತಾಞ್ಛತ್ರೂನ್ಸಮನುಜ್ಞಾಯ ಪಾಶಹಸ್ತಾನ್ಸಶಸ್ತ್ರಗಾನ್ ॥ ೫೩ ॥

---

೪೯. ದುಃಖಿತೆಯಾದ ಲಕ್ಷ್ಮಾವರ್ತಿಯನ್ನು ನೋಡಿ ಆಹ್ಲಾದನು ಖಿನ್ನನಾದರೂ ಮಹಾಬಲಶಾಲಿಯಾದ ಇವನು ಅದನ್ನು ತೋರ್ಪಡಿಸದೆ ಅವಳಿಗೆ ಉತ್ಸಾಹವುಂಟಾಗುವುದಕೋಸ್ಕರ ತನ್ನ ಭುಜಗಳನ್ನು ತಟ್ಟಿದನು.

೫೦-೫೧. ಆ ಸಮಯದಲ್ಲಿ ಕೃಷ್ಣಾಂಶನು ತನಗೆ ರಾಣಿಯು ಕೊಟ್ಟಿದ್ದ ಹಾರವನ್ನು ಆ ಲಕ್ಷ್ಮಾವರ್ತಿಯ ಕೊರಳಲ್ಲಿ ಹಾಕಿದನು. ಅಷ್ಟೇ ಅಲ್ಲದೆ ಆಕೆಯನ್ನು ಬಹುವಾಗಿ ಸಂತೈಸುತ್ತಾ ಇದ್ದು ಪೂರ್ವವೃತ್ತಾಂತವನ್ನು ಸ್ಮರಿಸಿ ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ ಆಕೆಯೊಡನೆ' ' ನಮ್ಮ ತಂದೆಯ ವೈರಿಯನ್ನು ತೀರಿಸುವುದಕ್ಕಾಗಿಯೇ ನಾನೂ ಉದಯಸಿಂಹನೂ ಬಂದಿದ್ದೇವೆ. ಈ ಶತ್ರುರಾಜನನ್ನು ಮಕ್ಕಳು ಸೇನೆ ಇವುಗಳ ಸಮೇತವಾಗಿ ಕೊಲ್ಲುವೆವು '' ಎಂದು ಹೇಳಿದನು.

೫೨ ಅವನ ಈ ಮಾತನ್ನು ಕೇಳಿ ಬಲಶಾಲಿಯಾದ ಕಾಲಿಯನು ತಂದೆಯ ಅಪ್ಪಣೆಯನ್ನು ಪಡೆದು ನೂರುಮಂದಿಯನ್ನು ವ್ಯೂಹರಚಿಸಿಕೊಂಡು ಇವರನ್ನು ಸೆರೆಹಿಡಿದು ಬಂಧಿಸಬೇಕೆಂಬದಾಗಿ ಉದ್ದೇಶಿಸಿ ಬಾಗಿಲಲ್ಲಿ ಅಡ್ಡಗಟ್ಟಿನಿಂತನು.

೫೩. ಕೈಯಲ್ಲಿ ಶಸ್ತ್ರವನ್ನೂ ಹಗ್ಗವನ್ನೂ ಧರಿಸಿ ಬಾಗಿಲಲ್ಲಿ ನಿಂತಿರುವ ಆ ಜನರನ್ನು ನೋಡಿ ಅವರು ಶತ್ರುಗಳೇ ಎಂದು ಭಾವಿಸಿ ಕ್ಷತ್ರಿಯರಾದ ಇವರೆಲ್ಲ ತಮ್ಮ ಖಡ್ಗವನ್ನು ಹಿರಿದು ಅವರಮೇಲೆ ಯುದ್ಧಮಾಡಿದರು.

ಸ್ವಂಸ್ವಂ ಖಡ್ಗಂ ಸಮಾಕೃಷ್ಯ ಕ್ಷತ್ರಿಯಾಸ್ತೇ ಸಮಾಪ್ಲುತ ।
ಶತಶೂರೇ ಹತೇ ತೈಶ್ಚ ಕಾಲಿಯೋ ಭಯಕಾತರಃ ॥ ೫೪ ॥

ತ್ಯಕ್ತ್ವಾ ತಾತಂ ಪ್ರದುದ್ರಾವ ತೇ ತು ಗೇಹಾದ್ಬಹಿರ್ಯಯುಃ ।
ಸ್ವಸೈನ್ಯಂ ಶೀಘ್ರಮಾಸಾದ್ಯ ಯುದ್ಧಾಯ ಸಮುಪಸ್ಥಿತಃ ।
ಶಿಬಿರಾಣಿ ಕೃತಾನ್ಯೇವ ನರ್ಮದಾಕೂಲಮಾಸ್ಥಿತೈಃ ॥ ೫೫ ॥

ಕೃತ್ವಾ ತು ನರ್ಮದಾಸೇತುಂ ನಲ್ವಮಾತ್ರಂ ಸುಪುಷ್ಟಿದಂ ।
ಸ್ವಸೈನ್ಯಂ ತಾರಯಾಮಾಸ ಚತುರಂಗಸಮನ್ವಿತಂ ॥ ೫೬ ॥

ರುರೋಧ ನಗರೀಂ ಸರ್ವಾಂ ಬಲಖಾನಿರ್ಬಲೈರ್ಯುತಃ ।
ಶತಘ್ನೀರಗ್ರತಃ ಕೃತ್ವಾ ಮಹಾಶಬ್ದಕರೀಸ್ತದಾ ।
ಮಾಹಿಷ್ಮತ್ಯಾಶ್ಚ ಹರ್ಮ್ಯಾಣಿ ಪಾತಯಾಮಾಸ ಭೂತಲೇ ॥ ೫೭ ॥

---

೫೪. ಈರೀತಿ ಆಹ್ಲಾದನೇ ಮುಂತಾದವರು ಯುದ್ಧಮಾಡಿ ಕಾಲಿಯನ ಕಡೆಯ ನೂರು ಮಂದಿಯನ್ನೂ ಕೊಂದುಹಾಕಲಾಗಿ, ಆಗ ಕಾಲಿಯನು ಭಯಪಟ್ಟು ತಂದೆಯ ಸಮೀಪವನ್ನು ಬಿಟ್ಟು ಓಡಿದನು. ಇವರೆಲ್ಲರೂ ಸಹ ಅರಮನೆಯಿಂದ ಹೊರಗೆ ಬಂದರು

೫೫-೫೬. ಅನಂತರ ಕಾಲಿಯನು ತನ್ನ ಸೇನೆಯನ್ನು ಜಾಗ್ರತೆಯಾಗಿ ಒಂದುಗೂಡಿಸಿಕೊಂಡು ಯುದ್ಧಕ್ಕೆ ಸಿದ್ಧನಾದನು. ನರ್ಮದಾ ತೀರದಲ್ಲಿ ಶಿಬಿರ ಮಾಡಿಕೊಂಡಿದ್ದ ಆಹ್ಲಾದನಕಡೆಯ ಸೈನಿಕರು ಒಂದು ನಲ್ವ (ಫರ್ಲಾಂಗ್) ದೂರ ಉದ್ದವುಳ್ಳದಾಗಿ ಬಹು ದೃಢವಾದ ಸೇತುವೆಯನ್ನು ರಚಿಸಿಕೊಂಡು, ಚತುರಂಗಸೈನ್ಯವನ್ನೆಲ್ಲಾ ಶ್ರಮಪಟ್ಟು ನದಿಯನ್ನು ದಾಟಿಸಿದರು.

೫೭. ಬಲಖಾನಿಯು ಮಹಾಭಯಂಕರವಾಗಿ ಶಬ್ದಮಾಡುವ ಫಿರಂಗಿಯ ಸೇನೆಯನ್ನು ಮುಂದುಮಾಡಿಕೊಂಡು ಮಿಕ್ಕ ಸೈನಿಕರನ್ನೂ ಸಂಗಡಕರೆದುಕೊಂಡು ಮಾಹಿಷ್ಮತೀನಗರದ ಸುತ್ತಲೂ ಮುತ್ತಿಗೆ ಹಾಕಿದನು. ಫಿರಂಗಿಗಳ ಹೊಡೆತದಿಂದ ಮಾಹಿಷ್ಮತಿಯ ಉಪ್ಪರಿಗೆ ಮನೆಗಳು ಭೂಮಿಗೆ ಉರುಳಿದುವು.

ನರಾಶ್ಚ ಸ್ವಕುಲೈಃ ಸಾರ್ಧಂ ಮುಖ್ಯದ್ರವ್ಯಸಮನ್ವಿತಾಃ ।
ವಿಂಧ್ಯಾದ್ರೇಶ್ಚ ಗುಹಾಂ ಪ್ರಾಪ್ಯ ತತ್ರೋಷುರ್ಭಯಕಾತರಾಃ ॥ ೫೮ ॥

ಕಾಲಿಯಸ್ತು ಗಜಾನೀಕೇ ಪಂಚಶಬ್ದಗಜೇ ಸ್ಥಿತಃ ।
ಹಸ್ತಿಪಾ ದಶಸಾಹಸ್ರಾ ಯುದ್ಧಾಯ ಸಮುಪಾಯಯುಃ ॥ ೫೯ ॥

ತಸ್ಯಾನುಜಃ ಸೂರ್ಯವರ್ಮಾ ತ್ರಿಲಕ್ಷೈಸ್ತುರಗೈರ್ಯುತಃ ।
ತುಂದಿಲಶ್ಚ ರಥೈಃ ಸಾರ್ಧಂ ರಥಸ್ಥಶ್ಚ ಸಹಸ್ರಕೈಃ ॥ ೬೦ ॥

ರಂಕಣೋ ವಂಕಣಶ್ಚೋಭೌ ಚತುರ್ಲಕ್ಷಪದಾತಿಭಿಃ ।
ಜಗ್ಮತುಸ್ತೌ ಮಹಾಮ್ಲೇಚ್ಛೌ ಮ್ಲೇಚ್ಛಭೂಪಸಹಸ್ರಕೈಃ ।
ದಾಕ್ಷಿಣಾತ್ಯಗ್ರಾಮಪಾಸ್ತೇ ತೌ ಪುರಸ್ಕೃತ್ಯ ಸಂಯಯುಃ ॥ ೬೧ ॥

---

೫೮. ಆ ಊರಿನ ಪ್ರಜೆಗಳೆಲ್ಲಾ ಭಯದಿಂದ ಮುಖ್ಯವಾದ ವಸ್ತುಗಳು ಧನ ಮುಂತಾದುವನ್ನು ತೆಗೆದುಕೊಂಡು, ತಮ್ಮ ತಮ್ಮ ಕಡೆಯವರನ್ನು ಗುಂಪುಕೂಡಿಕೊಂಡು ಊರುಬಿಟ್ಟು ವಿಂಧ್ಯಪರ್ವತದ ಗುಹೆಗೆ ಹೋಗಿ ಅಲ್ಲಿ ವಾಸಿಸಲು ಉಪಕ್ರಮಿಸಿದರು.

೫೯-೬೦. ರಾಜಪುತ್ರನಾದ ಕಾಲಿಯನು ಪಂಚಶಬ್ದವೆಂಬ ಆನೆಯನ್ನೇರಿ ಹತ್ತುಸಾವಿರ ಗಜಸೈನ್ಯದ ಸಮೇತ ಯುದ್ಧಕ್ಕೆ ಬಂದನು. ಕಾಲಿಯನ ತಮ್ಮನಾದ ಸೂರ್ಯವರ್ಮನು ಮೂರುಲಕ್ಷ ಅಶ್ವಸೇನೆಯೊಡನೆಯೂ, ತುಂದಿಲನು ಸಾವಿರ ರಥವೀರರೊಡನೆಯೂ ಇವನ ಸಹಾಯಕ್ಕೆ ಬಂದರು.

೬೧. ರಂಕಣ ವಂಕಣರೆಂಬ ಮ್ಲೇಚ್ಛರಾಜಾಧಿರಾಜರು ನಾಲ್ಕುಲಕ್ಷ ಪದಾತಿಗಳೊಡನೆಯೂ ದಕ್ಷಿಣದೇಶದ ಅನೇಕ ಸಾವಿರ ಮ್ಲೇಚ್ಛ ಪಾಳೆಯಗಾರರೊಡನೆಯೂ ಅವರ ಸೇನೆಯೊಡನೆಯೂ ಮುಂದಾಳುಗಳಾಗಿ ಬಂದು ಕಾಲಿಯನ ಪಕ್ಷಕ್ಕೆ ಸೇರಿದರು.

**ಉಭೇ ಸೇನೇ ಸಮಾಸಾದ್ಯ ಯುದ್ಧಾಯ ಸಮುಪಸ್ಥಿತೇ ।**
**ತಯೋಶ್ಚ ತುಮುಲಂ ಯುದ್ಧಮಭವಲ್ಲೋಮಹರ್ಷಣಂ　　॥ ೬೨ ॥**

**ತ್ರಿಯಾಮೇ ರುಧಿರೈಸ್ತೇಷಾಂ ನದೀ ಪ್ರಾವರ್ತತ ದ್ರುತಂ ।**
**ದೃಷ್ಟ್ವಾಸೃಜಾಂ ನದೀಂ ಘೋರಾಂ ಮಾಂಸಕರ್ದಮವಾಹಿನೀಂ ।**
**ಬಲಖಾನಿರಮೇಯಾತ್ಮಾ ಖಡ್ಗಪಾಣಿರ್ನರೋ ಯಯೌ　　॥ ೬೩ ॥**

**ಭಲ್ಲಹಸ್ತಸ್ತದಾ ದೇವೋ ಮನೋರಥಹಯೇ ಸ್ಥಿತಃ ।**
**ಬಿಂದುಲಸ್ಥಶ್ಚ ಕೃಷ್ಣಾಂಶಃ ಖಡ್ಗೇನೈವ ರಿಪೂನಹನ್　　॥ ೬೪ ॥**

**ಆಹ್ಲಾದಶ್ಚ ಗದಾಹಸ್ತಃ ಪ್ರೋಥಯಾಮಾಸ ವಾಹಿನೀಂ ।**
**ರೂಪಣೋ ನಾಮ ಶೂದ್ರಶ್ಚ ಶಕ್ತಿಹಸ್ತೋ ನ್ಯಹನ್ರಿಪೂನ್ ।**
**ತಾಲನೋ ಹಸ್ತನಿಸ್ತ್ರಿಂಶೋ ಮಾಹಿಷ್ಮತ್ಯಾಂ ಹನನ್ಯಯೌ　　॥ ೬೫ ॥**

---

೬೨. ಈರೀತಿ ಎರಡುಕಡೆಯ ಸೇನೆಯೂ ಯುದ್ಧಕ್ಕೆ ಸಿದ್ಧವಾದನಂತರ ಅವೆರಡಕ್ಕೂ ಪರಸ್ಪರ ಸಂಕುಲಯುದ್ಧವಾಗತೊಡಗಿ ನೋಡಿದವರಿಗೆ ರೋಮಾಂಚ ವುಂಟಾಗುವಷ್ಟುಮಟ್ಟಿಗೆ ಅದ್ಭುತವಾಗಿ ಕಾಳಗನಯಿತು.

೬೩. ಈರೀತಿ ಮೂರು ಜಾವಗಳವರೆಗೂ ಯುದ್ಧ ನಡೆದು ಸೈನಿಕರ ರಕ್ತವು ಹೊಳೆಯಂತೆ ವೇಗವಾಗಿ ಹರಿಯಲು ಉಪಕ್ರಮಿಸಿತು. ಮಹಾಪರಾಕ್ರಮಿಯಾದ ಬಲಖಾನಿಯು ಮಾಂಸಖಂಡಗಳೆಂಬ ಕೆಸರಿನಿಂದ ಯುಕ್ತವಾದ ಈ ರಕ್ತಪ್ರವಾಹ ವನ್ನು ನೋಡಿ ಖಡ್ಗವನ್ನು ಧರಿಸಿ ತಾನೇ ಯುದ್ಧಕ್ಕೆಬಂದನು.

೬೪. ದೇವಸಿಂಹನು ಮನೋರಥವೆಂಬ ಅಶ್ವವನ್ನೇರಿ ಭರ್ಜಿಯನ್ನು ಹಿಡಿದು ಯುದ್ಧಕ್ಕೆಬಂದನು. ಕೃಷ್ಣಾಂಶನು ಬಿಂದುಲವೆಂಬ ಅಶ್ವವನ್ನೇರಿ ಖಡ್ಗನನ್ನು ಧರಿಸಿ ಶತ್ರುಗಳನ್ನು ಕೊಂದುಹಾಕಿದನು.

೬೫. ಆಹ್ಲಾದನು ಗದೆಯನ್ನು ಪ್ರಯೋಗಿಸುತ್ತಾ ಶತ್ರುಸೈನ್ಯವೆಲ್ಲವನ್ನೂ ಪುಡಿಪುಡಿಮಾಡಿನು. ಶೂದ್ರನಾದ ರೂಪಣನು ಶಕ್ತ್ಯಾಯುಧವನ್ನು ಧರಿಸಿ ಶತ್ರು ಗಳನ್ನು ತುಡರಿಸುತ್ತ ಬಂದನು. ತಾಲನನು ತೀಕ್ಷ್ಣವಾದ ಖಡ್ಗವನ್ನು ಪ್ರಯೋ ಗಿಸಿ ಶತ್ರುಗಳನ್ನು ಧ್ವಂಸಮಾಡುತ್ತಾ ಮಾಹೀಷ್ಮತಿಯಕಡೆಗೆ ನುಗ್ಗಿದನು.

ಏವಂ ಮಹಾಭಯೇ ಜಾತೇ ರಣೇ ತಸ್ಮಿನ್ಮಹಾಬಲೇ ।
ದುದ್ರುವುಃ ಸರ್ವತೋ ವೀರಾಃ ಪಾಹಿಪಾಹೀತ್ಯಥಾಬ್ರುವನ್ ॥ ೬೬ ॥

ಪ್ರಭಗ್ನಂ ಸ್ವಬಲಂ ದೃಷ್ಟ್ವಾ ಕಾಲಿಯೋ ಬಲಖಾನಿಕಂ ।
ಗಜಸ್ಥಸ್ತಾಡಯಾಮಾಸ ಸ್ವಬಾಣೈಸ್ತಂ ಮಹಾಬಲಃ ॥ ೬೭ ॥

ಹರಿಣೀ ವಡವಾ ತಸ್ಯ ಜ್ಞಾತ್ವಾ ಸ್ವಾಮಿನಮಾತುರಂ ।
ಗಜೋಪರಿ ಸಮಾಸ್ಥಾಯ ಸ್ವಪಾದೈಸ್ತಮಪಾತಯತ್ ॥ ೬೮ ॥

ಪತಿತೇ ಕಾಲಿಯೇ ವೀರೇ ಪಂಚಶಬ್ದೋ ಮಹಾಗಜಃ ।
ಶೃಂಖಲೈಸ್ತಾಡಯಾಮಾಸ ಶೂರಾಂಸ್ತಾನ್ಮದಮತ್ತಕಾನ್ ॥ ೬೯ ॥

---

೬೬. ಅತ್ತ ತಾಲನ, ಕೃಷ್ಣಾಂಶ ಮೊದಲಾದವರೆಲ್ಲರೂ ಒಟ್ಟಾಗಿ, ಶತ್ರುಸೈನ್ಯವನ್ನು ಮುತ್ತಿ ಧ್ವಂಸಮಾಡುತ್ತಿರಲು ಮಹಾಬಲಿಷ್ಠವಾದ ಶತ್ರುಸೈನ್ಯವೆಲ್ಲವೂ ಭೀತಿಗೊಳಗಾಯಿತು. ಆ ಪಕ್ಷದ ವೀರರುಗಳೆಲ್ಲರೂ "ನಮ್ಮನ್ನು ಕಾಪಾಡಿ ಕಾಪಾಡಿ" ಎಂದು ಕಿರುಚುತ್ತಾ ಮೊರೆಯಿಡುತ್ತಾ ಎಲ್ಲಕಡೆಗೂ ಓಡಿದರು.

೬೭. ತನ್ನ ಸೇನೆಯು ಈರೀತಿ ಶತ್ರುಗಳಿಂದ ನಾಶವಾಗುತ್ತಿರುವುದನ್ನು ನೋಡಿ ಮಹಾಬಲನಾದ ಕಾಲಿಯನು ತಾನೇ ಆನೆಯನ್ನುಏರಿ ಅದನ್ನು ನುಗ್ಗಿಸಿ ಬಲಖಾನಿಯಮೇಲೆ ಬಿದ್ದು ತನ್ನ ಬಾಣಗಳಿಂದ ಹೊಡೆದನು.

೬೮. ಬಲಖಾನಿಯ ವಾಹನವಾಗಿದ್ದ ವಡಬಾ ಎಂಬ ಹೆಣ್ಣುಕುದುರೆಯು ತನ್ನ ಸ್ವಾಮಿಯು ಘಾಯಗೊಂಡುದನ್ನು ತಿಳಿದು, ಕಾಲಿಯನು ಕುಳಿತಿದ್ದ ಆನೆಯ ಮೇಲಕ್ಕೆ ಕೋಪದಿಂದ ತಾನೇ ಹಾರಿ, ತನ್ನಕಾಲಿನಿಂದ ಕಾಲಿಯನನ್ನು ಝಾಡಿಸಿ ಕೆಳಕ್ಕೆ ಕೆಡವಿತು.

೬೯. ವೀರನಾದ ಕಾಲಿಯನು ಹೀಗೆ ನೆಲಕ್ಕೆ ಬಿದ್ದುದನ್ನು ನೋಡಿ ಪಂಚಶಬ್ದವೆಂಬ ಅವನ ಮಹಾಗಜವು ತನ್ನ ಸರಪಣಿಯಿಂದ ಶತ್ರು ಸೇನೆಯ ರಣಮತ್ತಯೋಧರನ್ನೆಲ್ಲಾ ಬಲವಾಗಿ ಪ್ರಹರಿಸಿತು.

ಮೂರ್ಛಿತೇ ಪಂಚಶೂರೇ ತು ರೂಪಣೋ ಭಯಕಾತರಃ ।
ದೇವಕೀಂ ವರ್ಣಯಾಮಾಸ ಯಥಾಜಾತಂ ಗಜೇನ ವೈ ॥ ೭೦ ॥

ತದಾ ತು ದುಃಖಿತಾ ದೇವೀ ದೋಲಾಮಾರುಹ್ಯ ಸತ್ವರಾ ।
ತಂ ಗಜಂ ಚ ಸಮಾಸಾದ್ಯ ವರ್ಣಯಾಮಾಸ ಕಾರಣಂ ॥ ೭೧ ॥

ಗಜರಾಜ ನಮಸ್ತುಭ್ಯಂ ಶಕ್ರದತ್ತ ಮಹಾಬಲ ।
ಏತೇ ಪುತ್ರಾಸ್ತು ತೇ ವೀರ ಪಾಲನೀಯಾ ಯಥಾ ಪಿತುಃ ॥ ೭೨ ॥

ಇತಿ ಶ್ರುತ್ವಾ ದಿವ್ಯಗಜೋ ದೇವಮಾಯಾವಿಶಾರದಃ ।
ದೇವಕೀಂ ಶರಣಂ ಪ್ರಾಪ್ಯ ಕ್ಷಮಸ್ವಾಗಸ್ಕೃತಂ ಮಮ ॥ ೭೩ ॥

ಇತ್ಯುಕ್ತೇ ಗಜರಾಜೇ ತು ಕೃಷ್ಣಾಂಶೋ ಬಲವತ್ತರಃ ।
ತ್ಯಕ್ತ್ವಾ ಮೂರ್ಛಾಂ ಯಯೌ ತತ್ರ ಯತ್ರಾಹ್ಲಾದಶ್ಚ ಮೂರ್ಛಿತಃ ॥

---

೭೦. ಇದರ ಹೊಡೆತದಿಂದ ಆಹ್ಲಾದನೇ ಮೊದಲಾದ ಐದುಮಂದಿ ಶೂರರೂ ಮೂರ್ಛಿತರಾದರು. ಆಗ ರೂಪಣನು ಗಾಬರಿಗೊಂಡು ದೇವಕಿಯ ಸಮೀಪಕ್ಕೆ ಬಂದು, ಆನೆಯು ನಡೆಸಿದ ವಿಷಯವನ್ನೆಲ್ಲಾ ಅವಳಿಗೆ ತಿಳಿಸಿದನು.

೭೧. ದೇವಕಿಯು ಇದನ್ನು ಕೇಳಿ ದುಃಖಿತೆಯಾಗಿ ಮೇನೆಯನ್ನು ಏರಿ, ಇಷ್ಟಕ್ಕೂ ಕಾರಣವಾದ ಆ ಪಂಚಶಬ್ದವೆಂಬ ಮಹಾಗಜವಿದ್ದ ಪ್ರದೇಶಕ್ಕೆಬಂದು ಆ ಆನೆಯನ್ನು ಸ್ತುತಿಮಾಡಲು ಉಪಕ್ರಮಿಸಿ.

೭೨. “ ದೇವೇಂದ್ರನಿಂದ ಮಹಾಸಾಮರ್ಥ್ಯವನ್ನು ಪಡೆದ ಎಲೈಗಜರಾಜನೇ ! ನಿನಗೆ ನಮಸ್ಕಾರ; ಈ ವೀರರೆಲ್ಲ ನಿನ್ನ ಪುತ್ರ(ಸಮಾನ)ರು. ತಂದೆಯು ಮಕ್ಕಳನ್ನು ಕಾಪಾಡುವಂತೆ ನೀನು ಇವರನ್ನು ಕಾಪಾಡಬೇಕು ” ಎಂದು ಪ್ರಾರ್ಥಿಸಿದಳು.

೭೩. ತನ್ನನ್ನು ದೇವಕಿಯು ಈರೀತಿ ಸ್ತುತಿಸಿದುದನ್ನು ಕೇಳಿ, ದೇವ ಮಾಯಾ ವಿಶಾರದನೆನಿಸಿದ ಆ ಪಂಚಶಬ್ದ ಮಹಾಗಜವು ದೇವಕಿಯನ್ನು ಶರಣು ಹೊಂದಿ “ ನನ್ನಿಂದ ಅಪರಾಧವಾಯಿತು ಇದನ್ನು ಕ್ಷಮಿಸಬೇಕು ” ಎಂದು ಬೇಡಿ ಕೊಂಡಿತು.

೭೪-೭೫. ಪಂಚಶಬ್ದಮಹಾಗಜವು ಹೀಗೆ ಹೇಳುತ್ತಲೆ ಮಹಾಬಲಶಾಲಿ ಯಾದ ಕೃಷ್ಣಾಂಶನು ಮೂರ್ಛೆತಿಳಿದು ಎದ್ದು, ಆಹ್ಲಾದನ ಸಮೀಪಕ್ಕೆ ಹೋಗಿ ತನ್ನ

ತಮುತ್ಥಾಪ್ಯ ಕರಸ್ಪರ್ಶೈರ್ಬಲಖಾನಿಸಮನ್ವಿತಃ ।
ಪಿತುರ್ಗಜಂ ಮಹಾಮತ್ತಮಾಹ್ಲಾದಾಯ ಪ್ರದತ್ತವಾನ್ ।
ಕರಾಲಮಶ್ವಂ ದಿವ್ಯಾಂಗಂ ರೂಪಣಾಯ ತದಾ ದದೌ ॥ ೭೫ ॥

ಮೂರ್ಚ್ಛಿತಂ ಕಾಲಿಯಂ ಶತ್ರುಂ ಬದ್ಧ್ವಾ ಸ ನಿಗಡೈರ್ದೃಢೈಃ ।
ಸೇನಾಂತಂ ಪ್ರೇಷಯಾಮಾಸ ಬಲಖಾನಿರ್ಮಹಾಬಲಃ ॥ ೭೬ ॥

ಸೂರ್ಯವರ್ಮಾ ತದಾ ಜ್ಞಾತ್ವಾ ಬದ್ಧಂ ಬಂಧುಂ ಚ ಕಾಲಿಯಂ ।
ಪ್ರಯಯೌ ಶತ್ರುಸೇನಾಂತಂ ಕ್ರೋಧೇನ ಸ್ಫುರಿತಾಧರಃ ॥ ೭೭ ॥

ತಮಾಯಾಂತಂ ಸಮಾಲೋಕ್ಯ ತೇ ವೀರಾ ಯುದ್ಧದುರ್ಮದಾಃ ।
ರಥಸ್ಥಂ ಮಂಡಲೀಕೃತ್ಯ ಸ್ವಂಸ್ವಮಸ್ತ್ರಂ ಸಮಾಕ್ಷಿಪನ್ ॥ ೭೮ ॥

---

ಕೈಯಿಂದ ಅವನನ್ನು ಮುಟ್ಟಿ ಎಚ್ಚರಗೊಳಿಸಿ ಬಲಖಾನಿಯನ್ನು ಜತೆಮಾಡಿಕೊಂಡು ಆ ಮಹಾಗಜವಿದ್ದೆಡೆಗೆ ಬಂದು, ಮಹಾಮದಯುಕ್ತವಾದುದೂ ತನ್ನ ತಂದೆಗೆ ಸೇರಿದುದೂ ಆಗಿದ್ದ ಆ ಆನೆಯನ್ನು ಆಹ್ಲಾದನಿಗೆ ಕೊಟ್ಟನು. ಮತ್ತು-ದಿವ್ಯಶರೀರವುಳ್ಳ ಕರಾಲವೆಂಬ ಅಶ್ವವನ್ನು ರೂಪಣನಿಗೆ ಕೊಟ್ಟನು.

೭೬. ಬಳಿಕ ಪರಾಕ್ರಮಿಯಾದ ಬಲಖಾನಿಯು ತಮ್ಮ ಶತ್ರುವಾದ ಕಾಲಿಯನು ಮೂರ್ಛೆಬಿದ್ದಿರುವಾಗಲೇ ದೃಢವಾದ ಸಂಕೋಲೆಗಳಿಂದ ಬಂಧಿಸಿ ತನ್ನ ಸೇನೆಯಮಧ್ಯಕ್ಕೆ ಕಳುಹಿಸಿದನು

೭೭. ತನ್ನ ಬಂಧುವಾದ ಕಾಲಿಯನು ಹೀಗೆ ಬಂಧಿತನಾದುದನ್ನು ನೋಡಿ ಸೂರ್ಯವರ್ಮನು ಕೋಪದಿಂದ ತುಟಿಗಳು ಕಂಪಿಸುತ್ತಿರಲು ಶತ್ರುಸೇನಾಮಧ್ಯಕ್ಕೆ ನುಗ್ಗಿಬಂದನು.

೭೮. ರಣಮತ್ತರಾದ ಆಹ್ಲಾದನೇ ಮೊದಲಾದವರು, ಸೂರ್ಯವರ್ಮನು ನುಗ್ಗಿ ಬರುತ್ತಿರುವುದನ್ನು ನೋಡಿ, ರಥಾರೂಢನಾದ ಅವನನ್ನು ಸುತ್ತಲೂ ಮುತ್ತಿ ತಮ್ಮ ಅಸ್ತ್ರಗಳಿಂದ ಹೊಡೆದರು.

ಕುಂಠಿತೇಽಸ್ತ್ರೇ ತದಾ ತೇಷಾಂ ವಿಸ್ಮಿತಾಸ್ತೇಽಭವನ್ಮುನೇ ।
ಚಿಂತಾಂ ಚ ಮಹತೀಂ ಪ್ರಾಪ್ತಾಃ ಕಥಂ ವಧ್ಯೋ ಭವೇದಯಂ ॥ ೭೯ ॥

ತಸ್ಯಾಸ್ತ್ರೈಸ್ತೇ ಮಹಾವೀರಾ ಪ್ರಣಾರ್ತಿಭಯಪೀಡಿತಾಃ ।
ತ್ಯಕ್ತ್ವಾ ಯುದ್ಧಂ ಪುನರ್ಗತ್ವಾ ರಣಂ ಚಕ್ರುಃ ಪುನಃಪುನಃ ॥ ೮೦ ॥

ಏವಂ ಕತಿದಿನಾನ್ಯೇವ ಬಭೂವ ರಣ ಉತ್ತಮಃ ।
ಆಹ್ಲಾದೋ ವತ್ಸಜೋ ದೇವಸ್ತಾಲನೋ ಭಯಸಂಯುತಃ ।
ಕೃಷ್ಣಾಂಶಂ ಶರಣಂ ಜಗ್ಮುಸ್ತೇನ ವೀರೇಣ ಮೋಹಿತಾಃ ॥ ೮೧ ॥

ಕೃಷ್ಣಸ್ತು ತಂ ತಥಾ ದೃಷ್ಟ್ವಾ ದೇವೀಂ ವಿಶ್ವವಿಮೋಹಿನೀಂ ।
ತುಷ್ಟಾವ ಮನಸಾ ವೀರೋ ರಾತ್ರಿಸೂಕ್ತಂ ಪಠನ್ಹೃದಿ ॥ ೮೨ ॥

---

೭೯ ಎಲೈ ಶೌನಕಾದಿಋಷಿಗಳೇ! ಕೇಳಿ, ಹೀಗೆ ತಾವು ಪ್ರಯೋಗಿಸಿದ ಶಸ್ತ್ರಾಸ್ತ್ರಗಳೆಲ್ಲವೂ ವಿಫಲವಾಗಲು, ಆಹ್ಲಾದನೇ ಮೊದಲಾದವರು ಆಶ್ಚರ್ಯಪಟ್ಟು ಇವನನ್ನು ಇನ್ನು ಯಾವರೀತಿ ಕೊಲ್ಲುವುದು? ಎಂದು ಯೋಚಿಸುತ್ತಾ ಚಿಂತಾ ಮಗ್ನರಾದರು.

೮೦. ಸೂರ್ಯವರ್ಮನು ತನ್ನ ಬಾಣಗಳಿಂದ ಇವರನ್ನೆಲ್ಲಾ ಗಾಯಪಡಿಸಲು ವೀರರಾದ ಇವರೆಲ್ಲರೂ ಹೆದರಿ ಸ್ವಲ್ಪ ಹೊತ್ತು ಯುದ್ಧವನ್ನು ನಿಲ್ಲಿಸುವುದು, ಪುನಃ ಬಂದು ಯುದ್ಧಮಾಡುವುದು, ಹೀಗೆ ಮಾಡತೊಡಗಿದರು.

೮೧. ಈರೀತಿ ಕೆಲವು ದಿನಗಳವರೆಗೆ ಪ್ರಬಲವಾದ ಯುದ್ಧವೇ ನಡೆಯಿತು. ಆಹ್ಲಾದ ದೇವಸಿಂಹ ತಾಲನ ಇವರೆಲ್ಲರೂ ಭಯಗೊಂಡು ಕೃಷ್ಣಾಂಶನಿದ್ದಲ್ಲಿಗೆ ಬಂದು ಅವನ ಮರೆಹೊಕ್ಕರು.

೮೨. ಕೃಷ್ಣಾಂಶನು ಇವರನ್ನು ನೋಡಿ ಇವರ ಭಯಕ್ಕೆ ಕಾರಣವನ್ನು ತಿಳಿದು, ವಿಶ್ವಮೋಹಿನಿಯಾದ ಕಾಳಿಕಾದೇವಿಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ರಾತ್ರಿಸೂಕ್ತವನ್ನು ಜಪಿಸಿ ಸ್ತೋತ್ರಮಾಡಿದನು.

ತದಾ ತುಷ್ಟಾ ಜಗದ್ಧಾತ್ರೀ ದುರ್ಗಾ ದುರ್ಗಾರ್ತಿನಾಶಿನೀ ।
ಮೋಹಯಿತ್ವಾ ತು ತಂ ವೀರಂ ತತ್ರೈವಾಂತರಧೀಯತ ॥ ೮೩ ॥

ನಿದ್ರಯಾ ಮೋಹಿತಂ ದೃಷ್ಟ್ವಾ ಕೃಷ್ಣಾಂಶಸ್ತು ಮಹಾಬಲಃ ।
ಬಬಂಧ ನಿಗಡೈಸ್ತಂ ಚ ದೇವಕ್ಯಂತೇ ಸಮಾಗಮತ್ ॥ ೮೪ ॥

ತುಂದಿಲಶ್ಚ ತಥಾ ಜ್ಞಾತ್ವಾ ಭ್ರಾತೃಶೋಕಪರಿಪ್ಲುತಃ ।
ಆಜಗಾಮ ಹಯಾರೂಢಃ ಖಡ್ಗಹಸ್ತೋ ಮಹಾಬಲಃ
ರಿಪುಸೈನ್ಯಸ್ಯ ಮಧ್ಯೇ ತು ಬಹುಶೂರಾನತಾಡಯತ್ ॥ ೮೫ ॥

ಮಾಹಿಷ್ಮತ್ಯಾಶ್ಚ ತೇ ಶೂರಾ ರಂಕಣೇನ ಸಮನ್ವಿತಾಃ ।
ತತ್ಸೈನ್ಯಂ ಭಂಜಯಾಮಾಸುಸ್ತಾಲನೇನ ಪ್ರಪಾಲಿತಂ ॥ ೮೬ ॥

---

೮೩ ಕಠಿಣವಾದ ಸಂಕಟಗಳನ್ನು ಪರಿಹರಿಸುವಳೂ, ಜಗಜ್ಜನನಿಯೂ ಆದ, ದುರ್ಗಾದೇವಿಯು ಕೃಷ್ಣಾಂಶನ ಸ್ತೋತ್ರದಿಂದ ಸುಪ್ರೀತೆಯಾಗಿ, ವೀರನಾದ ಆ ಸೂರ ವರ್ಮನನ್ನು ಮೂರ್ಛೆಗೊಳಿಸಿ ಅಲ್ಲಿಯೇ ಅಂತರ್ಧಾನಳಾದಳು.

೮೪. ಬಳಿಕ ಶೂರನಾದ ಕೃಷ್ಣಾಂಶನು, ನಿದ್ದೆಯಿಂದ ಮೂರ್ಛೆಗೊಂಡಿರುವ ಸೂರ್ಯವರ್ಮನನ್ನು ಸಂಕೋಲೆಗಳಿಂದ ಬಂಧಿಸಿ ಕೆಡವಿ, ಕೂಡಲೆ ದೇವಕಿಯು ಇದ್ದಲ್ಲಿಗೆ ಬಂದನು.

೮೫. ತನ್ನ ಅಣ್ಣನಾದ ಸೂರ್ಯವರ್ಮನಿಗೆ ಹೀಗೆ ಬಂಧನಪ್ರಾಪ್ತಿಯಾದುದನ್ನು ತಿಳಿದು ಅವನ ಸಹೋದರನೂ ಬಲಿಷ್ಠನೂ ಆದ ತುಂದಿಲನು, ಭ್ರಾತೃಶೋಕದಿಂದ ಪೀಡಿತನಾಗಿ ಕುದುರೆಯನ್ನೇರಿ ಕತ್ತಿಯನ್ನು ಝಳಪಿಸುತ್ತಾ ಶತ್ರುಸೇನೆಯ್ಯ ಮಧ್ಯೆ ನುಗ್ಗಿ ಅನೇಕ ವೀರರನ್ನು ಹೊಡೆದನು.

೮೬. ಮಾಹಿಷ್ಮತೀಸೇನೆಯ ವೀರರುಗಳು ಜತೆಯಾಗಿ ರಂಕಣನೆಂಬವನ ಮುಂದಾಳುತನದಲ್ಲಿ ನುಗ್ಗಿ, ತಾಲನನ ಕೈಕೆಳಗಿನ ಸೈನ್ಯವೆಲ್ಲವನ್ನೂ ಹೊಡೆದು ಚೆಲ್ಲಾಪಿಲ್ಲಿಯಾಗಿ ಓಡಿಸಿದರು.

ಪ್ರದ್ರುತಂ ಸ್ವಂ ಬಲಂ ದೃಷ್ಟ್ವಾ ತಾಲನಃ ಪರಿಘಾಯುಧಃ ।
ಶಿರಾಂಸಿ ಪೋಥಯಾಮಾಸ ಮ್ಲೇಚ್ಛಾನಾಂ ಚ ಪೃಥಕ್ ಪೃಥಕ್ ॥ ೮೭ ॥

ವಂಕಣಂ ಚ ತಥಾ ಹತ್ವಾ ಖಡ್ಗೇನೈವ ಚ ರಂಕಣಂ ।
ತುಂದಿಲಂ ಚ ತಥಾ ಬಧ್ವಾ ದಿನಾಂತೇ ಶಿಬಿರಂ ಯಯೌ ॥ ೮೮ ॥

ಕಾಲಿಯೇ ಚ ರಿಪೌ ಬದ್ಧೇ ಸುಬದ್ಧೇ ಸೂರ್ಯವರ್ಮಣಿ ।
ತುಂದಿಲೇ ಚ ತಥಾ ಬದ್ಧೇ ರಂಕಣೇ ವಂಕಣೇ ಹತೇ ॥ ೮೯ ॥

ಸಹಸ್ರಂ ಮ್ಲೇಚ್ಛರಾಜಾನೋ ಹತಶೇಷಾ ಬಲಾನ್ವಿತಾಃ ।
ಪಕ್ಷಮಾತ್ರಮಹೋರಾತ್ರಂ ಯುದ್ಧಂ ಚಕ್ರುಃ ಸಮಂತತಃ ॥ ೯೦ ॥

ಪ್ರತ್ಯಹಂ ತಾಲನೋ ವೀರಃ ಸೇನಾಪತಿರಮರ್ಷಣಃ ।
ಷಷ್ಟಿಂ ಭೂಪಾನ್ ಜಘಾನಾಶು ಶತ್ರುಸೈನ್ಯಭಯಂಕರಃ ॥ ೯೧ ॥

---

೮೭. ತನ್ನ ಸೈನ್ಯವು ಹೀಗೆ ಓಡಿದುದನ್ನು ನೋಡಿ ತಾಲನನು ಪರಿಘಾಯುಧವನ್ನು ಹಿಡಿದು ನುಗ್ಗಿ, ಪ್ರತಿಪಕ್ಷದ ಸೇನೆಯಲ್ಲಿದ್ದ ಮ್ಲೇಚ್ಛವೀರರ ಶಿರಸ್ಸನ್ನು ಒಂದೊಂದಾಗಿ ಕೊಚ್ಚಿಹಾಕಿದನು.

೮೮. ವಂಕಣನೆಂಬ ಮ್ಲೇಚ್ಛವೀರನನ್ನು ಪರಿಘಾಯುಧದಿಂದಲೂ ರಂಕಣನನ್ನು ಖಡ್ಗದಿಂದಲೂ ಕತ್ತರಿಸಿ, ತುಂದಿಲನನ್ನು ಕೈಸೆರೆಹಿಡಿದು ಬಂಧಿಸಿ, ಸಂಧ್ಯಾಕಾಲ ವಾಗುತ್ತಲೆ ತಮ್ಮ ಶಿಬಿರಕ್ಕೆಬಂದನು.

೮೯-೯೦. ಹೀಗೆ ಕಾಲಿಯು, ಸೂರ್ಯವರ್ಮ, ತುಂದಿಲ, ಇವರು ಶತ್ರುಗಳ ಕೈಗೆ ಸೆರೆಸಿಕ್ಕಿ ಬಂಧನಕ್ಕೊಳಗಾಗಿ, ರಂಕಣ ವಂಕಣ ಎಂಬ ಮ್ಲೇಚ್ಛವೀರಪ್ರಭುಗಳು ಮೃತರಾದ ಬಳಿಕ, ಬಲಶಾಲಿಗಳಾದ ಸಾವಿರಾರುಮಂದಿ ಮ್ಲೇಚ್ಛರಾಜರೂ ಮತ್ತು ಕಳಿದುಳಿದ ಸೈನಿಕರೂ ಸಹ ಹದಿನೈದು ದಿನಗಳು ಅಹೋರಾತ್ರಿ ಯುದ್ಧ ಮಾಡಿದರು.

೯೧. ವೀರಸೇನಾಪತಿ ಯೆನಿಸಿದ ತಾಲನನು ನಿರ್ದಯನಾಗಿ ಪ್ರತಿದಿನವೂ ಅರವತ್ತುಜನ ರಾಜರುಗಳನ್ನು ಕೊಂದುಹಾಕುತ್ತಾ ಶತ್ರುಸೈನ್ಯಕ್ಕೆ ಭಯಂಕರನೆನಿಸಿದನು.

ಭಯಭೀತಾ ರಿಪೋಃ ಶೂರಾ ಹತಾ ಭೂಪಾ ಹತೌಜಸಃ ।
ಪತಶೇಷಾ ಯಯುರ್ಗೇಹಮರ್ಧಸೈನ್ಯಾ ಭಯಾತುರಾಃ ॥ ೯೨ ॥

ಜಂಬುಕಸ್ತು ತಥಾ ಶ್ರುತ್ವಾ ದುಃಖಿತೋ ಗೇಹಮಾಯಯೌ ।
ವ್ರತಂ ಹ್ಯನಶನಂ ಕೃತ್ವಾ ರಾತ್ರೌ ಶೋಚನ್ನಶೇತ ಸಃ ॥ ೯೩ ॥

ನಿಶೀಥೇ ಸಮನುಪ್ರಾಪ್ತೇ ತತ್ಸುತಾ ವಿಜಯೈಷಿಣೀ ।
ಪೂರ್ಣಾ ತು ಸಾ ಕಲಾ ಜ್ಞೇಯಾ ರಾಧಾಯಾ ವ್ರಜವಾಸಿನೀ ॥ ೯೪ ॥

ಆಶ್ವಾಸ್ಯ ಪಿತರಂ ತಂ ಚ ಯಯೌ ಮಾಯಾವಿಶಾರದಾ ।
ರಕ್ಷಕಾನ್ ಶಿಬಿರಾಣಾಂ ಚ ಮೋಹಯಿತ್ವಾ ಸಮಾಯಯೌ ॥ ೯೫ ॥

ಭ್ರಾತರೋ ತತ್ರ ಗತ್ವಾಸೌ ಯತ್ರ ಸರ್ವಾನಬೋಧಯತ್ ।
ಕೃತ್ವಾ ಸಾ ರಾಕ್ಷಸೀಂ ಮಾಯಾಂ ಪಂಚವೀರಾನಮೋಹಯತ್ ॥ ೯೬ ॥

---

೯೨. ಶತ್ರುಪಕ್ಷದ ವೀರರಲ್ಲಿ ಕೆಲವರು ಭಯದಿಂದ ಹೆದರಿಯೂ, ಕೆಲವರು ನಿರ್ವೀರ್ಯರಾಗಿಯೂ, ಕಳೆದುಳಿದ ಸೈನಿಕರು ದಿಗಿಲುಬಿದ್ದೂ, ಹೋದರು. ಉಳಿದ ಅರ್ಧ ಸೈನ್ಯದೊಂದಿಗೆ ತಮ್ಮ ಮನೆಗೆ ಹಿಂದಿರುಗಿದರು.

೯೩. ಜಂಬುಕನು ಈ ವೃತ್ತಾಂತವನ್ನು ಕೇಳಿ ದುಃಖಗೊಂಡು ಮನೆಗೆ ಬಂದು ನಿರಶನವ್ರತವನ್ನು ಆಚರಿಸಿ (ಊಟವನ್ನು ತೊರೆದು) ರಾತ್ರಿಯೆಲ್ಲಾ ಇದನ್ನೇ ಯೋಚಿಸುತ್ತಾ ಮಲಗಿದನು.

೯೪-೯೫. ಈ ಜಂಬುಕರಾಜನ ಪುತ್ರಿಯಾದ ವಿಜಯೈಷಿಣಿ ಯೆಂಬವಳು ರಾಧಾವ್ರಜ ಎಂಬಲ್ಲಿ ವಾಸಿಸುತ್ತಿದ್ದಳು ಸಕಲಕಲಾಪರಿಪೂರ್ಣಳೂ, ಮಾಯಾವಿ ಶಾರದೆಯೂ, ಆದ ಇವಳು ತಂದೆಯ ಅಪ್ಪಣೆಯನ್ನು ಪಡೆದು ರಾತ್ರಿ ಘೋರಾಂಧ ಕಾರ ಕವಿಯುತ್ತಲೆ ಶತ್ರುಶಿಬಿರಕ್ಕೆ ಹೋಗಿ ತನ್ನ ಮಾಯೆಯಿಂದ ಅಲ್ಲಿ ಶಿಬಿರರಕ್ಷಕ ರನ್ನೆಲ್ಲಾ ಮೂರ್ಛೆಗೊಳಿಸಿ ತನ್ನ ನಿವಾಸಕ್ಕೆ ಹಿಂದಿರುಗಿದಳು.

೯೬. ಬಳಿಕ ತನ್ನ ಸಹೋದರರಾದ ಕಾಲಿಯ ಮೊದಲಾದವರು ಮೂರ್ಛೆ ಬಿದ್ದಿದ್ದ ಕಡೆಗೆ ಹೋಗಿ, ಅಲ್ಲಿ ಅವರನ್ನೆಲ್ಲಾ ಎಚ್ಚರಗೊಳಿಸಿದಳು. ಅಲ್ಲದೆ ತನ್ನಲ್ಲಿರುವ ರಾಕ್ಷಸೀ ಮಾಯಾಮಹಿಮೆಯಿಂದ ಕೃಷ್ಣಾಂಶನೇ ಮೊದಲಾದ ಐವರು ವೀರರನ್ನೂ ಮೂರ್ಛೆಗೊಳಿಸಿದಳು

ನಿರಸ್ತ್ರಕವಚಾನ್ ಬಂಧೂನ್ ಪ್ರತಿದೋಲಾಂ ಸಮಾರುಹತ್ ।
ಪಿತುರಂತಿಕಮಾಸಾದ್ಯ ತಸ್ಮೈ ಭ್ರಾತ್ರ್ಯಾನ್ ದದೌ ಮುದಾ ॥ ೯೭ ॥

ಪ್ರಭಾತೇ ಬೋಧಿತಾಃ ಸರ್ವೇ ಸ್ನಾನಧ್ಯಾನಾದಿಕಾಃ ಕ್ರಿಯಾಃ ।
ಕೃತ್ವಾ ಯಯುಃ ರಿಪೋಃ ಶಾಲಾಂ ದೃಷ್ಟವಂತೋ ನ ತಾಂಸ್ತದಾ ॥ ೯೮ ॥

ಬಭೂವುರ್ದುಃಖಿತಾಃ ಸರ್ವೇ ಕಿಮಿದಂ ಕಾರಣಂ ಕಥಂ ।
ತಾನುವಾಚ ತದಾ ದೇವಃ ಸ್ವಾಪ್ಸ್ವಾಹ್ಯತ್ರ ರಿಪೋಃ ಸುತಾ ॥ ೯೯ ॥

ಕೃತ್ವಾ ಸಾ ರಾಕ್ಷಸೀಂ ಮಾಯಾಂ ಹೃತ್ವಾ ತಾನ್ ಗೇಹಮಾಯಯೌ ।
ತಸ್ಮಾದ್ಯೂಯಂ ಮಯಾ ಸಾರ್ಧಂ ಗತ್ವಾ ಯತ್ರೈವ ತದ್ಗುರುಃ ॥ ೧೦೦ ॥

---

೯೭. ಅಸ್ತ್ರಗಳು ಕವಚ ಇವೊಂದೂ ಇಲ್ಲದೆ ಇರುವ ತನ್ನ ಸಹೋದರರುಗಳನ್ನು ಮೇನೆಯಮೇಲೆ ಕೂರಿಸಿಕೊಂಡುಅವರೊಡನೆ ತಾನೂ ತಂದೆಯಸಮೀಪಕ್ಕೆ ಬಂದು ಸಂತೋಷದಿಂದ ಅಣ್ಣಂದಿರನ್ನು ತಂದೆಗೆ ಒಪ್ಪಿಸಿದಳು.

೯೮. ಬೆಳಗಾಗುತ್ತಲೆ ಕೃಷ್ಣಾಂಶನೇ ಮೊದಲಾದವರು ಮೋಹವಮೂರ್ಛೆಯಿಂದ ಎಚ್ಚತ್ತು ಸ್ನಾನಾದಿ ನಿತ್ಯಕರ್ಮಗಳನ್ನು ನೆರವೇರಿಸಿ, ಶತ್ರುಗಳನ್ನು ಬಂಧಿಸಿದ್ದ ಸೆರೆಮನೆಗೆ ಬಂದು ನೋಡಲು ಆವಾಗ ಅವರಾರೂ ಇವರ ಕಣ್ಣಿಗೆ ಕಾಣಿಸಲಿಲ್ಲ.

೯೯. ಇದರಿಂದ ಕೃಷ್ಣಾಂಶನೇ ಮೊದಲಾದವರೆಲ್ಲಾ ಖಿನ್ನರಾಗಿ ಏನುಕಾರಣದಿಂದ ಹೀಗಾಯಿತು ? ಎಂದು ಯೋಚಿಸುತ್ತಿದ್ದರು. ಆಗ ತ್ರಿಕಾಲಜ್ಞನಾದ ದೇವಸಿಂಹನು ಅವರನ್ನು ಕುರಿತು ಇಂತೆಂದನು.

೧೦೦. "ನಮ್ಮ ಶತ್ರುವೆನಿಸಿದ ಜಂಬುಕರಾಜನ ಮಗಳಾದ ವಿಜಯೈಷಿಣಿಯು ಬಂದು, ತನ್ನ ರಾಕ್ಷಸೀ ಮಾಯೆಯಿಂದ ಅವರನ್ನೆಲ್ಲಾ ಕರೆದುಕೊಂಡು ಹೋಗಿದ್ದಾಳೆ. ಆದ್ದರಿಂದ ಈಗ ನೀವೆಲ್ಲರೂ ನನ್ನ ಜತೆಯಲ್ಲಿ ಹೊರಡಿ. ಅವಳ ಗುರುವಿನ ಸಮೀಪಕ್ಕೆ ಹೋಗೋಣ."

ವಿಂಧ್ಯೋಪರಿ ಮಹಾರಣ್ಯೇ ನಾನಾಸತ್ತ್ವನಿಷೇವಿತೇ ।
ಕುಟೀರಂ ತಸ್ಯ ತತ್ರೈವ ನಾಮ್ನೈವೈಲವಿಲೀ ಹಿ ಸಃ ।
ಯೋಗಸಿದ್ಧಿಯುತಃ ಕಾಮೀ ರಾಕ್ಷಸೇಭ್ಯೋ ಹಿ ನಿರ್ಭಯಃ ॥ ೧೦೧ ॥

ಜಂಬುಕಸ್ಯ ಸುತಾ ತತ್ರ ಪ್ರತ್ಯಹಂ ಸ್ವಜನೈರ್ಯುತಾ ।
ಏಕಾಕಿನೀ ಚ ಸಾ ರಾತ್ರೌ ಸ್ವಂ ಗುರುಂ ತಮರೀರಮತ್ ॥ ೧೦೨ ॥

ಕೃತೇಯಂ ಚೈಲವಿಲಿನಾ ಮಾಯಾ ಮನುಜಮೋಹಿನೀ ।
ಕಾರ್ಯಸಿದ್ಧಿಂ ಗಮಿಷ್ಯಾಮೋ ಗತ್ವಾ ತಂ ಪುರುಷಾಧಮಂ
ಇತಿ ಶ್ರುತ್ವಾ ತು ಚತ್ವಾರೋ ವಿನಾಹ್ಲಾದಂ ಯಯುರ್ವನಂ ॥ ೧೦೩ ॥

ಗೀತನೃತ್ಯಪ್ರವಾದ್ಯೈಶ್ಚ ಮೋಹಯಿತ್ವಾ ಚ ತಂ ದಿನೇ ।
ವಾಸಂ ಚಕ್ರುಶ್ಚ ತತ್ರೈವ ಧೂರ್ತಂ ಮಾಯಾವಿಶಾರದಂ ॥ ೧೦೪ ॥

---

೧೦೧. " ಆ ಗುರುವು ವಿಂಧ್ಯಪರ್ವತದ ಪ್ರದೇಶದಲ್ಲಿ ದುಷ್ಟಮೃಗಭರಿತವಾದ ಮಹಾರಣ್ಯದಲ್ಲಿ ಪರ್ಣಶಾಲೆಯಲ್ಲಿ ವಾಸಿಸುತ್ತಿರುವನು. ಅವನನ್ನು ಐಲವಿಲಿ ಯೆಂಬ ಹೆಸರಿನಿಂದ ಕರೆಯುವರು. ಆತನು ಯೋಗಸಿದ್ಧಿಯನ್ನು ಹೊಂದಿ ತನ್ನ ಮನಸ್ಸಿಗೆ ಬಂದ ರೂಪವನ್ನು ಧರಿಸುವ ಶಕ್ತಿಯುಳ್ಳವನಾಗಿ ರಾಕ್ಷಸರಿಗೂ ಹೆದರದೆ ನಿರ್ಭಯನಾಗಿ ವಾಸಿಸುತ್ತಿರುವನು. "

೧೦೨ " ಜಂಬುಕನ ಮಗಳಾದ ವಿಜಯೈಷಿಣಿಯು ಪ್ರತಿನಿತ್ಯವೂ ಹಗಲು ಹೊತ್ತು ತನ್ನ ಜನಗಳೊಡನೆ ಅಲ್ಲಿಗೆಹೋಗುವುದು, ರಾತ್ರಿಯಲ್ಲಿ ತಾನೊಬ್ಬಳೇ ಆ ಗುರುವಿನೊಡನೆ ವಿಹರಿಸುವುದು ಹೀಗೆ ಮಾಡುತ್ತಿರುವಳು.

೧೦೩. ಆದುದರಿಂದ ಆ ಐಲವಿಲಿಯು ನಮ್ಮವರು ಮೂರ್ಛೆಗೊಳ್ಳು ವಂತೆ ಮಾಯಮಾಡಿದ್ದಾನೆ. ಈಗ ನಾವೆಲ್ಲ ಪುರುಷಾಧಮನಾದ ಅವನಲ್ಲಿಗೆ ಹೋಗಿ ಕಾರ್ಯವನ್ನು ಸಾಧಿಸಿಕೊಳ್ಳೋಣ " ಎಂದು ಹೇಳಿದನು. ಈ ಮಾತನ್ನುಕೇಳಿ ಆಹ್ಲಾದನೊಬ್ಬನನ್ನು ಅಲ್ಲಿಯೇ ಬಿಟ್ಟು ಮಿಕ್ಕ ನಾಲ್ವರೂ ಕಾಡಿಗೆ ಹೋದರು.

೧೦೪ ಧೂರ್ತನೂ ಮಾಯಾವಿಶಾರದನೂ ಆದ ಐಲವಿಲಿಯ ಸಮೀಪಕ್ಕೆ ಹೋಗಿ, ಅಲ್ಲೇ ವಾಸಿಸುತ್ತಾ ಹಗಲುಹೊತ್ತು ಸಂಗೀತ, ನರ್ತನ, ವಾದ್ಯಗಳಿಂದ ಸಂತೋಷಪಡಿಸುತ್ತಿದ್ದರು.

**ಸ ತು ಪೂರ್ವಭವೇ ದೈತ್ಯಶ್ಚಿತ್ರೋ ನಾಮ ಮಹಾಸುರಃ ।**
**ಬಾಣಕನ್ಯಾಮುಷಾಂ ನಿತ್ಯಮವಾಂಛಚ್ಛಿವಪೂಜಕಃ ।**
**ಜಾತ ಐಲವಿಲೀ ನಾಮ ಪಕ್ಷಪೂಜೀ ಸ ವೇಗವಾನ್ ॥ ೧೦೫ ॥**

**ತಯೋರ್ಮಧ್ಯೇ ಪ್ರಮಾಣೋಽಯಂ ವಿವಾಹೋ ಮೇ ಯದಾ ಭವೇತ್।**
**ತದಾಹಂ ತ್ವಾಂ ಭಜಿಷ್ಯಾಮಿ ಸಂತ್ಯಕ್ತ್ವೋದ್ವಾಹಿತಂ ಪತಿಂ ॥ ೧೦೬ ॥**

**ಹತೇ ತಸ್ಮಿನ್ ಮಹಾಧೂರ್ತೇ ಗತ್ವಾ ಸಂಗ್ರಾಮಮೂರ್ಧನಿ ।**
**ಜಂಬುಕಸ್ಯ ಯಯುರ್ದುರ್ಗಂ ದೃಷ್ಟ್ವಾ ತೇ ತಂ ಸಮಾರುಹನ್ ।**
**ಹತ್ವಾ ತತ್ರ ಸ್ಥಿತಾನ್ ವೀರಾನ್ಫಿರಂಗ್ಯಃ ಪರಿಖಾಕೃತಾಃ ॥ ೧೦೭ ॥**

**ತದಾ ತು ಜಂಬುಕೋ ರಾಜಾ ಶಿವದತ್ತವರೋ ಬಲೀ ।**
**ಜಿತ್ವಾ ಪಂಚಮಹಾವೀರಾನ್ ಬದ್ಧ್ವಾ ತಾನ್ನಿಗಡೈರ್ದೃಢೈಃ ।**
**ಶೈವಂ ಯಜ್ಞಂ ಚ ಕೃತವಾಂಸ್ತೇಷಾಂ ನಾಮ್ನೋಪಬೃಂಹಿತಂ ॥ ೧೦೮ ॥**

---

೧೦೫. ಈ ಮಾಯಾವಿಯು ಪೂರ್ವಜನ್ಮದಲ್ಲಿ ಚಿತ್ರನೆಂಬ ಮಹಾದೈತ್ಯನಾಗಿದ್ದನು. ಬಾಣಾಸುರನ ಮಗಳಾದ ಉಷೆಯನ್ನು ತಾನು ಹೊಂದಬೇಕೆಂಬ ಉದ್ದೇಶದಿಂದ ನಿತ್ಯವೂ ಶಿವಪೂಜೆಯನ್ನು ಮಾಡುತ್ತಿದ್ದನು. ಅವನೇ ಈಗ ಐಲವಿಲಿಯಾಗಿ ಜನಿಸಿ ಮಹಾವೇಗವುಳ್ಳವನಾಗಿ ಪತ್ರಪೂಜಿ (ನವಿಲುಗರಿಗಳನ್ನು ಪೂಜಿಸುವ) ಆಗಿರುವನು.

೧೦೬. ಆ ಐಲವಿಲಿ ಮತ್ತು ವಿಜಯೈಷಿಣಿ ಇವರೀರ್ವರಿಗೂ ಒಂದು ವಾಗ್ದಾನ ನಡೆದಿತ್ತು. ವಿಜಯೈಷಿಣಿಯು "ನಾನು ಮದುವೆಯಾದಮೇಲೂ ನನ್ನ ಪತಿಯನ್ನು ಬಿಟ್ಟು ನಿನ್ನ ಸಮೀಪಕ್ಕೆ ಬಂದು ವಾಸಿಸುವೆನು" ಎಂದು ಗುರುವಿಗೆ ವಚನ ಕೊಟ್ಟಿದ್ದಳು. ಆದರಿಂದ ಆ ಮಾಯಾವಿ ಈರೀತಿ ಮಾಡಿದನು.

೧೦೭. ಇದನ್ನೆಲ್ಲಾ ಅರಿತು ಆ ಶೂರರು ಮಹಾಧೂರ್ತನಾದ ಆ ಮಾಯಾವಿಯನ್ನು ಯುದ್ಧದಲ್ಲಿ ಕೊಂದು, ಅನಂತರ ಜಂಬುಕನ ದುರ್ಗವನ್ನು ಕಂಡು ಅದನ್ನು ಪ್ರವೇಶಿಸಿದರು. ಅಲ್ಲಿ ಇವರನ್ನು ಮುತ್ತಿದ ಆ ವೀರಸೈನಿಕರನ್ನೆಲ್ಲಾ ಕೊಂದು ಫಿರಂಗಿಗಳನ್ನು ಅಗಳಿಗೆ ಬೀಳುವಂತೆ ನೂಕಿದರು.

೧೦೮. ಬಳಿಕ ಶಿವನಿಂದ ವರಪಡೆದವನೂ, ಬಲಶಾಲಿಯೂ ಆದ ಜಂಬುಕನೇ ಬಂದು ಈ ಕೃಷ್ಣಾಂಶ ಮೊದಲಾದ ಐವರು ವೀರರನ್ನೂ ಜಯಿಸಿ, ಅವರನ್ನು

ರೂಪಣಸ್ತು ತಥಾ ಜ್ಞಾತ್ವಾ ದೇವಕೀಂ ಪ್ರತ್ಯವರ್ಣಯತ್ ।
ತದಾ ತು ದುಃಖಿತಾ ದೇವೀ ಭವಾನೀಂ ಭಯಹಾರಿಣೀಂ ।
ಮನಸಾ ಚ ಜಗಾಮಾಶು ಶರಣ್ಯಾಂ ಶರಣಂ ಸತೀ ॥ ೧೦೯ ॥

ತದಾ ತುಷ್ಟಾ ಜಗದ್ಧಾತ್ರೀ ಸ್ವಪ್ನಾಂತೇ ತಾಮವರ್ಣಯತ್ ।
ಅಹೋ ದೇವಕಿ ಕಲ್ಯಾಣಿ ಪುತ್ರಶೋಕಂ ತ್ಯಜಾಧುನಾ ॥ ೧೧೦ ॥

ಯದಾ ತು ಜಂಬುಕೋ ರಾಜಾ ಶಿವದತ್ತವರೋ ಬಲೀ ।
ಹೋಮಂ ಕರ್ತಾ ಸ ಮಂದಾತ್ಮಾ ತೇಷಾಂ ಚ ಬಲಿಹೇತವೇ ॥ ೧೧೧ ॥

ಮೋಹಯಿತ್ವಾ ತದಾಹಂ ತಂ ಮೋಚಯಿತ್ವಾ ಚ ತೇ ಸುತಾನ್ ।
ವಿಜಯಂ ತೇ ಪ್ರದಾಸ್ಯಾಮಿ ಮಾ ಚ ಶೋಕೇ ಮನಃ ಕೃಥಾಃ ॥ ೧೧೨ ॥

---

ದೃಢವಾದ ಸಂಕೋಲೆಗಳಿಂದ ಬಂಧಿಸಿ, ಶೈವಯಾಗದಲ್ಲಿ ಅವರನ್ನು ಬಲಿಕೊಡಬೇಕೆಂದು ನಿಶ್ಚಯಿಸಿ ಹೋಮಮಾಡುತ್ತಿದ್ದನು.

೧೦೯. ಇದನ್ನು ತಿಳಿದು ರೂಪಣನು ದೇವಕಿಯ ಸಮೀಪಕ್ಕೆ ಬಂದು ಅವಳಿಗೆ ಈ ವಿಷಯವನ್ನು ತಿಳಿಸಿದನು. ಅದನ್ನು ಕೇಳಿ ದೇವಕಿಯು ದುಃಖಿತೆಯಾಗಿ, ಜಗದಂಬಿಕೆಯೂ, ಭಯಪರಿಹಾರಿಣಿಯೂ ಆದ ಭವಾನಿಯನ್ನು ಮನಸ್ಸಿನಲ್ಲಿ ಧ್ಯಾನಿಸಿ ಅವಳ ಮರೆಹೊಕ್ಕಳು.

೧೧೦. ಆರೀತಿಯಾಗಿ ದೇವಕಿಯು ಭಜಿಸಿದುದಕ್ಕೆ ಜಗದಂಬಿಕೆಯು ತೃಪ್ತಳಾಗಿ ಆ ದೇವಕಿಯು ಧ್ಯಾನದಿಂದ ಎಚ್ಚತ್ತಮೇಲೆ ಅವಳನ್ನು ಕುರಿತು "ಮಂಗಳಾಂಗಿಯಾದ ಎಲೌ ದೇವಕಿಯೇ ! ಈಗ ನೀನು ಪುತ್ರಶೋಕವನ್ನು ಬಿಡು."

೧೧೧-೧೧೨. "ಮಂದಬುದ್ಧಿಯಾದ ಜಂಬುಕನು ಶಿವನ ವರದಿಂದ ಕೊಬ್ಬಿ ಅವರನ್ನು ಬಲಿಕೊಡುವ ನಿಮಿತ್ತವಾಗಿಯೇ ಶಿವಯಾಗವನ್ನು ಮಾಡಲು ಉದ್ಯೋಗಿಸಿದ್ದಾನೆ. ಆ ಬುದ್ಧಿಹೀನನು ಅವರನ್ನು ಬಲಿಕೊಡಲು ಪ್ರಯತ್ನಿಸಿದಾಗ ನಾನು ಅವನನ್ನೇ ಮೂರ್ಛೆಗೊಳಿಸಿ ನಿನ್ನ ಮಕ್ಕಳನ್ನು ಬಿಡಿಸಿ ನಿನಗೆ ವಿಜಯ ಲಭಿಸುವಂತೆ ಮಾಡುತ್ತೇನೆ. ನೀನೇನೂ ದುಃಖಪಡಬೇಡ" ಎಂದು ಹೇಳಿದಳು.

ಇತಿ ಶ್ರುತ್ವಾ ಸತೀ ದೇವೀ ನಮಸ್ಕೃತ್ಯ ಮಹೇಶ್ವರೀಂ ।
ಪೂಜಯಾಮಾಸ ವಿಧಿವದ್ಧೂಪದೀಪೋಪಹಾರಕೈಃ ॥ ೧೧೩ ॥

ಏತಸ್ಮಿನ್ನಂತರೇ ರಾಜಾ ದೇವಮಾಯಾವಿಮೋಹಿತಃ ।
ಸುಷ್ವಾಪ ತತ್ರ ಹೋಮಾಂತೇ ತೇ ಚ ಜಾತಾ ಹ್ಯಬಂಧನಾಃ ॥ ೧೧೪ ॥

ತೈರ್ಬದ್ಧೋ ಜಂಬುಕೋ ರಾಜಾ ನಿಗಡೈರಾಯಸೈರ್ದೃಢೈಃ ।
ತೇ ತಂ ಬದ್ಧ್ವಾ ಯಯುಃ ಶೀಘ್ರಂ ದೇವಕೀಂ ಪ್ರತಿ ನಿರ್ಭಯಾಃ ॥ ೧೧೫ ॥

ಏತಸ್ಮಿನ್ನಂತರೇ ತತ್ರ ಕಾಲಿಯಾದ್ಯಾಸ್ತ್ರಯಃ ಸುತಾಃ ।
ತ್ರಿಲಕ್ಷಂ ಸೈನ್ಯಮಾದಾಯ ಯುದ್ಧಾಯ ಸಮುಪಾಯಯುಃ ॥ ೧೧೬ ॥

ಪುನರ್ಯುದ್ಧಮಭೂದ್ಘೋರಂ ಸೇನಯೋರುಭಯೋಸ್ತದಾ ।
ತಾಲನಾದ್ಯಾಶ್ಚ ಚತ್ವಾರೋ ಹತ್ವಾ ತಾಂ ರಿಪುವಾಹಿನೀಂ ॥ ೧೧೭ ॥

---

೧೧೩. ಸತಿಯಾದ ದೇವಕಿಯು ಇದನ್ನು ಕೇಳಿ ಮಹೇಶ್ವರಿಯನ್ನು ನಮಸ್ಕರಿಸಿ ಶಾಸ್ತ್ರೋಕ್ತವಾಗಿ ಧೂಪದೀಪನೈವೇದ್ಯಾದಿಗಳಿಂದ ಪೂಜಿಸಿದಳು.

೧೧೪. ಅತ್ತ ಹೋಮಮಾಡುತ್ತಿದ್ದ ಜಂಬುಕರಾಜನು ಹೋಮಾಂತದಲ್ಲಿ ದೇವಿಯ ಮಾಯೆಯ ಪ್ರಭಾವದಿಂದ ಮೂರ್ಛೆಹೋಗಿ ಅಲ್ಲಿಯೇ ಮಲಗಿ ನಿದ್ರಿಸಿದನು. ಆಗ ದೇವಕಿಯ ಮಕ್ಕಳಾದ ಕೃಷ್ಣಾಂಶನೇ ಮೊದಲಾದವರೆಲ್ಲರೂ ಬಂಧನದಿಂದ ಬಿಡುಗಡೆ ಹೊಂದಿದರು.

೧೧೫. ಅನಂತರ ಈ ಕೃಷ್ಣಾಂಶ ಮೊದಲಾದವರೆಲ್ಲ ಕೂಡಿ ಜಂಬುಕರಾಜನನ್ನು ಕಬ್ಬಿಣದ ಸರಪಣಿಗಳಿಂದ ಬಿಗಿಯಾಗಿ ಕಟ್ಟಿ ನಿರ್ಭಯವಾಗಿ ಅವನನ್ನು ಎಳೆದುಕೊಂಡು ದೇವಕಿಯ ಸಮೀಪಕ್ಕೆ ಬಂದರು.

೧೧೬. ಇಷ್ಟರಲ್ಲಿ ಕಾಲಿಯ ಮೊದಲಾದ ಮೂರುಮಂದಿ ಜಂಬುಕರಾಜಪುತ್ರರೂ ಮೂರುಲಕ್ಷ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಬಂದರು.

೧೧೭. ಎರಡು ಸೈನ್ಯಗಳಿಗೂ ಪುನಃ ಘೋರವಾದ ಯುದ್ಧವು ಆರಂಭವಾಯಿತು. ತಾಲನನೇ ಮೊದಲಾದ ನಾಲ್ವರು ವೀರರೂ ಶತ್ರುಪಕ್ಷದ ಸೇನೆಯನ್ನು ಧ್ವಂಸಮಾಡಿದರು.

ಶ್ರೀಇ್ಥತ್ರೂನ್ಕೋಷ್ಟಕೀಕೃತ್ಯ ಸ್ವಶಸ್ತ್ರೈರ್ಜಘ್ನುರೂರ್ಜಿತಾಃ ।
ಏವಂ ದಿನಾನಿ ಕತಿಚಿತ್ತತ್ರ ಜಾತೋ ಮಹಾರಣಃ ॥ ೧೧೮ ॥

ಕಾಲಿಯೋ ದುಃಖಿತೋ ಭೂತ್ವಾ ಸಸ್ಮಾರ ಮನಸಾ ಹರಂ ।
ಮೋಹನಂ ಮಂತ್ರಮಾಸಾದ್ಯ ಮೋಹಯಾಮಾಸ ತಾನ್ ರಿಪೂನ್॥೧೧೯॥

ಏತಸ್ಮಿನ್ನಂತರೇ ದೇವೀ ದೇವಕೀ ಪತಿದೇವತಾ ।
ಪಾತಿವ್ರತ್ಯಸ್ಯ ಪುಣ್ಯೇನ ಸುತಾಂತಿಕಮುಪಾಗತಾ ॥ ೧೨೦ ॥

ಬೋಧಯಿತ್ವಾ ತು ಕೃಷ್ಣಾಂಶಂ ಪಂಚಶಬ್ದಗಜಸ್ಥಿತಂ ।
ಪುನಸ್ತುಷ್ಟಾವ ಜನನೀಂ ಸರ್ವವಿಶ್ವವಿಮೋಹಿನೀಂ ।
ತದಾ ತುಷ್ಟಾ ಸ್ವಯಂ ದೇವೀ ಬೋಧಯಾಮಾಸ ತಾನ್ ಮುದಾ॥೧೨೧॥

---

೧೧೮. ಶೂರರಾದ ಈ ತಾಲನ ಮೊದಲಾದವರು ಕಾಲಿಯನೇ ಮುಂತಾದ ಮೂರುಮಂದಿ ಶತ್ರುಪುತ್ರರನ್ನೂ ಮಧ್ಯೆ ಸಿಕ್ಕಿಸಿಕೊಂಡು ತಮ್ಮ ಆಯುಧಗಳಿಂದ ಹೊಡೆಯುತ್ತಿದ್ದರು. ಈ ಪ್ರಕಾರ ಘೋರಯುದ್ಧವು ಕೆಲವುದಿನ ನಡೆಯಿತು.

೧೧೯. ಆಗ ಕಾಲಿಯನು ದುಃಖಗೊಂಡು ಭಕ್ತಿಯಿಂದ ಪರಶಿವನನ್ನು ಧ್ಯಾನಿಸಿ, ಅವನಿಂದ ಮೋಹನ ಮಂತ್ರವನ್ನು ಉಪದೇಶಹೊಂದಿ ಅದರ ಪ್ರಭಾವದಿಂದ ತಾಲನ ಮೊದಲಾದ ತನ್ನ ಶತ್ರುಗಳನ್ನು ಮೂರ್ಛೆಗೊಳಿಸಿದನು.

೧೨೦. ಇದೇ ಸಮಯಕ್ಕೆ ಸರಿಯಾಗಿ ಪತಿವ್ರತಾಶಿರೋಮಣಿಯಾದ ದೇವಕಿಯು ತನ್ನ ಪಾತಿವ್ರತ್ಯದ ಪುಣ್ಯಪ್ರಭಾವದಿಂದ ಮಗನ ಸಮೀಪಕ್ಕೆ ಬಂದು ಸೇರಿದಳು.

೧೨೧. ಅಲ್ಲಿ ಪಂಚಶಬ್ದಗಜದಮೇಲೆ ಮೂರ್ಛಿತನಾಗಿ ಬಿದ್ದಿದ್ದ ಕೃಷ್ಣಾಂಶನನ್ನು ಎಚ್ಚರಗೊಳಿಸಿ, ಸಕಲ ಜಗನ್ಮೋಹಿನಿಯಾದ ಅಂಬಿಕೆಯನ್ನು ಪುನಃ ಧ್ಯಾನಮಾಡಿದಳು. ಅದರಿಂದ ದೇವಿಯು ಸಂತುಷ್ಟಳಾಗಿ ಅಲ್ಲಿ ಮೂರ್ಛೆಬಿದ್ದಿದ್ದ ಉಳಿದವರನ್ನೆಲ್ಲಾ ತಾನೇ ಎಚ್ಚರಗೊಳಿಸಿದಳು.

**ಆಹ್ಲಾದಃ ಸೂರ್ಯವರ್ಮಾಣಂ ಕಾಲಿಯಂ ಚ ತತೋಽನುಜಃ ।**
**ಜಘಾನ ಬಲಖಾನಿಸ್ತಂ ತುಂದಿಲಂ ಜಂಬುಕಾತ್ಮಜಂ ॥ ೧೨೨ ॥**

**ತೇ ತು ಪೂರ್ವಭವೇ ವಿಪ್ರ ಜರಾಸಂಧಃ ಸಕಾಲಿಯಃ ।**
**ದ್ವಿವಿದೋ ವಾನರಃ ಶೂರಃ ಸೂರ್ಯವರ್ಮೇಹ ಚಾಭವತ್ ॥ ೧೨೩ ॥**

**ತ್ರಿಶಿರಾಸ್ತುಂದಿಲೋ ಜಾತಃ ಶೃಗಾಲಃ ಸ ಚ ಜಂಬುಕಃ ।**
**ನಿತ್ಯವೈರಕರಾಃ ಸರ್ವೇ ಭೂಪಾಶ್ಚಾಸನ್ಮಹೀತಲೇ ॥ ೧೨೪ ॥**

**ಹತೇಷು ಶತ್ರುಪುತ್ರೇಷು ದೇವಕೀ ಜಂಬುಕಂ ರಿಪುಂ ।**
**ಖಡ್ಗೇನ ತರ್ಜಯಾಮಾಸ ಪತಿಶೋಕಪರಾಯಣಾ ॥ ೧೨೫ ॥**

**ಕೃಷ್ಣಾಂಶಃ ಶಿರಸೀ ಪಿತ್ರೋರ್ಗೃಹೀತ್ವಾ ಸ್ನೇಹಕಾತರಃ ।**
**ಜಂಬುಕಸ್ಯೈವ ಹೃದಯೇ ಸ್ಥಾಪಯಾಮಾಸ ವಿಹ್ವಲಃ ॥ ೧೨೬ ॥**

---

೧೨೨. ಆಗ ಆಹ್ಲಾದನು ಸೂರ್ಯವರ್ಮನನ್ನೂ, ಕಾಲಿಯ ಮತ್ತು ಅವನ ತಮ್ಮ ಇವರನ್ನೂ ಕೊಂದುಹಾಕಿದನು, ಬಲಖಾನಿಯು ಜಂಬುಕಪುತ್ರನೂ ಸ್ಥೂಲ ಶರೀರನೂ ಆದ ತುಂದಿಲನನ್ನು ಕೊಂದುಹಾಕಿದನು.

೧೨೩. ಅವರಲ್ಲಿ ಕಾಲಿಯನು ಹಿಂದಿನ ಜನ್ಮದಲ್ಲಿ ಜರಾಸಂಧನಾಗಿದ್ದನು. ಶೂರನಾದ ಸೂರ್ಯವರ್ಮನು ಹಿಂದಿನ ಜನ್ಮದಲ್ಲಿ ದ್ವಿವಿದನೆಂಬ ವಾನರನಾಗಿದ್ದನು.

೧೨೪. ಹಿಂದೆ ತ್ರಿಶಿರನಾಗಿದ್ದವನೇ ಈಗ ತುಂದಿಲನಾಗಿಯೂ, ಹಿಂದೆ ಶೃಗಾಲನಾಗಿದ್ದವನೇ ಈಗ ಜಂಬುಕನಾಗಿಯೂ ಅವತರಿಸಿ ಇವರೆಲ್ಲಾ ಇಲ್ಲಿ ರಾಜರಾಗಿ ನಿತ್ಯವೂ ದ್ವೇಷವನ್ನು ಸಾಧಿಸುತ್ತಾ ಇದ್ದರು.

೧೨೫. ಪತಿಯ ಮರಣಕ್ಕಾಗಿ ದುಃಖದಿಂದ ಕೊರಗುತ್ತಿದ್ದ ದೇವಕಿಯು ಕತ್ತಿಹಿಡಿದು ನಿಂತು ತನ್ನ ಪತಿಘಾತಿಯಾದ ಜಂಬುಕನು ಪುತ್ರಶೋಕಪೀಡಿತನಾಗಿರುವ ಈ ವೇಳೆಯಲ್ಲಿ ಅವನನ್ನು ಎದುರಿಸಿ ದಿಗಿಲುಪಡುವಂತೆ ಹೋರಾಡಿ ಪ್ರಹರಿಸಿದಳು.

೧೨೬. ಪಿತೃಭಕ್ತನಾದ ಕೃಷ್ಣಾಂಶನು ತಮ್ಮ ತಂದೆಗಳಿಗೊದಗಿರುವ ಸ್ಥಿತಿಗೆ ಕಾತುರನಾಗಿ ಜಂಬುಕನು ಆಲದಮರದಲ್ಲಿ ನೇತುಹಾಕಿದ್ದ ತನ್ನ ತಂದೆ ಚಿಕ್ಕಪ್ಪ ಇವರ ಶಿರಸ್ಸುಗಳನ್ನು ತಂದು, ಶಸ್ತ್ರಘಾತಹೊಂದಿ ಬಿದ್ದಿದ್ದ ಜಂಬುಕರಾಜನ ಎದೆಯ ಮೇಲೆ ಇರಿಸಿದನು.

ವಿಹಸ್ಯ ತೌ ತದಾ ತತ್ರ ಪ್ರೋಚತುರ್ವಚನಂ ಪ್ರಿಯಂ ।
ಚಿರಂ ಜೀವ ಹಿ ಕೃಷ್ಣಾಂಶ ಗಯಾಂ ಕುರು ಮಹಾಮತೇ ।
ಇತಿ ವಾಣೀ ತಯೋರ್ಜಾತಾ ಬಲಿನೋಃ ಪ್ರೇತದೇಹಯೋಃ ॥ ೧೨೭ ॥

ಖಡ್ಗಹಸ್ತಾ ಚ ಸಾ ದೇವೀ ಶಿಲಾಯಂತ್ರೇ ತು ತಂ ರಿಪುಂ ।
ಸಂಸ್ಥಾಪ್ಯ ಚೋದಯಾಮಾಸ ಸ್ವಪುತ್ರಾನ್ ಹರ್ಷಸಂಯುತಾ ॥ ೧೨೮ ॥

ಹೇ ಪುತ್ರಾಃ ಸ್ವಪಿತುಃ ಶತ್ರುಂ ಜಂಬುಕಂ ಪುರುಷಾಧಮಂ ।
ಖಂಡಂಖಂಡಂ ಚ ತಿಲಶಃ ಕೃತ್ವಾನಂದಸಮನ್ವಿತಾಃ ॥ ೧೨೯ ॥

ಸಂಚೂರ್ಣಯತ ತದ್ಗಾತ್ರಂ ತತ್ತೈಲೈರ್ಮೇದನಿರ್ಮಿತೈಃ ।
ಸ್ನಾಸ್ಯಾಮ್ಯಹಂ ತಥೇತ್ಯುಕ್ತ್ವಾ ರುರೋದ ಜನನೀ ಭೃಶಂ ॥ ೧೩೦ ॥

ತಥಾ ಕೃತ್ವಾ ತು ತೇ ಪುತ್ರಾ ಮಹಿಷೀಂ ಸಸುತಾಂ ತದಾ ।
ಬಲಖಾನಿಯುತಾಸ್ತತ್ರಾಹೂಯ ಚಕ್ರುಶ್ಚ ತತ್ಕ್ರಿಯಾಂ ॥ ೧೩೧ ॥

---

೧೨೭. ಆಗ ಕೃಷ್ಣಾಂಶನ ತಂದೆಯಾದ ದೇಶರಾಜ ಮತ್ತು ಚಿಕ್ಕಪ್ಪನಾದ ವತ್ಸರಾಜ ಇವರ ಆ ಶಿರಸ್ಸುಗಳು ಕಿಲಕಿಲನೆ ನಕ್ಕುವು. ಅಲ್ಲದೆ ಆ ಶೂರರಿಬ್ಬರ ಪ್ರೇತರೂಪದ ಶರೀರದಿಂದ "ಎಲೈ ಕೃಷ್ಣಾಂಶನೇ! ನೀನು ಚಿರಂಜೀವಿಯಾಗು. ಈಗಲೇ ನೀನು ಗಯೆಗೆ ಹೋಗಿ ಅಲ್ಲಿ ನಮಗೆ ನಡೆಯಿಸಬೇಕಾದ ಅಪರ ಕರ್ಮಗಳನ್ನೆಲ್ಲಾ ನೆರವೇರಿಸು" ಎಂಬದಾಗಿ ಸವಿನುಡಿಯ ವಾಣಿಯೊಂದುಕೇಳಿಸಿತು.

೧೨೮-೧೩೦. ಬಳಿಕ ದೇವಕೀದೇವಿಯು ಶತ್ರುವಾದ ಜಂಬುಕನ ದೇಹವನ್ನು ಬಂಡೆಯಮೇಲೆ ಇರಿಸಿ ಕೈಯಲ್ಲಿ ಕತ್ತಿಯನ್ನು ಹಿಡಿದು, ಮಕ್ಕಳನ್ನು ಕರೆದು ಪುತ್ರ ಸ್ನೇಹದಿಂದ ಕೂಡಿ "ಮಕ್ಕಳಿರಾ! ನಿಮ್ಮ ತಂದೆಯ ಶತ್ರುವೂ ನರಾಧಮನೂ ಆದ ಈ ಜಂಬುಕನ ಶರೀರವನ್ನು ಸಂತೋಷದಿಂದ ಕತ್ತರಿಸಿ, ಚಚ್ಚಿ ಎಳ್ಳಿನಂತೆ ಪುಡಿಪುಡಿಮಾಡಿ ಎಸೆಯಿರಿ. ಇವನ ಮದಯುಕ್ತವೂ ರಕ್ತಮೇದೋಮಯವೂ ಆದ ತೈಲದಿಂದ ನಾನು ಸ್ನಾನಮಾಡುವೆನು" ಎಂದು ಹೇಳುತ್ತಾ ಬಹುವಾಗಿ ರೋದಿಸಿದಳು.

೧೩೧. ಕೃಷ್ಣಾಂಶನೇ ಮೊದಲಾದವರು ತಾಯಿಯ ಅಪ್ಪಣೆಯಂತೆ ಆ ಜಂಬುಕನ ಶರೀರವನ್ನು ನುಚ್ಚುನೂರಾಗುವಂತೆ ಹೊಡೆದರು. ಬಳಿಕ ಬಲಖಾನಿಯನ್ನು ಕಳುಹಿಸಿ ಜಂಬುಕನ ರಾಣಿಯನ್ನೂ, ಮಗಳನ್ನೂ ಕರೆತರಿಸಿ ಆ ಜಂಬುಕನಿಗೆ ಉತ್ತರಕ್ರಿಯೆಗಳನ್ನೆಲ್ಲಾ ಮಾಡಿಸಿದರು.

**ತದಾ ಪರಿಮಲಂ (?) ರಾಜ್ಞೀ ದೃಷ್ಟ್ವಾ ಸ್ವಾಮಿನಮಾತುರಂ ।**
**ಮರಣಾಯೋನ್ಮುಖಂ ವಿಪ್ರ ಪಂಚತ್ವಮುಗಮನ್ಮನೇ ॥ ೧೩೨ ॥**

**ತತ್ಸುತಾ ಖಡ್ಗಮಾನೀಯ ಬಲಖಾನಿಭುಜಂ ಪ್ರತಿ ।**
**ಕೃತಿತ್ವಾ ಮೂರ್ಛಯಿತ್ವಾ ತಂ ತತ್ಪಕ್ಷಾನನ್ವಧಾವತ ॥ ೧೩೩ ॥**

**ತಾಲನಂ ದೇವಸಿಂಹಂ ಚ ರಾಮಾಂಶಂ ಚ ತಥಾವಿಧಂ ।**
**ಕೃತ್ವಾನ್ಯಾಂಶ್ಚ ತಥಾಶತ್ರೂನಗಚ್ಛತ್ಕುಲಕಾತರಾ ॥ ೧೩೪ ॥**

**ಕೃಷ್ಣಾಂಶಂ ಮೋಹಯಿತ್ವಾಶು ಮಾಯಯಾ ಚ ಸಮಾಹರತ್ ।**
**ಹತೇ ತತ್ರ ಶತೇ ಶೂರೇ ಬಲಖಾನಿರಮರ್ಷಿತಃ ।**
**ತಚ್ಛಿರಶ್ಚ ಸಮಾಹೃತ್ಯ ಚಿತಾಯಾಂ ಚ ಸಮಾಕ್ಷಿಪತ್ ॥ ೧೩೫ ॥**

**ತದಾ ವಾಣೀ ಸಮುತ್ಪನ್ನಾ ಬಲಖಾನೇ ಶೃಣುಷ್ವ ಭೋಃ ।**
**ಅವಧ್ಯಾ ಚ ಸದಾ ನಾರೀ ತ್ವಯಾ ವಧ್ಯಾಹ್ಯಧರ್ಮಿಣಃ ॥ ೧೩೬ ॥**

---

೧೩೨. ಎಲೈ ಮುನಿಗಳೇ ! ಆಗ ಜಂಬುಕನ ರಾಣಿಯು ಪತಿಗೆ ಈರೀತಿಯಾದ ಅವಸ್ಥೆಯೊದಗಿ ಮೃತಿಹೊಂದಿದುದನ್ನು ನೆನೆದು ಅದನ್ನು ನೋಡಿ ಇನ್ನು ಬದುಕಿರಬಾರದೆಂದು ತಾನೂ ಮೃತಳಾದಳು.

೧೩೩-೧೩೪. ಆಕೆಯ ಪುತ್ರಿಯಾದ ವಿಜಯೈಷಿಣಿಯು ಖಡ್ಗವನ್ನು ತೆಗೆದುಕೊಂಡು ಬಲಖಾನಿಯ ಭುಜಕ್ಕೆ ಹೊಡೆದು ಅವನನ್ನು ಮೂರ್ಛೆಗೊಳಿಸಿ ಅವನ ಕಡೆಯವರನ್ನು ಬೆನ್ನಟ್ಟಿಹೋಗಿ ತಾಲನ, ದೇವಸಿಂಹ, ರಾಮಾಂಶ ಮೊದಲಾದವರನ್ನೂ ಘಾಯಗೊಳಿಸಿ ತನ್ನ ಕುಲಕ್ಕೆ ಒದಗಿದ ವಿಪತ್ತಿಗಾಗಿ ಕಾತರಳಾಗಿ ಅಲ್ಲಿಂದ ಹೊರಟಳು

೧೩೫. ಆಕೆಯು ತನ್ನ ಮಾಯೆಯ ಪ್ರಭಾವದಿಂದ ಕೃಷ್ಣಾಂಶನನ್ನು ಮೂರ್ಛೆಗೊಳಿಸಿ ಅವನನ್ನು ಅಪಹರಿಸಿಕೊಂಡು ಹೋಗುತ್ತಿದ್ದಳು. ಈರೀತಿ ತನ್ನ ಕಡೆಯ ನೂರಾರು ವೀರರು ಮೃತಪಟ್ಟುದನ್ನು ಕಂಡು ಬಲಖಾನಿಯು ಕೋಪಗೊಂಡು ಅವಳ ಶಿರಸ್ಸನ್ನು ಛೇದಿಸಿ, ಚಿತೆಯೊಳಗೆ ಹಾಕಿದನು.

೧೩೬. ಆಗ ಅಶರೀರವಾಣಿಯೊಂದು "ಎಲೈ ಬಲಖಾನಿಯೇ ! ಕೇಳು ಸ್ತ್ರೀಯು ಯಾವಾಗಲೂ ಯಾವ ಕಾರಣದಿಂದಲೂ ವಧೆಗೆ ಅರ್ಹಳಲ್ಲ. ಧರ್ಮವಿರೋಧಿಗಳಾದ ಪುರುಷರ ವಧೆಯನ್ನು ಮಾಡಬೇಕೇ ವಿನಾ ಎಂದಿಗೂ ಸ್ತ್ರೀವಧೆಯನ್ನು ಮಾಡತಕ್ಕದ್ದಲ್ಲ."

ಫಲಮಸ್ಯ ವಿವಾಹೇ ಸ್ವೇ ಭೋಕ್ತವ್ಯಂ ಪಾಪಕರ್ಮಣಃ ।
ಇತಿ ಶ್ರುತ್ವಾ ತದಾ ದುಃಖೀ ಬಲಖಾನಿರ್ಯಯೌ ಪುರಂ ॥ ೧೩೭ ॥

ತತಸ್ತು ಸೈನಿಕಾಃ ಸರ್ವೇ ಮಹಾಹರ್ಷಸಮನ್ವಿತಾಃ ।
ಶತೋಷ್ಟ್ರಭಾರವಾಹ್ಯಾನಿ ಲುಂಠಯಿತ್ವಾ ಧನಾನಿ ಚ ॥ ೧೩೮ ॥

ಮಹಾವತೀಂ ಸಮಾಜಗ್ಮುಃ ಕೃತಕೃತ್ಯತ್ವಮಾಗತಾಃ ।
ಹತಶೇಷೈಶ್ಚಾರ್ಧಸೈನ್ಯೈಃ ಸಹಿತಾ ಗೇಹಮಾಯಯುಃ ॥ ೧೩೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ದ್ವಾದಶೋಽಧ್ಯಾಯಃ



---

೧೩೭. "ಈಗ ನೀನು ಮಾಡಿದ ಸ್ತ್ರೀವಧೆಯ ರೂಪವಾದ ಪಾಪಕರ್ಮದ ಫಲವನ್ನು ನಿನ್ನ ವಿವಾಹಕಾಲದಲ್ಲಿ ಅನುಭವಿಸುತ್ತೀಯೆ" ಎಂಬದಾಗಿ ತಿಳಿಸಿತು. ಇದನ್ನು ಕೇಳಿ ಬಲಖಾನಿಯು ಆಗ ಖಿನ್ನನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೧೩೮-೧೩೯. ಅನಂತರ ಎಲ್ಲಾ ಸೈನಿಕರೂ ಕೃತಕೃತ್ಯರೆನಿಸಿ ಸಂತೋಷಭರಿತರಾಗಿ ನೂರಾರು ಒಂಟೆಗಳು ಹೊರುವಷ್ಟು ಅಪಾರವಾದ ದ್ರವ್ಯವನ್ನು ಲೂಟಿಮಾಡಿಕೊಂಡು ಕಳೆದುಳಿದ ಅರ್ಧಸೈನ್ಯದೊಡನೆ ಮಹಾವತೀ ನಗರಕ್ಕೆ ಪ್ರಯಾಣಮಾಡಿ ಬಂದು ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುಚ್ಚಯದಲ್ಲಿ ಹನ್ನೆರಡನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ತ್ರಯೋದಶೋಽಧ್ಯಾಯಃ

॥ ಋಷಯ ಊಚುಃ ॥

ಕಸ್ಮಿನ್ಮಾಸ್ಯಭವದ್ಯುದ್ಧಂ ತಯೋಃ ಕತಿದಿನಾನಿ ಚ ।
ತತ್ಪಶ್ಚಾತ್ಸ್ವಪುರೀಂ ಪ್ರಾಪ್ಯ ತದಾ ಕಿಮಭವನ್ಮುನೇ ॥ ೧ ॥

॥ ಸೂತ ಉವಾಚ ॥

ಪೌಷಮಾಸ್ಯಭವದ್ಯುದ್ಧಂ ತಯೋಃ ಶತದಿನಾನಿ ಚ ।
ಜ್ಯೇಷ್ಠೇ ಮಾಸಿ ಗೃಹಂ ಪ್ರಾಪ್ತಾ ದಧ್ಮುರ್ವಾದ್ಯಾನ್ಯನೇಕಶಃ ॥ ೨ ॥

---

### ಹದಿಮೂರನೆಯ ಅಧ್ಯಾಯ

೧. ಶೌನಕಾದಿ ಋಷಿಗಳು ಪ್ರಶ್ನೆ ಮಾಡುತ್ತಾರೆ—"ಅಯ್ಯಾ ಸೂತಮಹರ್ಷಿಯೇ! ಆ ಜಂಬುಕ ಮಹಾರಾಜನಿಗೂ ಶಿರೀಷಪುರದ ಬಲಖಾನಿಗೂ ಯಾವ ತಿಂಗಳಲ್ಲಿ ಎಷ್ಟು ದಿವಸ ಯುದ್ಧ ನಡೆಯಿತು. ? ಆ ಕೃಷ್ಣಾಂಶ ಮೊದಲಾದವರು ತಮ್ಮ ಪಟ್ಟಣಕ್ಕೆ ಹಿಂದಿರುಗಿದಮೇಲೆ ಅಲ್ಲಿ ಏನಾಯಿತು. ಎಂಬುದನ್ನು ತಿಳಿಸಬೇಕು." ಎಂದುಕೇಳಿದರು.

೨. ಸೂತ ಮುನಿವರ್ಯನು ಹೇಳುತ್ತಾನೆ. ಅವರಿಬ್ಬರಿಗೂ ಪುಷ್ಯಮಾಸದಲ್ಲಿ ಯುದ್ಧ ಪ್ರಾರಂಭವಾಗಿ ನೂರಾರು ದಿನಗಳ ವರೆಗೂ ನಡೆಯಿತು. ಬಲಖಾನಿಯ ಕಡೆಯುವರು ಜೇಷ್ಠಮಾಸದಲ್ಲಿ ತಮ್ಮ ಪಟ್ಟಣಕ್ಕೆ ಹಿಂದಿರುಗಿ ಬಂದು ಅನೇಕ ವಿಧವಾಗಿ ಜಯಭೇರಿ ವಾದ್ಯಗಳನ್ನು ಧ್ವನಿಮಾಡಿದರು

ಶ್ರುತ್ವಾ ಪರಿಮಲೋ ರಾಜಾ ಸ್ವಸುತಾಞ್ಜಯಿನೋ ಬಲೀನ್ ।
ದದೌ ದಾನಾನಿ ವಿಪ್ರೇಭ್ಯಃ ಸುಖಂ ಜಾತಂ ಗೃಹೇಗೃಹೇ ॥ ೩ ॥

ಇತಿ ಶ್ರುತ್ವಾ ಮಹೀರಾಜೋ ಬಲಖಾನಿಂ ಮಹಾಬಲಮ್ ।
ತತ್ರಾಗತ್ಯ ನಮಸ್ಕೃತ್ಯ ವಚನಂ ಪ್ರಾಹ ನಮ್ರಧೀಃ ॥ ೪ ॥

ಅರ್ಧಕೋಟಿಮಿತಂ ದ್ರವ್ಯಂ ಮತ್ತಃ ಪ್ರಾಪ್ಯ ಸುಖೀ ಭವ ।
ಮಾಹಿಷ್ಮತ್ಯಾಶ್ಚ ರಾಷ್ಟ್ರಂ ಮೇ ದೇಹಿ ವೀರ ನಮೋಽಸ್ತು ತೇ ॥ ೫ ॥

ವರ್ಷೇವರ್ಷೇ ಚ ತದ್ದ್ರವ್ಯಂ ಗೃಹಾಣ ಬಲವನ್ಪ್ರಭೋ ।
ಇತಿ ಶ್ರುತ್ವಾ ತಥಾ ಮತ್ವಾ ಬಲಖಾನಿರ್ಗೃಹಂ ಯಯೌ ॥ ೬ ॥

ವಯಸ್ತ್ರಯೋದಶಾಬ್ದೇ ಚ ಕೃಷ್ಣಾಂಶೇ ಬಲವತ್ತರೇ ।
ಯಥಾ ಜಾತಾ ಹರೇರ್ಲೀಲಾ ಭೃಗುಶ್ರೇಷ್ಠ ತಥಾ ಶೃಣು ॥ ೭ ॥

---

೩. ಬಲಾಢ್ಯರಾದ ತನ್ನ ಮಕ್ಕಳು ಜಯಶಾಲಿಗಳಾಗಿ ಬಂದುದನ್ನು ಕೇಳಿ ಪರಿಮಳರಾಜನು ಸಂತೋಷಪಟ್ಟು ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಕೊಟ್ಟನು. ಆ ನಗರದ ಮನೆಮನೆಗಳಲ್ಲಿಯೂ ವಿಜಯೋತ್ಸವಾಂಗವಾದ ಹರ್ಷವು ತುಂಬಿ ತುಳುಕುತ್ತಿತ್ತು.

೪-೬. ಮಹೀರಾಜನು (ಪೃಥ್ವೀರಾಜನು) ಈ ಸಮಾಚಾರವನ್ನು ಕೇಳಿ ಪರಾಕ್ರಮಶಾಲಿಯಾದ ಬಲಖಾನಿಯ ಬಳಿಗೆ ಬಂದು, ವಂದಿಸಿ ವಿನಯದಿಂದ ವಿಜ್ಞಾಪನೆಮಾಡುವವನಾಗಿ "ಓ ವೀರವರ ! ನಾನು ಅರ್ಧಕೋಟಿ (ಎಂದರೆ ಐವತ್ತುಲಕ್ಷ) ದ್ರವ್ಯವನ್ನು ಈಗ ಕೊಡುತ್ತೇನೆ ತಾವು ಅದನ್ನು ತೆಗೆದುಕೊಂಡು ಸಂತುಷ್ಟರಾಗಿ ಅದಕ್ಕೆ ಬದಲಾಗಿ ಕೃಪೆಯಿಟ್ಟುಮಾಹಿಷ್ಮತೀ ರಾಜ್ಯವನ್ನು ನನಗೆ ಕೊಡಿ. ಅದು ನನ್ನ ರಾಷ್ಟ್ರಕ್ಕೆ ಸೇರಿದಂತಿದೆ. ಬಲಿಷ್ಠನಾದ ಪ್ರಭುವೇ ! ಪ್ರತಿವರ್ಷವೂ ಇಷ್ಟೇ ಹಣವನ್ನು ನಾನು ಸಲ್ಲಿಸುತ್ತೇನೆ ಅದನ್ನು ತೆಗೆದುಕೊಂಡು ಸುಖರಾಗಿರಿ" ಎಂದು ಹೇಳಿದನು ಮಹೀರಾಜನು ಈರೀತಿ ಹೇಳಿದುದನ್ನು ಕೇಳಿ ಬಲಖಾನಿಯು ಹಾಗೆಯೇ ಆಗಲಿ ಎಂದು ಒಪ್ಪಿಗೆಯನ್ನಿತ್ತು ತನ್ನ ನಿವಾಸಕ್ಕೆ ಬಂದನು.

೭. ಓ ಭೃಗುವಂಶ ಶ್ರೇಷ್ಠನೇ ! ಬಲಶಾಲಿಯಾದ ಕೃಷ್ಣಾಂಶನು ಹದಿಮೂರು ವರ್ಷದವನಾಗುತ್ತಲೆ ವಿಷ್ಣ್ವಂಶದಿಂದ ನಡೆಯಿಸಿದ ಲೀಲಾವಿನೋದಗಳನ್ನು ಹೇಳುತ್ತೇನೆ ಕೇಳು.

ಭಾದ್ರೇಶುಕ್ಲೇ ತ್ರಯೋದಶ್ಯಾಂ ಚಾಹ್ಲಾದಃ ಸಾನುಜೋ ಯಯೌ ।
ಗಯಾರ್ಥೇ ಧನಮಾದಾಯ ಹಸ್ತ್ಯಶ್ವರಥಸಂಕುಲಮ್ ॥ ೮ ॥

ಕೃಷ್ಣಾಂಶೋ ಬಿಂದುಲಾರೂಢೋ ವತ್ಸಜೋ ಹರಿಣೀಸ್ಥಿತಃ ।
ದೇವಃ ಪಪೀಹಕಾರೂಢಃ ಸುಖಖಾನಿಃ ಕರಾಲಕೇ ॥ ೯ ॥

ಚತ್ವಾರೋ ದ್ವಿದಿನಾಂತೇ ಚ ಗಯಾಕ್ಷೇತ್ರಂ ಸಮಾಯಯುಃ ।
ಪೂರ್ಣಿಮಾಂ ತೇ ಪುರಸ್ಕೃತ್ಯ ಷೋಡಶಶ್ರಾದ್ಧಕಾರಿಣಃ ॥ ೧೦ ॥

ಶತಂ ಶತಂ ಗಜಾಂಶ್ಚೈವ ಭೂಷಿತಾಂಶ್ಚ ರಥಾಂಸ್ತಥಾ ।
ದದುರ್ಹಯಾನ್ಸಹಸ್ರಂ ಚ ಹೇಮಮಾಲಾವಿಭೂಷಿತಾನ್ ॥ ೧೧ ॥

---

೮. ಆಹ್ಲಾದನು ತನ್ನ ತಮ್ಮಂದಿರೊಂದಿಗೆ ಭಾದ್ರಪದಶುಕ್ಲ ತ್ರಯೋದಶಿಯ ದಿವಸ ಆನೆ, ಕುದುರೆ, ರಥ, ಮುಂತಾದುವುಗಳಿಂದ ಕೂಡಿದ ತನ್ನ ಸೈನ್ಯವನ್ನೂ ಮತ್ತು ಸಮೃದ್ಧಿಯಾದ ದ್ರವ್ಯವನ್ನೂ ತೆಗೆದುಕೊಂಡು ಗಯೆಗೆ ಹೊರಟನು.

೯. ಕೃಷ್ಣಾಂಶನು ಬಿಂದುಲವೆಂಬ ಕುದುರೆಯನ್ನು ಏರಿದನು. ವತ್ಸರಾಜ ಪುತ್ರನಾದ ಬಲಖಾನಿಯು ಹರಿಣಿಯೆಂಬ ಕುದುರೆಯನ್ನೇರಿದನು. ದೇವಸಿಂಹನು ಪಪೀಹಕವೆಂಬ ಅಶ್ವವನ್ನು ಆರೋಹಿಸಿದನು. ಸುಖಖಾನಿಯು ಕರಾಳವೆಂಬ ಅಶ್ವವನ್ನು ಏರಿದನು. ಈ ರೀತಿ ಎಲ್ಲರೂ ತಮ್ಮ ಅಶ್ವಗಳನ್ನಾರೋಹಿಸಿ ಹೊರಟರು.

೧೦. ಈರೀತಿಯಾಗಿ ಈ ನಾಲ್ಕು ಮಂದಿಯೂ ಪ್ರಯಾಣ ಹೊರಟು ಎರಡು ದಿನ ಪರ್ಯಂತ ಮಾರ್ಗವನ್ನು ಕ್ರಮಿಸಿ ಗಯಾಕ್ಷೇತ್ರಕ್ಕೆ ಬಂದು ಸೇರಿದರು. ಆ ಮಾಸದ ಪೂರ್ಣಿಮಾ ತಿಥಿಯದಿವಸ ಮೊದಲುಮಾಡಿ ಅಪರಪಕ್ಷಪೂರ್ತ ಎಂದರೆ ಮಹಾಲಯ ಅಮಾವಾಸ್ಯೆ ಮುಗಿಯುವವರೆಗೆ ಹದಿನಾರು ಶ್ರಾದ್ಧಗಳನ್ನು ನೆರವೇರಿಸಿದರು.

೧೧-೧೨. ಇವರು ಆ ಪುಣ್ಯಕ್ಷೇತ್ರಶ್ರಾದ್ಧದ ಸಾದ್ಗುಣ್ಯಾರ್ಥವಾಗಿ ಆ ಕಾಲದಲ್ಲಿ ಅಲಂಕಾರ ಸಹಿತವಾದ ನೂರಾರು ಆನೆಗಳನ್ನೂ, ರಥಗಳನ್ನೂ ಚಿನ್ನದ ಕಂಠಹಾರ ಗಳಿಂದ ಅಲಂಕೃತವಾದ ಸಾವಿರ ಕುದುರೆಗಳನ್ನೂ, ಮತ್ತು ಅನೇಕಾನೇಕ ಗೋವು

ಧೇನೂರ್ಹಿರಣ್ಯರತ್ನಾನಿ ವಾಸಾಂಸಿ ವಿವಿಧಾನಿ ಚ ।
ದತ್ವಾ ತೇ ಸುಫಲೀಭೂಯ ಸ್ವಗೇಹಾಯ ದಧುರ್ಮನಃ ॥ ೧೨ ॥

ಲಕ್ಷಾವರ್ತಿಸ್ತು ಯಾ ವೇಶ್ಯಾ ಯಯೌ ಬದರಿಕಾಶ್ರಮಂ ।
ಪ್ರಾಣಾಂಸ್ತತ್ರ ಪರಿತ್ಯಜ್ಯ ಸಾಪ್ಸರಸ್ತ್ವಮುಪಾಗತಾ ॥ ೧೩ ॥

ರಾಕಾಂ ಚಂದ್ರೇ ತು ಸಂಪ್ರಾಪ್ತೇ ರಾಹುಗ್ರಸ್ತೇ ತಮೋಮಯೇ ।
ಕಾಶ್ಯಾಂ ಸಮಾಗತಾ ಭೂಪಾ ನಾನಾದೇಶ್ಯಾಃ ಕುಲೈಃ ಸಹ ॥ ೧೪ ॥

ಹಿಮಾಲಯಗಿರೌ ರಮ್ಯೇ ನಾನಾಧಾತುವಿಚಿತ್ರಿತೇ ।
ತತ್ರ ಶಾರ್ದೂಲವಂಶೀಯೋ ನೇತ್ರಸಿಂಹೋ ಮಹೀಪತಿಃ ॥ ೧೫ ॥

ರತ್ನಭಾನೌ ಹತೇ ಶೂರೇ ನೇತ್ರಸಿಂಹೋ ಭಯಾತುರಃ ।
ನವತುಂಗೇ ಸಮಾಸಾದ್ಯ ತೋಷಯಾಮಾಸ ವಾಸವಂ ॥ ೧೬ ॥

---

ಗಳನ್ನೂ, ಸುವರ್ಣ, ರತ್ನಗಳು, ವಸ್ತ್ರಗಳು ಮೊದಲಾದ ನಾನಾಬಗೆಯ ಮಹಾದಾನಗಳನ್ನೆಲ್ಲಾ ಕೊಟ್ಟು ಬಳಿಕ ತಮ್ಮ (ಮನೆಗೆ)ಊರಿಗೆ ಹೊರಡಲು ಮನಸ್ಸು ಮಾಡಿದರು.

೧೩. ಲಕ್ಷಾವರ್ತಿಯೆಂಬ ಹೆಸರಿನ ವೇಶ್ಯೆಯು ಬದರಿಕಾಶ್ರಮಕ್ಕೆ ಹೋಗಿ ಅಲ್ಲಿಯೇ ಇದ್ದು ತನ್ನ ಅಂತ್ಯಕಾಲವನ್ನು ಕಳೆದು ಮೃತಳಾಗಿ ಅಪ್ಸರಸ್ತ್ವವನ್ನು ಪಡೆದಳು.

೧೪ ಚಂದ್ರಗ್ರಹಣ ಯುಕ್ತವಾದ ಒಂದುಪೂರ್ಣಿಮಾ ದಿವಸ ಚಂದ್ರವಂಶದ ರಾಜಪುತ್ರರಾದ ಕೃಷ್ಣಾಂಶ ಮೊದಲಾದವರು ತಮ್ಮ ಪರಿವಾರ ಸಹಿತರಾದ ಇತರ ನಾನಾದೇಶದ ರಾಜರೊಡನೆ ಕಾಶಿಗೆ ಬಂದರು.

೧೫. ಅನೇಕ ಧಾತುಶಿಲಾರಾಗಗಳಿಂದ ಚಿತ್ರವಿಚಿತ್ರವಾಗಿ ಬಹಳ ರಮಣೀಯವಾಗಿರುವ ಹಿಮಾಲಯಪರ್ವತ ತಪ್ಪಲು ಪ್ರದೇಶದಲ್ಲಿ ಶಾರ್ದೂಲವಂಶದವನಾದ ನೇತ್ರಸಿಂಹನೆಂಬ ರಾಜನು ಇದ್ದನು.

೧೬. ತತ್ಕಾಲದಲ್ಲಿ ಮಹಾಶೂರನೆನಿಸಿದ್ದ ರತ್ನಭಾನುವು ಈ ಚಂದ್ರವಂಶೀಯರಿಂದ ಸೋತು ಮರಣ ಹೊಂದಿದಮೇಲೆ, ನೇತ್ರಸಿಂಹನು ಕೃಷ್ಣಾಂಶನೇ ಮೊದಲಾದವರಿಗೆ ಹೆದರಿ ಹಿಮವತ್ಪರ್ವತದಲ್ಲಿ ನವತುಂಗವೆಂಬ ಕ್ಷೇತ್ರಕ್ಕೆ ಬಂದು ಅಲ್ಲಿ ನಿಯಮದಿಂದ ಕೂಡಿ ಇಂದ್ರನನ್ನು ಸಂತೋಷಪಡಿಸುವುದಕ್ಕಾಗಿ ತಪಸ್ಸುಮಾಡುತ್ತಿದ್ದನು.

ದ್ವಾದಶಾಬ್ದಾಂತರೇ ದೇವೋ ದದೌ ಢಕ್ಕಾಮೃತಂ ಮುದಾ ।
ಪಾರ್ವತ್ಯಾ ನಿರ್ಮಿತಂ ಯತ್ತು ವಾಸವಾಯ ಸ್ವಸೇವಿನೇ ॥ ೧೭ ॥

ದದೌ ಢಕ್ಕಾಮೃತಂ ರಾಜ್ಞೇ ಪುನಃ ಪ್ರಾಹ ಶುಭಂ ವಚಃ ।
ಅಸ್ಯ ಶಬ್ದೇನ ಭೂಪಾಲ ತ್ವಂ ಸೈನ್ಯಂ ಜೀವಯಿಷ್ಯಸಿ ॥ ೧೮ ॥

ಕ್ಷಯಂ ಶೀಘ್ರಂ ಗಮಿಷ್ಯಂತಿ ಶತ್ರವಸ್ತೇ ಮಹಾಭಟಾಃ ।
ಪ್ರಾಪ್ತೇ ಢಕ್ಕಾಮೃತೇ ತಸ್ಮಿನ್ನೇತ್ರಸಿಂಹೋ ಮಹಾಬಲಃ ॥ ೧೯ ॥

ನಗರಂ ಕಾರಯಾಮಾಸ ತತ್ರ ಸರ್ವಜನೈರ್ಯುತಂ ।
ಯೋಜನಾಂತಂ ಚತುರ್ದ್ವಾರಂ ದುರಾಧರ್ಷಂ ಪರೈಃ ಸದಾ ॥ ೨೦ ॥

ನೇತ್ರಸಿಂಹಗಡಂ ನಾಮ್ನಾ ವಿಖ್ಯಾತಂ ಭಾರತೇ ಭುವಿ ।
ಕಾಶ್ಮೀರಾಂತೇ ಕೃತಂ ರಾಜ್ಯೇ ತೇನ ಶೃಂಗಸಮಂ ತತಃ ॥ ೨೧ ॥

---

೧೭. ಹೀಗೆ ಹನ್ನೆರಡುವರ್ಷ ತಪಸ್ಸನ್ನು ಆಚರಿಸಿದಮೇಲೆ ಇಂದ್ರನು ಪ್ರಸನ್ನನಾಗಿ ಹಿಂದೆ ತಾನು ಪಾರ್ವತೀದೇವಿಯನ್ನು ಆರಾಧಿಸಿದಾಗ ಆ ದೇವಿಯು ತನಗೆ ಕೃಪೆಮಾಡಿ ಕೊಟ್ಟಿದ್ದ ಢಕ್ಕಾಮೃತವೆಂಬ ವಾದ್ಯವನ್ನೇ ತನ್ನ ಭಕ್ತನಾದ ಈ ನೇತ್ರಸಿಂಹನಿಗೆ ಕೊಟ್ಟುಬಿಟ್ಟನು.

೧೮-೧೯. ಹೀಗೆ ಕೊಡುವಾಗ ಆ ನೇತ್ರಸಿಂಹನನ್ನು ಕುರಿತು "ಎಲೈ ರಾಜನೇ! ಈ ವಾದ್ಯಧ್ವನಿಯನ್ನು ಕೇಳಿದೊಡನೆ ಮೃತವಾಗಿದ್ದ ನಿನ್ನ ಸೈನ್ಯವೆಲ್ಲವೂ ಬದುಕುವುದು. ಮಹಾಬಲಶಾಲಿಗಳಾದ ನಿನ್ನ ಶತ್ರುಗಳು ಈ ವಾದ್ಯಧ್ವನಿಯನ್ನು ಕೇಳಿದ ಕೂಡಲೇ ನಾಶವಾಗುವರು" ಎಂದು ಶುಭಕರವಾದ ಈ ಮಾತನ್ನು ಹೇಳಿ, ಅದನ್ನು ಕೊಟ್ಟನು.

೨೦. ಮಹಾಬಲಶಾಲಿಯಾದ ನೇತ್ರಸಿಂಹನು ಒಂದುಯೋಜನ ವಿಸ್ತೀರ್ಣವುಳ್ಳದ್ದೂ, ನಾಲ್ಕು ಹೆಬ್ಬಾಗಿಲುಳ್ಳದ್ದೂ, ಶತ್ರುಗಳು ಪ್ರವೇಶಿಸಲು (ಆಕ್ರಮಿಸಲು) ಅಸಾಧ್ಯವೂ ಮತ್ತು ಜನಭರಿತವೂ ಆದ ಒಂದು ನಗರವನ್ನು ನಿರ್ಮಿಸಿದನು.

೨೧. ಭರತಖಂಡದಲ್ಲಿ ಈ ರಾಜ್ಯವು ನೇತ್ರಸಿಂಹಗಡ (ನೇತ್ರಪಾಲಗಡ) ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅನಂತರ ಆ ರಾಜನು ಕಾಶ್ಮೀರದವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿದನು.

ಪಾಲಿತಂ ನೇತ್ರಸಿಂಹೇನ ತತ್ಪುರಂ ಪುತ್ರವನ್ಮುನೇ ।
ನೇತ್ರಪಾಲ ಇತಿ ಖ್ಯಾತೋ ಗ್ರಾಮೋಽಸೌ ದುರ್ಗಮಃ ಪರೈಃ ॥ ೨೨ ॥

ಸೋಽಪಿ ರಾಜಾ ಸಮಾಯಾತೋ ನೇತ್ರಸಿಂಹೋ ಮಹಾಬಲಃ ।
ಕನ್ಯಾ ಸ್ವರ್ಣವತೀ ತಸ್ಯ ರೇವತ್ಯಂಶಸಮನ್ವಿತಾ ।
ಕಾಮಾಕ್ಷ್ಯಾ ವರದಾನೇನ ಸರ್ವಮಾಯಾವಿಶಾರದಾ ॥ ೨೩ ॥

ದೃಷ್ಟ್ವಾ ತಾಂ ಸುಂದರೀಂ ಕನ್ಯಾಂ ಬಾಲೇಂದುಸದೃಶಾನನಾಂ ।
ಮೂರ್ಛಿತಾಶ್ಚಾಭವನ್ಭೂಪಾ ರೂಪಯೌವನಮೋಹಿತಾಃ ॥ ೨೪ ॥

ದೃಷ್ಟ್ವಾ ತಾಂ ಚ ತಥಾಹ್ಲಾದಃ ಸರ್ವರತ್ನವಿಭೂಷಿತಾಂ ।
ಷೋಡಶಾಬ್ದವಯೋಯುಕ್ತಾಂ ಕಾಮಿನೀಂ ರತಿರೂಪಿಣೀಂ ।
ಮೂರ್ಛಿತಶ್ಚಾಪತದ್ಭೂಮೌ ಸಾ ತಂ ದೃಷ್ಟ್ವಾ ಮುಮೋಹ ವೈ ॥ ೨೫ ॥

---

೨೨. ಅಯ್ಯಾ ಮುನಿವರ್ಯರೇ ! ನೇತ್ರಸಿಂಹನು ತನ್ನ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸುತ್ತಿದ್ದನು. ನೇತ್ರಪಾಲ (ನೇಪಾಲ) ವೆಂದು ವ್ಯವಹಾರ ನಾಮದಿಂದ ಕೂಡಿದ ಈ ನಗರವು ಶತ್ರುಗಳಿಗೆ ಅಭೇದ್ಯವಾಗಿದ್ದಿತು.

೨೩. ಆ ಚಂದ್ರಗ್ರಹಣದ ದಿನ ಆ ನೇತ್ರಸಿಂಹನೂ ಕೂಡ ಕಾಶಿಗೆ ಬಂದಿದ್ದನು. ಮಹಾಬಲಶಾಲಿಯಾದ ಈ ನೇತ್ರಸಿಂಹನಿಗೆ ರೇವತಿಯ ಅಂಶದಿಂದ ಹುಟ್ಟಿದ ಸ್ವರ್ಣವತಿಯೆಂಬ ರೂಪಯೌವನಶಾಲಿಯಾದ ಮಗಳಿದ್ದಳು.

೨೪. ಅವಳು ಕಾಮಾಕ್ಷೀದೇವಿಯ ವರಪ್ರಸಾದದಿಂದ ಎಲ್ಲಾ ವಿಧವಾದ ಮಾಯಾವಿದ್ಯೆಗಳಲ್ಲಿಯೂ ನಿಪುಣೆಯಾಗಿದ್ದಳು. ಆ ಗ್ರಹಣದ ಸಂದರ್ಭದಲ್ಲಿ ತಂದೆಯೊಡನೆ ಅವಳೂ ಆ ಪುಣ್ಯಕ್ಷೇತ್ರಕ್ಕೆ ಬಂದಿದ್ದಳು. ಚಂದ್ರನಂತೆ ಮುಖವುಳ್ಳವಳೂ ಸುಂದರಿಯೂ ಆದ ಆ ಕನ್ಯೆಯನ್ನು ಅಲ್ಲಿಗೆ ಬಂದಿದ್ದ ರಾಜರೆಲ್ಲರೂ ನೋಡಿ ಅವಳ ರೂಪ ಯೌವನಗಳಿಗೆ ಬೆರಗಾಗಿ ಅವಳಲ್ಲಿ ಮೋಹಗೊಂಡರು

೨೫. ಸಮಸ್ತ ರತ್ನಾಭರಣಗಳಿಂದ ಅಲಂಕೃತೆಯೂ ರತಿದೇವಿಯಂತೆ ಪರಮಸುಂದರಿಯೂ, ಹದಿನಾರು ವರ್ಷದ ಪ್ರಾಯದವಳೂ ಆದ ಈ ಯುವತಿಯನ್ನು ಆಹ್ಲಾದನು ನೋಡಿ ಮೋಹದಿಂದ ಮೂರ್ಛಿತನಾಗಿ ನೆಲದಮೇಲೆ ಬಿದ್ದುಬಿಟ್ಟನು. ಆ ಸ್ವರ್ಣವತಿಯೂ ಕೂಡ ಆಹ್ಲಾದನನ್ನು ನೋಡಿ ಮೋಹಗೊಂಡಳು.

ದೋಲಾಮಾರುಹ್ಯ ತತ್ಸಖ್ಯೌ ನೃಪಾಂತಿಕಮುಪಾಯಯುಃ ।
ಆಹ್ಲಾದಸ್ತು ಸಮುತ್ಥಾಯ ಮಹಾಮೋಹತ್ವಮಾಗತಃ ॥ ೨೬ ॥

ದೃಷ್ಟ್ವಾ ತಥಾವಿಧಂ ಬಂಧುಂ ಕೃಷ್ಣಾಂಶಃ ಪ್ರಾಹ ದುಃಖಿತಃ ।
ಕಿಮರ್ಥಂ ಮೋಹಮಾಯಾತೋ ಭವಾಂಸ್ತತ್ತ್ವವಿಶಾರದಃ ॥ ೨೭ ॥

ರಜೋ ರಾಗಾತ್ಮಕಂ ವಿದ್ಧಿ ಪ್ರಮಾದಂ ಮೋಹಜಂ ತಥಾ ।
ಜ್ಞಾನಾಸಿನಾ ಶಿರಸ್ತಸ್ಯ ಛಿಂಧಿ ತ್ವಮುಜಿತಃ ಸದಾ ॥ ೨೮ ॥

ಇತಿ ಶ್ರುತ್ವಾ ವಚೋ ಭ್ರಾತುಸ್ತ್ಯಕ್ತ್ವಾ ಮೋಹಂ ಯಯೌ ಗೃಹಂ ।
ಭೋಜಯಿತ್ವಾ ದ್ವಿಜಶ್ರೇಷ್ಠಾನ್ಸಹಸ್ರಂ ವೇದತತ್ಪರಾನ್ ॥ ೨೯ ॥

---

೨೬. ಇದನ್ನು ನೋಡಿ ಸ್ವರ್ಣವತಿಯು ಇಬ್ಬರು ಸಖಿಯರು ಮೇನೆಯ ಮೇಲೆ ಅವಳನ್ನು ಕೂರಿಸಿಕೊಂಡು ನೇತ್ರಸಿಂಹರಾಜನ ಸಮೀಪಕ್ಕೆ ಕರೆತಂದರು. ಅತ್ತ ಆಹ್ಲಾದನು ಸ್ವಲ್ಪಹೊತ್ತಿನಲ್ಲಿ ಚೇತರಿಸಿಕೊಂಡು ಎಚ್ಚೆತ್ತು ಅವಳನ್ನು ಕಾಣದೆ ತುಂಬಾ ಮೋಹಕ್ಕೊಳಗಾದನು.

೨೭-೨೮. ತನ್ನ ಬಂಧುವಾದ ಆಹ್ಲಾದನು ಈರೀತಿ ಕಾಮಪೀಡಿತನಾದುದನ್ನು ನೋಡಿ ಕೃಷ್ಣಾಂಶನು ಖೇದಗೊಂಡು "ಎಲೈ ಆಹ್ಲಾದನೆ! ತತ್ವಜ್ಞಾನಿಯಾಗಿದ್ದರೂ ನೀನು ಏತಕ್ಕೆ ಈರೀತಿ ವಿಶೇಷ ಮೋಹಕ್ಕೊಳಗಾಗಿರುವೆ? ಈ ಅನುರಾಗವು ರಜೋಗುಣಸ್ವರೂಪವು. ಮೋಹದಿಂದ ಹುಟ್ಟಿದ ರಜೋಗುಣಸ್ವರೂಪವಾದ ಅನುರಾಗವು ಅನರ್ಥವನ್ನುಂಟು ಮಾಡುವುದೆಂದು ತಿಳಿ. ಆದುದರಿಂದ ಜಿತೇಂದ್ರಿಯನಾದ ನೀನು ಈ ಮೋಹಕ್ಕೊಳಗಾಗದೆ ಜ್ಞಾನವೆಂಬ ಖಡ್ಗದಿಂದ ಮೋಹದ ತಲೆಯನ್ನು ಕತ್ತರಿಸು" (ಎಂದರೆ ಸುಜ್ಞಾನವನ್ನು ಅವಲಂಬಿಸಿ ಮೋಹವನ್ನು ಧ್ವಂಸ ಮಾಡು) ಎಂದನು.

೨೯-೩೦. ಸಹೋದರನಾದ ಕೃಷ್ಣಾಂಶನ ಈ ಮಾತನ್ನು ಕೇಳಿ ಆಹ್ಲಾದನು ಮೋಹವನ್ನು ತೊರೆದು ತನ್ನ ಊರಿಗೆ ಬಂದನು. ಅನಂತರ ವೇದಾಧ್ಯಯನಶೀಲರಾದ ಸಾವಿರಾರುಮಂದಿ ಬ್ರಾಹ್ಮಣಶ್ರೇಷ್ಠರಿಗೆ ದಿವ್ಯವಾಗಿ ಭೋಜನ ಮಾಡಿಸಿದನು. ಅನಂತರ ಇವನು ತನ್ನ ಇಷ್ಟಾರ್ಥಸಾಧನೆಗಾಗಿ ಮಧ್ಯಚರಿತ್ರೆಯನ್ನು ಓದಿ ದುರ್ಗಾದೇವಿಯನ್ನು ಆರಾಧಿಸಿದನು. ಒಂದುತಿಂಗಳ ಕೊನೆಯಲ್ಲಿ ದೇವಿಯು

**ದುರ್ಗಾಮಾರಾಧಯಾಮಾಸ ಜಪ್ತ್ವಾ ಮಧ್ಯಚರಿತ್ರಕಂ ।**
**ಮಾಸಾಂತೇ ಚ ತದಾ ದೇವೀ ದತ್ವಾಭೀಷ್ಟಂ ಹೃದಿ ಸ್ಥಿತಂ ॥ ೩೦ ॥**

**ಮೋಹಯಾಮಾಸ ತಾಂ ಕನ್ಯಾಂ ವಿವಾಹಾರ್ಥಮನಿಂದಿತಾ ।**
**ಸ್ವಪ್ನೇ ದದರ್ಶ ಸಾ ಬಾಲಾ ರಾಮಾಂಶಂ ದೇವಕೀಸುತಂ ॥ ೩೧ ॥**

**ಪ್ರಾತರ್ಬುದ್ಧ್ವಾ ತು ಸಂಚಿಂತ್ಯ ಮಹಾಮೋಹಮುಪಾಯಯೌ ।**
**ತದಾ ಧ್ಯಾತ್ವಾ ಚ ಕಾಮಾಕ್ಷೀಂ ಸರ್ವಾಭೀಷ್ಟಪ್ರದಾಯಿನೀಂ ॥ ೩೨ ॥**

**ಪೌಷಮಾಸೇ ತು ಸಂಪ್ರಾಪ್ತೇ ಶುಕಕಂಠೇ ಸುಪತ್ರಿಕಾಂ ।**
**ಬದ್ಧ್ವಾ ತಂ ಪ್ರೇಷಯಾಮಾಸ ಶುಕಂ ಪತ್ರಸ್ಥಿತಂ ಪ್ರಿಯಂ ॥ ೩೩ ॥**

**ಸ ಗತ್ವಾ ಪುಷ್ಪವಿಪಿನಂ ಮಹಾವತಿಪುರೀಸ್ಥಿತಂ ।**
**ನರಶಬ್ದೇನ ವಚನಂ ಕೃಷ್ಣಾಂಶಾಯ ಶುಕೋಽಬ್ರವೀತ್ ॥ ೩೪ ॥**

---

ಇವನಿಗೆ ಪ್ರಸನ್ನೆಯಾಗಿ ಅವನ ಮನಸ್ಸಿನ ಇಷ್ಟಾರ್ಥವನ್ನು ನೆರವೇರಿಸುವುದಕ್ಕೋಸ್ಕರ ಸ್ವರ್ಣವತೀಕನ್ಯೆಯನ್ನು ಮೋಹಗೊಳಿಸಿದಳು.

೩೧. ಪರಿಶುದ್ಧ ಸ್ವರೂಪಳಾದ ದೇವಿಯ ಮಹಿಮೆಯಿಂದ ಆ ಸ್ವರ್ಣವತಿಯು ತನ್ನ ಸ್ವಪ್ನದಲ್ಲಿ ತಾನು ಮೋಹಿಸಿದವನಾಗಿ ಬಲರಾಮಾಂಶದಿಂದ ದೇವಕಿಯ ಗರ್ಭದಲ್ಲಿ ಜನಿಸಿರುವ ಆಹ್ಲಾದನನ್ನು ನೋಡಿದಳು.

೩೨-೩೩. ಬೆಳಗಾಗುತ್ತಲೆ ಎದ್ದು ಆ ಬಾಲೆಯು ತಾನು ಸ್ವಪ್ನದಲ್ಲಿ ಕಂಡ ವಿಷಯವನ್ನು ಯೋಚಿಸಿಕೊಂಡು ಬಹಳ ಮೋಹಕ್ಕೊಳಗಾದಳು. ಆಗ ಅವಳು ಸಕಲ ಇಷ್ಟಾರ್ಥಗಳನ್ನೂ ಕೊಡುವ ಕಾಮಾಕ್ಷೀದೇವಿಯನ್ನು ಧ್ಯಾನಿಸಿ, ಪುಷ್ಯಮಾಸ ಹುಟ್ಟಿದಕೂಡಲೆ ಒಂದುದಿನ ಆಹ್ಲಾದನಿಗೆ ಒಂದು ಕಾಗದವನ್ನು ಬರೆದು ತನ್ನ ಪ್ರೀತಿಯ ಗಿಣಿಯ ಕೊರಳಿಗೆ ಕಟ್ಟಿ, ಆ ಗಿಣಿಯನ್ನು ತನ್ನ ಪ್ರಿಯನಬಳಿಗೆ ಕಳುಹಿಸಿದಳು.

೩೪-೩೬. ಅದು ಮಹಾವತೀ ನಗರಕ್ಕೆ ಬಂದು ಹೂವಿನ ತೋಟದಲ್ಲಿ ಕುಳಿತುಕೊಂಡು ಅಲ್ಲಿ ವಿಹರಿಸುತ್ತಿದ್ದ ಕೃಷ್ಣಾಂಶ (ಉದಯಸಿಂಹ) ನಿಗೆ ಕೇಳಿಸುವಂತೆ ಅವನನ್ನು ಕುರಿತು ಮನುಷ್ಯರ ಮಾತಿನಿಂದ “ಎಲೈ ವೀರನೇ! ಮಹಾ

ವೀರ ಶ್ರೇವರಜೋ ಬಂಧುರ್ನಾಮ್ನಾಹ್ಲಾದೋ ಮಹಾಬಲಃ ।
ತಸ್ಮೈ ಹಿ ಪ್ರೇಷಿತಾ ಪತ್ರೀ ಸ್ವರ್ಣವತ್ಯಾ ಹಿತಪ್ರದಾ ॥ ೩೫ ॥

ತಾಂ ಜ್ಞಾತ್ವಾ ಚ ಪುನಸ್ತಸ್ಯಾ ಉತ್ತರಂ ದೇಹಿ ಮತ್ಪ್ರಿಯಂ ।
ಅಥವಾ ಪತ್ರಮಾಲಿಖ್ಯ ತತ್ತ್ವಂ ಮೇ ಕುರು ಕಂಠಕೇ ॥ ೩೬ ॥

ಇತಿ ಶ್ರುತ್ವೋದಯೋ ವೀರೋ ಗೃಹೀತ್ವಾ ಪತ್ರಮುತ್ತಮಂ ।
ಜ್ಞಾತವಾಂಸ್ತತ್ರ ವೃತ್ತಾಂತಮಾಹ್ಲಾದಾಯ ಪುನರ್ದದೌ ॥ ೩೭ ॥

ಜಂಬುಕಶ್ಚ ನೃಪೋ ವೀರೋ ರುದ್ರದತ್ತವರೋ ಬಲೀ ।
ಅಜೇಯೋಽನ್ಯನೃಪೈರ್ವೀರ ತ್ವಯಾ ಯುಧಿ ನಿಪಾತಿತಃ ॥ ೩೮ ॥

ತಥಾವಿಧಂ ಮತ್ಪಿತರಮಿಂದ್ರದತ್ತವರಂ ರಿಪುಂ ।
ತಮೇವಂ ಜಹಿ ಸಂಗ್ರಾಮೇ ಮಮ ಪಾಣಿಗ್ರಹಂ ಕುರು ॥ ೩೯ ॥

---

ಬಲಶಾಲಿಯೂ ನಿನ್ನ ಸಹೋದರನೂ ಆದ ಆಹ್ಲಾದನಿಗೆ ಸ್ವರ್ಣವತಿಯು ಪ್ರೇಮವನ್ನು ಸೂಚಿಸುವ ಈ ಕಾಗದವನ್ನು ಬರೆದಿದ್ದಾಳೆ. ಇದನ್ನು ತೆಗೆದುಕೊಂಡು ಆಕೆಗೆ ಪ್ರತ್ಯುತ್ತರವನ್ನು ನನ್ನೊಡನೆ ಹೇಳಿ ಕಳುಹಿಸು. ಅಥವಾ ಕಾಗದವನ್ನು ಬರೆದು ನನ್ನ ಕುತ್ತಿಗೆಗೆ ಕಟ್ಟಿಬಿಡು'' ಎಂದು ಹೇಳಿತು.

೩೭. ಈರೀತಿಯಾಗಿ ಗಿಣಿಯು ಆಡಿದ ಮಾತನ್ನು ಕೇಳಿ ವೀರನಾದ ಉದಯಸಿಂಹನು ಶ್ರೇಷ್ಠವಾದ ಆ ಪತ್ರವನ್ನು ಗಿಣಿಯ ಕುತ್ತಿಗೆಯಿಂದ ಬಿಚ್ಚಿ ತೆಗೆದುಕೊಂಡು, ವೃತ್ತಾಂತವನ್ನು ಗ್ರಹಿಸಿ, ಕಾಗದವನ್ನು ತೆಗೆದುಕೊಂಡುಹೋಗಿ ಆಹ್ಲಾದನಿಗೆ ಕೊಟ್ಟನು

೩೮. ಆ ಕಾಗದದಲ್ಲಿ "ಎಲೈ ವೀರನೇ! ರುದ್ರನ ವರಪಡೆದು ಮಹಾಬಲಶಾಲಿಯಾಗಿದ್ದ ಜಂಬುಕರಾಜನು ಬೇರೆ ಯಾವರಾಜರಿಂದಲೂ ಜಯಿಸಲು ಅಸಾಧ್ಯನಾಗಿದ್ದನು ಅಂಥವನನ್ನೂ ಸಹ ನೀನು ಯುದ್ಧದಲ್ಲಿ ಕೊಂದುಹಾಕಿದ್ದೀಯೆ"

೩೯. ನನ್ನ ತಂದೆ ನೇತ್ರಸಿಂಹನೂ ಕೂಡ ಇಂದ್ರನಿಂದ ವರವನ್ನು ಪಡೆದು ಬಹಳ ಬಲಶಾಲಿಯಾಗಿ ನಿಮ್ಮ ಶತ್ರುವಾಗಿದ್ದಾನೆ. ನೀವು ಅವನನ್ನು ಜಯಿಸಿ ಕೊಂದುಹಾಕಿ ನನ್ನ ಪಾಣಿಗ್ರಹಣ ಮಾಡಿಕೊಳ್ಳಬೇಕು.'' ಎಂದು ಬರೆದಿತ್ತು

ಇತಿ ಜ್ಞಾತ್ವಾ ಸ ಆಹ್ಲಾದಸ್ತಾಮಾಶ್ವಾಸ್ಯ ಹೃದಿ ಸ್ಥಿತಾಂ ।
ಶುಕಕಂಠೇ ಬಬಂಧಾಶು ಲಿಖಿತ್ವಾ ಪತ್ರಮುತ್ತಮಂ ॥ ೪೦ ॥

ಸ ಶುಕಃ ಪನ್ನಗಃ ಪೂರ್ವಂ ಪುಂಡರೀಕೇನ ಶಾಪಿತಃ ।
ರೇವತ್ಯಂಶಸ್ಯ ಕಾರ್ಯಂ ಚ ಕೃತ್ವಾ ಮೋಕ್ಷತ್ವಮಾಗತಃ ॥ ೪೧ ॥

ಮೃತೇ ತಸ್ಮಿಂಛುಕೇ ರಮ್ಯೇ ದೇವೀ ಸ್ವರ್ಣವತೀ ತದಾ ।
ದಾಹಯಿತ್ವಾ ದದೌ ದಾನಂ ವಿಪ್ರೇಭ್ಯಸ್ತಸ್ಯ ತೃಪ್ತಯೇ ॥ ೪೨ ॥

ಮಾಘಮಾಸಿ ಚ ಸಂಪ್ರಾಪ್ತೇ ಪಂಚಮ್ಯಾಂ ಕೃಷ್ಣಪಕ್ಷಕೇ ।
ಆಹ್ಲಾದಃ ಸಪ್ತಲಕ್ಷೈಶ್ಚ ಸೈನ್ಯೈಃ ಸಾರ್ಧಂ ಯಯೌ ಮುದಾ ॥ ೪೩ ॥

---

೪೦. ಈರೀತಿ ಬರೆದಿದ್ದ ಲೇಖನವನ್ನು ಓದಿ ನೋಡಿಕೊಂಡು ಆಹ್ಲಾದನು ತನ್ನ ಮನೋಹಾರಿಣಿಯಾದ ಸ್ವರ್ಣವತಿಯನ್ನು ಸಮಾಧಾನ ಪಡಿಸುವರೀತಿ ಶ್ರೇಷ್ಠವಾದ ಪ್ರತ್ಯುತ್ತರವನ್ನು ಬರೆದು ಆ ಕಾಗದವನ್ನು ಗಿಣಿಯ ಕೊರಳಿನಲ್ಲಿ ಕಟ್ಟಿ ಕಳುಹಿಸಿದನು.

೪೧. ಆ ಗಿಣಿಯು ಹಿಂದಿನಜನ್ಮದಲ್ಲಿ ಪನ್ನಗನಾಗಿದ್ದು ಕಾರಣಾಂತರದಿಂದ ಪುಂಡರೀಕನ ಶಾಪಕ್ಕೆ ಗುರಿಯಾಗಿ ಗಿಣಿಯಾಗಿ ಜನಿಸಿದ್ದಿತು. ಈಗ ರೇವತಿಯ ಅಂಶದಿಂದ ಹುಟ್ಟಿದ ಸ್ವರ್ಣವತಿಯ ಕಾರ್ಯವನ್ನು ನೆರವೇರಿಸಿಕೊಟ್ಟದ್ದರಿಂದ ಶಾಪ ವಿಮೋಚನೆಯನ್ನು ಹೊಂದಿ ಮೋಕ್ಷಪಡೆಯಿತು. (ಮೃತನಾಯಿತು)

೪೨. ಸುಂದರವೂ ತನಗೆ ಅತಿ ಪ್ರಿಯವೂ ಆದ ಆ ಗಿಣಿಯು ಮೃತಿ ಹೊಂದಲು, ಸ್ವರ್ಣವತೀದೇವಿಯು ಅದನ್ನು ದಹನಮಾಡಿಸಿ ಅದಕ್ಕೆ ಸದ್ಗತಿ ಪ್ರಾಪ್ತಿಯಾಗುವುದಕ್ಕಾಗಿ ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಕೊಡಿಸಿದಳು.

೪೩. ಇತ್ತ ಆಹ್ಲಾದನು ತನ್ನ ಸೇನೆಯನ್ನೆಲ್ಲಾ ಸಿದ್ಧಪಡಿಸಿ ಮಾಘ ಬಹುಳ ಪಂಚಮಿಯದಿನ ಏಳುಲಕ್ಷ ಸೈನ್ಯದೊಡನೆ ಸಂತೋಷದಿಂದ ನೇತ್ರಸಿಂಹನ ಮೇಲೆ ಯುದ್ಧಕ್ಕೆ ಹೊರಟನು

ತಾಲನಾದ್ಯಾಶ್ಚ ತೇ ಶೂರಾಃ ಸ್ವಂಸ್ವಂ ವಾಹನಮಾಶ್ರಿತಾಃ ।
ಆಹ್ಲಾದಂ ರಕ್ಷಯಂತಸ್ತೇ ಯಯುಃ ಪಂಚದಶಾಹಕಂ ॥ ೪೪ ॥

ವಂಗದೇಶಂ ಸಮುಲ್ಲಂಘ್ಯ ಶೀಘ್ರಂ ಪ್ರಾಪ್ತಾ ಹಿಮಾಲಯಂ ।
ರೂಪಣಂ ಪತ್ರಕರ್ತಾರಂ ಬಲಖಾನಿರುವಾಚ ತಂ ॥ ೪೫ ॥

ಗಚ್ಛ ತ್ವಂ ವೀರ ಕವಚೀ ಕರಾಲಾಶ್ವಂ ಸಮಾಸ್ಥಿತಃ ।
ಪಂಚಶಸ್ತ್ರಸಮಾಯುಕ್ತೋ ರಾಜಾನಂ ಶೀಘ್ರಮಾವಹ ॥ ೪೬ ॥

ಯುದ್ಧಚಿಹ್ನಂ ತನೌ ಕೃತ್ವಾ ಮಾಮಾಗಚ್ಛ ತ್ವರಾನ್ವಿತಃ ।
ತಥಾ ಮತ್ವಾ ಶಿಖಂಡ್ಯಂಶೋ ಯಯೌ ಶೀಘ್ರಂ ಸ ರೂಪಣಃ ॥ ೪೭ ॥

---

೪೪. ತಾಲನನೇ ಮುಂತಾದ ವೀರರೆಲ್ಲರೂ ತಮ್ಮತಮ್ಮ ವಾಹನಗಳನ್ನೇರಿಕೊಂಡು, ಆಹ್ಲಾದನ ಅಂಗರಕ್ಷಣೆಯಲ್ಲಿ ನಿರತರಾಗಿ ನಡೆದರು. ಈರೀತಿ ಅವರು ಹದಿನೈದುದಿನಗಳಕಾಲ ಪ್ರಯಾಣಮಾಡಿದರು.

೪೫. ಇವರೆಲ್ಲರೂ ವಂಗದೇಶವನ್ನು ದಾಟಿ ಶೀಘ್ರದಲ್ಲಿ ಹಿಮವತ್ಪರ್ವತ ಪ್ರಾಂತಕ್ಕೆ ಬಂದರು. ಆಗ ಬಲಖಾನಿಯು ತನ್ನ ಕಡೆಯ ರಾಯಸದವನಾದ ರೂಪಣನೆಂಬವನನ್ನು ಕರೆದು :—

೪೬. "ಎಲೈ ವೀರನೆ! ನೀನು ವೀರರಿಗೆ ಉಚಿತವಾದ ಕವಚವನ್ನು ಧರಿಸಿ ಕರಾಳವೆಂಬ ಕುದುರೆಯನ್ನು ಏರಿಕೊಂಡು ಐದುವಿಧವಾದ ಶಸ್ತ್ರಗಳನ್ನು ಧರಿಸಿ ಈಗಲೇ ನೇತ್ರಸಿಂಹನ ಬಳಿಗೆ ಶೀಘ್ರವಾಗಿ ಹೋಗು."

೪೭. "ಅವನಿಗೆ ಯುದ್ಧಚಿಹ್ನೆಯನ್ನು ತೋರಿಸಿ ನಾವು ಯುದ್ಧಕ್ಕೆ ಬಂದಿರುವ ವಿಷಯವನ್ನು ತಿಳಿಸಿ ಜಾಗ್ರತೆ ನನ್ನ ಬಳಿಗೆ ಬರಬೇಕು." ಎಂದು ಹೇಳಿ ಕಳುಹಿಸಿದನು. ಶಿಖಂಡಿಯ ಅಂಶದವನಾದ ಆ ರೂಪಣನು ಬಲಖಾನಿಯ ಈ ಮಾತನ್ನು ಕೇಳಿ "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡು ಜಾಗ್ರತೆಯಾಗಿ ಆ ನೇತ್ರಸಿಂಹ ರಾಜನ ಸಭೆಗೆ ಹೋದನು.

ಸ ದದರ್ಶ ಸಭಾಂ ರಾಜ್ಞೋ ಬಹುಶೂರಸಮನ್ವಿತಾಂ ।
ಪಾರ್ವತೀಯೈರ್ನೃಪೈಃ ಸಾರ್ದ್ಧಂ ಸಹಸ್ರೈರ್ಬಲವತ್ತರೈಃ ॥ ೪೮ ॥

ಸ ಉವಾಚ ನೃಪಶ್ರೇಷ್ಠಂ ನೇತ್ರಸಿಂಹಂ ಮಹಾಬಲಂ ।
ತ್ವತ್ಸುತಾಯಾ ವಿವಾಹಾಯ ಬಲಖಾನಿರ್ಮಹಾಬಲಃ ।
ಸಪ್ತಲಕ್ಷಬಲೈರ್ಗುಪ್ತಃ ಸಂಪ್ರಾಪ್ತಸ್ತವ ರಾಷ್ಟ್ರಕೇ ॥ ೪೯ ॥

ತಸ್ಮಾತ್ತ್ವಂ ಸ್ವಸುತಾಂ ಶೀಘ್ರಮಾಹ್ಲಾದಾಯ ಸಮರ್ಪಯ ।
ಶುಲ್ಕಂ ಮೇ ದೇಹಿ ನೃಪತೇ ಯುದ್ಧರೂಪಂ ಸುದಾರುಣಂ ॥ ೫೦ ॥

ಇತಿ ಶ್ರುತ್ವಾ ವಚಸ್ತಸ್ಯ ಸ ರಾಜಾ ಕ್ರೋಧಮೂರ್ಛಿತಃ ।
ಪಟ್ಟನಾಧಿಪಮಾಜ್ಞಾಯ ಭೂಪಂ ಪೂರ್ಣಬಲಂ ರುಷಾ ।
ಅರುಧತ್ಸ ಕಪಾಟಂ ಚ ತಸ್ಯ ಬಂಧನಹೇತವೇ ॥ ೫೧ ॥

---

೪೮. ಅಲ್ಲಿ ಬಲಶಾಲಿಗಳಾದ ಸಾವಿರಾರುಮಂದಿ ಪಾರ್ವತೀಯ ರಾಜರಿಂದಲೂ ಇತರ ವೀರರಿಂದಲೂ ಕೂಡಿರುವ ರಾಜಶ್ರೇಷ್ಠನಾದ ನೇತ್ರಸಿಂಹನನ್ನು ನೋಡಿದನು

೪೯. ರೂಪಣನು ಅನಂತರ ಆ ನೇತ್ರಸಿಂಹನನ್ನು ಕುರಿತು "ಎಲೈ ರಾಜನೆ! ಪರಾಕ್ರಮಶಾಲಿಯಾದ ಬಲಖಾನಿಯು ನಿನ್ನ ಮಗಳಾದ ಸ್ವರ್ಣವತಿಯ ವಿವಾಹ ಕ್ಕೋಸ್ಕರ ಏಳುಲಕ್ಷ ಸೇನೆಯೊಡನೆ ಬಂದು ನಿನ್ನ ರಾಷ್ಟ್ರದಲ್ಲಿ ನೆಲಸಿರುವನು.

೫೦. ಆದುದರಿಂದ ನೀನು ನಿನ್ನ ಮಗಳನ್ನು ಜಾಗ್ರತೆ ಕರೆತಂದು ಆಹ್ಲಾದ ನಿಗೆ ವಿವಾಹಮಾಡಿಕೊಡು. ಹಾಗಿಲ್ಲದಿದ್ದರೆ ಇದರ ಶುಲ್ಕರೂಪವಾಗಿ ಭಯಂಕರ ವಾದ ಯುದ್ಧವನ್ನು ಹೂಡು" ಎಂಬದಾಗಿ ಹೇಳಿದನು.

೫೧. ರೂಪಣನು ಈರೀತಿ ಹೇಳಿದುದನ್ನು ಕೇಳಿ, ನೇತ್ರಸಿಂಹನು ಕೋಪ ದಿಂದ ಮೈಮರೆತನು. ಆ ನಗರಾಧಿಪನೂ ಶೂರನೂ ಆದ-ಕೊತ್ವಾಲನನ್ನು ಕರೆಯಿಸಿ ರೂಪಣನನ್ನು ಹಿಡಿದು ಕಟ್ಟಿಹಾಕುವುದಕ್ಕೋಸ್ಕರ ಬಾಗಿಲಲ್ಲಿ ತಡೆಯಲು ಅಪ್ಪಣೆ ಮಾಡಿದನು.

ಪಾಶಹಸ್ತಾಞ್ಛೂರಶತಂ ಪಟ್ಟನಾಧಿಪರಕ್ಷಿತಾನ್ ।
ದೃಷ್ಟ್ವಾ ಸ ರೂಪಣೋ ವೀರಃ ಖಡ್ಗಯುದ್ಧಮಚೀಕರತ್ ॥ ೫೨ ॥

ಹತ್ವಾ ತನ್ಮುಕುಟಂ ರಾಜ್ಞೋ ಗೃಹೀತ್ವಾಕಾಶಗೋ ಬಲೀ ।
ಬಲಖಾನಿಂ ತು ಸಂಪ್ರಾಪ್ಯ ಚಿಹ್ನಂ ತಸ್ಮೈ ನ್ಯವೇದಯತ್ ॥ ೫೩ ॥

ಇತಿ ಶ್ರುತ್ವಾ ಪ್ರಸನ್ನಾತ್ಮಾ ಸಪ್ತಲಕ್ಷಬಲೈರ್ಯುತಃ ।
ಅರುಧನ್ನಗರೀಂ ಸರ್ವಾಂ ನೇತ್ರಸಿಂಹೇನ ರಕ್ಷಿತಾಂ ॥ ೫೪ ॥

ನೇತ್ರಸಿಂಹಸ್ತು ಬಲವಾನ್ಪಾರ್ವತೀಯೈರ್ನೃಪೈಃ ಸಹ ।
ಹಿಮತುಂಗತಲಂ ಪ್ರಾಪ್ಯ ಯುದ್ಧಾರ್ಥೀ ತಾನ್ಸಮಾಹ್ವಯತ್ ॥ ೫೫ ॥

---

೫೨. ಆ ದುರ್ಗರಕ್ಷಕನು ಅದರಂತೆಯೇ ತಡೆದನು. ದುರ್ಗರಕ್ಷಕನ ಕಡೆಯ ನೂರಾರುಮಂದಿ ವೀರರು ತನ್ನನ್ನು ಬಿಗಿದು ಕಟ್ಟಲು, ಕೈಯಲ್ಲಿ ಹಗ್ಗವನ್ನು ಹಿಡಿದು ನುಗ್ಗುತ್ತಿರುವುದನ್ನು ನೋಡಿ, ವೀರನಾದ ರೂಪಣನು ಕತ್ತಿಯನ್ನು ಹಿರಿದು ಯುದ್ಧ ಮಾಡಲು ತೊಡಗಿದನು.

೫೩. ಹೀಗೆ ಯುದ್ಧ ಮಾಡುತ್ತಾ ಮಾಡುತ್ತಾ ಆ ನೂರುಮಂದಿಯನ್ನೂ ಕೊಂದುಹಾಕಿ, ನೇತ್ರಸಿಂಹನನ್ನು ಗಾಯಗೊಳಿಸಿ ಅವನ ಕಿರೀಟವನ್ನು ಹಾರಿಸಿಕೊಂಡು ಆಕಾಶಮಾರ್ಗದಿಂದ ಸಾಗಿ ಬಲಖಾನಿಯ ಸಮೀಪಕ್ಕೆ ಬಂದು, ತಾನು ಸಾಹಸ ತೋರಿಸಿದ್ದಕ್ಕೆ ಸಾಕ್ಷಿಯಾಗಿ ಕಿರೀಟವನ್ನು ಅವನಿಗೆ ತೋರಿಸಿ ನಡೆದುದೆಲ್ಲವನ್ನೂ ತಿಳಿಸಿದನು.

೫೪. ಈ ಸಮಾಚಾರವನ್ನು ಕೇಳಿ ಬಲಖಾನಿಯು ಹರ್ಷಯುಕ್ತವಾದ ಮನಸ್ಸಿನಿಂದ ತನ್ನ ಏಳುಲಕ್ಷ ಸೇನೆಯನ್ನೂ ತೆಗೆದುಕೊಂಡು ನೇತ್ರಸಿಂಹನ ರಕ್ಷಣೆಯಲ್ಲಿದ್ದ ಆ ಪಟ್ಟಣವನ್ನು ಬಲವಾಗಿ ಮುತ್ತಿದನು.

೫೫. ಬಲಿಷ್ಠನಾದ ನೇತ್ರಸಿಂಹರಾಜನು ಪಾರ್ವತೇಯದೊರೆಗಳೊಡನೆ ಹಿಮತುಂಗವೆಂಬ ಪ್ರದೇಶಕ್ಕೆಬಂದು, ಎದುರಾಳಿಯನ್ನು ಯುದ್ಧಮಾಡುವುದಕ್ಕೆ ಕರೆದನು.

ಸಹಸ್ರಂ ಚ ಗಜಾಸ್ತಸ್ಯ ಹಯಾ ಲಕ್ಷಂ ಮಹಾಬಲಾಃ ।
ಸಹಸ್ರಂ ಚ ನೃಪಾಃ ಶೂರಾಶ್ಚತುರ್ಲಕ್ಷಪದಾತಿಭಿಃ ॥ ೫೬ ॥

ಯೋಗಸಿಂಹೋ ಗಜೈಃ ಸಾರ್ಧಂ ಬಲಖಾನಿಂ ಸಮಾಹ್ವಯತ್ ।
ಭೋಗಸಿಂಹೋ ಹಯೈಃ ಸಾರ್ಧಂ ಕೃಷ್ಣಾಂಶಂ ಚ ಸಮಾಹ್ವಯತ್ ॥

ವಿಜಯೋ ನೃಪಪುತ್ರಶ್ಚ ಸರ್ವಭೂಪತಿಭಿಃ ಸಹ ।
ದೇವಸಿಂಹಸ್ತಥಾ ಮ್ಲೇಚ್ಛೈ ರೂಪಣಂ ಚ ಸಮಾಹ್ವಯತ್ ॥ ೫೮ ॥

ತಯೋಶ್ಚಾಸೀನ್ಮಹದ್ಯುದ್ಧಂ ಸೇನಯೋಸ್ತತ್ರ ದಾರುಣಂ ।
ನಿರ್ಭಯಾಶ್ಚೈವ ತೇ ಶೂರಾಃ ಪಾರ್ವತೀಯಾಃ ಸಮಂತತಃ ।
ಜಘ್ನುಸ್ತೇ ಶಾತ್ರವೀಂ ಸೇನಾಂ ದ್ವಿಲಕ್ಷಾಂ ವೀರಪಾಲಿತಾಂ ॥ ೫೯ ॥

---

೫೬. ಇವನ ಕಡೆಯಲ್ಲಿ ಸಾವಿರ ಆನೆಗಳೂ, ಒಂದುಲಕ್ಷ ಕುದುರೆಗಳೂ, ಮಹಾಬಲಿಷ್ಠರಾದ ಸಾವಿರಮಂದಿ ಸಾಮಂತರಾಜರೂ, ನಾಲ್ಕುಲಕ್ಷ ಕಾಲಾಳುಗಳೂ, ಸಹ ಇದ್ದರು.

೫೭ ಯೋಗಸಿಂಹನು ಗಜಸೇನಾಧ್ಯಕ್ಷನಾಗಿ ನಿಂತು ಬಲಖಾನಿಯನ್ನು ಯುದ್ಧಕ್ಕೆ ಕರೆದನು. ಭೋಗಸಿಂಹನು ಅಶ್ವಸೇನಾಧಿಪತ್ಯವನ್ನು ವಹಿಸಿ ಕೃಷ್ಣಾಂಶನನ್ನು ಯುದ್ಧಕ್ಕೆ ಕರೆದನು

೫೮. ರಾಜಪುತ್ರನಾದ ವಿಜಯನು ತನ್ನ ಸಾಮಂತರಾಜರನ್ನೊಡಗೊಂಡು ಬಂದನು. ದೇವಸಿಂಹನು ಮ್ಲೇಚ್ಛರನ್ನೊಡಗೊಂಡು ಸನ್ನದ್ಧನಾದನು. ಇವರಿಬ್ಬರೂ ರೂಪಣನಮೇಲೆ ಯುದ್ಧಕ್ಕೆ ನಿಂತರು.

೫೯. ಆಗ ಆ ಎರಡು ಸೈನ್ಯಗಳಿಗೂ ಭಯಂಕರವಾದ ದೊಡ್ಡಯುದ್ಧ ಸಂಭವಿಸಿತು. ಪಾರ್ವತೀಯರಾಜರು ಎಲ್ಲಾ ಕಡೆಯಲ್ಲಿಯೂ ನಿರ್ಭಯವಾಗಿ ಯುದ್ಧಮಾಡಿದರು. ವೀರನಾದ ರೂಪಣನ ಕೈಕೆಳಗಿದ್ದ ಎರಡುಲಕ್ಷ ಸೈನ್ಯವನ್ನೂ ಈ ಪಾರ್ವತೀಯರಾಜರು ಕೊಂದುಹಾಕಿದರು.

ಪ್ರಭಗ್ನಂ ಸ್ವಬಲಂ ದೃಷ್ಟ್ವಾ ಚತ್ವಾರೋ ಮದಮತ್ತಕಾಃ ।
ದಿವ್ಯಾನಶ್ವಾನ್ಸಮಾರುಹ್ಯ ಚಕ್ರುಃ ಶತ್ರೋರ್ಮಹಾವಧಂ ।
ಪುನರುಜ್ಜೀವಿತಂ ಸರ್ವಂ ಢಕ್ಕಾಮೃತರವಾದ್ಬಲಂ ॥ ೬೦ ॥

ಯುದ್ಧಾಯ ಸಂಮುಖಂ ಪ್ರಾಪ ಭೃಗುಶ್ರೇಷ್ಠ ಪುನಃಪುನಃ ।
ಅಹೋರಾತ್ರಂ ರಣಶ್ಚಾಸೀತ್ತೇಷಾಂ ತತ್ರೈವ ದಾರುಣಃ ॥ ೬೧ ॥

ಏವಂ ಸಪ್ತಾಹ್ನಿ ಸಂಜಾತೇ ಯುದ್ಧೇ ಭೀರುಭಯಂಕರೇ ।
ಉಪಾಯೈರ್ಬಹುಭಿರ್ವೀರಾಶ್ಚಕ್ರುಶ್ಚೈವ ರಣಂ ಬಹುಂ ॥ ೬೨ ॥

ಪುನಸ್ತೇ ಜೀವಮಾಪನ್ನಾ ಜಘ್ನುಸ್ತಾನ್ರಿಪುಸೈನ್ಯಪಾನ್ ।
ತಾಲನಾದ್ಯಾಸ್ತು ತೇ ಶೂರಾಃ ದುಃಖಿತಾಸ್ತತ್ರ ಚಾಭವನ್ ।
ನಿರಾಶಾಂ ವಿಜಯೇ ಪ್ರಾಪ್ಯ ಕೃಷ್ಣಾಂಶಂ ಶರಣಂ ಯಯುಃ ॥ ೬೩ ॥

---

೬೦ ತಮ್ಮ ಕಡೆಯ ಅಷ್ಟೊಂದುಸೈನ್ಯವೂ ಬಹುಮಟ್ಟಿಗೆ ನಾಶವಾದುದನ್ನು ಕಂಡು, ಬಲಖಾನಿಯ ಕಡೆಯ ನಾಲ್ಕುಮಂದಿ ವೀರರೂ ರಣೋನ್ಮತ್ತರಾಗಿ ದಿವ್ಯಾಶ್ವಗಳನ್ನು ಏರಿಕೊಂಡು ಶತ್ರುಪಕ್ಷದವರನ್ನು ನಿಶ್ಶೇಷವಾಗುವಂತೆ ಕೊಲ್ಲಲು ಪ್ರಾರಂಭಿಸಿದರು. ಆದರೇನು! ನೇತ್ರಸಿಂಹನು ದೇವದತ್ತವಾದ ಢಕ್ಕಾವಾದ್ಯವನ್ನು ಧ್ವನಿಮಾಡಿದುದರಿಂದ ಅವನ ಕಡೆಯಲ್ಲಿ ನಾಶಹೊಂದಿದ್ದವರೆಲ್ಲರೂ ಪುನಃ ಪುನಃ ಬದುಕುತ್ತಿದ್ದರು.

೬೧. ಎಲೈ ಭೃಗುವಂಶೋತ್ಪನ್ನರೇ! ಕೇಳಿ, ಹೀಗೆ ನೇತ್ರಸಿಂಹನ ಕಡೆಯಲ್ಲಿ ಮೃತರಾಗಿದ್ದವರು ಪುನಃ ಪುನಃ ಎದ್ದು, ಎದುರಿಸಿ ಯುದ್ಧಕ್ಕೆ ಬರುತ್ತಲೇ ಇದ್ದರು. ಈರೀತಿ ಎರಡುಕಡೆಯುವರಿಗೂ ಹಗಲೂ ರಾತ್ರಿ ಎಡೆಬಿಡದೆ ಅತ್ಯಂತ ಭಯಂಕರವಾದ ಯುದ್ಧ ನಡೆಯಿತು.

೬೨. ಅಂಜುಕುಳಿಗಳಿಗೆ ಭಯವನ್ನುಂಟುಮಾಡುವ ಈ ಯುದ್ಧವು ಏಳುದಿನ ಅವಿಚ್ಛಿನ್ನವಾಗಿ ನಡೆಯಿತು. ಬಲಖಾನಿಯ ಕಡೆಯ ವೀರರು ನಾನಾವಿಧವಾದ ಉಪಾಯಗಳಿಂದ ಬಹುಘೋರವಾದ ರೀತಿಯಲ್ಲಿ ಯುದ್ಧಮಾಡಿ ಶತ್ರುಗಳನ್ನು ಸಂಹರಿಸಿದರು.

೬೩. ನೇತ್ರಸಿಂಹನ ಕಡೆಯುವರು ಢಕ್ಕಾಶಬ್ದಮಹಿಮೆಯಿಂದ ಮತ್ತೆ ಬದುಕಿ, ಶತ್ರುಗಳಕಡೆ ಸೇನಾಪತಿಗಳನ್ನೇ ಕೊಂದರು. ಆಗ ತಾಲನ ಮುಂತಾದ ಶೂರರು ಖಿನ್ನರಾಗಿ ತಮ್ಮ ಜಯದ ವಿಷಯದಲ್ಲಿ ನಿರಾಶೆಯನ್ನು ಹೊಂದಿ ಕೃಷ್ಣಾಂಶನಿಗೆ ಶರಣುಹೊಕ್ಕರು.

ತಾನಾಶ್ವಾಸ್ಯ ಸ ಕೃಷ್ಣಾಂಶಸ್ತತ್ರ ದಿವ್ಯಹಯೇ ಸ್ಥಿತಃ ।
ನಭೋಮಾರ್ಗೇಣ ಬಲವಾನ್ಸ್ವರ್ಣವತ್ಯಂತಿಕಂ ಯಯೌ ॥ ೬೪ ॥

ಹರ್ಮ್ಯೋಪರಿ ಸ್ಥಿತಾಂ ದೇವೀಂ ಸರ್ವಶೋಭಾಸಮನ್ವಿತಾಂ ।
ನತ್ವೋವಾಚ ವಚಃ ಶ್ಲಕ್ಷ್ಣಂ ಕಿಂಕರೋಹಮಿಹೋದಯಃ ।
ಶರಣ್ಯಾಂ ತ್ವಾಮುಪಾಗಚ್ಛಂ ಕಾಮಾಕ್ಷೀಮಿವ ಭಾಮಿನಿ ॥ ೬೫ ॥

ವೃತ್ತಾಂತಂ ಕಥಯಾಮಾಸ ಯಥಾಸೀಚ್ಚ ಮಹಾರಣಃ ।
ಶ್ರಮೇಣ ಕರ್ಶಿತಾ ವೀರಾ ನಿರಾಶಾ ಜೀವನೇಽಗಮನ್ ॥ ೬೬ ॥

ಸಾಹ ಚೋದಯಸಿಂಹ ತ್ವಂ ಕಾಮಾಕ್ಷ್ಯಾ ಮಂದಿರಂ ವ್ರಜ ।
ಅಹಂ ಚ ಸ್ವಾಲಿಭಿಃ ಸಾರ್ಧಂ ನವಮ್ಯಾಂ ಪೂಜನೇ ರತಾ ॥ ೬೭ ॥

---

೬೪. ಬಲಶಾಲಿಯಾದ ಕೃಷ್ಣಾಂಶನು ಅವರನ್ನು ಸಮಾಧಾನಗೊಳಿಸಿ ದಿವ್ಯವಾದ ಅಶ್ವವನ್ನೇರಿ ಆಕಾಶ ಮಾರ್ಗದಿಂದ ಸ್ವರ್ಣವತಿಯ ಸಮೀಪಕ್ಕೆ ಹೋದನು.

೬೫-೬೬. ಶ್ರೇಷ್ಠವಾದ ದೇಹಕಾಂತಿಯಿಂದಲೂ ನಾನಾವಿಧವಾದ ಅಲಂಕಾರ ಗಳಿಂದಲೂ ಶೋಭಿಸುತ್ತಾ ಉಪ್ಪರಿಗೆಯಮೇಲೆ ಕುಳಿತಿದ್ದ ಸ್ವರ್ಣವತಿದೇವಿಯನ್ನು ಕಂಡು ನಮಸ್ಕರಿಸಿ ಮೃದುವಾದ ರೀತಿಯಲ್ಲಿ "ಎಲೌ ರಮಣಿಯೇ! ಉದಯ ಸಿಂಹನಾದ ನಾನು ನಿಮ್ಮ ಕಿಂಕರ. ನೀನೇಕಾಮಾಕ್ಷಿಸ್ವರೂಪಳೆಂದು ಭಾವಿಸಿ ನಿನ್ನನ್ನು ಶರಣುಹೊಗುವುದಕ್ಕೆ ನಿನ್ನಬಳಿಗೆ ಬಂದಿದೇನೆ" ಎಂದು ಹೇಳಿದ್ದಲ್ಲದೆ ಅದುವರೆಗೆ ನಡೆದ ಸಮಾಚಾರವನ್ನೂ, ಘೋರಯುದ್ಧವು ನಡೆದ ಪರಿಯನ್ನೂ, ಅವ ಳಿಗೆ ತಿಳಿಸಿದನು. ಮತ್ತು "ಪ್ರಕೃತದಲ್ಲಿ ನಮ್ಮ ಕಡೆಯ ವೀರರು ಶ್ರಮದಿಂದ ಒಹುವಾಗಿ ಬಳಲಿ ಜೀವನದಲ್ಲಿ ನಿರಾಶೆಯ ಸ್ಥಿತಿಯನ್ನು ಹೊಂದಿದ್ದಾರೆ" ಎಂಬ ದಾಗಿಯೂ ತಿಳಿಸಿದನು.

೬೭-೬೮. ಆ ಮಾತನ್ನು ಕೇಳಿ ಸ್ವರ್ಣವತಿಯು "ಎಲೈ ಉದಯಸಿಂಹನೇ! ನೀನು ಕಾಮಾಕ್ಷೀದೇವಾಲಯಕ್ಕೆ ಹೋಗಿ ಆಕೆಯನ್ನು ಆರಾಧಿಸು. ನಾನೂಕೂಡ ನವಮಿಯದಿನ ನನ್ನ ಸಖಿಯರೊಂದಿಗೆ ಕಾಮಾಕ್ಷಿಯ ಪೂಜೆಯನ್ನು ಮಾಡಲು ನಿರತಳಾಗಿ ಅಲ್ಲಿಗೆ ಬಂದು ಸರ್ವೇಷ್ಟಾರ್ಥಪ್ರದಳಾದ ಕಾಮಾಕ್ಷಿಯನ್ನು ಭಕ್ತಿ

ಢಕ್ಕಾಮೃತಸ್ಯ ವಾದ್ಯೇನ ಪೂಜಯೇ ಸರ್ವಕಾಮದಾಂ ।
ಇತಿ ಶ್ರುತ್ವಾ ಸ ಬಲವಾನ್ಸ್ವಸೈನ್ಯಂ ಪ್ರತಿ ಚಾಗಮತ್ ॥ ೬೮ ॥

ಅರ್ಧಶೇಷಾಂ ರಣಾತ್ಸೇನಾಂ ಪರಾಜಾಪ್ಯ ಚ ದುದ್ರುವುಃ ।
ಪಟ್ಟನಾಖ್ಯಪುರೇ ಪ್ರಾಪ್ತಾ ಜಯಂ ಪ್ರಾಪ್ಯ ಮಹಾಬಲಾಃ ॥ ೬೯ ॥

ಪರಾಜಿತೇ ರಿಪೌ ತಸ್ಮಿನ್ನೇತ್ರಸಿಂಹಃಸುತೈಃ ಸಹ ।
ಗೃಹಮಾಗತ್ಯ ಬಲವಾನ್ವಿಪ್ರೇಭ್ಯೋ ಗೋಧನಂ ದದೌ ॥ ೭೦ ॥

ನವಮ್ಯಾಂ ಪಿತರಂ ಪ್ರಾಹ ದೇವೀ ಸ್ವರ್ಣವತೀ ತದಾ ।
ಕಾಮಾಕ್ಷೀ ಸೇವನೇನಾಶು ಕುರು ಯಾಗೋತ್ಸವಂ ಮಮ ।
ಯತ್ಪ್ರಸಾದಾಚ್ಚ ವಿಜಯೀ ದುರ್ಜಯೇಭ್ಯೋಽಭವದ್ಭವಾನ್ ॥ ೭೧ ॥

---

ವಾದ್ಯವಾದನದಿಂದ ಸೇವೆಮಾಡುವೆನು'' ಎಂದು ಹೇಳಿದಳು. ಸ್ವರ್ಣವತಿಯು ಆಡಿದ ಈ ಮಾತನ್ನು ಕೇಳಿ ಬಲಿಷ್ಠನಾದ ಅವನು ತನ್ನ ಶಿಬಿರಕ್ಕೆ ಬಂದನು.

೬೯. ಮಹಾಬಲಿಷ್ಠರಾದ ನೇತ್ರಸಿಂಹನ ಕಡೆಯವರು ಶತ್ರುಪಕ್ಷದಲ್ಲಿ ಉಳಿದಿದ್ದ ಅರ್ಧಭಾಗ ಸೈನ್ಯವನ್ನೂ ಸೋಲಿಸಿ ಓಡಿಸಿದರು. ಈರೀತಿ ಜಯಪಡೆದ ಮಹಾಬಲಶಾಲಿಗಳಾದ ಅವರು ತಮ್ಮ ಸ್ಥಳವಾದ ಪಟ್ಟಣಕ್ಕೆ ಹಿಂದಿರುಗಿದರು.

೭೦. ಈರೀತಿ ನೇತ್ರಸಿಂಹನು ಶತ್ರುವನ್ನು ಸಂಪೂರ್ಣವಾಗಿ ಸೋಲಿಸಿ ತನ್ನ ಮಕ್ಕಳೊಂದಿಗೆ ಹಿಂದಿರುಗಿ ಊರಿಗೆಬಂದು ಬ್ರಾಹ್ಮಣರಿಗೆ ಸಮೃದ್ಧಿಯಾಗಿ ಗೋದಾನಗಳನ್ನು ಮಾಡಿದನು.

೭೧ ಬಳಿಕ ಸ್ವರ್ಣವತಿಯು ತನ್ನ ತಂದೆಯನ್ನು ಕುರಿತು '' ಈ ನವಮಿಯ ದಿವಸ ನಾನು ಕಾಮಾಕ್ಷೀದೇವಿಗೆ ನನ್ನ ಮನಸ್ತೃಪ್ತಿಯಾಗುವಂತೆ ಯಾಗೋತ್ಸವವನ್ನು ಮಾಡಿಸಿ ದೇವಿಯನ್ನು ಮೆಚ್ಚಿಸಬೇಕು. ಅದಕ್ಕೆ ಈ ಕೂಡಲೆ ಏರ್ಪಡಿಸಿ. ಆ ದೇವಿಯ ಅನುಗ್ರಹದಿಂದಲೇ ನೀವು ಜಯಿಸಲಶಕ್ಯರಾದ ಶತ್ರುಗಳನ್ನು ಜಯಿಸಿದ್ದೀರಿ'' ಎಂದಳು.

ಇತಿ ಶ್ರುತ್ವಾ ಪಿತಾ ಪ್ರಾಹ ಸ್ವಪ್ನೋ ದೃಷ್ಟಸ್ತಥಾ ಮಯಾ ।
ಪೂಜನಾನ್ಮಂಗಲಂ ರಾಜ್ಞಾಂ ನೋ ಚೇದ್ವಿಘ್ನೋ ಹಿ ಶೋಭನೇ ॥ ೭೨ ॥

ಪಿತ್ರೋಕ್ತ್ಯೈವಂ ನಿಶಾಯಾಂ ತು ಸಾ ಸುತಾ ಪಿತುರಾಜ್ಞಯಾ ।
ಢಕ್ಕಾವ್ಯೃತಸ್ಯ ವಾದ್ಯೇನ ಕಾಮಾಕ್ಷೀಮಂದಿರಂ ಯಯೌ ॥ ೭೩ ॥

ಕೃಷ್ಣಾಂಶೋ ಮಾಲ್ಯಕಾರಸ್ಯ ವಧೂರ್ಭೂತ್ವಾ ಸಮಾಗತಃ ।
ಢಕ್ಕಾವ್ಯೃತಂ ಚ ನಾರೀಭ್ಯೋ ಗೃಹೀತ್ವಾ ತ್ವರಿತೋ ಯಯೌ ॥ ೭೪ ॥

ಏತಸ್ಮಿನ್ನಂತರೇ ವೀರಾಃ ಷಷ್ಟಿರ್ವಾಹನಸಂಯುತಾಃ ।
ಢಕ್ಕಾರ್ಥಂ ಪ್ರಯಯುಃ ಶೀಘ್ರಂ ಸರ್ವಶಸ್ತ್ರೈಃ ಸಮುದ್ಯತಾಃ ॥ ೭೫ ॥

---

೭೨. ಮಗಳಾದ ಸ್ವರ್ಣವತಿಯು ಹೇಳಿದ ಈ ಮಾತನ್ನು ಕೇಳಿ ನೇತ್ರಸಿಂಹನು ಅವಳನ್ನು ಕುರಿತು "ಎಲೌ ಶೋಭನೆಯೇ! ನನಗೂ ಹೀಗೆಯೇ ಕನಸಾಯಿತು. ಕಾಮಾಕ್ಷಿಯ ಪೂಜೆಯಿಂದಲೇ ರಾಜರಿಗೆ ಮಂಗಳಗಳುಂಟಾಗುವುವು. ಇಲ್ಲದಿದ್ದರೆ ವಿಘ್ನಗಳೇ ಸಂಭವಿಸುವುವು ಇದುನಿಜ." ಎಂದನು.

೭೩. ತನ್ನ ತಂದೆಯು ಹೀಗೆ ಹೇಳಲಾಗಿ ಸ್ವರ್ಣವತಿಯು ತಂದೆಯ ಅನುಮತಿಯಿಂದ ಆ ರಾತ್ರಿ ಢಕ್ಕಾವಾದ್ಯವನ್ನು ಬಾರಿಸುತ್ತ ಕಾಮಾಕ್ಷೀ ದೇವಾಲಯಕ್ಕೆ ಹೋದಳು.

೭೪. ಆ ವೇಳೆಗೆ ಸರಿಯಾಗಿ ಕೃಷ್ಣಾಂಶನು ಹೂವಾಡಿಗಿತ್ತಿಯ ವೇಷವನ್ನು ಧರಿಸಿ ಬಂದು, ಈ ಹೆಂಗಸರ ಕೈಯಲ್ಲಿದ್ದ ಢಕ್ಕಾವಾದ್ಯವನ್ನು ಕಸಿದುಕೊಂಡು ವೇಗವಾಗಿ ಪಲಾಯನಮಾಡಿದನು.

೭೫. ಇದನ್ನು ಕಂಡು ಆ ಢಕ್ಕಾವಾದ್ಯವನ್ನು ಕಿತ್ತುಕೊಳ್ಳುವುದಕ್ಕಾಗಿ ಅರವತ್ತುಮಂದಿ ಶೂರರು ತಮ್ಮ ವಾಹನಗಳನ್ನೇರಿಕೊಂಡು ಎಲ್ಲಾ ಶಸ್ತ್ರಗಳನ್ನೂ ಹಿಡಿದುಕೊಂಡು ಸನ್ನದ್ಧರಾಗಿ ಹೊರಟು ಪಲಾಯನಮಾಡುವವಳನ್ನು ಬೆನ್ನಟ್ಟಿ ವೇಗದಿಂದ ಹೋದರು.

ತಾನಾಗತಾನ್ಸ ಬಲವಾನ್ದೃಷ್ಟ್ವಾ ಖಡ್ಗಂ ಗೃಹೀತವಾನ್ ।
ಪಂಚಪಂಚಾಶತಃ ಶೂರಾನನಯದ್ಯಮಸಾದನಂ ॥ ೭೬ ॥
ಕೃಷ್ಣಾಂಶಸ್ತ್ವರಿತೋ ಗತ್ವಾ ರೂಪಣೋ ಯತ್ರ ತಿಷ್ಠತಿ ।

ಢಕ್ಕಾಮೃತಂ ಚ ಸಂಪ್ರಾಪ್ಯ ಹಯಾರೂಢೋ ಯಯೌ ಸಭಾಂ ॥ ೭೭ ॥
ಹೃತೇ ಢಕ್ಕಾಮೃತೇ ದಿವ್ಯೇ ನೇತ್ರಸಿಂಹೋ ಭಯಾತುರಃ ।

ಐಂದ್ರಂ ಯಜ್ಞಂ ತಥಾ ಕೃತ್ವಾ ಹವನಾಯ ಪರೋಽಭವತ್ ॥ ೭೮ ॥
ಪ್ರಭಾತೇ ಸಮನುಪ್ರಾಪ್ತೇ ತೇ ವೀರಾಃ ಸ್ವಬಲೈಃ ಸಹ ।

ತರಸಾ ಪ್ರಯಯುಃ ಸರ್ವೇ ಗಜೋಷ್ಟ್ರಹಯಸಂಸ್ಥಿತಾಃ ।
ದಿನಾಂತೇ ಪ್ರಾಪ್ತವಂತಶ್ಚ ಯತ್ರಾಭೂತ್ಸ ಮಹಾರಣಃ ॥ ೭೯ ॥

---

೭೬. ಹೂವಾಡಿಗಿತ್ತಿಯ ವೇಷಧಾರಿಯಾದ ಕೃಷ್ಣಾಂಶನು, ನೇತ್ರಸಿಂಹನ ಕಡೆಯವರು ಈರೀತಿ ಬೆನ್ನಟ್ಟಿ ಬಂದುದನ್ನು ಕಂಡು, ಕತ್ತಿಯನ್ನು ಹಿರಿದುನಿಂತು ಹೋರಾಡಿ ಅವರಲ್ಲಿ ಐವತ್ತೈದು ಮಂದಿಯನ್ನು ಸಂಹರಿಸಿ ಯಮಸದನಕ್ಕೆ ಕಳುಹಿಸಿದನು.

೭೭. ಮಿಕ್ಕವರು ಹೆದರಿ ಓಡಿದರು. ಬಳಿಕ ಅವನು ಢಕ್ಕಾವಾದ್ಯ ಸಹಿತವಾಗಿ ಕುದುರೆಯನ್ನೇರಿ ವೇಗವಾಗಿ ಹೋಗಿ ರೂಪಣನಿದ್ದ ಸ್ಥಳವನ್ನು ಸೇರಿದನು.

೭೮. ಹೀಗೆ ತನ್ನ ದಿವ್ಯವಾದ ಆ ಢಕ್ಕಾವಾದ್ಯವನ್ನು ಶತ್ರುವು ಅಪಹರಿಸಲಾಗಿ ನೇತ್ರಸಿಂಹನು ಭಯದಿಂದ ಬಹುಕಳವಳಪಡುತ್ತ ಐಂದ್ರವೆಂಬ ಯಾಗವನ್ನು ಮಾಡಲು ಆರಂಭಿಸಿ ಹೋಮ ಮಾಡುವುದಕ್ಕೆ ತೊಡಗಿದನು.

೭೯. ಬೆಳಗಾಗುತ್ತಲೆ ಆ ವೀರರೆಲ್ಲರೂ ಆನೆ ಒಂಟೆ ಕುದುರೆ ಮೊದಲಾದ ತಮ್ಮ ವಾಹನಸಮೇತವಾದ ಸೇನೆಯೊಡನೆ ಶೀಘ್ರವಾಗಿ ಪ್ರಯಾಣಹೊರಟು ಸಾಯಂಕಾಲದ ಹೊತ್ತಿಗೆ ಯುದ್ಧನಡೆದಿದ್ದ ಸ್ಥಳಕ್ಕೆ ಬಂದರು.

ಕೃಷ್ಣಾಂಶಃ ಪೂಜಯಿತ್ವಾ ತಂ ದಧ್ಮೌ ಢಕ್ಕಾಮ್ಮೃತಂ ಬಲೀ ।
ತಚ್ಛಬ್ದೇನ ಮೃತಾ ವೀರಾಃ ಪುನರುಜ್ಜೀವಿತಾಸ್ತದಾ ॥ ೮೦ ॥

ಸಪ್ತಲಕ್ಷಬಲಂ ತಸ್ಯ ಪುನಃ ಪ್ರಾಪ್ತಂ ಮುದಾತುರಂ ।
ರುರೋಧ ನಗರೀಂ ಸರ್ವಾಂ ದಧ್ಮೌ ವಾದ್ಯಾನ್ಯನೇಕಶಃ ॥ ೮೧ ॥

ರುದ್ಧೇ ತು ನಗರೇ ತಸ್ಮಿನ್ನೇತ್ರಸಿಂಹೋ ಭಯಾತುರಃ ।
ಸ್ವಾತ್ಮಾನಮರ್ಪಯಾಮಾಸ ವಹ್ನೌ ಶಕ್ರಾಯ ಧೀಮತೇ ॥ ೮೨ ॥

ತದಾ ಪ್ರಸನ್ನೋ ಭಗವಾನುವಾಚ ನೃಪತಿಂ ಪ್ರತಿ ।
ರಾಮಾಂಶೋಽಯಂ ಚ ಕೃಷ್ಣಾಂಶೋ ಭುವಿ ಜಾತೌ ಕಲ್ಯೈಕಯಾ ॥ ೮೩ ॥

---

೮೦. ಅಲ್ಲಿ ಕೃಷ್ಣಾಂಶನು ಇಂದ್ರನನ್ನು ಪೂಜಿಸಿ ಆ ಢಕ್ಕಾವಾದ್ಯವನ್ನು ಬಾರಿಸಿದನು. ಆ ಶಬ್ದವನ್ನು ಕೇಳಿ ಇವನ ಕಡೆಯಲ್ಲಿ ಮೃತರಾಗಿದ್ದ ಶೂರರೆಲ್ಲರೂ ಪುನಃ ಬದುಕಿದರು.

೮೧. ಹೀಗೆ ಕೃಷ್ಣಾಂಶನಿಗೆ ರಣಮತ್ತವಾದ ಏಳುಲಕ್ಷ ಸೈನ್ಯವೂ ಪುನಃ ಸಿಕ್ಕಿದಂತಾಯ್ತು. ಅನಂತರ ಅವರೆಲ್ಲರೂ ಅನೇಕ ವಿಧವಾದ ವಾದ್ಯಗಳನ್ನು ಬಾರಿಸುತ್ತಾ ಉತ್ಸಾಹದಿಂದ ಬಂದು ನೇತ್ರಸಿಂಹನ ಪಟ್ಟಣದ ಸುತ್ತಲೂ ಬಲವಾಗಿ ಮುತ್ತಿದರು.

೮೨. ಈ ರೀತಿ ಶತ್ರುಗಳು ಬಂದು ತನ್ನ ಪಟ್ಟಣವನ್ನು ಪುನಃ ಮುತ್ತಿಗೆ ಹಾಕಲಾಗಿ, ನೇತ್ರಸಿಂಹನು ಭಯದಿಂದ ಕಳವಳಗೊಂಡು ಮೇಧಾವಿಯಾದ ಇಂದ್ರನನ್ನು ಉದ್ದೇಶಿಸಿ ಯಾಗಮಾಡತೊಡಗಿ ತನ್ನ ಶರೀರವನ್ನೇ ಅಗ್ನಿಗೆ ಆಹುತಿಯಾಗಿ ಸಮರ್ಪಿಸಿದನು.

೮೩. ಪೂಜ್ಯನಾದ ಇಂದ್ರನು ಆ ಕ್ಷಣವೇ ಪ್ರಸನ್ನನಾಗಿ ಆ ದೊರೆಯನ್ನು ಕುರಿತು " ಎಲೈ ದೊರೆಯೇ! ಈ ಆಹ್ಲಾದ ಕೃಷ್ಣಾಂಶ ಇಬ್ಬರು ಕ್ಷತ್ರಿಯರೂ ಬಲರಾಮ, ಕೃಷ್ಣ ಇವರ ಒಂದೊಂದು ಅಂಶದಿಂದ ಭೂಲೋಕದಲ್ಲಿ ಜನ್ಮವೆತ್ತಿದ್ದಾರೆ.

ತಸ್ಮೈ ಯೋಗ್ಯಾಯ ಸಾ ಕನ್ಯಾ ರಾಮಾಂಶಾಯ ಯಶಸ್ವಿನೇ ।
ಯೋಗಿನೀಯಂ ಸ್ವರ್ಣವತೀ ರೇವತ್ಯಂಶಾವತಾರಿಣೀ ॥ ೮೪ ॥

ಇತ್ಯುಕ್ತ್ವಾ ಚ ಸ್ವಯಂ ದೇವೋ ಢಕ್ಕಾಮೃತಮುಮಾಪ್ರಿಯಂ ।
ಹೃತ್ವಾ ವಹ್ನೌ ಸಮಾಕ್ಷಿಪ್ಯ ದುರ್ಗಾಯೈ ಸಂನ್ಯವೇದಯತ್ ॥ ೮೫ ॥

ಗತೇ ತಸ್ಮಿನ್ಸುರಪತೌ ಸ ರಾಜಾ ಬ್ರಾಹ್ಮಣೈಃ ಸಹ ।
ಮಹೀಪತಿಂ ಪ್ರತಿ ಯಯೌ ಮೇಲನಾರ್ಥಂ ಸಮುದ್ಯತಃ ॥ ೮೬ ॥

ತಥಾಗತಂ ನೃಪಂ ದೃಷ್ಟ್ವಾ ಕೃಷ್ಣಾಂಶಶ್ಚ ಮಹೀಪತಿಃ ।
ಆಹ್ಲಾದಮಾತುಲಃ ಪ್ರಾಹ ಮಾನ್ಯಃ ಸರ್ವಬಲೈಃ ಸದಾ ॥ ೮೭ ॥

ರಾಜನ್ನಯಂ ಸ ಬಲವಾನಾಹ್ಲಾದಃ ಸಾನುಜೈಃ ಸಹ ।
ಮತ್ಪಂಕ್ತೌ ನ ಸ್ಥಿತೋ ವೀರಃ ಕುಲೇ ಹೀನತ್ವಮಾಗತಃ ॥ ೮೮ ॥

---

೮೪. "ನಿನ್ನ ಮಗಳಾದ ಈ ಸ್ವರ್ಣವತಿಯೂ ಸಹ ರೇವತೀ ಅಂಶದಿಂದ ಹುಟ್ಟಿದ ಯೋಗಿನಿಯು. ಆದುದರಿಂದ ನೀನು ಕೀರ್ತಿಶಾಲಿಯೂ ಬಲರಾಮಾಂಶ ಸಂಭೂತನೂ ಯೋಗ್ಯನೂ ಆದ ಆಹ್ಲಾದನಿಗೆ ನಿನ್ನ ಮಗಳನ್ನು ಕೊಟ್ಟು ವಿವಾಹ ಮಾಡು" ಎಂದು ಹೇಳಿದನು.

೮೫. ದೇವೇಂದ್ರನು ಈ ರೀತಿಯಾಗಿ ಹೇಳಿ ಪಾರ್ವತೀದೇವಿಗೆ ಪ್ರಿಯವಾದ ಆ ಢಕ್ಕಾ ವಾದ್ಯವನ್ನು ತರಿಸಿ ದುರ್ಗಾದೇವಿಯ ಪ್ರೀತ್ಯರ್ಥವಾಗಿ ಆ ವಾದ್ಯವನ್ನು ತಾನೇ ಅಗ್ನಿಯಲ್ಲಿ ಸಮರ್ಪಿಸಿದನು.

೮೬. ಬಳಿಕ ಇಂದ್ರನು ತನ್ನ ಲೋಕಕ್ಕೆ ಹಿಂದಿರುಗಿದಮೇಲೆ ಆ ನೇತ್ರಸಿಂಹ ರಾಜನು ಈ ಕೃಷ್ಣಾಂಶನ ಕುಲದೊಡನೆ ಸಂಬಂಧ ಬೆಳಸಲು ಸಿದ್ಧನಾಗಿ ಬ್ರಾಹ್ಮಣ ರನ್ನು ಮುಂದುಮಾಡಿಕೊಂಡು ಹೋದನು.

೮೭. ಹೀಗೆ ತಮ್ಮ ಸಂಬಂಧ ಬೆಳಸಲು ಬಂದಿರುವ ನೇತ್ರಸಿಂಹನನ್ನು ನೋಡಿ, ಕೃಷ್ಣಾಂಶ ಆಹ್ಲಾದರ ಮಾತುಲನಾದ ಮಹೀಪತಿರಾಜನು "ಎಲೈ ರಾಜನೇ! ಸರ್ವದಾ ಸಮಸ್ತ ಸೇನೆಗಳಿಂದ ಕೂಡಿದವನಾದ್ದರಿಂದ ಮಾನ್ಯನೆನಿಸಿದವನೇ!"

೮೮. "ಓ ಪ್ರಭುವೇ! ಬಲಿಷ್ಠನಾದ ಈ ಆಹ್ಲಾದನೂ ಇವನ ತಮ್ಮಂದಿರೂ ಸಹ ಹೀನಕುಲಕ್ಕೆ ಸೇರಿದವರಾದುದರಿಂದ ನನ್ನ ಪಂಕ್ತಿಗೆ ಎಂದೂ ಅರ್ಹರಲ್ಲ.

ಆರ್ಯಾಭೀರೀ ಸ್ಮೃತಾ ತೇಷಾಂ ಕಿಂ ತ್ವಯಾ ವಿದಿತಂ ನ ಹಿ ।
ಯದಿ ದೇಯಾ ತ್ವಯಾ ಕನ್ಯಾ ತರ್ಹಿ ತ್ವಂ ಹೀನತಾಂ ವ್ರಜ ॥ ೬೯ ॥

ಅತಸ್ತ್ವಂ ವಚನಂ ಚೇದಂ ಕುಲಯೋಗ್ಯಂ ಶೃಣುಷ್ವ ಭೋಃ ।
ಚತುರೋ ಬಾಲಕಾನ್ನೀಚಾಂಸ್ತಾಲನೇನ ಸಮನ್ವಿತಾನ್ ॥ ೯೦ ॥

ವಂಚಯಿತ್ವಾ ವಿವಾಹಾರ್ಥೇ ಶಿರಾಂಸ್ಯೇಷಾಂ ಸಮಾಹರ ।
ಮಂಡಪಾಂತೇ ಮಖಂ ಕೃತ್ವಾ ಚಾಮುಂಡಾಯೈ ಸಮರ್ಪಯ ॥ ೯೧ ॥

ತ್ವತ್ಕನ್ಯಯಾ ಸಮಾಹೂತಾ ವೀರಾ ವೈ ರೇವತೀ ಹಿ ಸಾ ।
ಪಶ್ಚಾತ್ಕನ್ಯಾಂ ಸ್ವಯಂ ಹತ್ವಾ ಕುಲಕಲ್ಯಾಣಮಾವಹ ॥ ೯೨ ॥

ನೋಚೇದ್ಭವಾನ್ ಕ್ಷಯಂ ಯಾಯಾತ್ಸಕುಲೋ ಜಂಬುಕೋ ಯಥಾ ।
ಇತ್ಯುಕ್ತ್ವಾ ಸ ಯಯೌ ಸಾರ್ಧಂ ಯತ್ರಾಹ್ಲಾದಸ್ಯ ಬಾಂಧವಃ ॥ ೯೩ ॥

---

೮೯-೯೧. "ಇವರ ಪೂಜ್ಯತಾಯಿ ಶೂದ್ರಸ್ತ್ರೀ ಎಂಬುದು ನಿನಗೇ ಗೊತ್ತಿಲ್ಲವೇ? ನಿನ್ನ ಕುಮಾರಿ ಸ್ವರ್ಣವತಿಯನ್ನು ಇವರಿಗೆ ಕೊಡುವುದಾದರೆ ನೀನೂ ಕುಲಹೀನತೆಯನ್ನು ಹೊಂದುತ್ತೀ ; ಆದುದರಿಂದ ನೀನು ನಿನ್ನ ವಂಶ ಗೌರವಕ್ಕೆ ಅನುರೂಪವಾಗಿ ರಬೇಕಾದರೆ ನಾನು ಹೇಳುವ ಮಾತನ್ನು ಕೇಳು. ಕೃಷ್ಣಾಂಶನೇ ಮುಂತಾದ ನೀಚರಾದ ನಾಲ್ವರು ಬಾಲಕರನ್ನೂ ಮತ್ತು ತಾಲನನನ್ನೂ ವಿವಾಹದ ನೆವದಿಂದ ಬರಮಾಡಿಕೊಂಡು, ಮೋಸದಿಂದ ಅವರ ಶಿರಚ್ಛೇದ ಮಾಡಿಬಿಡು. ವಿವಾಹಾರ್ಥವಾಗಿ ರಚಿಸಿದ ಮಂಟಪದಲ್ಲೇ ಯಾಗವನ್ನು ಆರಂಭಿಸಿ ಆ ಶಿರಸ್ಸುಗಳನ್ನು ಚಂಡಿಗೆ ಆಹುತಿಯಾಗಿ ಸಮರ್ಪಿಸು."

೯೨. "ನಿನ್ನ ಮಗಳು ಹೇಳಿಕಳುಹಿಸಿದ್ದರಿಂದಲೇ ಈ ವೀರರೆಲ್ಲರೂ ಇಲ್ಲಿಗೆ ಬಂದಿದ್ದಾರೆ. ಅವಳು ರೇವತೀಅಂಶ ಸಂಭೂತಳು, ಅವರನ್ನೆಲ್ಲಾ ವಧಮಾಡಿದ ಮೇಲೆ ನಿನ್ನ ಮಗಳನ್ನೂ ಕೊಂದು ನಿನ್ನ ಕುಲಕ್ಕೆ ಕ್ಷೇಮವುಂಟಾಗುವಂತೆ ಮಾಡು."

೯೩. "ಇಲ್ಲದೆ ಹೋದರೆ ನೀನೂ ಸಹ ಜಂಬುಕರಾಜನಂತೆ ಸಪರಿವಾರನಾಗಿ ನಾಶಹೊಂದುವೆ" ಎಂಬದಾಗಿ ಆಹ್ಲಾದ ಬಂಧುವಾದ ಮಹೀಪತಿರಾಜನು ಹೇಳಿ ತನ್ನ ನಗರಿಗೆ ಹೊರಟು ಹೋದನು.

ಇತಿ ಶ್ರುತ್ವಾ ಸ ಶಲ್ಯಾಂಶಃ ಸುಯೋಧನಮುಖೇರಿತಂ ।
ತಥೇತ್ಯುಕ್ತ್ವೋತ್ಸವಂ ಕೃತ್ವಾ ಮಂಡಪಾಂತೇ ವಿಧಾನತಃ ।
ಆಹ್ಲಾದಸ್ಯ ಸಮೀಪಂ ಸ ಗತ್ವೈತದ್ವಂಚನಾಯ ಹಿ ।
ತಮಾಹ ದಂಡವತ್ಪಾದೌ ಗೃಹೀತ್ವಾ ನೃಪತಿಃ ಸ್ವಯಂ　　॥ ೯೪ ॥

ಭವತೋಂಶಾವತಾರಾಶ್ಚ ಮಯಾ ಜ್ಞಾತಾ ಸುರೋತ್ತಮಾತ್ ।
ನಿರಸ್ತ್ರಾನ್ಪಂಚ ಯುಷ್ಮಾಂಶ್ಚ ಪೂಜಯಿತ್ವಾ ಯಥಾವಿಧಿ ।
ರಾಮಾಂಶಾಯ ಸ್ವಕನ್ಯಾಂ ಚ ದಾಸ್ಯಾಮಿ ಕುಲರೀತಿತಃ　　॥ ೯೫ ॥

ಇತ್ಯಾಹ್ಲಾದಂ ಸಮಾದಿಶ್ಯ ಸ ನೃಪಶ್ಛಲಮಾಶ್ರಿತಃ ।
ದುರ್ಗೋತ್ಸವೇ ಯಯೌ ಗೇಹಂ ತದ್ವಧಾಯ ಸಮುದ್ಯತಃ　　॥ ೯೬ ॥

ಸಹಸ್ರಂ ಮಂಡಪೇ ಭೂಪಾನ್ ಸಂಸ್ಥಾಪ್ಯ ಸ್ವಬಲೈಃ ಸಹ ।
ತಾಲನಾದ್ಯಾಂಶ್ಚ ಷಟ್ ಶೂರಾನ್ ಮಂಡಪಾಂತೇ ಸಮಾಹ್ವಯತ್ ॥ ೯೭ ॥

---

೯೪. ಶಲ್ಯನ ಅಂಶದಿಂದ ಜನಿಸಿದವನಾದ ನೇತ್ರಸಿಂಹನು ಸುಯೋಧನಾಂಶ ಪುರುಷನಾದ ಮಹೀಪತಿರಾಜನಿಂದ ಪ್ರೇರಿತನಾಗಿ ಆದೇರೀತಿ ಮಂಟಪದ ಮಧ್ಯದಲ್ಲಿ ಮಹೋತ್ಸವನಡೆಯುವಂತೆ ಏರ್ಪಡಿಸಿ ಆಹ್ಲಾದನ ಬಳಿಗೆ ಬಂದು ಅವನನ್ನು ಮೋಸಗೊಳಿಸುವುದಕ್ಕಾಗಿ ಸಾಷ್ಟಾಂಗವಾಗಿ ನಮಸ್ಕರಿಸಿ ಅವನ ಪಾದಗಳಿಗೆ ಎರಗಿದನು. ಅನಂತರ ಅವನನ್ನು ಕುರಿತು ಇಂತೆಂದನು.

೯೫. “ ನೀವೆಲ್ಲರೂ ದೇವಾಂಶ ಸಂಭೂತರೆಂದು ಮುನಿಶ್ರೇಷ್ಠರಿಂದ ತಿಳಿಯಬಂದಿತು. ಶಸ್ತ್ರರಹಿತರಾದ ನಿಮ್ಮೈವರನ್ನೂ ಶಾಸ್ತ್ರೋಕ್ತ ರೀತಿಯಿಂದ ಪೂಜಿಸಿ ನಮ್ಮ ಕುಲಪದ್ಧತಿಯಂತೆ ರಾಮಾಂಶನಾದ ನಿನಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುವೆನು.” ಎಂಬದಾಗಿ ಹೇಳಿದನು

೯೬. ಈ ರೀತಿ ಹೇಳಿ ಅವನನ್ನು ಒಪ್ಪಿಸಿದಮೇಲೆ ರಾಜನಾದ ನೇತ್ರಸಿಂಹನು ಆಹ್ಲಾದನೇ ಮೊದಲಾದವರನ್ನು ಮೋಸದಿಂದ ಕೊಲ್ಲುವುದಕ್ಕಾಗಿ ಸಕಲ ಸನ್ನಾಹಗಳನ್ನೂ ಮಾಡಿ ಮನೆಗೆ ಹೋಗಿ ದುರ್ಗಾಪೂಜೆಯನ್ನು ಮಾಡಲು ತೊಡಗಿದನು.

೯೭. ಮತ್ತು ನೂತನವಾಗಿ ರಚಿತವಾದ ಮಂಟಪದಸುತ್ತ ತನ್ನ ಕಡೆಯವರಾಗಿ ಶೂರರಾದ ಸಾವಿರಮಂದಿ ರಾಜರುಗಳನ್ನು ಇರಿಸಿ, ತಾಲನನೇ ಮೊದಲಾದ ಆರು ಮಂದಿ ವೀರರನ್ನೂ ಮಂಟಪದೊಳಕ್ಕೆ ಕರೆಯಿಸಿದನು.

ವಿವಾಹಪ್ರಥಮಾವರ್ತೇ ಯೋಗಸಿಂಹೋಽಸಿಮುತ್ತಮಂ ।
ವರಮಾಹತ್ಯ ಶಿರಸಿ ಜಗರ್ಜ ಬಲವಾನ್ ರುಷಾ ॥ ೯೮ ॥

ತಮಾಹ ತಾಲನೋ ಧೀಮಾನ್ ನ ಯೋಗ್ಯಂ ಭವತಾ ಕೃತಂ ।
ಶ್ರುತ್ವಾಹ ನೇತ್ರಸಿಂಹಸ್ತಂ ಕುಲರೀತಿರಿಯಂ ಬಲಿನ್ ।
ನಿರಾಯುಧೈಃ ಪರೈಃ ಸಾರ್ಧಂ ಶಸ್ತ್ರಿಣಾಂ ಸಂಗರೋ ಹಿ ನಃ ॥ ೯೯ ॥

ಇತಿ ಶ್ರುತ್ವಾ ಯೋಗಸಿಂಹಂ ಕೃಷ್ಣಾಂಶಸ್ತಂ ಸಮಾರುಧತ್ ।
ಭೋಗಸಿಂಹಂ ತಥಾಕೃಷ್ಯ ಬಲಖಾನಿರ್ಗೃಹೀತವಾನ್ ॥ ೧೦೦ ॥

ವಿಜಯಂ ತೃತೀಯಾವರ್ತೇ ಸುಖಖಾನಿರ್ನ್ಯರುಂಧ ವೈ ।
ಚತುರ್ಥಾವರ್ತಕೇ ಶತ್ರುಂ ನೃಪಂ ಪೂರ್ಣಬಲಂ ಶರಂ ।
ರೂಪಣಸ್ತಂ ಗೃಹೀತ್ವಾಶು ಯುಯುಧೇ ತದ್ಬಲೈಃ ಸಹ ॥ ೧೦೧ ॥

---

೯೮. ವಿವಾಹದ ಮೊದಲನೆಯ ಘಟ್ಟ (ಸರದಿ) ದಲ್ಲಿ ಯೋಗಸಿಂಹನು ಉತ್ತಮವಾದ ಕತ್ತಿಯನ್ನು ಹಿರಿದು ವರನಾದ ಆಹ್ಲಾದನ ತಲೆಯಮೇಲೆ ರೋಷದಿಂದ ಬಲವಾಗಿ ಹೊಡೆದು ಗರ್ಜನೆಮಾಡಿದನು.

೯೯. ಆಗ ಮೇಧಾವಿಯಾದ ತಾಲನನು ಯೋಗಸಿಂಹನನ್ನು ಕುರಿತು "ನೀನು ಮಾಡಿದ ಈ ಕೆಲಸ ಯೋಗ್ಯವಾದುದಲ್ಲ" ಎಂದು ಹೇಳಿದನು. ಅದನ್ನು ಕೇಳಿ ನೇತ್ರಸಿಂಹನು, "ಅಯ್ಯಾ ಶೂರನೇ ! ಇದು ನಮ್ಮ ಕುಲಪದ್ಧತಿ. ಆಯುಧ ರಹಿತರಾಗಿರುವ ಅನ್ಯರಮೇಲೆ ಆಯುಧ ಸಮೇತರಾಗಿ ಯುದ್ಧಮಾಡುವುದೇ ನಮ್ಮ ಕುಲಪದ್ಧತಿ" ಎಂದು ಹೇಳಿದನು

೧೦೦. ನೇತ್ರಸಿಂಹನಾಡಿದ ಈ ಮಾತನ್ನು ಕೇಳಿ ಎರಡನೆಯ ಸರದಿಯಲ್ಲಿ ಕೃಷ್ಣಾಂಶನು ಯೋಗಸಿಂಹನನ್ನು ಹೊಡೆಯಲು ಹೋದನು. ತತ್ಕ್ಷಣವೇ ಬಲಖಾನಿಯು ಭೋಗಸಿಂಹನನ್ನು ಎಳೆದು ಹಿಡಿದನು,

೧೦೧. ವಿವಾಹದ ಮೂರನೆಯ ಸರದಿಯಲ್ಲಿ ಸುಖಖಾನಿಯು ವಿಜಯಸಿಂಹನನ್ನು ತಡೆದು ನಿಲ್ಲಿಸಿದನು. ನಾಲ್ಕನೆಯ ಸರದಿಯಲ್ಲಿ ತನ್ನ ಸರ್ವಬಲದೊಡನೆ ಬಂದಿದ್ದ ಶರನೆಂಬ ರಾಜನನ್ನು ರೂಪಣನು ಜಾಗ್ರತೆಯಲ್ಲಿ ಹಿಡಿದು ಅವನ ಸೇನಾಜನರೊಡನೆ ಹೋರಾಡಿದನು.

ಪಂಚಮೇ ಬಹುರಾಜಾನಂ ತಾಲನಶ್ಚ ಸಮಾರುಧತ್ ।
ಷಷ್ಠಾವರ್ತೇ ನೇತ್ರಸಿಂಹಂ ತಥಾಹ್ಲಾದೋ ಗೃಹೀತವಾನ್ ॥ ೧೦೨ ॥

ಸಂಪ್ರಾಪ್ತೇ ತುಮುಲೇ ಯುದ್ಧೇ ಬಹುಶೂರಾಃ ಕ್ಷಯಂ ಗತಾಃ ।
ನಿರಾಯುಧಾಃ ಷಡ್ಬಲಿನಃ ಸಂಕ್ಷಮ್ಯ ವ್ರಣಮುತ್ತಮಂ ॥ ೧೦೩ ॥

ನಿರಾಯುಧಾನ್ರಿಪೂನ್ಸ್ವಾನ್ಸ್ವಾನ್ ಚಕ್ರುಃ ಶಕ್ತಿಪ್ರಪೂಜಕಾಃ ।
ಏತಸ್ಮಿನ್ನಂತರೇ ದೇವಃ ಕಾಲದರ್ಶೀ ಸಮಾಗತಃ ।
ನಭೋಮಾರ್ಗೇಣ ತಾನಶ್ವಾನ್ ತೇಭ್ಯ ಆಗತ್ಯ ಸಂದದೌ ॥ ೧೦೪ ॥

ಬಿಂದುಲಂ ಚೈವ ಕೃಷ್ಣಾಂಶೋ ದೇವಸ್ತತ್ರ ಮನೋರಥಂ ।
ರೂಪಣಶ್ಚ ಕರಾಲಾಶ್ವಂ ಚಾಹ್ಲಾದಸ್ತು ಪಪೀಹಕಂ ॥ ೧೦೫ ॥

---

೧೦೨. ಐದನೆಯ ಸರದಿಯಲ್ಲಿ ಸೇನಾಪತಿಯಾದ ತಾಲನನು ನೇತ್ರಸಿಂಹನ ಕಡೆಯ ಅನೇಕ ರಾಜರನ್ನು ತಡೆದು ಎದುರಿಸಿದನು. ಆರನೆಯ ಸರದಿಯಲ್ಲಿ ಆಹ್ಲಾದನು ನೇತ್ರಸಿಂಹನನ್ನು ಆಕ್ರಮಣಮಾಡಿ ಎದುರಿಸಿದನು.

೧೦೩-೧೦೪. ಹೀಗೆ ಪರಸ್ಪರ ದ್ವಂದ್ವಯುದ್ಧವು ಪ್ರಾಪ್ತವಾಗಲಾಗಿ ಶೂರರ ನೇಕರು ಮಡಿದರು. ತಾಲನನೇ ಮೊದಲಾದ ಆರುಮಂದಿ ವೀರರೂ ನಿರಾಯುಧ ರಾಗಿದ್ದುದರಿಂದ ತಮಗೆ ಏಟುಬಿದ್ದು ಆದ ಗಾಯುಗಳ ನೋವನ್ನು ಸಹಿಸಿಕೊಂಡರು. ತಾವು ಶಕ್ತಿದೇವತಾ ಪೂಜಕರಾದುದರಿಂದ ಆ ಮಹಿಮೆಯಿಂದ ಶತ್ರುಗಳನ್ನೂ ನಿರಾಯುಧರನ್ನಾಗಿ ಮಾಡಿದರು. ಅಷ್ಟರಲ್ಲಿ ತ್ರಿಕಾಲಜ್ಞನಾದ ದೇವಸಿಂಹನು ಅಂತರಿಕ್ಷಮಾರ್ಗದಿಂದ ಬಂದು, ಕೃಷ್ಣಾಂಶನೇ ಮೊದಲಾದ ತನ್ನ ಕಡೆಯವರಿಗೆ ಅವರವರ ದಿವ್ಯಾಶ್ವಗಳನ್ನು ತಂದುಕೊಟ್ಟನು.

೧೦೫. ಬಳಿಕ ಕೃಷ್ಣಾಂಶನು ಬಿಂದುಲವೆಂಬ ಅಶ್ವವನ್ನೂ, ದೇವಸಿಂಹನು ಮನೋರಥವೆಂಬ ಅಶ್ವವನ್ನೂ, ರೂಪಣನು ಕರಾಳವೆಂಬ ಅಶ್ವವನ್ನೂ, ಆಹ್ಲಾದನು ಪಪೀಹಕ ಎಂಬ ಅಶ್ವವನ್ನೂ ಏರಿಕೊಂಡರು.

ಹರಿಣೀಂ ಬಲಖಾನಿಶ್ಚ ತದ್ಭ್ರಾತಾ ಹರಿನಾಗರಂ ।
ಸಿಂಹಿನೀಂ ತಾಲನಃ ಶೂರಃ ಸಮಾರುಹ್ಯ ರಣೋದ್ಯತಃ ॥ ೧೦೬ ॥

ರಾತ್ರೌ ತನ್ನೃಪತೇಃ ಸೇನಾಂ ಹತ್ವಾ ಬದ್ಧ್ವಾ ಚ ತತ್ಪತಿಂ ।
ದೋಲಾಂ ಗೇಹಾಚ್ಚ ನಿಷ್ಕಾಸ್ಯ ಸಪ್ತಭ್ರಮರಕಾರಿತಾಂ ॥ ೧೦೭ ॥

ಸ್ವಸೈನ್ಯಂ ತೇ ಸಮಾಜಗ್ಮುರ್ನಿರ್ಭಯಾ ಬಲವತ್ತರಾಃ ।
ತಾನ್ಸರ್ವಾನ್ನೇತ್ರಸಿಂಹಾದೀನ್ದೃಷ್ಟ್ವಾ ಪಾಹೀತಿ ಜಲ್ಪತಃ ॥ ೧೦೮ ॥

ನಿಗಡೈರೇಕತಃ ಕೃತ್ವಾ ಪಂಚಭೂಪಾನ್ಹಿ ವಂಚಕಾನ್ ।
ಕಾರಾಗಾರೇ ಮಹಾಘೋರೇ ತತ್ರ ತಾನ್ಸನ್ನ್ಯವಾಸಯನ್ ॥ ೧೦೯ ॥

ನೇತ್ರಸಿಂಹೋ ವರೋ ಭ್ರಾತಾ ಸುಂದರಾರಣ್ಯಭೂಮಿಪಃ ।
ಹೇತುಂ ಜ್ಞಾತ್ವಾ ಯಯೌ ಶೀಘ್ರಂ ಮಾಯಾವೀ ಲಕ್ಷಸೈನ್ಯಕಃ ॥೧೧೦॥

---

೧೦೬. ಬಲಖಾನಿಯು ಹರಿಣಿಯೆಂಬ ಕುದುರೆಯನ್ನೂ ಅವನ ತಮ್ಮನಾದ ಸುಖಖಾನಿಯು ಹರಿನಾಗರವೆಂಬ ಅಶ್ವವನ್ನೂ ತಾಲನನು ಸಿಂಹಿನಿಯನ್ನೂ ಏರಿಕೊಂಡು ಯುದ್ಧ ಸನ್ನದ್ಧರಾಗಿ ನಿಂತರು.

೧೦೭. ಆದಿನ ರಾತ್ರಿ ಮಾಡಿದ ಯುದ್ಧದಲ್ಲಿ ನೇತ್ರಸಿಂಹನ ಸೇನೆಯನ್ನೆಲ್ಲಾ ನಾಶಪಡಿಸಿ ಸೇನಾಪತಿಯನ್ನೂ ಕೈಸೆರೆಹಿಡಿದು ಬಂಧಿಸಿ ಏಳುಭ್ರಮರಗಳ ಚಿತ್ರವುಳ್ಳದಾಗಿ ಸ್ವರ್ಣವತಿ ಕುಳಿತಿದ್ದ ಮೇನೆಯನ್ನು ಅರಮನೆಯೊಳಗಿಂದ ಈಚೆಗೆ ತೆಗೆಸಿಕೊಂಡು ಬಂದರು.

೧೦೮-೧೦೯ ಸ್ವಭಾವವಾಗಿ ಬಲಶಾಲಿಗಳಾದುದರಿಂದ ಭಯರಹಿತರಾದ ಆ ತಾಲನಾದಿಗಳು ಆ ಮೇನೆಯ ಸಹಿತ ತಮ್ಮ ಸೈನ್ಯದ ಜತೆಗೆ ಬಂದು ಸೇರಿದರು. ಅನಂತರ ದಿಗಿಲುಬಿದ್ದು "ರಕ್ಷಿಸಿ ; ನಮ್ಮನ್ನು ರಕ್ಷಿಸಿ" ಎಂದು ಅರಿಚಿಕೊಳ್ಳುತ್ತಿರುವ ನೇತ್ರಸಿಂಹನೇ ಮೊದಲಾದವರನ್ನು ನೋಡಿ ಮೋಸಗಾರರಾದ ಆ ಐದುಮಂದಿಯನ್ನೂ ದೃಢವಾದ ಸಂಕೋಲೆಗಳಿಂದ ಬಂಧಿಸಿ ಭಯಂಕರವಾದ ಕಾರಾಗೃಹದಲ್ಲಿರಿಸಿದರು

೧೧೦ ನೇತ್ರಸಿಂಹನ ತಮ್ಮನಾದ ಹರಾನಂದನು ಸುಂದರಾರಣ್ಯ ರಾಜ್ಯದ ಅಧಿಪತಿಯೂ ಮಾಯಾವೀ ವೀರನೂ ಆಗಿದ್ದನು. ಆತನು ತನ್ನ ಸಹೋದರನಿಗೆ ಈರೀತಿಯಾಗಿ ವಿಪತ್ತು ಒದಗಿದುದನ್ನು ನೋಡಿ ಅದರ ಕಾರಣವನ್ನು ತಿಳಿದು ಒಂದು ಲಕ್ಷ ಸೈನ್ಯದೊಡನೆ ಅಲ್ಲಿಗೆ ಬಂದನು.

**ತತ್ರಾಗತ್ಯ ಹರಾನಂದೋ ನಾಮ್ನಾ ತಾನಯುಧದ್ಬಲೀ ।**
**ನೇತ್ರಸಿಂಹಸ್ಯ ಸೈನ್ಯಂ ಚ ಚತುರ್ಲಕ್ಷಂ ತದಾಗಮತ್ ॥ ೧೧೧ ॥**

**ಪಂಚಲಕ್ಷ್ಯೈ ರಣೋ ಘೋರಃ ಸಪ್ತಲಕ್ಷಯುತೈರಭೂತ್ ।**
**ಪಂಚಾಹೋರಾತ್ರಮಾತ್ರಂ ಚ ತಯೋಶ್ಚಾಸೀತ್ಸಂಕುಲಃ ॥ ೧೧೨ ॥**

**ಅರ್ಧಸೈನ್ಯಂ ರಿಪೋಸ್ತತ್ರ ಹತಶೇಷಮುದುದ್ರುವತ್ ।**
**ವಿಸ್ಮಿತಃ ಸ ಹರಾನಂದೋ ರುದ್ರಮಾಯಾವಿಶಾರದಃ ।**
**ಬಲಾಧಿಕ್ಯಯುತಾನ್ ಜ್ಞಾತ್ವಾ ಶಿವಧ್ಯಾನಪರೋऽಭವತ್ ॥ ೧೧೩ ॥**

**ರಚಿತ್ವಾ ಶಾಬರೀಂ ಮಾಯಾಂ ನಾನಾರೂಪವಿಧಾರಿಣೀಂ ।**
**ಪಾಷಾಣಭೂತಾನ್ಸಕಲಾನ್ ಕೃತ್ವಾ ಭೂಪಾನ್ ಸಮಾಯಯೌ ॥ ೧೧೪ ॥**

---

೧೧೧. ಆ ಪ್ರಕಾರ ಹರಾನಂದ ರಾಜನು ಅಲ್ಲಿಗೆ ಬಂದನಂತರ ಶತ್ರುಗಳಾದ ಆಹ್ಲಾದನೇ ಮೊದಲಾದವರೊಡನೆ ಯುದ್ಧಮಾಡಿದನು. ಆ ವೇಳೆಗೆ ನೇತ್ರಸಿಂಹನ ನಾಲ್ಕುಲಕ್ಷ ಸೈನ್ಯವೂ ಈ ಹರಾನಂದನ ಸಹಾಯಕ್ಕೆ ಬಂದು ಸೇರಿತು.

೧೧೨. ಒಟ್ಟು ಐದುಲಕ್ಷ ಸೈನ್ಯಗಳನ್ನೂ ನಡೆಸಿಕೊಂಡು ಹರಾನಂದನು ಶತ್ರುಗಳ ಏಳುಲಕ್ಷ ಸೈನ್ಯಗಳೊಡನೆ ಹೋರಾಡಿದನು. ಐದುದಿನ ಹಗಲೂ ರಾತ್ರಿ ಅವಿಚ್ಛಿನ್ನವಾಗಿ ಯುದ್ಧ ನಡೆಯುವುದರಲ್ಲಿ ಹರಾನಂದನಕಡೆ ಅರ್ಧಸೈನ್ಯವು ನಾಶವಾಯಿತು. ಮಿಕ್ಕಸೈನಿಕರು ದಿಗಿಲುಬಿದ್ದು ಓಡಿಹೋದರು.

೧೧೩. ರುದ್ರಮಾಯಾವಿಶಾರದನಾದ ಹರಾನಂದನನು ಇವನ್ನು ನೋಡಿ ಆಶ್ಚರ್ಯಗೊಂಡು ಶತ್ರುಗಳು ಸಾಮರ್ಥ್ಯದಲ್ಲಿ ತನ್ನನ್ನು ಮೀರಿರುವರೆಂದು ತಿಳಿದು ಪರಮೇಶ್ವರನನ್ನು ಧ್ಯಾನಮಾಡಿದನು.

೧೧೪. ಬಳಿಕ ಪರಮೇಶ್ವರನ ಅನುಗ್ರಹವಶದಿಂದ ನಾನಾರೂಪಗಳನ್ನು ಆಗಿಸಬಲ್ಲ ಶಾಬರಿ ಎಂಬ ಮಾಯಾವಿದ್ಯೆಯನ್ನು ಪ್ರಯೋಗಿಸಿದನು. ಅದರಿಂದ ಶತ್ರುರಾಜರುಗಳೆಲ್ಲರೂ ಕಲ್ಲುಗಳಾಗಿ ಪರಿಣಮಿಸಿದರು. ಈರೀತಿಮಾಡಿ ಮಹಾಬಲಶಾಲಿಯಾದ ಅವನು ಹಿಂದಿರುಗಿದನು.

ಸಸುತಂ ಭ್ರಾತರಂ ಜ್ಯೇಷ್ಠಂ ನೃಪಂ ಪೂರ್ಣಬಲಂ ತತಃ ।
ಮೋಚಯಿತ್ವಾ ಯಯೌ ಗೇಹಂ ಕೃತಕೃತ್ಯೋ ಮಹಾಬಲೀ ॥ ೧೧೫ ॥

ಆಹ್ಲಾದಂ ನಿಗಡೈರ್ಬಧ್ವಾ ಮಾಯಯಾ ಜಡತಾಂ ಗತಂ ।
ನೇತ್ರಸಿಂಹಃ ಸ ಬಲವಾನ್ ಯಯೌ ಸ್ವಂ ದುರ್ಗಮುದ್ಯತಃ ॥ ೧೧೬ ॥

ತಂ ಪ್ರಶಂಸ್ಯಾನುಜಂ ವೀರೋ ವಿಪ್ರೇಭ್ಯಶ್ಚ ದದೌ ಧನಂ ।
ತದಾ ಸ್ವರ್ಣವತೀ ದೀನಾ ಬದ್ಧಂ ಜ್ಞಾತ್ವಾ ಪತಿಂ ನಿಜಂ ।
ಕೃಷ್ಣಾಂಶಾದೀನ್ಮೋಹಿತಾಂಶ್ಚ ಶಂಭುಮಾಯಾವಶಾನುಗಾನ್ ॥ ೧೧೭ ॥

ರುರೋದೋಚ್ಚೈಸ್ತದಾ ದೇವೀಂ ಧ್ಯಾಯಂತೀ ಕಾಮರೂಪಿಣೀಂ ।
ತದಾ ತುಷ್ಟಾ ಜಗದ್ಧಾತ್ರೀ ಮೂರ್ಛಿತಾಂಸ್ತಾನಬೋಧಯತ್ ॥ ೧೧೮ ॥

---

೧೧೫. ಬಳಿಕ ಬಂಧಿತರಾಗಿದ್ದ ತನ್ನ ಕಡೆಯ ರಾಜರ ಸಮೀಪಕ್ಕೆ ಬಂದು ಪೂರ್ಣಬಲಶಾಲಿಯೆನಿಸಿದ ತನ್ನ ಅಣ್ಣನಾದ ನೇತ್ರಸಿಂಹನನ್ನು ಅವನ ಮಕ್ಕಳೊಡನೆ ಬಂಧನದಿಂದ ಬಿಡಿಸಿ ಕೃತಕೃತ್ಯನಾದ ಹರಾನಂದನು ತನ್ನ ಮನೆಗೆ ಹೋದನು.

೧೧೬. ಇಷ್ಟಾದಮೇಲೆ ಬಲಿಷ್ಠನಾದ ನೇತ್ರಸಿಂಹನು ಶಾಬರೀಮಾಯೆಯಿಂದ ಜಡನಾಗಿ ಬಿದ್ದಿರುವ ಆಹ್ಲಾದನನ್ನು ಬಲವಾಗಿ ಬಂಧಿಸಿ ತನ್ನ ದುರ್ಗಕ್ಕೆ ಬಂದು ತಮ್ಮನಾದ ವೀರಾಗ್ರಣಿ ಹರಾನಂದನನ್ನು ಹೊಗಳಿ ಈ ಅಪಮೃತ್ಯು ಪರಿಹಾರ ವಾದುದಕ್ಕೆ ಬ್ರಾಹ್ಮಣರಿಗೆ ಸಮೃದ್ಧಿಯಾಗಿ ದ್ರವ್ಯವನ್ನು ದಾನಮಾಡಿದನು.

೧೧೭. ತನ್ನ ಸ್ವಾಮಿಯಾದ ಆಹ್ಲಾದನು ಬಂಧಿತನಾಗಿರುವುದನ್ನೂ ಕೃಷ್ಣಾಂಶ ಮೊದಲಾದವರು ಶಾಬರೀಮಾಯೆಯಿಂದ ಮೂರ್ಛಿತರಾಗಿ ಬಿದ್ದಿರುವುದನ್ನೂ, ಸ್ವರ್ಣವತಿಯು ನೋಡಿ ದೀನತೆಯಿಂದ ಗಟ್ಟಿಯಾಗಿ ಅತ್ತಳು.

೧೧೮. ಬಳಿಕ ಸ್ವಲ್ಪ ಹೊತ್ತಾದಮೇಲೆ ಇಚ್ಛಾನುಸಾರ ರೂಪವನ್ನು ಧರಿಸುವ ಮಹಾತ್ಮೆಯುಳ್ಳ ದುರ್ಗಾದೇವಿಯನ್ನು ಧ್ಯಾನಮಾಡಿದಳು. ಆಗ ದೇವಿಯು ಪ್ರಸನ್ನತೆ ಹೊಂದಿ ಮೂರ್ಛಿತರಾಗಿರುವ ಕೃಷ್ಣಾಂಶನೇ ಮೊದಲಾದವರನ್ನೆಲ್ಲಾ ಎಚ್ಚರಗೊಳಿಸಿದಳು.

**ತೇ ಸರ್ವೇ ಚೇತನಾಂ ಪ್ರಾಪ್ತಾಃ ಪ್ರಾಹುಃ ಸ್ವರ್ಣವತೀಂ ಮುದಾ ।**
**ಕ್ವಾಸ್ಥಿತೋ ಬಂಧುರಾಹ್ಲಾದೋ ದೇವಿ ತ್ವಂ ಕಾರಣಂ ವದ ॥ ೧೧೯ ॥**

**ಯಥಾ ಬದ್ಧಃ ಸ್ವಯಂ ಸ್ವಾಮೀ ಕಥಯಾಮಾಸ ಸಾ ತಥಾ ।**
**ಅಹಂ ಶುಕೀ ಭವಾಮ್ಯದ್ಯ ಭವಾನ್ಬಿಂದುಲಸಂಸ್ಥಿತಃ ॥ ೧೨೦ ॥**

**ಇತ್ಯುಕ್ತ್ವಾ ಸಾ ಶುಕೀ ಭೂತ್ವಾ ಕೃಷ್ಣಾಂಶೇನ ಸಮನ್ವಿತಾ ।**
**ಯತ್ರಾಸ್ತೇ ತತ್ಪತಿರ್ಬದ್ಧಸ್ತತ್ರ ಸಾ ಕಾಮಿನೀ ಯಯೌ ॥ ೧೨೧ ॥**

**ಕೃಷ್ಣಾಂಶೋಽಪಿ ಹಯಾರೂಢೋ ನಭೋಮಾರ್ಗೇಣ ಚಾಪ್ತವಾನ್ ।**
**ಆಭೀರೀಂ ಮೂರ್ತಿಮಾಸಾದ್ಯ ಸ್ವಾಮಿನಂ ಪ್ರತಿ ಸಾ ಯಯೌ ॥ ೧೨೨ ॥**

**ಆಶ್ವಾಸ್ಯ ತಂ ಯಥಾಯೋಗ್ಯಂ ಕೃಷ್ಣಾಂಶಂ ಪ್ರತ್ಯವರ್ಣಯತ್ ।**
**ಕೃಷ್ಣಾಂಶಸ್ತತ್ರ ಬಲವಾನ್ ಹತ್ವಾ ದುರ್ಗನಿವಾಸಿನಃ ॥ ೧೨೩ ॥**

---

೧೧೯. ಆಗ ಕೃಷ್ಣಾಂಶನೇ ಮೊದಲಾದವರೆಲ್ಲರೂ ಮೂರ್ಛೆಯಿಂದ ಎಚ್ಚೆತ್ತರು. ಕೃಷ್ಣಾಂಶನು ಸ್ವರ್ಣವತಿಯನ್ನು ಕುರಿತು "ದೇವೀ ! ನಮ್ಮ ಅಣ್ಣನಾದ ಆಹ್ಲಾದನೆಲ್ಲಿರುವನು ? ಈರೀತಿಯಾಗಲು ಕಾರಣವೇನು ? " ಎಂದು ಕೇಳಿದನು

೧೨೦-೧೨೧. ಅದಕ್ಕೆ ಸ್ವರ್ಣವತಿಯು ತನ್ನ ಪತಿಯು ಬಂಧನಕ್ಕೊಳಗಾದ ಸಮಾಚಾರವೆಲ್ಲವನ್ನೂ ತಿಳಿಸಿದಳು. ಬಳಿಕ "ನಾನು ಹೆಣ್ಣುಗಿಣಿಯ ರೂಪನ್ನು ಧರಿಸಿಕೊಳ್ಳುತ್ತೇನೆ. ನೀನು ಬಿಂದುಲ (ಅಶ್ವ) ವನ್ನು ಏರಿಕೊಂಡು ನನ್ನನ್ನು ಕರೆದುಕೊಂಡು ಹೋಗು" ಎಂದು ಹೇಳಿ, ತಾನು ಗಿಣಿಯಾಗಿ, ಕೃಷ್ಣಾಂಶನೊಡನೆ ತನ್ನಪತಿಯಾದ ಆಹ್ಲಾದನು ಸೆರೆಯಾಗಿದ್ದ ಸ್ಥಳಕ್ಕೆ ಹೊರಟಳು.

೧೨೨. ಕೃಷ್ಣಾಂಶನೂ ಕುದುರೆಯನ್ನೇರಿ ಅಂತರಿಕ್ಷಮಾರ್ಗದಿಂದ ಅಲ್ಲಿಗೆ ಬಂದು ಸೇರಿದನು. ಬಳಿಕ ಸ್ವರ್ಣವತಿಯು ಶಾಂತವಾದ ಆಭೀರೀ ಮೂರ್ತಿಯನ್ನು ಧರಿಸಿ ತನ್ನ ಪತಿಯ ಸಮೀಪಕ್ಕೆ ಐದಿದಳು.

೧೨೩-೧೨೪. ಅಲ್ಲಿ ಹೋದ ಬಳಿಕ ಆಹ್ಲಾದನನ್ನು ಸಮಾಧಾನಪಡಿಸಿ ಕೃಷ್ಣಾಂಶನನ್ನು ಕರೆದು ತತ್ಕಾಲಕ್ಕೆ ತಕ್ಕಂತೆ ಮಾಡಬೇಕಾದ ಕರ್ತವ್ಯವನ್ನು

ರಕ್ಷಕಾಞ್ಛತಸಾಹಸ್ರಾನ್ ಹತ್ವಾ ಭ್ರಾತರಮಾಯಯೌ ।
ಪೌರ್ಣಮಾಂ ಮಧುಯುಕ್ತಾಂ ಚ ಜ್ಞಾತ್ವಾ ಸರ್ವೇ ತ್ವರಾನ್ವಿತಾಃ ॥೧೨೪॥

ಅಯೋಧ್ಯಾಂ ಶೀಘ್ರಮಾಗಮ್ಯ ಸ್ನಾತ್ವಾ ವೈ ಸರಯೂಂ ನದೀಂ ।
ಹೋಲಿಕಾದಾಹಸಮಯೇ ಶೀಘ್ರಂ ವೇಣ್ಯಾಂ ಸಮಾಗತಾಃ ॥ ೧೨೫ ॥

ಸ್ನಾನಧ್ಯಾನಾದಿಕಾ ನಿಷ್ಠಾಃ ಕೃತ್ವಾಗೇಹಮುಪಾಯಯುಃ ।
ಸಾಗರಸ್ಯ ತಟಂ ಪ್ರಾಪ್ಯ ಕೃತ್ವಾ ತೇ ಚ ಮಹೋತ್ಸವಂ ।
ಚೈತ್ರಸ್ಯ ಕೃಷ್ಣಪಂಚಮ್ಯಾಂ ಸ್ವಗೇಹಂ ಪುನರಾಯಯುಃ ॥ ೧೨೬ ॥

ದೂತಾ ಉಷ್ಟ್ರಸಮಾರೂಢಾಸ್ತತ್ಕ್ಷೇಮಕರಣೋತ್ಸುಕಾಃ ।
ವೈಶಾಖೇ ಶುಕ್ಲಪಂಚಮ್ಯಾಂ ಸ್ವಗೇಹಂ ಪುನರಾಯಯುಃ ॥ ೧೨೭ ॥

---

ತಿಳಿಸಿದಳು. ಬಲಶಾಲಿಯಾದ ಕೃಷ್ಣಾಂಶನು ಆ ಕೋಟೆಯಲ್ಲಿ ವಾಸಿಸುವವರನ್ನೆಲ್ಲಾ ಕೊಂದು, ಒಂದುಲಕ್ಷಮಂದಿ ದುರ್ಗಪಾಲಕರನ್ನು ನಾಶಪಡಿಸಿ ಅಣ್ಣನ ಸಮೀಪಕ್ಕೆ ಬಂದನು.

೧೨೫. ವಸಂತಋತುವಿನ ಚೈತ್ರ ಪೂರ್ಣಿಮೆಯ ದಿವಸ ಎಲ್ಲರೂ ಸಡಗರ ಯುಕ್ತರಾಗಿ ಜಾಗ್ರತೆ ಅಯೋಧ್ಯೆಗೆ ಬಂದು, ಅಲ್ಲಿ ಸರಯೂ ನದಿಯಲ್ಲಿ ಸ್ನಾನಮಾಡಿ ಹೋಳಿಹಬ್ಬದ ಸಮಯಕ್ಕೆ ವೇಣೀ ಎಂಬ ಸ್ಥಳಕ್ಕೆ ಬಂದರು.

೧೨೬. ಅಲ್ಲಿ ಸ್ನಾನ ದಾನಾದಿಗಳನ್ನು ನೆರವೇರಿಸಿ ನಿಯಮನಿಷ್ಠರಾಗಿ ಸಾಗರದ ದಡಕ್ಕೆ ಬಂದು ಅಲ್ಲಿ ದೊಡ್ಡ ಉತ್ಸವವೊಂದನ್ನು ನೆರವೇರಿಸಿದರು. ಅನಂತರ ತ್ವರೆಯಿಂದ ಸಾಗಿ ಚೈತ್ರ ಬಹುಳ ಪಂಚಮಿಯದಿನ ತಮ್ಮ ಮನೆಗೆ ಬಂದು ಸೇರಿದರು.

೧೨೭. ದೂತರೆಲ್ಲರೂ ಒಂಟೆಗಳನ್ನೇರಿಕೊಂಡು ಆಹ್ಲಾದ ಮೊದಲಾದವರಿಗೆ ಶುಭವನ್ನು ಕೋರುತ್ತಾ ಸಾವಕಾಶವಾಗಿ ವೈಶಾಖ ಶುದ್ಧ ಪಂಚಮೀ ದಿನ ತಮ್ಮ ಊರಿಗೆ ಬಂದು ತಮ್ಮ ಗೃಹಗಳನ್ನು ಪ್ರವೇಶಿಸಿದರು.

**ಮಲನಾ ಭೂಪತಿಶ್ಚೈವ ಗೇಹೇಗೇಹೇ ಮಹೋತ್ಸವಂ ।**
**ಕಾರಯಿತ್ವಾ ವಿಧಾನೇನ ಬ್ರಾಹ್ಮಣೇಭ್ಯೋ ದದೌ ಧನಂ ॥ ೧೨೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ತ್ರಯೋದಶೋಽಧ್ಯಾಯಃ.**



೧೨೮. ಮಲನಾದೇವಿಯೂ ಪರಿಮಳರಾಜನೂ ಸಹ ಮನೆಮನೆಗಳಲ್ಲಿಯೂ ಶಾಸ್ತ್ರೋಕ್ತವಾಗಿ ಉತ್ಸವವು ನಡೆಯುವಂತೆ ಏರ್ಪಡಿಸಿ ಬ್ರಾಹ್ಮಣರಿಗೆ ಅನೇಕ ದ್ರವ್ಯಗಳನ್ನು ದಾನಮಾಡಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುಚ್ಚಯದಲ್ಲಿ ಹದಿಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಚತುದಶೋಽಧ್ಯಾಯಃ

---

॥ ಸೂತ ಉವಾಚ ॥

ಚತುರ್ದಶಾಬ್ದೇ ಕೃಷ್ಣಾಂಶೇ ಯಥಾ ಜಾತಂ ತಥಾ ಶೃಣು ।
ಜಯಂತಃ ಶಕ್ರಪುತ್ರಶ್ಚ ಜಾನಕೀಶಾಪಮೋಹಿತಃ ।
ಕಲೌ ಜನ್ಮತ್ವಮಾಪನ್ನಃ ಸ್ವರ್ಣವತ್ಯುದರೇಽವಸತ್ ॥ ೧ ॥

ಚೈತ್ರಶುಕ್ಲನವಮ್ಯಾಂ ಚ ಮಧ್ಯಾಹ್ನೇ ಗುರುವಾಸರೇ ।
ಸ ಜಾತಶ್ಚಂದ್ರವದನೋ ರಾಜಲಕ್ಷಣಲಕ್ಷಿತಃ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ-ಶೌನಕ ಮಹರ್ಷಿಯೇ! ಕೃಷ್ಣಾಂಶನಿಗೆ ಹದಿನಾಲ್ಕುವರ್ಷ ವಯಸ್ಸಾಗುತ್ತಲೆ ನಡೆದ ವೃತ್ತಾಂತವನ್ನು ಹೇಳುವೆನು, ಕೇಳು. ಇಂದ್ರಪುತ್ರನಾದ ಜಯಂತನು ಕಾಕಾಸುರನಾಗಿದ್ದಾಗ ಜಾನಕೀದೇವಿಯ ಶಾಪಕ್ಕೆ ಗುರಿಯಾಗಿ ಕಲಿಯುಗದಲ್ಲಿ ಜನ್ಮವೆತ್ತುವುದಕ್ಕಾಗಿ ಸ್ವರ್ಣವತಿಯ ಗರ್ಭದಲ್ಲಿ ನೆಲಸಿದ್ದನು.

೨. ಚೈತ್ರಮಾಸದ ಶುಕ್ಲಪಕ್ಷದ ನವಮಿ ಗುರುವಾರದದಿವಸ ಮಧ್ಯಾಹ್ನದ ವೇಳೆಯಲ್ಲಿ ಚಂದ್ರನಂತೆ ಮುಖವುಳ್ಳುದಾಗಿ ರಾಜಲಕ್ಷಣಗಳಿಂದ ಕೂಡಿದ ಶಿಶುವಾಗಿ ಜನಿಸಿದನು.

**ಜಾತೇ ತಸ್ಮಿನ್ಸುತಶ್ರೇಷ್ಠೇ ದೇವಾಃ ಸರ್ಷಿಗಣಾಸ್ತದಾ ।**
**ಇಂದುಲೋಽಯಂ ಮಹೀಂ ಜಾತೋ ಜಯಂತೋ ವಾಸವಾತ್ಮಜಃ ॥ ೩ ॥**

**ಇತ್ಯೂಚುರ್ವಚನಂ ತಸ್ಮಾದಿಂದುಲೋ ನಾಮಚಾಭ್ಯಭವತ್ ।**
**ಆಹ್ಲಾದೋ ಜಾತಕರ್ಮಾದೀನ್ಕಾರಯಿತ್ವಾ ಶಿಶೋರ್ಮುದಾ ।**
**ಬ್ರಾಹ್ಮಣೇಭ್ಯೋ ದದೌ ಸ್ವರ್ಣಧೇನುವೃಂದಂ ಹಯಾನ್ಗಜಾನ್ ॥ ೪ ॥**

**ಇಂದುಲೇ ತನಯೇ ಜಾತೇ ದ್ವಿಮಾಸಾಂತೇ ಮಹೀತಲೇ ।**
**ಯೋಗಸಿಂಹಸ್ತದಾಗತ್ಯ ಸ್ವರ್ಣವತ್ಯೈ ದದೌ ಧನಂ ॥ ೫ ॥**

**ನೇತ್ರಸಿಂಹಸುತಂ ದೃಷ್ಟ್ವಾ ಮಲನಾ ಸ್ನೇಹಸಂಯುತಾ ।**
**ಪಪ್ರಚ್ಛ ಕುಶಲಪ್ರಶ್ನಂ ಭೋಜಯಿತ್ವಾ ವಿಧಾನತಃ ॥ ೬ ॥**

---

೩. ಶ್ರೇಷ್ಠವಾದ ಈ ಮಗುವು ಹುಟ್ಟಿದಕೂಡಲೆ ದೇವತೆಗಳು ಋಷಿಗಳನ್ನು ಕುರಿತು "ಇಂದ್ರಪುತ್ರನಾದ ಜಯಂತನು ಚಂದ್ರನಂತೆ ಮುಖವುಳ್ಳವನಾಗಿ ಭೂಮಿಯಲ್ಲಿ ಅವತರಿಸಿದನು" ಎಂಬದಾಗಿ ಹೇಳಿದರು. ಆದುದರಿಂದ ಅವನಿಗೆ ಇಂದುಲನೆಂದೇ ಹೆಸರಾಯಿತು.

೪. ಆಹ್ಲಾದನು ಈ ಪ್ರಕಾರ ತನ್ನ ವಂಶದಲ್ಲಿ ಜನಿಸಿದ ಈ ಮಗುವಿಗೆ ಜಾತಕರ್ಮ ಮೊದಲಾದುವನ್ನು ನೆರವೇರಿಸಿ ಬ್ರಾಹ್ಮಣರಿಗೆ ಸುವರ್ಣ, ಹಸು, ಕುದುರೆ, ಆನೆ ಮುಂತಾದ ಮಹಾದಾನಗಳನ್ನು ಕೊಟ್ಟನು.

೫. ಇಂದುಲನು ಜನಿಸಿದ ಎರಡು ತಿಂಗಳಾದಮೇಲೆ ಯೋಗಸಿಂಹನು ಸ್ವರ್ಣವತಿಯ ಬಳಿಗೆ ಬಂದು, ಅವಳಿಗೆ ಕಾಣಿಕೆಯಾಗಿ ದ್ರವ್ಯವನ್ನು ಕೊಟ್ಟನು. (ಎಂದರೆ ಯೋಗಸಿಂಹನು ನೇತ್ರಸಿಂಹನ ಮಗನಾದುದರಿಂದ ತನ್ನ ಅಕ್ಕನಾದ ಸ್ವರ್ಣವತಿಯ ಮಗುವನ್ನು ನೋಡಿಕೊಂಡು ಹೋಗಲು ಒಂದು ಲೋಕರೂಢಿಯಂತೆ ಮಗುವಿನ ಕೈಗೆ ಕೊಡಬೇಕಾದ ದ್ರವ್ಯವನ್ನು ಅದರ ತಾಯಿಯ ಕೈಯಲ್ಲೇ ಕೊಟ್ಟನು).

೬. ನೇತ್ರಸಿಂಹನ ಮಗನಾದ ಯೋಗಸಿಂಹನನ್ನು ಮಲನಾದೇವಿಯು ನೋಡಿ ಸ್ನೇಹಪೂರ್ವಕವಾದ ಮರ್ಯಾದೆಯಿಂದ ಅವನಿಗೆ ಔತಣಮಾಡಿಸಿ ಬಳಿಕ ಕುಶಲಪ್ರಶ್ನೆ ಮಾಡಿದಳು.

ಶತವೃಂದಾಶ್ಚ ನರ್ತಕ್ಯೋ ನಾನಾರಾಗೇಣ ಸಂಯುತಾಃ ।
ತತ್ರಾಗತ್ಯೈವ ನನೃತುರ್ಯತ್ರ ಭೂಪಸುತಃ ಸ್ಥಿತಃ ॥ ೭ ॥

ಸಪ್ತರಾತ್ರಮುಷಿತ್ವಾ ಸ ಯೋಗಸಿಂಹೋ ಯಯೌ ಗೃಹಂ ।
ಷಣ್ಮಾಸೇ ಚ ಸುತೇ ಜಾತೇ ದೇವೇಂದ್ರಃ ಸ್ನೇಹಕಾತರಃ ॥ ೮ ॥

ಪುತ್ರಸ್ನೇಹೇನ ತಂ ಪುತ್ರಂ ಸ ಜಹಾರ ಸ್ವಮಾಯಯಾ ।
ಸಂಹೃತ್ಯ ಬಾಲಕಂ ಶ್ರೇಷ್ಠಮಿಂದ್ರಾಣ್ಯೈ ಚ ಸಮರ್ಪಯತ್ ॥ ೯ ॥

ಸ್ನೇಹಪ್ಲುತಾ ಶಚೀ ದೇವೀ ಸ್ವಸ್ತನೌ ತಮಪಾಯಯತ್ ।
ದೇವ್ಯಾ ದುಗ್ಧಂ ಸ ವೈ ಪೀತ್ವಾ ಷೋಡಶಾಬ್ದಸಮೋಽಭವತ್ ॥ ೧೦ ॥

---

೭. ಆ ಸಂತೋಷಸಮಯದಲ್ಲಿ ನಾನಾಬಣ್ಣಗಳಿಂದ ಶೋಭಿಸುವ ವೇಷಗಳನ್ನು ಧರಿಸಿದ ನೂರುಮಂದಿ ನರ್ತಕಿಯರು ಗುಂಪಾಗಿ ಬಂದು ಯೋಗಸಿಂಹನ ಮುಂದೆ ನರ್ತನಮಾಡಿದರು.

೮-೯. ಯೋಗಸಿಂಹನು ಹೀಗೆ ಏಳುದಿವಸ ಅಕ್ಕನಮನೆಯಲ್ಲಿ ಸಂತೋಷವಾಗಿ ಇದ್ದು ಆನಂತರ ತನ್ನ ಊರಿಗೆ ಹಿಂದಿರುಗಿದನು. ಇಂದುಲನಿಗೆ ಆರುತಿಂಗಳು ತುಂಬುತ್ತಲೇ ದೇವೇಂದ್ರನು ಪುತ್ರಸ್ನೇಹದಿಂದ ಕಾತರನಾಗಿ ತನ್ನ ಮಾಯೆಯಿಂದ ಆ ಮಗುವನ್ನು ಅಪಹರಿಸಿ ತಂದು ತನ್ನ ಪತ್ನಿಯಾದ ಶಚೀದೇವಿಗೆ ಕೊಟ್ಟನು.

೧೦. ಶಚೀದೇವಿಗೆ ಆ ಮಗುವಿನಮೇಲೆ ಪ್ರೇಮವು ಅತಿಶಯಿತವಾಗಿ ಆಕೆ ತನ್ನ ಎದೆಹಾಲನ್ನು ಅವನಿಗೆ ಪಾನಮಾಡಿಸಿದಳು. ಆ ಇಂದುಲನು ಶಚೀದೇವಿಯ ಸ್ತನ್ಯವನ್ನು ಪಾನಮಾಡಿ (ದೇವತಾ ಸ್ವಭಾವಾನುಗುಣವಾಗಿ) ಹದಿನಾರು ವರ್ಷದವನಂತೆ ರೂಪವುಳ್ಳವನಾದನು. (ದೇವತೆಗಳು ಯಾವಾಗಲೂ ಪೂರ್ವವಯಸ್ಸಿನವರೇ ಆಗಿರುವರು, ಅವರಿಗೆ ಮುಪ್ಪು ಇಲ್ಲ, ಬಾಲ್ಯವೂ ಇಲ್ಲ, ಯಾವಾಗಲೂ ಅವರಲ್ಲಿ ಯೌವನವೇ ಇರುವುದು)

**ಇಂದುಂ ಪೀಯೂಷಭವನಂ ಗೃಹ್ಣಾತಿ ವಪುಷಾ ಸ್ವಯಂ ।**
**ಅತಃ ಸ ಇಂದುಲೋ ನಾಮ ಜಯಂತಶ್ಚ ಪ್ರಕೀರ್ತಿತಃ ।**
**ಸ ಬಾಲಃ ಸ್ವಪಿತುರ್ವಿದ್ಯಾಂ ಪಠಿತ್ವಾ ಶ್ರೇಷ್ಠತಾಮಗಾತ್ ॥ ೧೧ ॥**

**ವಿನಷ್ಟೇ ಬಾಲಕೇ ತಸ್ಮಿನ್ ದೇವೀ ಸ್ವರ್ಣವತೀ ತದಾ ।**
**ರುರೋದೋಚ್ಚೈಸ್ತದಾ ದೀನಾ ಹಾ ಪುತ್ರ ಕ್ವ ಗತೋಽಸಿ ಭೋಃ ॥ ೧೨ ॥**

**ಜ್ಞಾತ್ವಾಹ್ಲಾದಂ ತಥಾ ಭೂತಂ ದಶಗ್ರಾಮೇ ತಥಾವಿಧೇ ।**
**ರೌದ್ರಃ ಕೋಲಾಹಲೋ ಜಾತೋ ರುದತಾಂ ಚ ನೃಣಾಂ ಮುನೇ ॥ ೧೩ ॥**

**ಆಹ್ಲಾದಃ ಸ್ವಕುಲೈಃ ಸಾರ್ಧಂ ನಿರಾಹಾರೋ ಯತೇಂದ್ರಿಯಃ ।**
**ಶಾರದಾಂ ಶರಣಂ ಪ್ರಾಪ್ತಸ್ತ್ರಿರಾತ್ರಂ ತತ್ರಚಾಽವಸತ್ ॥ ೧೪ ॥**

---

೧೧ ಚಂದ್ರನು ಅಮೃತಕ್ಕೆ ಆಶ್ರಯನು, ಈ ಬಾಲಕರು ತನ್ನ ಶರೀರ ಕಾಂತಿಯಿಂದ ಅಂತಹ ಚಂದ್ರನನ್ನು ಹೋಲುತ್ತಿದ್ದುದರಿಂದ ಈ ಜಯಂತನಿಗೆ ಇಂದುಲನೆಂದು ಹೆಸರಾಯಿತು. (ಲಾ-ಆದಾನೇ ಎಂಬ ಧಾತುವಿನ ಅರ್ಥದಂತೆ ಇಂದುಂ ಲಾತಿ ಇತಿ ಇಂದುಲಃ. ಎಂದು ಆಯಿತು. ಚಂದ್ರನನ್ನು ತನ್ನ ಶರೀರ ಕಾಂತಿಯಿಂದಹೊಂದುತ್ತಾನೆ. ಆದ್ದರಿಂದ ಇವನು ಇಂದುಲನೆನಿಸಿದನು). ಅನಂತರ ಇಂದುಲನು ತನ್ನ ತಂದೆಯಾದ ದೇವೇಂದ್ರನಿಂದ ದೇವವಿದ್ಯೆಯನ್ನೆಲ್ಲಾ ಕಲಿತು ಶ್ರೇಷ್ಠನೆನಿಸಿದನು.

೧೨. ಅತ್ತಲಾಗಿ ಆಹ್ಲಾದನ ಅರಮನೆಯಲ್ಲಿ ಇಂದುಲನು ಕಾಣದೆಹೋಗಲು ಸ್ವರ್ಣವತೀ ದೇವಿಯು ಗಟ್ಟಿಯಾಗಿ ಅಳುತ್ತಾ ದೀನೆಯಾಗಿ "ಹಾ ಮಗೂ ಎಲ್ಲಿ ಹೋದೆ" ಎಂದು ಗೋಳಿಡುತ್ತಿದ್ದಳು.

೧೩. ಈರೀತಿ ದಶಪುರಗ್ರಾಮದಲ್ಲಿ ಆಹ್ಲಾದನಿಗೆ ಪುತ್ರಶೋಕವುಂಟಾಗಿರುವುದನ್ನು ನೋಡಿ ಪ್ರಜೆಗಳೆಲ್ಲರೂ ಗೋಳಿಡುತ್ತಾ ಹಾಹಾಕಾರ ಮಾಡುತ್ತಿದ್ದರು.

೧೪. ಆಗ ಆಹ್ಲಾದನು ತನ್ನ ಬಂಧುವರ್ಗದವರೊಡನೆ ಅನ್ನಾಹಾರಗಳನ್ನು ತೊರೆದು ಇಂದ್ರಿಯ ನಿಗ್ರಹಮಾಡಿ ಶಾರದಾದೇವಿಯನ್ನು ಮರೆಹೊಕ್ಕು ಮೂರು ರಾತ್ರಿ ಪರ್ಯಂತ ಅಲ್ಲಿ (ಶಾರದಾ ದೇವಾಲಯದ ದೇವೀಸನ್ನಿಧಿಯಲ್ಲಿ) ವಾಸಿಸುತ್ತಿದ್ದನು.

ತದಾ ತುಷ್ಟಾ ಸ್ವಯಂ ದೇವೀ ವಾಗುವಾಚಾಶರೀರಿಣೀ ।
ಹೇ ಪುತ್ರ ಸ್ವಕುಲೈಃ ಸಾರ್ಧಂ ಮಾ ಶುಚಸ್ತ್ವಂ ಸುತಂ ಪ್ರತಿ ॥ ೧೫ ॥

ಇಂದ್ರಪುತ್ರೋ ಜಯಂತಶ್ಚ ಸ್ವರ್ಗಲೋಕಮುಪಾಗತಃ ।
ದಿವ್ಯವಿದ್ಯಾಂ ಪಠಿತ್ವಾ ಸ ತ್ರಿವರ್ಷಾಂತೇ ಗಮಿಷ್ಯತಿ ॥ ೧೬ ॥

ಯಾವತ್ತ್ವಂ ಭೂತಲೇಽವಾತ್ಸೀಃ ಸ ತಾವದ್ಭೂತಲೇ ವಸೇತ್ ।
ತತ್ಪಶ್ಚಾತ್ಸ್ವರ್ಗತಿಂ ಪ್ರಾಪ್ಯ ಜಯಂತೋ ಹಿ ಭವಿಷ್ಯತಿ ॥ ೧೭ ॥

ಇತ್ಯುಕ್ತೇ ವಚನೇ ದೇವ್ಯಾಃ ನಿಶ್ಶೋಕಾಸ್ತೇ ತದಾಽಭವನ್ ।
ದಶಗ್ರಾಮಪುರಂ ಪ್ರಾಪ್ಯ ತಮೂಷು ಜ್ಞಾನತತ್ಪರಾಃ ॥ ೧೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ
ಚತುರ್ದಶೋಽಧ್ಯಾಯಃ

---

೧೫. ಈರೀತಿಯಾಗಿ ನಿಯಮದಿಂದ ಮಾಡಿದ ಆರಾಧನೆಗೆ ಸುಪ್ರೀತಳಾದ ಶಾರದಾದೇವಿಯು ಅಶರೀರವಾಣಿಯಿಂದ "ಪುತ್ರಾ ಆಹ್ಲಾದಾ! ಕುಟುಂಬ ಪರಿವಾರ ಸಹಿತನಾದ ನೀನು ಆ ಮಗುವಿಗಾಗಿ ದುಃಖಿಸಬೇಡ."

೧೬-೧೭. ಇಂದ್ರಪುತ್ರನಾದ ಜಯಂತನು ಇಂದುಲನಾಗಿ ಇಲ್ಲಿ ಅವತರಿಸಿರುವನು. ಈಗ ಅವನು ಸ್ವರ್ಗಲೋಕದಲ್ಲಿರುತ್ತಾ ತನ್ನ ತಂದೆಯಾದ ಇಂದ್ರನಿಂದ ಮೂರು ವರ್ಷಗಳಕಾಲ ದೇವವಿದ್ಯೆಯನ್ನು ಕಲಿತು, ಅನಂತರ ನಿನ್ನ ಸಮೀಪಕ್ಕೆ ಬರುವನು. ನೀನು ಭೂಲೋಕದಲ್ಲಿ ವಾಸಮಾಡುತ್ತಿರುವವರೆಗೂ ಅವನು ನಿನ್ನೊಡನೆ ಇದ್ದು ಅನಂತರ ಸ್ವರ್ಗಕ್ಕೆ ತೆರಳಿ ಜಯಂತ ಎನ್ನಿಸಿಕೊಳ್ಳುವನು" ಎಂದು ಹೇಳಿದಳು.

೧೮. ಶಾರದಾದೇವಿಯು ಹೀಗೆ ಹೇಳುತ್ತಲೆ, ಆಹ್ಲಾದನೇ ಮೊದಲಾದವರೆಲ್ಲರೂ ಇದನ್ನು ಕೇಳಿ ಶೋಕರಹಿತರಾದರು. ಅನಂತರ ದಶಪುರಗ್ರಾಮಕ್ಕೆ ಬಂದು ಎಲ್ಲರೂ ಜ್ಞಾನನಿಷ್ಠರಾಗಿ ವಾಸಿಸುತ್ತಿದ್ದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದೊಳಗಿನ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮೂಹವೆಂಬ ಹದಿನಾಲ್ಕನೆಯ
ಅಧ್ಯಾಯ ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಪಂಚದಶೋಽಧ್ಯಾಯಃ

---

॥ ಸೂತ ಉವಾಚ ॥

ಇಂದುಲೇ ಸ್ವರ್ಗಸಂಪ್ರಾಪ್ತೇ ತೇ ವೀರಾಃ ಶೋಕಕಾತರಾಃ ।
ಶಾರದಾಂ ಪೂಜಯಾಮಾಸುಃ ಸರ್ವಲೋಕನಿವಾಸಿನೀಂ ॥ ೧ ॥

ಜಪ್ತ್ವಾ ಸಪ್ತಶತೀಸ್ತೋತ್ರಂ ತ್ರಿಸಂಧ್ಯಂ ಪ್ರೇಮಭಕ್ತಿತಃ ।
ಧ್ಯಾನೇನಾನಂದಮಾಪನ್ನಾಸ್ತದಾ ಸಪ್ತಶತೇಽಹನಿ ॥ ೨ ॥

ಸಾಮಂತದ್ವಿಜಪುತ್ರಶ್ಚ ಚಾಮುಂಡೋ ನಾಮ ವಿಶ್ರುತಃ ।
ಸೋಽಷ್ಟವರ್ಷವಯಾ ಭೂತ್ವಾ ಪೂಜಯಾಮಾಸ ಚಂಡಿಕಾಂ ॥ ೩ ॥

---

## ಹದಿನೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ— ಇಂದುಲನು ಸ್ವರ್ಗಕ್ಕೆ ಹೋಗಿದ್ದಷ್ಟು ದಿವಸವೂ ಆಹ್ಲಾದನೇ ಮೊದಲಾದ ವೀರರೆಲ್ಲರೂ ದುಃಖದಿಂದ ದಿಗಿಲುಳ್ಳವರಾಗಿ, ಸಮಸ್ತ ಲೋಕಗಳಲ್ಲಿಯೂ ನೆಲಸಿರುವಳಾದ ಶಾರದಾದೇವಿಯನ್ನು ಪೂಜಿಸುತ್ತಲೇ ಇದ್ದರು.

೨. ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ, ಈ ಮೂರು ಸಂಧ್ಯಾಕಾಲಗಳಲ್ಲಿಯೂ ಸಪ್ತಶತೀ ಸ್ತೋತ್ರವನ್ನು ಜಪಿಸುತ್ತಿದ್ದರು. ಹೀಗೆ ಅನೇಕ ದಿನಗಳು ಆರಾಧಿಸಲಾಗಿ ಏಳುನೂರನೆಯದಿನ ಇವರೆಲ್ಲರೂ ದೇವೀಧ್ಯಾನದಿಂದ ಆನಂದಭರಿತರಾದರು.

೩. ಸಾಮಂತನೆಂಬ ಬ್ರಾಹ್ಮಣಶ್ರೇಷ್ಠನಿಗೆ ಚಾಮುಂಡನೆಂಬ ಹೆಸರಿನಿಂದ ಪ್ರಸಿದ್ಧನಾದ ಎಂಟುವರ್ಷದ ಬಾಲಕನಿದ್ದನು. ಅವನು ಚಂಡಿಕಾದೇವಿಯನ್ನು ನಿತ್ಯವೂ ಪೂಜಿಸುತ್ತಿದ್ದನು.

ದ್ವಾದಶಾಬ್ದೇ ತತೋ ಜಾತೇ ತ್ರಿಚರಿತ್ರಸ್ಯ ಪಾಠತಃ ।
ಪರೀಕ್ಷಾರ್ಥಂ ತು ಭಕ್ತಾನಾಂ ಸಾಕ್ಷಾನ್ಮೂರ್ತಿತ್ವಮಾಗತಾ ॥ ೪ ॥

ಕುಂಡಿಕೇಯಂ ಚ ಭೋ ಭಕ್ತಾಃ ಪೂರಯಾಮಿ ಚ ತಾಮಹಂ ।
ಯೂಯಂ ತು ಮನಸೋಪಾಯೈಃ ಕುರುಧ್ವಂ ಪೂರಣೇ ಮತಿಂ ॥ ೫ ॥

ಸುಖಖಾನಿಸ್ತು ಬಲವಾನ್ ಮಧುಪುಷ್ಪೈಸ್ತಥಾ ಫಲೈಃ ।
ಕುಂಡಿಕಾಂ ಪೂರಯಾಮಾಸ ನ ಪೂರ್ಣತ್ವಮುಪಾಗತಾ ॥ ೬ ॥

ಬಲಖಾನಿಸ್ತಥಾ ಮಾಂಸೈರ್ಮೂಲಶರ್ಮಾ ತು ರಕ್ತಕೈಃ ।
ದೇವಕೀ ಚ ತದಾ ಹವ್ಯೈಶ್ಚಂದನಾದಿಭಿರರ್ಚನೈಃ ।
ಕುಂಡಿಕಾಂ ಪೂರಯಾಮಾಸ ನ ಪೂರ್ಣತ್ವಮುಪಾಗತಾ ॥ ೭ ॥

---

೪-೫. ಅವನಿಗೆ ಹನ್ನೆರಡುವರ್ಷ ವಯಸ್ಸಾಗುತ್ತಲೆ ಇವನ ತ್ರಿಚರಿತ್ರ ಪಠನ ದಿಂದ ದೇವಿಯು ಪ್ರಸನ್ನೆಯಾಗಿ, ತನ್ನ ಭಕ್ತರನ್ನು ಪರೀಕ್ಷೆ ಮಾಡುವುದಕ್ಕೋಸ್ಕರ ತಾನೇ ಮೂರ್ತಿಮತ್ತಾಗಿ ಬಂದು 'ಭಕ್ತಶ್ರೇಷ್ಠರಿರಾ! ಇಲ್ಲಿ ಮುಂದೆ ಒಂದು ಕುಂಡ ವಿರುವುದು. ಅದನ್ನು ಮೊದಲು ನಾನು ತುಂಬುವೆನು, ಅನಂತರ ನೀವೆಲ್ಲರೂ ನಿಮ್ಮ ನಿಮ್ಮ ಮನಸ್ಸಿಗೆ ತೋರಿದ ಉಪಾಯಗಳನ್ನು ಆಶ್ರಯಿಸಿ ಅದನ್ನು ಭರ್ತಿಮಾಡುವ ಪ್ರಯತ್ನಮಾಡಿರಿ" ಎಂದು ಹೇಳಿದಳು

೬. ಬಲಿಷ್ಠನಾದ ಸುಖಖಾನಿಯು ಈ ಮಾತನ್ನು ಕೇಳಿ ಪುಷ್ಪಗಳು, ಜೇನು ತುಪ್ಪ, ಹಣ್ಣುಗಳು ಇವುಗಳಿಂದ ಕುಂಡವನ್ನು ಭರ್ತಿಮಾಡಲು ಪ್ರಯತ್ನಪಟ್ಟನು. ಆದರೆ ಅದು ಪೂರ್ಣವಾಗಲಿಲ್ಲ. ಬಲಖಾನಿಯು, ಮಾಂಸದಿಂದಲೂ, ಮೂಲ ಶರ್ಮನು ರಕ್ತದಿಂದಲೂ ಅದನ್ನು ತುಂಬಲು ಪ್ರಯತ್ನಿಸಿದರು. ಅದರಿಂದಲೂ ಏನೂ ಪ್ರಯೋಜನವಾಗಲಿಲ್ಲ.

೭. ಅನಂತರ ದೇವಕಿಯು ಹವಿರ್ದ್ರವ್ಯಗಳಿಂದ (ಎಂದರೆ ತುಪ್ಪ, ಸಮಿತ್ತು ಮೊದಲಾದುವುಗಳಿಂದ) ಲೂ ಚಂದನವೇ ಮೊದಲಾದ ಪೂಜಾದ್ರವ್ಯಗಳಿಂದಲೂ ಕುಂಡವನ್ನು ಪೂರ್ಣ ಮಾಡಲು ಯತ್ನಿಸಿದಳು. ಆದರೂ ಅದು ಪೂರ್ಣ ವಾಗಲಿಲ್ಲ.

ಆಹ್ಲಾದಶ್ಚೈವ ಸರ್ವಾಂಗೈರುದಯಃ ಶಿರಸಾ ಸ್ವಯಂ ।
ಕುಂಡಿಕಾಂ ಪೂರಯಾಮಾಸ ತದಾ ಪೂರ್ಣತ್ವಮಾಗತಾ ॥ ೮ ॥

ಉವಾಚ ವಚನಂ ದೇವೀ ಸ್ವಭಕ್ತಾನ್ ಭಕ್ತವತ್ಸಲಾ ।
ಸುಖಖಾನೇ ಭವಾನ್ವೀರೋ ಭವಿಷ್ಯತಿ ಸುರಪ್ರಿಯಃ ॥ ೯ ॥

ಬಲಖಾನಿರ್ಮಹಾವೀರೋ ದೀರ್ಘೇ ಕಾಲೇ ಸ ಮೃತ್ಯುಭಾಕ್ ।
ಮೂಲಶರ್ಮಾ ತು ಬಲವಾನ್ ರಕ್ತಬೀಜೋ ಭವಿಷ್ಯತಿ ॥ ೧೦ ॥

ದೇವಕೀ ಚ ಭವೇದ್ದೇವೀ ಚಿರಕಾಲಂ ಸ್ವಲೋಕಗಾ ।
ಆಹ್ಲಾದಶ್ಚೈವ ಕೃಷ್ಣಾಂಶಸ್ತಯೋರ್ಮಧ್ಯೇ ದ್ವಯಂ ವರಂ ।
ಏಕಸ್ತು ದೇವವತ್ಪ್ರೋಕ್ತೋ ಬಲಾಧಿಕ್ಯೋ ದ್ವಿತೀಯಕಃ ॥ ೧೧ ॥

---

೮. ಅನಂತರ ಆಹ್ಲಾದನು ತನ್ನ ಸಕಲ ಅವಯವಗಳನ್ನೂ ಛೇದಿಸಿ ತುಂಬಿದನು. ಆದರೂ ಪೂರ್ಣವಾಗಲಿಲ್ಲ ಉದಯನು ತನ್ನ ಶಿರಸ್ಸನ್ನೇ ಅರ್ಪಿಸಲು ಆಗ ಅದು ಪೂರ್ಣವಾಯಿತು

೯-೧೦. ಭಕ್ತವತ್ಸಲೆಯಾದ ದೇವಿಯು ತನ್ನ ಭಕ್ತರನ್ನು ಕುರಿತು " ಎಲೈ ಸುಖಖಾನಿಯೇ ! ನೀನು ಮಹಾಶೂರನಾಗಿ ದೇವತೆಗಳಿಗೆ ಪ್ರೀತಿಪಾತ್ರನಾಗುವೆ. ಬಲಖಾನಿಯೂ ತುಂಬಾ ವೀರನೆನಿಸಿ ಬಹುಕಾಲ ಬದುಕಿ ಅನಂತರ ಸ್ವರ್ಗಸ್ಥನಾಗುವನು ಮಹಾಬಲಶಾಲಿಯಾದ ಮೂಲವರ್ಮನು ರಕ್ತಬೀಜನೆಂಬ ಹೆಸರನ್ನು ಪಡೆಯುವನು

೧೧. ದೇವಕಿಯು ಸಾಕ್ಷಾತ್ ದೇವಿಯೆನಿಸಿ ಬಹುಕಾಲ ತನ್ನ ಲೋಕದಲ್ಲಿಯೇ ನೆಲಸುವಳು. ಆಹ್ಲಾದ, ಕೃಷ್ಣಾಂಶ ಈ ಇಬ್ಬರಲ್ಲಿ ಮೊದಲನೆಯವನಾದ ಆಹ್ಲಾದನು ದೇವತೆಗಳಂತೆ (ಅಜರಾಮರ) ಚಿರಂಜೀವಿಯಾಗಿ ಬಾಳುವನು. ಎರಡನೆಯವನಾದ ಕೃಷ್ಣಾಂಶನು ತನ್ನ ಪರಾಕ್ರಮದಿಂದ ಎಲ್ಲರನ್ನೂ ಮೀರಿಸಿ ಮಹಾಬಲನೆನಿಸುವನು.

**ನಿಷ್ಕಾಮೋಽಯಂ ದೇವಸಿಂಹೋ ಮೃತೋ ಮೋಕ್ಷತ್ವಮಾಪ್ನುಯಾತ್ ।
ಇತ್ಯುಕ್ತ್ವಾಂತರ್ದಧೇ ಮಾತಾ ತೇ ಸರ್ವೇ ತೃಪ್ತಿಮಾಗತಾಃ ॥ ೧೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಪಂಚದಶೋಽಧ್ಯಾಯಃ**



---

೧೨. ಈ ದೇವಸಿಂಹನು ನಿಷ್ಕಾಮನೆನಿಸಿ ಬಹುಕಾಲ ಬದುಕಿ ದೇಹಾವಸಾನದಲ್ಲಿ ಮೋಕ್ಷವನ್ನು ಪಡೆಯುವನು" ಎಂದು ಹೇಳಿ ಜಗಜ್ಜನನಿಯಾದ ದೇವಿಯು ಅದೃಶ್ಯಳಾದಳು. ಅನಂತರ ಆಹ್ಲಾದಾದಿಗಳು ದೇವಿಯ ವಚನವನ್ನು ಕೇಳಿ ಸಂತೋಷ ಹೊಂದಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಹದಿನೈದನೆಯ ಅಧ್ಯಾಯ ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಷೋಡಶೋಽಧ್ಯಾಯಃ

॥ ಸೂತ ಉವಾಚ ॥

ಪ್ರಾಪ್ತೇ ಸಪ್ತದಶಾಬ್ದೇ ಚ ಕೃಷ್ಣಾಂಶೇ ತತ್ರ ಚಾಭವತ್ ।
ಶೃಣು ತ್ವಂ ಮುನಿಶಾರ್ದೂಲ ದೃಷ್ಟಂ ಯದ್ಯೋಗದರ್ಶನಾತ್ ॥ ೧ ॥

ರತ್ನಭಾನೌ ಮೃತೇ ರಾಜ್ಞಿ ಮರುಧನ್ವಮಹೀಪತಿಃ ।
ಗಜಸೇನಸ್ತದಾ ವಿಪ್ರ ಪೃಥ್ವೀರಾಜಭಯಾತುರಃ ॥ ೨ ॥

ಆರಾಧ್ಯ ಪಾವಕಂ ದೇವಂ ಯಜ್ಞಧ್ಯಾನವ್ರತಾರ್ಚನೈಃ ।
ದ್ವಾದಶಾಬ್ದಂ ಸದಾಚಾರಃ ಪ್ರೇಮಭಕ್ತ್ಯಾ ಹ್ಯತೋಷಯತ್ ॥ ೩ ॥

---

### ಹದಿನಾರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಮುನಿಶ್ರೇಷ್ಠನೇ ! ಕೃಷ್ಣಾಂಶನಿಗೆ ಹದಿನೇಳು ವರ್ಷವಾಗುತ್ತಲೆ ನಡೆದ ವೃತ್ತಾಂತವನ್ನು ನಾನು ಯೋಗದೃಷ್ಟಿಯಿಂದ ತಿಳಿದು ನಿನಗೆ ಹೇಳುತ್ತೇನೆ ಕೇಳು.

೨-೩. ರತ್ನಭಾನು ಮಹಾರಾಜನು ಮೃತನಾಗಲು ಅನಂತರ ಮರುಧನ್ವ ದೇಶದ ರಾಜನಾದ ಗಜಸೇನನು ಪೃಥ್ವೀರಾಜನಿಗೆ ಭಯಪಟ್ಟು ಹನ್ನೆರಡುವರ್ಷ ಕಾಲ ನಿಯಮವಿಶಿಷ್ಟನಾಗಿ ಆಚಾರಸಂಪನ್ನತೆಯಿಂದ ಕೂಡಿ ಹೋಮ ಧ್ಯಾನ ವ್ರತ ಅನುಷ್ಠಾನಗಳಿಂದ ಪ್ರೇಮ ಭಕ್ತಿಪುರಸ್ಸರವಾಗಿ ಯಜ್ಞೇಶ್ವರನನ್ನು ಆರಾಧಿಸಿ ಅವನನ್ನು ಮೆಚ್ಚಿಸಿದನು.

ತದಾ ಪ್ರಸನ್ನೋ ಭಗವಾನ್ ಪಾವಕೀಯಂ ಹಯಂ ಶುಭಂ ।
ದದೌ ತಸ್ಮೈ ಸುತೌ ಚೋಭೌ ಕನ್ಯಾಂ ಚ ಗಜಮುಕ್ತಿಕಾಂ ॥ ೪ ॥

ಪಾವಕಾಸ್ತೇ ಹಿ ಚತ್ವಾರಃ ಸಮುದ್ಭೂತಾ ಮಹೀತಲೇ ।
ಅಗ್ನಿವರ್ಣಾ ಮಹಾವೀರಾಃ ಸರ್ವಲಕ್ಷಣಲಕ್ಷಿತಾಃ ॥ ೫ ॥

ಅಷ್ಟಾದಶವಯೋಭೂತಾಃ ಸರ್ವೇ ತೇ ಮುನಿಪುಂಗವ ।
ಜಾತಮಾತ್ರಾ ದೇವಸಮಾಃ ಸರ್ವವಿದ್ಯಾವಿಶಾರದಾಃ ॥ ೬ ॥

ಅಷ್ಟಾದಶಾಬ್ದವಯಸಾ ಸಾ ಕನ್ಯಾ ವರವರ್ಣಿನೀ ।
ದುರ್ಗಾಯಾಶ್ಚ ವರಂ ಪ್ರಾಪ್ತಾ ಧರ್ಮಾಂಶಸ್ತ್ವಾಂ ವರಿಷ್ಯತಿ ॥ ೭ ॥

---

೪. ಇದರಿಂದ ಪ್ರಸನ್ನನಾದ ಅಗ್ನಿದೇವನು ಗಜಸೇನನಿಗೆ ಇಬ್ಬರು ಪುತ್ರರು, ಗಜಮುಕ್ತಿಕಾಯೆಂಬ ಒಬ್ಬಳು ಪುತ್ರಿ, ಮತ್ತು ಸುಂದರವಾದ ಒಂದುಕುದುರೆ, ಇವನ್ನು ಕರುಣಿಸಿದನು.

೫. ಅಗ್ನಿದೇವನ ಕೃಪೆಯಿಂದ ಜನ್ಮವೆತ್ತಿ ಈ ನಾಲ್ಕುವ್ಯಕ್ತಿಗಳೂ ಸಹ ಅಗ್ನಿಯಂತೆ ಕೆಂಪಾದ ಬಣ್ಣವುಳ್ಳವರಾಗಿ ಸರ್ವಲಕ್ಷಣಸಂಯುಕ್ತರೂ ಮಹಾ ಶೂರರೂ ಎನಿಸಿದ್ದರು.

೬. ಮುನಿಶ್ರೇಷ್ಠನೇ ! ಕೇಳು, ಇವರೆಲ್ಲರಿಗೂ ಹದಿನೆಂಟುವರ್ಷ ವಯಸ್ಸಾಯಿತು. ಇವರು ಹುಟ್ಟಿದಾಗಲೇ ದೇವತಾಸದೃಶವಾದ ಕಾಂತಿಯುಳ್ಳವರಾಗಿದ್ದರು. ಪ್ರಾಪ್ತವಯಸ್ಕರಾದ ಇವರು ಸಕಲವಿದ್ಯೆಗಳಲ್ಲಿಯೂ ಪ್ರವೀಣರೆನಿಸಿದರು.

೭. ಗಜಮುಕ್ತಿಕಾ ಕುಮಾರಿಯು ಹದಿನೆಂಟು ವರ್ಷದವಳಾಗಿ ಸ್ವಯಂವರಾರ್ಹಳಾಗುತ್ತಲೆ ದುರ್ಗಾದೇವಿಯನ್ನು ಭಕ್ತಿಯಿಂದ ಆರಾಧಿಸಿ ಅವಳಿಂದ "ಧರ್ಮರಾಜನ ಅಂಶಪುರುಷನಾದ ವರನು ನಿನ್ನನ್ನು ಮದುವೆಯಾಗಲಿ" ಎಂದು ವರವನ್ನು ಪಡೆದಳು.

ಶಾರ್ದೂಲವಂಶೀ ಸ ನೃಪಃ ಕೃತವಾನ್ವೈ ಸ್ವಯಂವರಂ ।
ನಾನಾದೇಶ್ಯಾ ನೃಪಾಃ ಪ್ರಾಪ್ತಾಃ ಸುತಾಯಾ ರೂಪಮೋಹಿತಾಃ ॥ ೮ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಚಾಷ್ಟಮ್ಯಾಂ ಚಂದ್ರವಾಸರೇ ।
ತಸ್ಯಾಃ ಸ್ವಯಂವರಶ್ಚಾಸೀತ್ತಾನ್ನೃಪಾನ್ಪ್ರತಿಚಾಯಯೌ ॥ ೯ ॥

ವಿದ್ಯುದ್ವರ್ಣಂ ಮುಖಂ ತಸ್ಯಾಶ್ಚಂಚಲಾಯಾಸ್ತಥಾ ಗತಂ ।
ದೃಷ್ಟ್ವಾ ಮುಮೋಹ ಧರ್ಮಾಂಶೋ ಬಲಖಾನಿರ್ಮಹೀಪತಿಃ ॥ ೧೦ ॥

ಸಾಪಿ ದೃಷ್ಟ್ವಾ ಚ ತಂ ವೀರಂ ಮುಮೋಹ ಗಜಮುಕ್ತಿಕಾ ।
ಬುದ್ಧ್ವಾ ತಸ್ಮೈ ದದೌ ಮಾಲಾಂ ವೈಜಯಂತೀಂ ಶುಭಾನನಾ ॥ ೧೧ ॥

---

೮. ಶಾರ್ದೂಲವಂಶದ ರಾಜನಾದ ಆ ಗಜಸೇನನು ಮಾರ್ಗಶಿರ ಶುದ್ಧ ಅಷ್ಟಮೀ ಸೋಮವಾರದ ದಿವಸ ಕುಮಾರಿಗೆ ಸ್ವಯಂವರ ಮಹೋತ್ಸವವನ್ನು ಏರ್ಪಡಿಸಿದನು. ಆ ಸಮಾರಂಭಕ್ಕೆ ಅನೇಕ ದೇಶದ ರಾಜರುಗಳೆಲ್ಲಾ ಬಂದಿದ್ದರು. ಇವರೆಲ್ಲರೂ ಕನ್ಯೆಯಾದ ಗಜಮುಕ್ತಿಕೆಯ ಸೌಂದರ್ಯಕ್ಕೆ ಬೆರಗಾಗಿ ಮೋಹ ಗೊಂಡಿದ್ದರು.

೯-೧೦. ಆ ಸಮಯದಲ್ಲಿ ಗಜಮುಕ್ತಿಕೆಯು ಕೈಯಲ್ಲಿ ವರಣಮಾಲಿಕೆ ಯನ್ನು ಹಿಡಿದು ಎಲ್ಲ ರಾಜರುಗಳನ್ನೂ ಕ್ರಮವಾಗಿ ನೋಡುತ್ತಾ ಬರುತ್ತಿದ್ದಳು. ಹೀಗೆ ಬರುತ್ತಿರುವ ಸುಂದರಿಯ ಚಂಚಲವಾದ ನೇತ್ರಗಳು, ಮಿಂಚಿನಂತೆ ಥಳಥಳಿ ಸುವ ಮುಖ, ಇವುಗಳ ಅಪೂರ್ವಶೋಭಾತಿಶಯವನ್ನು ನೋಡಿ ಧರ್ಮರಾಜನ ಅಂಶದವನಾದ ಬಲಖಾನಿ ಮಹಾರಾಜನು ಅವಳಲ್ಲಿ ಮೋಹಗೊಂಡನು.

೧೧ ಸ್ವಯಂವರ ವಧುವಾದ ಗಜಮುಕ್ತಿಕೆಯೂ ಬಲಖಾನಿಯನ್ನು ನೋಡಿ ಮೋಹಗೊಂಡು ಇವನೇ ಧರ್ಮರಾಜಾಂಶ ಪುರುಷನೆಂದು ತಿಳಿದು ಸುಂದರ ಮುಖಿಯಾದ ಅವಳು ಆ ಬಲಖಾನಿಯ ಕೊರಳಿಗೆ ವೈಜಯಂತೀ ಮಾಲೆಯನ್ನು ಹಾಕಿದಳು.

ತಾರಕಾದ್ಯಾಶ್ಚ ಭೂಪಾಲಾಃ ಸರ್ವಶಸ್ತ್ರಾಸ್ತ್ರಸಂಯುತಾಃ ।
ರುರುಧುಃ ಸರ್ವತೋ ವೀರಂ ತೇ ಬಲಾತ್ಕನ್ಯಕಾರ್ಥಿನಃ ॥ ೧೨ ॥

ತಥಾವಿಧಾನ್ನೃಪಾನ್‌ದೃಷ್ಟ್ವಾ ಭೂಪಾನ್ ಪಂಚಶತಾನ್ ಬಲೀ ।
ಸ ಶೀಘ್ರಂ ಖಡ್ಗಮುತ್ಸೃಜ್ಯ ಶತಭೂಪಶಿರಾಂಸ್ಯಹನ್ ॥ ೧೩ ॥

ಸರ್ವತೋ ವಧ್ಯಮಾನಂ ತಂ ಬಲಖಾನಿಂ ಸ ತಾರಕಃ ।
ತದ್ಭುಜಾಭ್ಯಾಂ ದದೌ ಖಡ್ಗಂ ಸ ತದಂಗೇ ದ್ವಿಧಾಽಭವತ್ ॥ ೧೪ ॥

ಮಹೀರಾಜಸುತೋ ಜ್ಯೇಷ್ಠೋ ದೃಷ್ಟ್ವಾ ಖಡ್ಗಂ ತಥಾ ಗತಂ ।
ಅಪೋವಾಹ ರಣಾಚ್ಛೂರಸ್ತತ್ಪಶ್ಚಾತ್ತೇ ನೃಪಾ ಯಯುಃ ॥ ೧೫ ॥

---

೧೨. ತಾರಕನೇ ಮೊದಲಾದ ಅರಸರು ಕನ್ಯೆಯಲ್ಲಿ ಆಶೆಪಟ್ಟುಕೊಂಡು ಸ್ವಯಂವರೋತ್ಸವಕ್ಕಾಗಿ ಅಲ್ಲಿಗೆ ಬಂದಿದ್ದರೂ ತಮಗೆ ಆಕೆ ಸಿಕ್ಕದೆ ಹೋಗಲಾಗಿ ಆ ಕನ್ಯೆಯನ್ನು ಹಾರಿಸಿಕೊಳ್ಳುವುದಕ್ಕಾಗಿ ವೀರನಾದ ಬಲಖಾನಿಯನ್ನು ಸುತ್ತಲೂ ಮುತ್ತಿದರು.

೧೩. ಈರೀತಿ ಐನೂರುಮಂದಿ ರಾಜರೂ ತನ್ನನ್ನು ಮುತ್ತಿಗೆ ಹಾಕಿದು ದನ್ನು ನೋಡಿ ವೀರನಾದ ಬಲಖಾನಿಯು ಖಡ್ಗವನ್ನು ಧರಿಸಿ ನೂರಾರುಜನ ರಾಜ ರುಗಳ ಶಿರಸ್ಸನ್ನು ಛೇದಿಸಿದನು

೧೪. ಈರೀತಿ ಎಲ್ಲ ಕಡೆಯಲ್ಲಿಯೂ ರಾಜಕುಮಾರರನ್ನು ಕೊಲ್ಲುತ್ತಿರುವ ಬಲಖಾನಿಯನ್ನು ನೋಡಿ ತಾರಕನು ತನ್ನ ಕತ್ತಿಯಿಂದ ಬಲಖಾನಿಯ ಭುಜದ ಮೇಲೆ ಹೊಡೆದನು. ಆ ಏಟು ಅವನಿಗೆ ಘಾಯಮಾಡದೆ (ತಗಲದೇ) ಬಲಖಾನಿಯ ಶರೀರಕ್ಕೆ ಸೋಕಿದ ಕತ್ತಿಯೇ ಎರಡು ತುಂಡಾಯಿತು.

೧೫. ಕತ್ತಿಯು ಹೀಗೆ ಚೂರಾದುದನ್ನು ನೋಡಿ, ಮಹೀರಾಜನ ಹಿರಿಯ ಮಗನಾದ ತಾರಕನು ಯುದ್ಧರಂಗದಿಂದ ಓಡಿಹೋದನು. ಮಿಕ್ಕ ಅರಸರೆಲ್ಲರೂ ಅವನ ಹಿಂದೆಯೇ ಓಡಿಹೋದರು.

**ಪರಾಜಿತೇ ನೃಪಬಲೇ ಬಲಖಾನಿರ್ಮಹಾಬಲಃ ।**
**ತಾಂ ಕನ್ಯಾಂ ಶಿಬಿಕಾರೂಢಾಂ ಸ್ವಗೇಹಂ ಸೋಽನಯದ್ಬಲೀ ॥ ೧೬ ॥**

**ತಾಂ ಗಚ್ಛಂತೀಂ ಸುತಾಂ ದೃಷ್ಟ್ವಾ ಗಜಸೇನೋ ಮಹೀಪತಿಃ ।**
**ಮಹೀಪತ್ಯಾಜ್ಞಯಾ ಪ್ರಾಪ್ತೋ ಜ್ಞಾತ್ವಾ ತಂ ಕ್ಷತ್ರಿಯಾಧಮಂ ॥ ೧೭ ॥**

**ಜಂಬುಕಘ್ನಂ ಮಹಾವೀರಂ ಮಾಯಯಾ ತಮಮೋಹಯತ್ ।**
**ಜಾತೇ ನಿದ್ರಾತುರೇ ವೀರೇ ದುರ್ಗಾಯಾಃ ಶಾಪಮೋಹಿತೇ ॥ ೧೮ ॥**

**ನಿಗಡೈಸ್ತಂ ಬಬಂಧಾಶು ದೃಢೈರ್ಲೋಹಮಯೈ ರುಷಾ ।**
**ಲೋಹದುರ್ಗಂ ಚ ಸಂಪ್ರಾಪ್ಯ ಗ್ರಾಮರೂಪಂ ಮಹೀಪತಿಃ ॥ ೧೯ ॥**

---

೧೬. ಹೀಗೆ ಆ ರಾಜರ ಸೈನ್ಯವೆಲ್ಲವೂ ಸೋತು ಹಿಂದಿರುಗಲು, ಮಹಾ ಪರಾಕ್ರಮಿಯಾದ ಬಲಖಾನಿಯು ಸ್ವಯಂವರವಧುವನ್ನು ಮೇನೆಯಲ್ಲಿ ಕೂರಿಸಿಕೊಂಡು ತನ್ನ ಮನೆಗೆ ಕರೆದುಕೊಂಡು ಹೊರಟನು.

೧೭. ತನ್ನ ಮಗಳನ್ನು ಬಲಖಾನಿಯು ಹೀಗೆ ಕರೆದುಕೊಂಡು ಹೋಗುತ್ತಿರುವುದನ್ನು ಗಜಸೇನ ಮಹಾರಾಜನು ನೋಡಿ, ಮಹೀಪತಿ ರಾಜನ ಪ್ರೇರಣೆಯಿಂದ ಬಲಖಾನಿಯು ಕ್ಷತ್ರಿಯಾಧಮನೆಂದು ಭಾವಿಸಿದನು.

೧೮. ಮಾಯೆಯಿಂದ ಜಂಬುಕ ರಾಜನನ್ನು ಕೊಂದಿದ್ದನೆಂದು ಕೇಳಿ ತಿಳಿದ ಗಜಸೇನನು ದುರ್ಗೆಯನ್ನು ಸ್ತುತಿಸಿ ಆ ಮಹಾವೀರ ಬಲಖಾನಿಯನ್ನು ಮೂರ್ಛೆಗೊಳಿಸಿದನು. ದುರ್ಗಾದೇವಿಯ ಶಾಪದಿಂದ ಮೋಹಿತನಾಗಿ ಬಲಖಾನಿಯು ನಿದ್ರಾವಶನಾಗಿದ್ದನು.

೧೯. ಗಜಸೇನ ಮಹಾರಾಜನು ಆ ಬಲಖಾನಿಯನ್ನು ಜಾಗ್ರತೆಯಾಗಿ ಕಬ್ಬಿಣದ ಸಂಕೋಲೆಗಳಿಂದ ಬಿಗಿದು ಕಟ್ಟಿಸಿ, ಕೋಪದಿಂದ ಲೋಹಮಯನಾದ ದುರ್ಗದಲ್ಲಿ ಅವನನ್ನು ಸೆರೆಯಿರಿಸಿ ತನ್ನ ನಿವಾಸಕ್ಕೆ ಬಂದನು. (ಬಲಖಾನಿಯು ಹಿಂದೆ ವಿಜಯೈಷಿಣಿ ಯೆಂಬವಳನ್ನು ವಧೆಮಾಡಿ ಚಿತೆಯಲ್ಲಿ ಹಾಕಿದಾಗ ಅಶರೀರ ವಾಣಿಯು "ನೀನು ಅವಧ್ಯಳಾದ ಸ್ತ್ರೀಯನ್ನು ವಿಚಾರಮಾಡದೆ ಕೊಂದೆಯಾದ್ದರಿಂದ ಈ ಪಾಪಕರ್ಮದ ಫಲವನ್ನು ನಿನ್ನ ವಿವಾಹ ಸಮಾರಂಭದಲ್ಲಿ ಅನುಭವಿಸುವೆ" ಎಂದು ಹೇಳಿದ್ದಿತು ಆದುದರಿಂದ ಈ ಸ್ವಯಂವರದ ಸಂದರ್ಭದಲ್ಲಿ ಬಲಖಾನಿಯು ಮೂರ್ಛೆ ಹೊಂದಿದನು.)

ಚಾಂಡಾಲಾಂಶ್ಚ ಸಮಾಹೂಯ ಕಲಿನಾಂಸ್ತತ್ರವಾಸಿನಃ ।
ವಧಾಯಾಜ್ಞಾಪಯಾಮಾಸ ತಸ್ಯ ದಂಡೈರನೇಕಶಃ ॥ ೨೦ ॥

ತೇ ರೌದ್ರಾಸ್ತಂ ಸಮಾಬಧ್ಯ ತಾಡಯಾಮಾಸುರೂರ್ಜಿತಾಃ ।
ತತ್ತಾಡನಾತ್ತದಾ ನಿದ್ರಾ ತತ್ರೈವ ವಿಲಯಂ ಗತಾ ॥ ೨೧ ॥

ದೃಷ್ಟ್ವಾ ತತಸ್ತು ಚಂಡಾಲಾನ್ ಬಲಖಾನಿರತಾಡಯತ್ ।
ತಲಮುಷ್ಟಿಪ್ರಹಾರೇಣ ಚಾಂಡಾಲಾ ಮರಣಂ ಗತಾಃ ॥ ೨೨ ॥

ಮೃತೇಪಂಚಶತೇ ರೌದ್ರೇ ತಚ್ಛೇಷಾ ದುದ್ರುವುರ್ಭಯಾತ್ ।
ಕಪಾಟಂ ಸುದೃಢಂ ಕೃತ್ವಾ ನೃಪಾಂತಿಕಮುಪಾಯಯುಃ ॥ ೨೩ ॥

ಸ ನೃಪಃ ಕಾರಣಂ ಜ್ಞಾತ್ವಾ ಹಸ್ತಬದ್ಧೋ ಮಹಾಬಲೀ ।
ಉವಾಚ ತತ್ರ ಗತ್ವಾಸೌ ವಚನಂ ಕಾರ್ಯತತ್ಪರಃ ॥ ೨೪ ॥

---

೨೦. ಗಜಸೇನ ರಾಜನು ಬಲಖಾನಿಯನ್ನು ಹೀಗೆ ದುರ್ಗದಲ್ಲಿ ಸೆರೆಯಿಟ್ಟು ಬಂದನಂತರ ಕ್ರೂರಿಗಳಾದ ಚಂಡಾಲರನ್ನು ಕರೆಯಿಸಿ "ಬಲಖಾನಿಗೆ ಅಪರಿಮಿತವಾಗಿ ಹಿಂಸೆಕೊಟ್ಟು ಅನಂತರ ವಧೆಮಾಡಿ" ಎಂದು ಅವನಿಗೆ ಆಜ್ಞಾಪಿಸಿದರು.

೨೧ ಆ ಕ್ರೂರಿಗಳು ಅವನನ್ನು ಬಲವಾಗಿ ಬಂಧಿಸಿ ರೋಷದಿಂದ ತೀಕ್ಷ್ಣವಾಗಿ ಹೊಡೆದರು. ಅವರು ಹೀಗೆ ಅವನನ್ನು ಬಲವಾಗಿ ಹೊಡೆದುದರಿಂದ ಬಲಖಾನಿಗೆ ನಿದ್ರೆ ತೊಲಗಿ ಅವನು ಸಂಪೂರ್ಣವಾಗಿ ಎಚ್ಚೆತ್ತನು.

೨೨. ಬಳಿಕ ತನ್ನನ್ನು ತೀಕ್ಷ್ಣವಾಗಿ ಹೊಡೆಯುತ್ತಿರುವ ಆ ಚಂಡಾಲರನ್ನು ಬಲಖಾನಿಯು, ತನ್ನ ಅಂಗೈನಿಂದಲೂ ಮುಷ್ಟಿಯ ಗುದ್ದಿನಿಂದಲೂ ಬಲವಾಗಿ ಹೊಡೆಯಲು ಆ ಚಂಡಾಲರೆಲ್ಲ ಸತ್ತುಹೋದರು.

೨೩ ಹೀಗೆ ಐನೂರು ಜನ ಚಂಡಾಲರೂ ಬಲಖಾನಿಯ ಮುಷ್ಟಿಯ ಪ್ರಹಾರದಿಂದ ಮೃತರಾಗಲು, ಉಳಿದ ಕೆಲವರು ಭಯದಿಂದ ಹೆದರಿ ದುರ್ಗದ ಬಾಗಿಲನ್ನು ಭದ್ರವಾಗಿ ಮುಚ್ಚಿ, ರಾಜನ ಸಮೀಪಕ್ಕೆಹೋಗಿ ನಡೆದ ವಿಷಯವನ್ನು ಅರಿಕೆಮಾಡಿದರು.

೨೪-೨೬ ಮಹಾಬಲಶಾಲಿಯಾದ ಗಜಸೇನಮಹಾರಾಜನು ಈ ರೀತಿ ನಡೆದುದಕ್ಕೆ ಕಾರಣವನ್ನು ವಿಚಾರಿಸಿ ತಿಳಿದು, ತಾನು ಮಾಡಿದುದು ಸರಿಯಲ್ಲವೆಂದು

ಭವಾನ್ ಮಹಾಬಲೋ ವೀರ ಚಾಂಡಾಲೈರ್ಬಂಧನಂ ಗತಃ ।
ದಸ್ಯುಭಿರ್ಲುಂಠಿತಸ್ತತ್ರ ನಿದ್ರಾವಶ್ಯೋ ವನಂ ಗತಃ ॥ ೨೫ ॥

ಮತ್ಸುತಾ ಭವನೇ ಪ್ರಾಪ್ತಾ ದಿಷ್ಟ್ಯಾ ತ್ವಂ ಜೀವಿತಂ ಗತಃ ।
ಉದ್ವಾಹ್ಯ ಮತ್ಸುತಾಂ ಶೀಘ್ರಂ ಸ್ವಗೇಹಂ ಯಾತುಮರ್ಹಸಿ ॥ ೨೬ ॥

ಇತಿ ಶ್ರುತ್ವಾ ಪ್ರಿಯಂ ವಾಕ್ಯಂ ತಂ ಪ್ರಶಸ್ಯ ತಥಾ ಕರೋತ್ ।
ಮಂಡಪೇ ವೇದಕರ್ಮಾಣಿ ವಿವಾಹಾರ್ಥಂ ಚಕಾರ ಸಃ ।
ಜಾತಾಯಾಂ ಮಂಡಪಾರ್ಚಾಯಾಂ ಪತ್ರಮಾಹ್ಲಾದಹೇತವೇ ॥ ೨೭ ॥

ತದಾಜ್ಞಯಾ ಲಿಖಿತ್ವಾಽಸೌ ಗಜಸೇನೋಽಗ್ನಿಸೇವಕಃ ।
ಉಷ್ಟ್ರಾರೂಢಂ ಸಮಾಹೂಯ ಶೀಘ್ರಂ ಪತ್ರಮಚೋದಯತ್ ॥ ೨೮ ॥

---

ಭಾವಿಸಿ ಬಲಖಾನಿಯ ಸಮೀಪಕ್ಕೆ ಬಂದು ವಿನಯದಿಂದ ಕಾರ್ಯತತ್ಪರನಾಗಿ ಕೈ ಜೋಡಿಸಿ "ನೀನು ಮಹಾ ಬಲಶಾಲಿ, ಚಂಡಾಲರು ತಿಳಿಯದೆ ನಿನ್ನನ್ನು ಬಂಧಿಸಿದರು. ನಿದ್ರಾವಶನಾಗಿದ್ದ ನಿನ್ನನ್ನು ಕಳ್ಳರು ಕಾಡಿಗೆ ಎತ್ತಿಕೊಂಡು ಹೋಗಿಇಟ್ಟರು. ನನ್ನ ಮಗಳು ನನ್ನ ಮನೆಯಲ್ಲಿರುವಳು. ದೈವವಶದಿಂದ ನೀನೂ ಜೀವಿಸಿದೆ. ನನ್ನ ಮನೆಗೆಬಂದು ಗಜಮುಕ್ತಿಕೆಯ ಪಾಣಿಗ್ರಹಣ ಮಾಡಿಕೊಂಡು ಸುಖವಾಗಿ ನಿನ್ನ ನಗರಿಗೆ ಹಿಂದಿರುಗು" ಎಂಬದಾಗಿ ಅವನಿಗೆ ಹಿತವಚನಗಳನ್ನು ಹೇಳಿ ಹೊಗಳಿ ಅವನು ತನ್ನ ಮನೆಗೆ ಬರುವಂತೆ ಮಾಡಿದನು.

೨೭ ಬಳಿಕ ವಿವಾಹಮಂಟಪವನ್ನು ರಚಿಸಿ, ವೇದೋಕ್ತ ಕರ್ಮಗಳನ್ನು ನೆರವೇರಿಸಿ ಮಂಟಪಾರ್ಚನೆಯು ಮುಗಿದ ಮೇಲೆ ಆಹ್ಲಾದನಿಗೆ ಒಂದು ಕಾಗದವನ್ನು ಬರೆದು ಕಳುಹಿಸಿದನು.

೨೮. ಅಗ್ನ್ಯುಪಾಸಕನಾದ ಗಜಸೇನನು ಬಲಖಾನಿಯ ಅಪ್ಪಣೆಯಂತೆ ಕಾಗದವನ್ನು ಬರೆದು, ಒಂಟೆಯಕೀಸವಾರರ ಕೈಯಲ್ಲಿ ಕೊಟ್ಟು ಜಾಗ್ರತೆಯಾಗಿ ಆಹ್ಲಾದನ ಸಮೀಪಕ್ಕೆ ಅವರನ್ನು ಕಳುಹಿಸಿದನು. ಆ ಕಾಗದದ ಒಕ್ಕಣೆ ಈ ಪ್ರಕಾರವಾಗಿದ್ದಿತು.

ಬಲಖಾನೇರ್ವಿವಾಹೋಽತ್ರ ಭವಾನ್ಸೈನ್ಯಸಮನ್ವಿತಃ ।
ಸಂಪ್ರಾಪ್ಯ ಯೋಗ್ಯದ್ರವ್ಯಾಣಿ ಭುಕ್ತ್ವಾ ತ್ವಂ ತೃಪ್ತಿಮಾವಹ ॥ ೨೯ ॥

ಇತ್ಯುಕ್ತೇ ನಿಶಿ ಜಾತಾಯಾಂ ಬಲಖಾನಿರ್ಮಹಾಬಲಃ ।
ಭೋಜನಂ ಕೃತವಾಂಸ್ತತ್ರ ವಿಷಜುಷ್ಟಂ ನೃಪಾರ್ಪಿತಂ ॥ ೩೦ ॥

ಗರಲಂ ತೇನ ಸಂಭುಕ್ತಂ ನ ಮಮಾರ ವರಾಚ್ಛುಭಾತ್ ।
ತತಃ ಕಾಲೇ ಚ ಸಂಪ್ರಾಪ್ತೇ ದೃಷ್ಟ್ವಾ ನೋಹತ್ವಮಾಗತಂ ।
ಪುನರ್ಬಬಂಧ ನಿಗಡೈಸ್ತಾಡಯಾಮಾಸ ವೇತಸೈಃ ॥ ೩೧ ॥

ವಿಷದೋಷಮುಸೃಗ್ದ್ವಾರಾನ್ನಿಸ್ಸೃತಂ ಸರ್ವದೇಹತಃ ।
ತದಾ ಬುಬೋಧ ಬಲವಾನ್ ಭೂಪತಿಂ ಪ್ರಾಹ ನಮ್ರಧೀಃ ॥ ೩೨ ॥

---

೨೯. "ಇಲ್ಲಿ ನನ್ನ ಮಗಳಾದ ಗಜಮುಕ್ತಿಕೆಗೂ ಬಲಖಾನಿಗೂ ವಿವಾಹವು ನಡೆಯುವುದು. ನೀನು ವಿವಾಹ ಯೋಗ್ಯವಾದ ಮಂಗಳದ್ರವ್ಯಗಳನ್ನು ತೆಗೆಸಿಕೊಂಡು ಸೇನಾಪರಿವಾರ ಸಮೇತನಾಗಿ ಬಂದು ಮಹೋತ್ಸವವನ್ನು ನೆರವೇರಿಸಿ ಸಂತೋಷ ಪಡಬೇಕು" ಎಂದು ಬರೆದಿತ್ತು.

೩೦. ಇಷ್ಟೆಲ್ಲಾ ನಡೆಯುವುದರಲ್ಲಿ ರಾತ್ರಿಯಾಯಿತು ರಾಜನು ಬೇಕೆಂದು ಗುಟ್ಟಿನಲ್ಲಿ ವಿಷಮಿಶ್ರವಾಗಿ ಮಾಡಿಸಿದ್ದ ಆಹಾರವನ್ನು, ಶೂರನಾದ ಬಲಖಾನಿಯು ಸೇವಿಸಿದನು.

೩೧. ಹೀಗೆ ವಿಷಮಿಶ್ರವಾದ ಅನ್ನವನ್ನು ಊಟಮಾಡಿದರೂ ದೈವಾನುಗ್ರಹ ವಿದ್ದುದರಿಂದ ಬಲಖಾನಿಯು ಸಾಯಲಿಲ್ಲ. ಆದರೆ ವಿಷದ ಉಲ್ಬಣದಿಂದ ಮೂರ್ಛೆ ಹೋದನು. ಆ ಸಮಯವನ್ನೇ ನೋಡಿಕೊಂಡಿದ್ದು ಗಜಸೇನನ ಕಡೆಯವರು ಅವನನ್ನು ಬಂಧಿಸಿ ಜೊಂಡು ಮೊದಲಾದುವುಗಳಿಂದ ಬಲವಾಗಿ ಹೊಡೆದರು.

೩೨. ಊಟದಲ್ಲಿ ದೇಹಕ್ಕೆ ಸೇರಿದ್ದ ವಿಷವು, ಏಟುಬಿದ್ದ ಗಾಯದ ರಕ್ತದಮೂಲಕ ದೇಹದ ಎಲ್ಲಾ ಕಡೆಯಲ್ಲೂ ಹೊರಕ್ಕೆ ಬಂದಿತು. ಆಗ ಬಲಖಾನಿಯು ಎಚ್ಚೆತ್ತು ಗಜಸೇನ ಮಹಾರಾಜನನ್ನು ಕುರಿತು ಇಂತೆಂದನು.

ರಾಜನ್ ಕಿಮೀದೃಶಂ ಜಾತಂ ತ್ವತ್ಸೈನ್ಯಂ ತಾಡನೇ ರತಂ ।
ಸ ಆಹ ಭೋ ಮಹಾವೀರ ಮತ್ಕುಲೇ ರೀತಿರೀದೃಶೀ ।
ಯಾತನಾಂ ಪ್ರಥಮಂ ಪ್ರಾಪ್ಯ ತದನೂದ್ವಾಹಿತೋ ಭವೇತ್ ॥ ೩೩ ॥

ಇತ್ಯುಕ್ತೇ ಸತಿ ಭೂಪಾಲೇ ಗಜಮುಕ್ತಾ ಸಮಾಗತಾ ।
ಪಿತರಂ ಪ್ರಾಹ ವಚನಂ ಕೋಽಯಂ ತತ್ತಾಡನೇ ಗತಃ ॥ ೩೪ ॥

ನೃಪಃ ಪ್ರಾಹ ಸುತೇ ಶೀಘ್ರಂ ಯಾಹಿ ತ್ವಂ ನಿಜಮಂದಿರೇ ।
ಕೃಷಿಕಾರೋಽಯಮಾಯಾತೋ ದ್ರವ್ಯಾರ್ಥಂ ತಾಡನೇ ಗತಃ ॥ ೩೫ ॥

ಇತಿ ಶ್ರುತ್ವಾ ವಚೋ ಘೋರಂ ಬಲಖಾನಿರ್ಮಹಾಬಲಃ ।
ಛಿತ್ವಾ ತದ್ಬಂಧನಂ ಘೋರಂ ಖಡ್ಗಹಸ್ತಃ ಸಮಾಯಯೌ ॥ ೩೬ ॥

---

೩೩. “ ರಾಜನೇ ! ಇದೇನು ? ನಿನ್ನ ಸೈನಿಕರೆಲ್ಲ ನನ್ನನ್ನು ಹೊಡೆಯುವುದರಲ್ಲಿ ನಿರತರಾಗಿದ್ದಾರೆ ! ” ಎಂದು ಕೇಳಲು ಗಜಸೇನರಾಜನು “ ಅಯ್ಯಾ ವೀರ ! ಬಲಖಾನೀ ! ಇದು ನಮ್ಮ ಕುಲಪದ್ಧತಿ. ಮೊದಲು ನೋವನ್ನನುಭವಿಸಿ ಅನಂತರ ಮದುವೆ ಮಾಡಿಕೊಳ್ಳುವುದು ನಮ್ಮ ಕಡೆಯ ಸಂಪ್ರದಾಯವಾಗಿದೆ ” ಎಂದು ಹೇಳಿದನು.

೩೪. ರಾಜನು ಹೀಗೆ ಹೇಳುತ್ತಿರುವಾಗ ಗಜಮುಕ್ತಿಕೆಯು ಅಲ್ಲಿಗೆ ಬಂದು “ ಎಲೈ ತಂದೆಯೇ ! ಬಲಖಾನಿಯನ್ನು ಹೊಡೆಯುವುದಕ್ಕೆ ಹೋದವರು ಯಾರು ? ” ಎಂದು ಕೇಳಿದಳು.

೩೫. ಆಗ ಗಜಸೇನನು “ ಅಮ್ಮಾ ! ನೀನು ನಿನ್ನ ನಿವಾಸಕ್ಕೆ ಜಾಗ್ರತೆಯಾಗಿ ಹೋಗು. ಈ ರೈತನು (ಬಲಖಾನಿಯು) ದುಡ್ಡಿಗೋಸ್ಕರ ಬಂದಿರುವನು. ಆದರಿಂದ ಅವನನ್ನು ಹೊಡೆಯುತ್ತಿರುವರು ” ಎಂದು ಹೇಳಿದನು.

೩೬. ತನ್ನನ್ನು ದಡ್ಡನಾದ ರೈತನೆಂದು ಗಜಸೇನನು ಹೇಳಿದುದನ್ನು ಬಲಶಾಲಿಯಾದ ಬಲಖಾನಿಯು ಕೇಳಿ ಬಂಧನದಿಂದ ಬಿಡಿಸಿಕೊಂಡು ಕತ್ತಿಯನ್ನು ಹಿಡಿದು ಮುಂದೆ ಬಂದನು.

ಶೂರಾನ್ ಪಂಚಶತಂ ತಂ ಚ ರುದ್ಧ್ವಾ ಶಸ್ತ್ರೈಃ ಸಮಂತತಃ ।
ಪ್ರಜಘ್ನತಸ್ತು ತಾನ್ಸರ್ವಾನ್ ಬಲಖಾನಿರ್ವ್ಯನಾಶಯುತ್ ॥ ೩೭ ॥

ಗಜಸೇನಸುತೋ ಜ್ಯೇಷ್ಠಃ ಸೂರ್ಯದ್ಯುತಿರುಪಾಗತಃ ।
ಬದ್ಧ್ವಾ ಪುನಸ್ತಂ ಬಲಿನಂ ಗರ್ತಮಧ್ಯೇ ಸಮಾಕ್ಷಿಪತ್ ॥ ೩೮ ॥

ತಥಾ ಗತಂ ಪತಿಂ ದೃಷ್ಟ್ವಾ ಗಜಮುಕ್ತಾ ಸುದುಃಖಿತಾ ।
ನಿಶಿ ತತ್ರ ಗತಾ ದೇವೀ ದತ್ವಾ ದ್ರವ್ಯಂ ತು ರಕ್ಷಕಾನ್ ॥ ೩೯ ॥

ಪತಿಂ ನಿಷ್ಕಾಸ್ಯ ರುದತೀ ವ್ಯಜನಂ ಪತಯೇ ದದೌ ।
ರಾತ್ರೌರಾತ್ರೌ ತಥಾ ಪ್ರಾಪ್ತಾ ವ್ಯತೀತಂ ಪಕ್ಷಮಾತ್ರಕಂ ॥ ೪೦ ॥

---

೩೭. ಹೀಗೆ ಖಡ್ಗವನ್ನು ಧರಿಸಿ ಮುಂದೆ ನುಗ್ಗಿಬಂದ ಬಲಖಾನಿಯನ್ನು, ಐದುನೂರುಮಂದಿ ಶೂರರು ಆಯುಧಪಾಣಿಗಳಾಗಿ ಮೇಲೆಬಿದ್ದು ತಡೆಯಲು, ಶೂರನಾದ ಬಲಖಾನಿಯು ಅವರನ್ನೆಲ್ಲಾ ನಾಶಮಾಡಿದನು.

೩೮. ತನ್ನಕಡೆಯ ಜನರೆಲ್ಲಾ ಹೀಗೆ ನಾಶವಾದುದನ್ನು ಕಂಡು, ಗಜಸೇನನ ಹಿರಿಯಮಗನಾದ ಸೂರ್ಯದ್ಯುತಿಯು ಬಲಖಾನಿಯಮೇಲೆ ಬಿದ್ದು ಹೋರಾಡಿ ಪುನಃ ಅವನನ್ನು ಬಂಧಿಸಿ, ಒಂದು ಆಳವಾದ (ಹಳ್ಳದ ಮಧ್ಯೆ) ನೆಲಮಾಳಿಗೆಯಲ್ಲಿ ಇಟ್ಟು ಅಲ್ಲಿಗೆ ಬಲವಾದ ಕಾವಲಿಟ್ಟನು.

೩೯. ತನ್ನ ಪತಿಗೆ ಈ ಸ್ಥಿತಿಯೊದಗಿದುದನ್ನು ನೋಡಿ ಗಜಮುಕ್ತೆಯು ತುಂಬಾ ದುಃಖಿತೆಯಾಗಿ ರಾತ್ರಿಕತ್ತಲಾಗುತ್ತಲೆ ಬಲಖಾನಿಯಿದ್ದ ಸ್ಥಳಕ್ಕೆ ಹೋಗಿ ಕಾವಲುಗಾರರಿಗೆ ಸಮೃದ್ಧಿಯಾಗಿ ಲಂಚಕೊಟ್ಟು, ಗಂಡನನ್ನು ನೆಲಮಾಳಿಗೆಯಿಂದ ಈಚೆಗೆ ಬಿಡಿಸಿದಳು.

೪೦. ಅನಂತರ ಅವನಿಗಾದ ಗಾಯಕ್ಕಾಗಿ ದುಃಖಿಸುತ್ತಾ ಬೀಸಣಿಗೆಯಿಂದ ಬೀಸಿ ಉಪಚರಿಸಿದಳು. ಈರೀತಿಯಾಗಿ ಪ್ರತಿನಿತ್ಯವೂ ರಾತ್ರಿಯವೇಳೆ ಬಂದು ಗಂಡನನ್ನು ಉಪಚರಿಸಿ ಹಿಂದಿರುಗುತ್ತಿದ್ದಳು. ಹೀಗೆ ಹದಿನೈದು ದಿನಗಳು ಕಳೆದುವು.

**ಏತಸ್ಮಿನ್ನಂತರೇ ವೀರಶ್ಚಾಹ್ಲಾದಃ ಸಪ್ತಲಕ್ಷಕೈಃ ।**
**ಸೈನ್ಯೈಃ ಸಹಾಯಯೌ ಶೀಘ್ರಂ ಶ್ರುತ್ವಾ ತತ್ರೈವ ಕಾರಣಂ ॥ ೪೧ ॥**

**ಬಲಖಾನಿರ್ಗತೋ ಗರ್ತೇ ರುರೋಧ ನಗರೀಂ ತದಾ ।**
**ಗಜೈಃ ಷೋಡಶಸಾಹಸ್ರೈರ್ಗಜಸೇನೋ ರಣಂ ಯಯೌ ॥ ೪೨ ॥**

**ತ್ರಿಲಕ್ಷೈಶ್ಚ ಹಯೈಃ ಸಾರ್ಧಂ ಸೂರ್ಯದ್ಯುತಿರುಪಾಯಯೌ ।**
**ಕಾಂತಾಮಲಸ್ತದಾ ಪ್ರಾಪ್ತಸ್ತ್ರಿಲಕ್ಷೈಶ್ಚ ಪದಾತಿಭಿಃ ॥ ೪೩ ॥**

**ತಯೋಶ್ಚಾಸೀನ್ಮಹದ್ಯುದ್ಧಮಹೋರಾತ್ರಂ ಹಿ ಸೈನ್ಯಯೋಃ ।**
**ರಕ್ಷಿತೇ ತಾಲನಾದ್ಯೇ ಚ ಗಜಸೇನಾದ್ಯಕೇ ತದಾ ॥ ೪೪ ॥**

**ದ್ವಿತೀಯೇಽಹ್ನಿ ಸಮಾಯಾತೇ ಗಜಸೇನೋ ಮಹಾಬಲಃ ।**
**ಪ್ರಭಗ್ನಂ ಸ್ವಬಲಂ ದೃಷ್ಟ್ವಾ ಪಾವಕೀಯಂ ಸಮಾರುಹತ್ ॥ ೪೫ ॥**

---

೪೧. ಇಷ್ಟರಲ್ಲಿ ವೀರನಾದ ಆಹ್ಲಾದನು ಬಲಖಾನಿಗೆ ಉಂಟಾಗಿರುವ ವಿಪತ್ತಿಗೆ ಕಾರಣವನ್ನು ತಿಳಿದು ಏಳುಲಕ್ಷ ಸೈನ್ಯದೊಡನೆ ಜಾಗ್ರತೆಯಾಗಿ ಅಲ್ಲಿಗೆ ಬಂದನು.

೪೨. ಅವರು ಬಂದುದನ್ನು ಕೇಳಿ ಬಲಖಾನಿಯು ಪುನಃ ನೆಲಮಾಳಿಗೆಗೇ ಹೋಗಿ ಇರತೊಡಗಿದನು. ಸೇನಾಸಮೇತನಾಗಿ ಬಂದ ಆಹ್ಲಾದನು ಗಜಸೇನನ ನಗರವನ್ನು ಮುತ್ತಿದನು. ಆಗ ಗಜಸೇನನು ತನ್ನ ಹದಿನಾರುಸಾವಿರ ಗಜಯೋಧರೊಡಗೂಡಿ ಆಹ್ಲಾದನಮೇಲೆ ಯುದ್ಧಕ್ಕೆ ಹೊರಟನು.

೪೩. ಇವನ ಹಿರಿಯಮಗನಾದ ಸೂರ್ಯದ್ಯುತಿಯು ಮೂರುಲಕ್ಷ ಕುದುರೆಯ ಸವಾರರ ಸಮೇತನಾಗಿ ತಂದೆಯ ಸಹಾಯಕ್ಕೆ ಬಂದನು. ಇನ್ನೊಬ್ಬ ಮಗನಾದ ಕಾಂತಾಮಲನೂ ಸಹ ಮೂರುಲಕ್ಷ ಪದಾತಿಸೈನ್ಯದೊಡನೆ ಬಂದು ಇವರ ಜತೆಗೆ ಸೇರಿದನು.

೪೪. ತಾಲನನ ಮೇಲ್ವಿಚಾರಣೆಯಲ್ಲಿದ್ದ ಆಹ್ಲಾದನ ಸೈನ್ಯಕ್ಕೂ, ಗಜಸೇನನ ಪಕ್ಷದ ಸೇನೆಗೂ, ಹಗಲೂ ರಾತ್ರಿ ಬಿಡುವಿಲ್ಲದೆ ಘೋರವಾದ ಯುದ್ಧನಡೆಯಿತು.

೪೫. ಹೀಗೆ ಒಂದುದಿನ ಕಳೆಯಿತು. ಮಾರನೆಯದಿನ ಬೆಳಗಾಗುತ್ತಲೆ ಮಹಾಬಲಶಾಲಿಯಾದ ಗಜಸೇನನು ತನ್ನ ಕಡೆಯ ಸೈನ್ಯವು ನಾಶವಾಗುತ್ತಿರುವುದನ್ನುನೋಡಿ, ತನಗೆ ಅಗ್ನಿದೇವನು ಕೃಪೆಮಾಡಿಕೊಟ್ಟಿದ್ದ ಅಶ್ವವನ್ನೇರಿ ತಾಲನನ ಮೇಲ್ವಿಚಾರಣೆಯಲ್ಲಿದ್ದ ಸೈನ್ಯವನ್ನೆಲ್ಲಾ ಅಗ್ನಿಪ್ರಭಾವದಿಂದ ಸುಟ್ಟುಬಿಟ್ಟನು.

ದಾಹಯಾಮಾಸ ತತ್ಸೈನ್ಯಂ ತಾಲನಾದ್ಯೈಶ್ಚ ಪಾಲಿತಂ ।
ಭಸ್ಮೀಭೂತಂ ಬಲಂ ದೃಷ್ಟ್ವಾ ತಾಲನಃ ಶತ್ರುಸಂಮುಖೇ ।
ಗತ್ವಾ ಭಲ್ಲೇನ ಭೂಪಾಲಂ ತಾಡಯಾಮಾಸ ವೇಗತಃ ॥ ೪೬ ॥

ಮೂರ್ಛಿತಂ ನೃಪಮಾಜ್ಞಾಯ ಸೂರ್ಯದ್ಯುತಿರುಪಾಯಯೌ ।
ಪಾವಕೀಯಂ ಸಮಾರುಹ್ಯ ದಾಹಯಾಮಾಸ ತಾಲನಂ ॥ ೪೭ ॥

ಏತಸ್ಮಿನ್ನಂತರೇ ಶೂರೌ ದೇವೌ ಚಾಹ್ಲಾದಕೃಷ್ಣಕೌ ।
ಬಬಂಧತೂ ರುಷಾವಿಷ್ಟೌ ಸೂರ್ಯದ್ಯುತಿಮರಿಂದಮಂ ॥ ೪೮ ॥

ಸುಬದ್ಧಂ ಭ್ರಾತರಂ ಜ್ಞಾತ್ವಾ ಹಯಂ ಕಾಂತಾಮಲೋಽರುಹತ್ ।
ದೇವಸಿಂಹಂ ಚ ಸಂಮೋಹ್ಯ ಕೃಷ್ಣಾಂಶಂ ಪ್ರತಿ ಸೋಽಗಮತ್ ॥ ೪೯ ॥

---

೪೬. ತನ್ನ ಸೈನ್ಯವು ಗಜಸೇನನಿಂದ ಹೀಗೆ ಭಸ್ಮವಾದುದನ್ನು ನೋಡಿ, ತಾಲನನು ಗಜಸೇನನ ಎದುರಿಗೆ ಬಂದು, ಅವನನ್ನು ತನ್ನ ಭಲ್ಲೆಯದಿಂದ ತೀಕ್ಷ್ಣವಾಗಿ ಇರಿದನು,

೪೭. ಈ ಇರಿತದಿಂದ ಗಜಸೇನನು ಮೂರ್ಛೆಹೊಂದಿದನು. ಕೂಡಲೆ ಅವನ ಮಗನಾದ ಸೂರ್ಯದ್ಯುತಿಯು ಅಲ್ಲಿಗೆ ಬಂದು, ಅಗ್ನಿದತ್ತವಾದ ಆ ಅಶ್ವವನ್ನು ತಾನೇ ಏರಿ, ಅದರ ಪ್ರಭಾವದಿಂದ ತಾಲನನನ್ನೇ ಸುಟ್ಟುಹಾಕಿದನು

೪೮. ಈ ಸಮಯದಲ್ಲಿ ಶೂರರೂ ದೇವಾಂಶಸಂಭೂತರೂ ಆದ ಆಹ್ಲಾದ, ಕೃಷ್ಣಾಂಶ ಇವರಿಬ್ಬರೂ ಕೋಪಗೊಂಡು ಶತ್ರುನಾಶಕನಾದ ಆ ಸೂರ್ಯದ್ಯುತಿಯನ್ನು ಕಟ್ಟಿಹಾಕಿದರು.

೪೯. ತನ್ನ ಅಣ್ಣನಾದ ಸೂರ್ಯದ್ಯುತಿಯು ಬಂಧನಕ್ಕೆ ಸಿಕ್ಕಿದುದನ್ನು ನೋಡಿ, ತಮ್ಮನಾದ ಕಾಂತಾಮಲನು ಅಗ್ನಿದತ್ತವಾದ ಆ ಅಶ್ವವನ್ನು ತಾನು ಏರಿ, ದೇವಸಿಂಹನನ್ನು ಮೂರ್ಛೆಗೊಳಿಸಿ ಕೃಷ್ಣಾಂಶನಿದ್ದ ಕಡೆಗೆ ಬಂದು ಕೃಷ್ಣಾಂಶನನ್ನು ಹಿಡಿದು ಅವನ ತೇಜಸ್ಸನ್ನು ಅಪಹರಿಸಿದನು.

ಗೃಹೀತ್ವಾ ತಂ ಸ ಕೃಷ್ಣಾಂಶಂ ತಸ್ಯ ತೇಜಃ ಸಮಾಹರತ್ ।
ಸಪ್ತಲಕ್ಷಬಲಂ ಸರ್ವಂ ವಹ್ನೀಭೂತಮಭೂತ್ತದಾ ।
ಅಮರತ್ವಾತ್ಸ ಆಹ್ಲಾದಸ್ತದಾ ತು ಸಮಜೀವಯತ್ ॥ ೫೦ ॥

ಗಜಸೇನಸ್ಯಾರ್ಧಸೈನ್ಯಂ ತ್ವೈಶ್ಚ ಸರ್ವೈರ್ವಿನಾಶಿತಂ ।
ವಿಜಯಂ ನೃಪತಿಃ ಪ್ರಾಪ್ಯ ಹರ್ಷಿತೋ ಗೇಹಮಾಯಯೌ ॥ ೫೧ ॥

ವಹ್ನೀಭೂತಂ ಚ ಕೃಷ್ಣಾಂಶಂ ದೃಷ್ಟ್ವಾಹ್ಲಾದಃ ಸುದುಃಖಿತಃ ।
ದುರ್ಗಾಂ ದೇವೀಂ ಸ ತುಷ್ಟಾವ ಮನಸಾ ರಣಮೂರ್ಧನಿ ॥ ೫೨ ॥

ತದಾ ದೇವೀ ವಚಃ ಪ್ರಾಹ ವತ್ಸ ತೇ ಪುತ್ರ ಏವ ಚ ।
ಸ್ವರ್ಗಾದಾಗತ್ಯ ಸರ್ವಾಣಿ ಪುನರುಜ್ಜೀವಯಿಷ್ಯತಿ ॥ ೫೩ ॥

---

೫೦ ಅನಂತರ ಆಹ್ಲಾದನ ಏಳುಲಕ್ಷ ಸೇನೆಯೂ ಅಗ್ನಿಗೆ ಆಹುತಿಯಾಯಿತು. ಅಮರತ್ವ (ಚಿರಂಜೀವಿತ್ವ) ವನ್ನು ಪಡೆದಿದ್ದ ಕಾರಣ ಆಹ್ಲಾದನೊಬ್ಬನು ಮಾತ್ರ ಆಗ ಸಾಯದೆ ಉಳಿದುಕೊಂಡನು.

೫೧. ಗಜಸೇನನ ಕಡೆಯಲ್ಲಿ ಅರ್ಧದಷ್ಟು ಸೇನೆಯನ್ನೇನೋ ತಾಲನ ಮೊದಲಾದವರು ಧ್ವಂಸ ಮಾಡಿದ್ದರು. ಆದರೂ ಕೊನೆಗೆ ಗಜಸೇನ ಮಹಾರಾಜನೇ ವಿಜಯಿಯಾಗಿ ಸಂತೋಷದಿಂದ ತನ್ನ ಅರಮನೆಗೆ ಬಂದನು.

೫೨. ಕೃಷ್ಣಾಂಶನೂ ಸುಟ್ಟುಹೋದುದನ್ನು ನೋಡಿ, ಆಹ್ಲಾದನು ಬಹು ದುಃಖಗೊಂಡು ರಣರಂಗದಲ್ಲಿಯೇ ಶುದ್ಧಾಂತಃಕರಣದಿಂದ ದುರ್ಗಾದೇವಿಯನ್ನು ಸ್ತುತಿಸಿದನು.

೫೩. ಆಗ ದುರ್ಗಾದೇವಿಯು ಪ್ರಸನ್ನೆಯಾಗಿ "ವತ್ಸಾ! ನಿನ್ನ ಪುತ್ರನಾದ ಇಂದುಲನು ಸ್ವರ್ಗದಿಂದ ಬಂದು ನಿಮ್ಮವರೆಲ್ಲರನ್ನೂ ಪುನಃ ಬದುಕಿಸುವನು" ಎಂದು ಹೇಳಿದಳು.

ಇತ್ಯುಕ್ತೇ ವಚನೇ ದೇವ್ಯಾ ಇಂದುಲೋ ವಾಸವಾಜ್ಞಯಾ ।
ದ್ವಾದಶಾಬ್ದಸಮಂ ರೂಪಂ ಧೃತ್ವಾ ವಿದ್ಯಾವಿಶಾರದಃ ।
ವಡವಾಮೃತಮಾರುಹ್ಯ ಹಯಂ ತತ್ರ ಸಮಾಗತಃ ॥ ೫೪ ॥

ತದಂಗಾದುದ್ಧೃತಾ ವಾಹಾ ಮೇಘಾ ಇವ ಸಮಂತತಃ ।
ಪಾವಕಂ ಶಮಯಾಮಾಸುಸ್ತ್ರಯಸ್ತೇ ದೇವತೋಪಮಾಃ ॥ ೫೫ ॥

ಶಮೀಭೂತೇ ತದಾ ವಹ್ನೌ ಸ್ವಮುಖಾತ್ಸ ಹಯೋ ಮುದಾ ।
ಲಾಲಾಮುದ್ವಾಹಯಾಮಾಸ ತಯಾ ತೇ ಜೀವಿತಾಸ್ತತಃ ॥ ೫೬ ॥

ಜೀವಿತೇ ಸಪ್ತಲಕ್ಷೇ ತು ಶಮೀಭೂತೇ ಹಿ ಪಾವಕೇ ।
ಗಜಸೇನಃ ಸುತಾಭ್ಯಾಂ ಚ ಪ್ರಯಾತಃ ಸರ್ವತೋ ದಿಶಂ ॥ ೫೭ ॥

---

೫೪. ದೇವಿಯು ಇಷ್ಟುಹೇಳಿ ಹೊರಟು ಹೋದಳು. ಅತ್ತಲಾಗಿ ಸ್ವರ್ಗದಲ್ಲಿ ಇಂದ್ರನು ಇಂದುಲನಿಗೆ ಮುಂದಿನ ಕರ್ತವ್ಯವನ್ನು ಆಜ್ಞಾಪಿಸಲು, ಆ ಇಂದುಲನು ಹನ್ನೆರಡುವರ್ಷದ ಬಾಲಕನ ರೂಪವನ್ನು ಧರಿಸಿ ಸಕಲ ವಿದ್ಯಾ ನಿಪುಣನಾಗಿ ವಡಬಾಮೃತವೆಂಬ ಅಶ್ವವನ್ನೇರಿ ಶೀಘ್ರವಾಗಿ ಆಹ್ಲಾದನು ಇದ್ದ ರಣಭೂಮಿಗೆ ಬಂದನು.

೫೫. ಇಂದುಲನು ಏರಿದ್ದ ವಡಬಾಮೃತವೆಂಬ ಕುದುರೆಯ ಶರೀರದಿಂದ ಹೊರಟ ವಾಯುವು ಮೇಘಗಳಂತೆ ಸುತ್ತಲೂ ಹರಡಿ ಅಲ್ಲಿ ದಹಿಸುತ್ತಿದ್ದ ಅಗ್ನಿಯನ್ನು ಆರಿಸಿಬಿಟ್ಟಿತು. ಕೂಡಲೆ ದೇವಾಂಶಸಂಭೂತನಾದ ಕೃಷ್ಣಾಂಶ ಮುಂತಾದ ಮೂವರೂ ಎಚ್ಚೆತ್ತರು.

೫೬. ಅಗ್ನಿಜ್ವಾಲೆಯೆಲ್ಲಾ ಶಾಂತವಾದಮೇಲೆ ಆ ವಡಬಾಮೃತಾಶ್ವವು ಸಂತೋಷಗೊಂಡು ತನ್ನ ಮುಖದಿಂದ ಲಾಲಾರಸವನ್ನು (ಜೊಲ್ಲು) ಸ್ರವಿಸಿ ಎಲ್ಲರ ದಗ್ಧ ಕಳೇಬರದಮೇಲೆ ಹರಿಯುವಂತೆ ಮಾಡಿತು. ಇದರ ಸಂಪರ್ಕದಿಂದ ಅವರೆಲ್ಲರೂ ಪುನಃ ಬದುಕಿಕೊಂಡರು.

೫೭. ಹೀಗೆ ಅಗ್ನಿಯೂ ಶಾಂತವಾಗಿ ಎದುರಾಳಿಗಳ ಏಳುಲಕ್ಷ ಸೈನ್ಯವೂ ಮತ್ತೆ ಜೀವಿತವಾದುದನ್ನು ನೋಡಿ ಮುಂದುಗಾಣದೆ ಗಜಸೇನ ಮಹಾರಾಜನೂ ಅವನ ಇಬ್ಬರು ಮಕ್ಕಳಾದ ಸೂರ್ಯದ್ಯುತಿ, ಕಾಂತಾಮಲರೂ ದಿಕ್ಕಾಪಾಲಾಗಿ ಓಡಿ ಹೋದರು.

ಲಕ್ಷಂ ಸೈನ್ಯಂ ತು ಯೇ ಶಿಷ್ಟಾಸ್ತೇ ಸರ್ವೇಽಪಿ ಭಯಾತುರಾಃ ।
ದುದ್ರುವುರ್ಭಾರ್ಗವಶ್ರೇಷ್ಠ ದಿವ್ಯರೂಪತ್ವಧಾರಿಣಃ ॥ ೫೮ ॥

ಕೇಚಿತ್ಸಂನ್ಯಾಸಿನೋ ಭೂತ್ವಾ ಕೇಚಿದ್ವೈ ಬ್ರಹ್ಮಚಾರಿಣಃ ।
ಜೀವತ್ವಂ ಪ್ರಾಪ್ತವಂತಸ್ತೇ ತಥಾಽನ್ಯೇ ಸಂಕ್ಷಯಂ ಗತಾಃ ॥ ೫೯ ॥

ಬದ್ಧ್ವಾ ತಾನ್ ಗಜಸೇನಾದೀಂಸ್ತ್ರೀನ್ ಭೂಪಾನ್ ಸ ಚ ತಾಲನಃ ।
ಕೃಷ್ಣಾಂಶೇನ ಸಮಾಯುಕ್ತ ಇಂದ್ರದುರ್ಗಂ ಸಮಾಯಯೌ ॥ ೬೦ ॥

ಬಲಖಾನಿಂ ಚ ನಿಷ್ಕಾಸ್ಯ ತಾಲನಸ್ತದನಂತರಂ ।
ಪೃಷ್ಟವಾನ್ ಕಾರಣಂ ಸರ್ವಂ ಶ್ರುತ್ವಾ ತನ್ಮುಖತೋ ವಚಃ ।
ತಾನ್ವೀರಾನ್ತಾಡಯಾಮಾಸ ವೇತಸೈಸ್ತಂಭಬಂಧನೈಃ ॥ ೬೧ ॥

---

೫೮. ಅಯ್ಯಾ ಭೃಗುಶ್ರೇಷ್ಠಾ ! ಕೇಳು ; ಗಜಸೇನನಕಡೆ ಕಳೆದುಳಿದ ಲಕ್ಷ ಸೈನ್ಯವು ಭಯದಿಂದ ಗಾಬರಿಹೊಂದಿ ವೇಷಗಳನ್ನು ಮರೆಸಿಕೊಂಡು ಪಲಾಯನ ಮಾಡಿತು

೫೯. ಅವರಲ್ಲಿ ಕೆಲವರು ಸನ್ಯಾಸಿ ವೇಷಧಾರಿಗಳಾಗಿಯೂ, ಹಲವರು ಬ್ರಹ್ಮಚಾರಿ ವೇಷವನ್ನು ಧರಿಸಿಯೂ, ಪ್ರಾಣ ಉಳಿಸಿಕೊಂಡರು. ಉಳಿದವರು ಹತರಾದರು.

೬೦. ಬಳಿಕ ಶೂರನಾದ ತಾಲನನು ಗಜಸೇನ, ಸೂರ್ಯದ್ಯುತಿ, ಕಾಂತಾಮಲ ಈ ಮೂವರನ್ನೂ ಹುಡುಕಿಸಿ ಪತ್ತೆಹಚ್ಚಿ, ಅವರನ್ನು ಬಲವಾಗಿ ಬಂಧಿಸಿ, ಕೃಷ್ಣಾಂಶನೊಡನೆ ಇಂದ್ರದುರ್ಗವೆಂಬ ಸ್ಥಳಕ್ಕೆ ಬಂದನು.

೬೧. ತಾಲನನು ಅಲ್ಲಿ ಬಂಧಿತನಾಗಿದ್ದ ಬಲಖಾನಿಯನ್ನು ಬಿಡಿಸಿದನು. ಶೂರನಾದ ಅವನಿಗೆ ಈರೀತಿ ಸಂಭವಿಸಿದ್ದಕ್ಕೆ ಮೂಲಕಾರಣವನ್ನು ಅವನ ಬಾಯಿಂದಲೇ ತಿಳಿದುಕೊಂಡನು. ಬಳಿಕ ಗಜಸೇನ, ಸೂರ್ಯದ್ಯುತಿ, ಕಾಂತಾಮಲ ಈ ಮೂವರು ವೀರರನ್ನೂ ಕಂಬಗಳಿಗೆ ಕಟ್ಟಿ, ಬಲಖಾನಿಯನ್ನು ಹೊಡೆಯಿಸಿದ್ದ ಜೊಂಡಿನಿಂದಲೇ ಅವರನ್ನು ಬಲವಾಗಿ ಹೊಡೆದನು.

ಗಜಮುಕ್ತಾಜ್ಞಯಾ ವಿಪ್ರ ಸೇನಾಪತಿರುದಾರಧೀಃ ।
ತಾಲನಸ್ತಾನ್ಸಮುತ್ಸೃಜ್ಯ ವಿವಾಹಾರ್ಥಂ ಸಮಾಯಯೌ ।
ಬಲಖಾನಿರ್ಹಯಾರೂಢೋ ಗಜಮುಕ್ತಾ ಚ ಮಂಡಪೇ ॥ ೬೨ ॥

ಗಜಸೇನಸ್ತದಾ ದಿವ್ಯೈರ್ಭೋಜನೈಸ್ತಾನಭೋಜಯತ್ ।
ನಿವಾಸ್ಯ ಲೋಹದುರ್ಗೇ ತಾನ್ ಕಪಾಟೈಃ ಸುದೃಢೀಕೃತಃ ।
ಲಕ್ಷಶೂರಾನ್ಸ ಸಂಸ್ಥಾಪ್ಯ ಸ್ವಯಂ ರುದ್ಧಪುರಂ ಯಯೌ ॥ ೬೩ ॥

ತೇ ರಾತ್ರೌ ಲೋಹದುರ್ಗೇ ತು ಹ್ಯುಷಿತ್ವಾ ಯತ್ನತೋ ಬಲಾತ್ ।
ಪ್ರಭಾತೇ ಚ ಕಪಾಟೇ ನ ದ್ವಾರಂ ದೃಷ್ಟ್ವಾ ತದಾಬ್ರವೀತ್ ।
ದ್ವಾರಮುದ್ಘಾಟಯಾಶು ತ್ವಂ ನೋಚೇತ್ಪ್ರಾಣಾಂಸ್ತ್ಯಜಿಷ್ಯಸಿ ॥ ೬೪ ॥

---

೬೨. ಎಲೈ ವಿಪ್ರನೇ ! ಕೇಳು, ಬಳಿಕ ಗಜಮುಕ್ತೆಯು ಬಂದು ಸೂಚಿಸಿದ ಮೇರೆ, ಉದಾರಮನಸ್ಸುಳ್ಳ ಆ ತಾಲನನು ಗಜಸೇನನನ್ನೂ, ಅವನ ಮಕ್ಕಳನ್ನೂ, ಕಂಬದಿಂದ ಬಿಚ್ಚಿ ಕಳುಹಿಸಿ ಕೊಟ್ಟು, ಬಲಖಾನಿಯ ವಿವಾಹಾರ್ಥವಾಗಿ ಎಲ್ಲರೂ ಹೊರಟರು. ಆ ಉತ್ಸವ ಸಮಾರಂಭದಲ್ಲಿ ಬಲಖಾನಿಯು ಕುದುರೆಯಮೇಲೆ ಕುಳಿತಿದ್ದನು. ಗಜಮುಕ್ತೆಯು ಮಂಟಪದಲ್ಲಿದ್ದಳು.

೬೩. ಗಜಸೇನ ಮಹಾರಾಜನು ಅವರಿಗೆ ಮೃಷ್ಟಾನ್ನ ಭೋಜನಮಾಡಿಸಿದರೂ ದ್ವೇಷಸಾಧನೆಗಾಗಿ ಪುನಃ ಅವರನ್ನೆಲ್ಲಾ ಲೋಹ ನಿರ್ಮಿತವಾದ ಪಂಜರದಲ್ಲಿ ಸೆರೆಯಿಟ್ಟು ಬಾಗಿಲನ್ನು ಭದ್ರಪಡಿಸಿ, ಅದಕ್ಕೆ ಒಂದುಲಕ್ಷಮಂದಿ ಶೂರರನ್ನು ಕಾವಲಾಗಿಟ್ಟು ಆ ನಗರವನ್ನು ಸಹ ಭದ್ರಪಡಿಸಿ ತನ್ನ ನಿವಾಸವನ್ನು ಸೇರಿದನು.

೬೪. ಕೃಷ್ಣಾಂಶ ಮೊದಲಾದವರು ಆ ಲೋಹದುರ್ಗದಲ್ಲಿ ಕಷ್ಟದಿಂದ ಆ ರಾತ್ರಿಯನ್ನು ಕಳೆದು, ಬೆಳಗಾಗುತ್ತಲೆ ಹೊರಗೆ ಹೋಗಲು ಎಲ್ಲಿಯೂ ಮಾರ್ಗವನ್ನು ಕಾಣದೆ, ಹೊರಗಿದ್ದ ಕಾವಲುಗಾರರನ್ನು ಕುರಿತು “ ಅಯ್ಯಾ ಸೇನಾಪತೀ ! ನೀನು ಈ ಕೂಡಲೇ ಬಾಗಿಲನ್ನು ತೆಗೆದರೆ ಸರಿ. ಇಲ್ಲದಿದ್ದರೆ ನಿನ್ನ ಪ್ರಾಣಕ್ಕೇ ಅಪಾಯವಾದೀತು ” ಎಂಬದಾಗಿ ಹೇಳಿದರು.

ಇತಿ ಸೇನಾಪತಿಃ ಶ್ರುತ್ವಾ ಲಕ್ಷಶೂರಾನ್ಸಮಾದಿಶತ್ ।
ನಾನಾಯತ್ನೈಶ್ಚ ಹಂತವ್ಯಾಃ ಶತ್ರವೋ ಭಯಕಾರಿಣಃ　　॥ ೬೫ ॥

ಇತಿ ಶ್ರುತ್ವಾ ತು ತೇ ಶೂರಾಃ ಶತಘ್ನ್ಯಸ್ತ್ರೈಸ್ಸುರೋಪಿತಾಃ ।
ಏಕೈಕಂ ಕ್ರಮಶೋ ಜಘ್ನುರ್ವೃಂದಂ ತೇ ವೈರತತ್ಪರಾಃ　　॥ ೬೬ ॥

ಹತೇ ದಶಸಹಸ್ರೇ ತು ಕೃಷ್ಣಾಂಶೋ ಬಿಂದುಲಂ ಹಯಂ ।
ಸಮಾರುಹ್ಯ ಜಘಾನಾಶು ಸ್ವಖಡ್ಗೇನ ಮಹದ್ಬಲಂ　　॥ ೬೭ ॥

ಹತಶೇಷಾ ಭಯಾರ್ತಾಶ್ಚ ಸಹಸ್ರಾಶೀತಿಸಂಮಿತಾಃ ।
ಇಂದ್ರದುರ್ಗಂ ಪ್ರತಿ ಪ್ರಾಹುರ್ಯಥಾಜಾತೋ ಬಲಕ್ಷಯಃ　　॥ ೬೮ ॥

---

೬೫. ಕೃಷ್ಣಾಂಶನು ಹೀಗೆ ಹೇಳಿದುದನ್ನು ಕೇಳಿ, ಸೇನಾಪತಿಯು ತನ್ನ ಕಡೆಯವರಾದ ಒಂದುಲಕ್ಷಮಂದಿ ಸೈನಿಕರನ್ನು ಕುರಿತು "ಈ ಶತ್ರುಗಳು ಯಾವಾಗಲೂ ನಮಗೆ ಭಯೋತ್ಪಾದನೆಯಾಗುವ ಮಾತನ್ನೇ ಆಡುತ್ತಿದಾರೆ. ಆದುದರಿಂದ ಇವರನ್ನು ಸರ್ವಪ್ರಯತ್ನಗಳಿಂದ ಕೊಂದುಹಾಕಿ ಬಿಡಬೇಕು" ಎಂದು ಆಜ್ಞಾಪಿಸಿದನು

೬೬. ಸೇನಾಪತಿಯು ಈ ಪ್ರಕಾರವಾಗಿ ಆಡಿದ ಮಾತನ್ನು ಕೇಳಿ, ಆ ಶೂರರು ಈ ಜನಗಳನ್ನು ವೈರಿಗಳೆಂದೆಣಿಸುತ್ತಾ ಫಿರಂಗಿಗಳನ್ನು ಏರಿಸಿ, ಕ್ರಮವರಿತು ಒಬ್ಬೊಬ್ಬನಂತೆ, ಆ ಗುಂಪಿನವರನೇಕರನ್ನು ಕೊಂದುಹಾಕಿದರು.

೬೭. ಹೀಗೆ ಹತ್ತು ಸಾವಿರ ಜನರು ಮೃತರಾದಮೇಲೆ ಕೃಷ್ಣಾಂಶನು ಬಿಂದುಲವೆಂಬ ತನ್ನ ಕುದುರೆಯನ್ನೇರಿ ಶತ್ರುಪಕ್ಷದ ಅನೇಕಮಂದಿ ಸೈನಿಕರನ್ನು ತನ್ನ ಖಡ್ಗಪ್ರಹಾರದಿಂದ ಧ್ವಂಸಮಾಡಿದನು.

೬೮. ಕಳೆದು ಉಳಿದ ಎಂಬತ್ತುಸಾವಿರ ಸೈನಿಕರು ಹೆದರಿ ಇಂದ್ರದುರ್ಗಕ್ಕೆ ಬಂದು, ಅಲ್ಲಿ ತಮಗೆ ಪರಾಜಯವಾದ ವೃತ್ತಾಂತವನ್ನು ಗಜಸೇನ ಮಹಾರಾಜನಿಗೆ ವಿವರವಾಗಿ ತಿಳಿಸಿದರು.

ಶ್ರುತ್ವಾ ಭಯಾತುರೋ ರಾಜಾ ಸ್ವಸುತಾಭ್ಯಾಂ ಸಮನ್ವಿತಃ ।
ಗಜಮುಕ್ತಾಂ ಪುರಸ್ಕೃತ್ಯ ಬಹುದ್ರವ್ಯಸಮನ್ವಿತಾಂ ।
ಸ್ವಪಾಪಂ ಕ್ಷಾಲಯಾಮಾಸ ದತ್ವಾ ಕನ್ಯಾಂ ವಿಧಾನತಃ ॥ ೬೯ ॥

ಷೋಡಶೋಷ್ಟ್ರಾಣಿ ಸ್ವರ್ಣಾನಿ ಗೃಹೀತ್ವಾಹ್ಲಾದ ಏವ ಸಃ ।
ಯಯೌ ಸ್ವಗೇಹಂ ಮುದಿತಃ ಪುತ್ರಭ್ರಾತೃಸಮನ್ವಿತಃ ॥ ೭೦ ॥

ಸಂಪ್ರಾಪ್ತೇ ಗೇಹಮಾಹ್ಲಾದೇ ದೇವೀ ಸ್ವರ್ಣವತೀ ಸ್ವಯಂ ।
ಇಂದುಲಂ ಸ್ವಾಂಕಮಾರೋಪ್ಯ ಲಲಾಪ ಕರುಣಂ ಬಹು ॥ ೭೧ ॥

ಮೃತಾಹಂ ಚ ತ್ವಯಾ ಪುತ್ರ ಪುನರುಜ್ಜೀವಿತಾ ಖಲು ।
ಧನ್ಯಾಹಂ ಕೃತಕೃತ್ಯಾಸ್ಮಿ ಜಯಂತ ತವ ದರ್ಶನಾತ್ ॥ ೭೨ ॥

---

೬೯. ರಾಜನು ಇದನ್ನು ಕೇಳಿ ತನ್ನ ಇಬ್ಬರು ಮಕ್ಕಳನ್ನೂ ಕರೆದುಕೊಂಡು ಬಹು ದ್ರವ್ಯಗಳನ್ನು ತೆಗೆಯಿಸಿಕೊಂಡು, ಮಗಳಾದ ಗಜಮುಕ್ತೆಯೊಡನೆ ಅಲ್ಲಿಗೆ ಬಂದು ಬಲಖಾನಿಗೆ ತನ್ನ ಮಗಳನ್ನು ಶಾಸ್ತ್ರೋಕ್ತ ರೀತಿಯಿಂದ ವಿವಾಹಮಾಡಿ ಆ ಕನ್ಯಾದಾನದಿಂದ ತಾನು ಮಾಡಿದ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಂಡನು.

೭೦. ಆಹ್ಲಾದನು ಹದಿನಾರು ಒಂಟೆಗಳ ಮೇಲೆ ಹೇರುವಷ್ಟು ಚಿನ್ನವನ್ನು ತೆಗೆದುಕೊಂಡು ಸಹೋದರರೊಡನೆಯೂ ಪುತ್ರನೊಡನೆಯೂ ಕೂಡಿ ತನ್ನ ಊರಿಗೆ ಬಂದನು.

೭೧-೭೨. ಆಹ್ಲಾದನು ಮನೆಗೆ ಬಂದಮೇಲೆ ಸ್ವರ್ಣವತೀ ದೇವಿಯು ತನ್ನ ಕುಮಾರನಾದ ಇಂದುಲನು ಬಂದಿರುವುದನ್ನು ನೋಡಿ, ಅವನನ್ನು ಕರೆದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ದೈನ್ಯದಿಂದ ಗೋಳಾಡುತ್ತಾ "ಇಲ್ಲಿಯವರೆಗೆ ನೀನು ಇಲ್ಲದುದರಿಂದ ಮೃತಪ್ರಾಯಳಾಗಿದ್ದ ನಾನು ಈಗ ನಿನ್ನ ದರ್ಶನದಿಂದ ಪುನಃ ಬದುಕಿದೆನು. ಮತ್ತು ಧನ್ಯೆಯೂ ಕೃತಕೃತ್ಯೆಯೂ ಆದೆನು" ಎಂದು ಹೇಳಿದಳು.

ಇತಿ ಶ್ರುತ್ವೇಂದುಲೋ ವೀರೋ ನತ್ವಾಹ ಜನನೀಂ ಮುದಾ ।
ಅನೃಣಂ ನಾಧಿಗಚ್ಛಾಮಿ ತ್ವತ್ತೋ ಮಾತಃ ಕದಾಚನ　　॥ ೭೩ ॥

ಸಂಪ್ರಾಪ್ತೇ ಗೇಹಮಾಹ್ಲಾದೇ ರಾಜಾ ಪರಿಮಲಃ ಸುಧೀಃ ।
ವಾದ್ಯಾನಿ ವಾದಯಾಮಾಸ ವಿಪ್ರೇಭ್ಯಶ್ಚ ದದೌ ಧನಂ　　॥ ೭೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಷೋಡಶೋಽಧ್ಯಾಯಃ



---

೭೩. ತಾಯಿಯಾದ ಸ್ವರ್ಣವತಿಯು ಹೀಗೆ ಹೇಳಿದುದನ್ನು ಕೇಳಿ, ವೀರನಾದ ಇಂದುಲನು ತಾಯಿಗೆ ನಮಸ್ಕರಿಸಿ, ಸಂತೋಷದಿಂದ "ಅಮ್ಮಾ ! ನಿನ್ನ ಸಾಲವನ್ನು ನಾನು ಎಂದಿಗೂ ಇಟ್ಟುಕೊಳ್ಳುವುದಿಲ್ಲ" (ಎಂದರೆ ನೀನು ನನಗಾಗಿ ಪಟ್ಟ ಕಷ್ಟವನ್ನು ನಾನು ಮರೆಯದೆ ನಿನಗೆ ಉಪಕರಿಸಲು ಖಂಡಿತವಾಗಿ ಪ್ರಯತ್ನಿಸುತ್ತೇನೆ)" ಎಂದನು

೭೪. ಆಹ್ಲಾದನು ಜಯಶಾಲಿಯಾಗಿ ಪರಿವಾರದೊಡನೆ ಮನೆಗೆ ಬಂದಮೇಲೆ ಮೇಧಾವಿಯಾದ ಪರಿಮಳ ರಾಜನು ನಾನಾ ವಿಧವಾಗಿ ಜಯಭೇರೀ ವಾದ್ಯಗಳನ್ನು ಬಾರಿಸುವಂತೆ ಆಜ್ಞೆಮಾಡಿ ಬ್ರಾಹ್ಮಣರಿಗೆ ಅನೇಕ ರೀತಿಯಿಂದ ದ್ರವ್ಯವನ್ನು ದಾನ ಮಾಡಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗ ಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ
ಹದಿನಾರನೆಯ ಅಧ್ಯಾಯ ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಸಪ್ತದಶೋಽಧ್ಯಾಯಃ

---

॥ ಸೂತ ಉವಾಚ ॥

ಕೃಷ್ಣಾಂಶೇಽಷ್ಟಾದಶಾಬ್ದೇ ತು ಯಥಾಜಾತಂ ತಥಾ ಶೃಣು ।
ಮೃತೇ ಕೃಷ್ಣಕುಮಾರೇ ತು ಭೂಪತೌ ರತ್ನಭಾನುನಾ ॥ ೧ ॥

ಮಹೀರಾಜಃ ಸುದುಃಖಾರ್ತೋ ಲಕ್ಷಚಂಡೀಮಕಾರಯತ್ ।
ಹೋಮಾಂತೇ ತು ತದಾ ದೇವೀ ವಾಗುವಾಚ ನೃಪಂ ಪ್ರತಿ ॥ ೨ ॥

ವರ್ಷೇವರ್ಷೇ ತು ತೇ ಸಪ್ತ ಭವಿಷ್ಯಂತ್ಯಂಗಸಂಭವಾಃ ।
ಕುಮಾರಾಃ ಕೌರವಾಂಶಾಶ್ಚ ದ್ರೌಪದ್ಯಂಶಾ ಸುತಾ ನೃಪ ॥ ೩ ॥

---

## ಹದಿನೇಳನೆಯ ಅಧ್ಯಾಯ

೧-೨. ಸೂತಮುನಿವರ್ಯನು ಹೇಳುತ್ತಾನೆ— ಅಯ್ಯಾ ಶೌನಕನೇ! ಕೇಳು, ಕೃಷ್ಣಾಂಶನು ಹದಿನೆಂಟು ವಯಸ್ಸಿನವನಾಗುತ್ತಲೆ ನಡೆದ ವೃತ್ತಾಂತವನ್ನು ತಿಳಿಸುವೆನು ಕೇಳು. ರತ್ನಭಾನುವು ಮಹೀರಾಜನ ತಮ್ಮನಾದ ಕೃಷ್ಣಕುಮಾರನನ್ನು ಯುದ್ಧದಲ್ಲಿ ಕೊಂದುಹಾಕಿದಮೇಲೆ ಮಹೀರಾಜನು ಬಹು ದುಃಖಕ್ಕೆ ಗುರಿಯಾಗಿ ಲಕ್ಷ ಚಂಡೀ ಯಾಗವನ್ನು ಮಾಡಿಸಿದನು. ಹೋಮವೆಲ್ಲ (ಯಾಗವು) ಮುಗಿದ ನಂತರ ಚಂಡೀದೇವಿಯು ಪ್ರಸನ್ನೆಯಾಗಿ ರಾಜನನ್ನು ಕುರಿತು! ಇಂತೆಂದಳು.

೩. "ಎಲೈ ಮಹೀರಾಜನೇ! ನಿನಗೆ ವರ್ಷಕ್ಕೆ ಒಂದೊಂದರಂತೆ ಏಳುಗಂಡು ಮಕ್ಕಳು ಕೌರವಾಂಶ ಯುಕ್ತರಾಗಿ ಜನಿಸುವರು. ಏಳನೆಯ ಗರ್ಭದ ಗಂಡು ಮಗುವಿನ ಜೊತೆ ದ್ರೌಪದೀಅಂಶಸಂಭೂತೆಯಾದ ಒಬ್ಬ ಮಗಳೂ ಜನಿಸುವಳು." ಎಂದಳು.

ಇತ್ಯುಕ್ತೇ ವಚನೇ ತಸ್ಮಿನ್ ರಾಜ್ಞೀಗರ್ಭಮಥೋ ದಧೌ ।
ಕರ್ಣಾಂಶಶ್ಚ ಸುತೋ ಜಾತಃ ತಾರಕೋ ಬಲವತ್ತರಃ ॥ ೪ ॥

ದ್ವಿತೀಯಾಬ್ದೇ ತಥಾ ಜಾತೇ ದುಶ್ಶಾಸನಶುಭಾಂಶತಃ ।
ನೃಹರಿರಿತಿ ವಿಖ್ಯಾತಸ್ತೃತೀಯಾಬ್ದೇ ತು ಚಾಭ್ಯಭವತ್ ॥ ೫ ॥

ಉದ್ಧರ್ಷಾಂಶಃ ಸರದನೋ ದುರ್ಮುಖಾಂಶಸ್ತು ಮರ್ದನಃ ।
ವಿಕರ್ಣಾಂಶಃ ಸೂರ್ಯಕವರ್ಮಾ ಭೀಮಶ್ಚಾಂಶೋ ವಿವಿಂಶತೇಃ ॥ ೬ ॥

ವರ್ಧನಶ್ಚಿತ್ರಬಾಣಾಂಶೋ ವೇಲಾ ತದನು ಚಾಭ್ಯಭವತ್ ।
ಯಥಾ ಕೃಷ್ಣಾ ತಥಾ ಸೈವ ರೂಪಚೇಷ್ಟಾಗುಣೈರ್ಮನೇ ॥ ೭ ॥

---

೪. ದೇವಿಯು ಈ ಪ್ರಕಾರ ನುಡಿದು ಅದೃಶ್ಯಳಾದಳು, ಬಳಿಕ ಮಹೀರಾಜನ ರಾಣಿ, ಗರ್ಭವನ್ನು ಧರಿಸಿದಳು. ಸ್ವಲ್ಪ ದಿವಸದಲ್ಲಿಯೇ ಅವಳಿಗೆ ಕರ್ಣಾಂಶದಿಂದ ಕೂಡಿದವನೂ ಬಲಶಾಲಿಯೂ ಆದ ತಾರಕನೆಂಬ ಮಗನು ಜನಿಸಿದನು.

೫. ತಾರಕನು ಹುಟ್ಟಿದ ಮೂರನೆಯವರ್ಷ ಎರಡನೆಯ ಗರ್ಭದಲ್ಲಿ ದುಃಶಾಸನನ ಶುಭಾಂಶದಿಂದ ಕೂಡಿದ, ನೃಹರಿ ಎಂಬದಾಗಿ ಪ್ರಸಿದ್ಧಿಪಡೆದ ಪುತ್ರನು ಜನಿಸಿದನು

೬-೭. ಹಾಗೆಯೇ ಮೂರನೆಯ ವರ್ಷದಲ್ಲಿ ಉದ್ಧರ್ಷನ ಅಂಶದಿಂದ ಕೂಡಿದ ಸರದನನೆಂಬ ಮಗನಾದನು. ನಾಲ್ಕನೆಯ ವರ್ಷದಲ್ಲಿ ದುರ್ಮುಖನ ಅಂಶದಿಂದ ಕೂಡಿದ ಮರ್ದನನೆಂಬವನು, ಹುಟ್ಟಿದನು. ಐದನೆಯವರ್ಷ ವಿಕರ್ಣಾಂಶದವನಾದ ಸೂರ್ಯಕರ್ಮನ ಜನನವಾಯಿತು. ಆರನೆಯ ಗರ್ಭದಲ್ಲಿ ವಿವಿಂಶತಿಯ ಅಂಶದವನಾಗಿ ಭೀಮನೆಂಬುವನು ಜನಿಸಿದನು. ಏಳನೆಯ ವರ್ಷದಲ್ಲಿ ಚಿತ್ರಬಾಣಾಂಶದಿಂದ ಕೂಡಿದ ವರ್ಧನನೆಂಬ ಪುತ್ರನೂ ಮತ್ತು ದ್ರೌಪದೀ ಅಂಶದವಳಾದ ವೇಲಾ ಎಂಬ ಪುತ್ರಿಯೂ ಸಹ ಜನಿಸಿದರು. ಆ ಮಗಳು ಸೌಂದರ್ಯ, ಗುಣ, ಮುಂತಾದುವುಗಳಲ್ಲಿ ದ್ರೌಪದಿಯನ್ನೇ ಸಂಪೂರ್ಣವಾಗಿ ಹೋಲುತ್ತಿದ್ದಳು.

ಭುವಿ ತಸ್ಯಾಂ ಚ ಜಾತಾಯಾಂ ಭೂಕಂಪೋ ದಾರುಣೋಽಭವತ್ ।
ಅಟ್ಟಾಟ್ಟಹಾಸಮಶಿವಂ ಚಾಮುಂಡಾ ಖೇ ಚಕಾರ ಹ ।
ರಕ್ತವೃಷ್ಟಿಃ ಪುರೇ ಚಾಸೀದಸ್ಥಿಶರ್ಕರಯಾ ಯುತಾ ॥ ೮ ॥

ಬ್ರಾಹ್ಮಣಾಶ್ಚ ಸಮಾಗತ್ಯ ಜಾತಕರ್ಮಾದಿಕಾಂ ಕ್ರಿಯಾಂ ।
ಕೃತ್ವಾ ನಾಮ ತಥಾ ಚಕ್ರೇ ಶೃಣು ಭೂಮಿಪ ಸಾಕ್ಷರಂ ॥ ೯ ॥

ಇಲಾ ಚ ಶಶಿನೋ ಮಾತಾ ವಿಕಲ್ಪೇನಾಽಭವದ್ಭುವಿ ।
ತಸ್ಮಾದ್ವೇಲೇತಿ ವಿಖ್ಯಾತಾ ಕನ್ಯೇಯಂ ರೂಪಶಾಲಿನೀ ॥ ೧೦ ॥

ಜಾತಾಯಾಂ ಚ ಸುತಾಯಾಂ ಸಃ ಪಿತಾ ವಿಪ್ರೇಭ್ಯ ಉತ್ತಮಂ ।
ದದೌ ದಾನಂ ಮುದಾ ಯುಕ್ತೋ ವಾಸಾಂಸಿ ವಿವಿಧಾನಿ ಚ ॥ ೧೧ ॥

---

೮. ದ್ರೌಪದಿಯ ಅಂಶದವಳಾದ ಈ ವೇಲಾಕುಮಾರಿಯು ಜನಿಸಿದ ಕೂಡಲೆ ಭಯಂಕರವಾದ ಭೂಕಂಪವಾಯಿತು. ಚಂಡೀದೇವಿಯು ಅಂತರಿಕ್ಷದಲ್ಲಿ ವಿಕಟವಾಗಿ ನಕ್ಕು ಅಟ್ಟಹಾಸ ಮಾಡಿದಳು. ಪಟ್ಟಣದೊಳಗೆಲ್ಲಾ ಮೂಳೆಯ ಚೂರುಗಳ ಸಮೇತವಾಗಿ ರಕ್ತದ ಮಳೆ ಸುರಿಯಿತು.

೯. ಆ ಹೆಣ್ಣುಮಗು ಹುಟ್ಟಿದ ಕೂಡಲೆ ಬ್ರಾಹ್ಮಣರು ಬಂದು ಜಾತಕರ್ಮ ಮೊದಲಾದ ವೇದೋಕ್ತ ಸಂಸ್ಕಾರವನ್ನು ನೆರವೇರಿಸಿ ಈ ಮುಂದೆ ಹೇಳುವಂತೆ ನಾಮ ಕರಣ ಮಾಡಿದರು.

೧೦. ಅಯ್ಯಾ ರಾಜನೇ ! ಆ ಹೆಸರಿನ ಪ್ರತಿಯೊಂದು ಅಕ್ಷರದ ಅರ್ಥವನ್ನೂ ವಿವರಿಸುವೆನು -ಕೇಳು. ಇಲಾ ಎಂಬವಳು ಚಂದ್ರನ ತಾಯಿ. ಅವಳು ವಿಕಲ್ಪದಿಂದ (ಕಾರಣಾಂತರದಿಂದ) ಭೂಮಿಯಲ್ಲಿ ಅವತರಿಸಿದಳಾದುದರಿಂದ ರೂಪಯೌವನ ಸಂಪನ್ನೆಯಾದ ಈ ಕನ್ಯೆಗೆ ವೇಲಾ ಎಂಬ ಹೆಸರನ್ನಿಟ್ಟರು.

೧೧. ಮಗಳು ಹುಟ್ಟಿದ ಮೇಲೆ ತಂದೆಯಾದ ಮಹೀರಾಜನು ಸಂತೋಷ ದಿಂದ ವಿಪ್ರರಿಗೆ ಉತ್ತಮವಾದ ವಸ್ತ್ರಗಳನ್ನೂ ಅನೇಕ ವಿಧವಾದ ದಾನಗಳನ್ನೂ ಕೊಟ್ಟನು.

ದ್ವಾದಶಾಬ್ದವಯಃ ಪ್ರಾಪ್ತೇ ಸಾ ಸುತಾ ವರವರ್ಣಿನೀ ।
ಉವಾಚ ಪಿತರಂ ನಮ್ರಾ ಶೃಣು ತ್ವಂ ಪೃಥಿವೀಪತೇ ॥ ೧೨ ॥

ಮಂಡಪೇ ರಕ್ತಧಾರಾಭಿ ರ್ಯೋ ಮಾಂ ಸಂಸ್ನಾಪಯಿಷ್ಯತಿ ।
ದ್ರೌಪದ್ಯಾ ಭೂಷಣಂ ದಾತಾ ಸ ಮೇ ಭರ್ತಾ ಭವಿಷ್ಯತಿ ॥ ೧೩ ॥

ಸ್ವರ್ಣಪತ್ರೇ ತದಾ ರಾಜಾ ಪದ್ಯಂ ವೇಲಾಮುಖೋದ್ಭವಂ ।
ಲಿಖಿತ್ವಾ ತಾರಕಂ ಪ್ರಾಹ ತ್ವಮನ್ವೇಷಯ ತತ್ಪತಿಂ ॥ ೧೪ ॥

ಸಾರ್ಧಂ ಲಕ್ಷತ್ರಯಂ ದ್ರವ್ಯಂ ಗೃಹೀತ್ವಾ ಲಕ್ಷಸೈನ್ಯಕಃ ।
ನೃಪಾಂತರಂ ಯಯೌ ಶೀಘ್ರಂ ತಾರಕಃ ಪಿತುರಾಜ್ಞಯಾ ॥ ೧೫ ॥

---

೧೨-೧೩. ಮಗಳಾದ ವೇಲಾಕುಮಾರಿಗೆ ಹನ್ನೆರಡು ವರ್ಷವಾಗುತ್ತಲೇ ಸ್ವಯಂವರಕ್ಕೆ ಅರ್ಹಳಾದಳು. ಅನಂತರ ಒಂದುದಿನ ಅವಳು ತಂದೆಯನ್ನು ಕುರಿತು, " ತಂದೆಯೇ ! ಯಾವನು ವಿವಾಹ ಮಂಟಪದಲ್ಲಿ ನನ್ನನ್ನು ರಕ್ತಧಾರೆ ಗಳಿಂದ ಸ್ನಾನಮಾಡಿಸುವನೋ, ಮತ್ತು ಯಾವ ಶೂರನು ದ್ರೌಪದಿಯ ಆಭರಣ ಗಳನ್ನು ತಂದು ಕೊಡುವನೋ, ಅವನೇ ನನಗೆ ಪತಿಯಾಗಬೇಕು " ಎಂದು ಹೇಳಿದಳು.

೧೪. ವೇಲಾ ಕುಮಾರಿಯು ಹೇಳಿದ ಈ ಮಾತನ್ನು ಕೇಳಿ, ರಾಜನು ಚಿನ್ನದ ತಗಡಿನಲ್ಲಿ ಮಗಳು ಹೇಳಿದ (ಪದ್ಯರೂಪವಾದ) ವಾಕ್ಯಗಳನ್ನು ಬರೆದು, ತನ್ನ ಮಗನಾದ ತಾರಕನನ್ನು ಕರೆದು " ಇವಳಿಗೆ ಪತಿಯಾಗಲು ಅರ್ಹನಾದವನನ್ನು ನೀನು ಹುಡುಕಿಕೊಂಡು ಬಾ " ಎಂದು ಹೇಳಿದನು.

೧೫. ತಂದೆಯು ಹೀಗೆ ಹೇಳುತ್ತಲೆ ತಾರಕನು ಮೂರೂವರೆ ಲಕ್ಷ ದ್ರವ್ಯ ವನ್ನೂ, ಒಂದು ಲಕ್ಷ ಸೇನೆಯನ್ನೂ ತೆಗೆದುಕೊಂಡು ತಂದೆಯ ಅಪ್ಪಣೆಯನ್ನು ಪಡೆದು ವರಾನ್ವೇಷಣೆಗಾಗಿ ಜಾಗ್ರತೆ ಹೊರಟು, ನಾನಾ ದೇಶದ ರಾಜರ ಬಳಿಗೆ ಹೋದನು.

ಸಿಂಧುಸ್ಥಾನೇ ಚಾರ್ಯದೇಶೇ ಭೂಪಂ ಭೂಪಂ ಯಯೌ ಬಲೀ ।
ನ ಗೃಹೀತಂ ನೃಪೈಃ ಕೈಶ್ಚಿತ್ತದ್ವಾಕ್ಯಂ ಘೋರಮುಲ್ಬಣಂ ॥ ೧೬ ॥

ಮಹೀಪತಿಂ ಸ ಸಂಪ್ರಾಪ್ಯ ಮಾತುಲಂ ತದ್ವಚೋಽಬ್ರವೀತ್ ।
ಶ್ರುತ್ವಾ ಸ ಆಹ ಭೋ ವೀರ ಬ್ರಹ್ಮಾನಂದೋ ಮಹಾಬಲಃ ।
ಸ ಚ ವಾಕ್ಯಂ ಪ್ರಗೃಹ್ಣೀಯಾದಾಹ್ಲಾದಾದ್ಯೈಃ ಸುರಕ್ಷಿತಃ ॥ ೧೭ ॥

ಕಿಂ ತ್ವಯಾ ವಿದಿತಂ ನೈವ ಚರಿತಂ ತಸ್ಯ ವಿಶ್ರುತಂ ।
ಭವಾನ್ ಷಡ್ಬಂಧುಸಹಿತಃ ಕೃಷ್ಣಾಂಶಾದ್ಯೈರ್ವಿವಾಹಿತಃ ॥ ೧೮ ॥

ತೇ ಸರ್ವೇ ವಶಗಾಸ್ತಸ್ಯ ಬ್ರಹ್ಮಾನಂದಸ್ಯ ಧೀಮತಃ ।
ನಾಸ್ತಿ ಭೂಮಂಡಲೇ ಕಶ್ಚಿತ್ತದ್ಬಲೇನ ಸಮೋ ನೃಪಃ ॥ ೧೯ ॥

---

೧೬. ಶೂರನಾದ ಆ ತಾರಕನು ಸಿಂಧುನದೀತೀರದೇಶ, ಆರ್ಯದೇಶ ಇವುಗಳಲ್ಲಿದ್ದ ಪ್ರತಿಯೊಬ್ಬ ರಾಜನ ಬಳಿಗೂ ಹೋಗಿ ಆ ಸ್ವರ್ಣಪತ್ರವನ್ನು ತೋರಿಸಲು, ಅದರಲ್ಲಿದ್ದ ಭಯಂಕರವೂ, ಉಕ್ತಿಗರ್ಭಿತವೂ ಆದ ಶ್ಲೋಕವನ್ನು ನೋಡಿ, ಅದರಂತೆ ನಡೆಯಿಸಲು ಯಾವ ರಾಜನೂ ಸಮರ್ಥನಾಗದೆ ಇದ್ದುದರಿಂದ ಯಾರೂ ಆ ಪತ್ರವನ್ನು ಪರಿಗ್ರಹಿಸಲಿಲ್ಲ.

೧೭. ಅನಂತರ ತಾರಕನು ತನ್ನ ಸೋದರಮಾವನಾದ ಮಹೀಪತಿ ರಾಜನ ಸಮೀಪಕ್ಕೆ ಬಂದು ಈ ವಿಷಯವನ್ನು ತಿಳಿಸಿದನು. ಆಗ ಮಹೀಪತಿರಾಜನು ಈ ಮಾತನ್ನು ಕೇಳಿ "ಅಯ್ಯಾ ವೀರನೇ! ಮಹಾಬಲಶಾಲಿಯಾದ ಬ್ರಹ್ಮಾನಂದನು ಆಹ್ಲಾದನೇ ಮುಂತಾದವರ ಬೆಂಬಲವುಳ್ಳವನಾಗಿ ರಾಜ್ಯವಾಳುತ್ತಿರುವನು. ಅವನು ನಿನ್ನ ಸ್ವರ್ಣಪತ್ರವನ್ನು ಪರಿಗ್ರಹಿಸಿ ಅದರಂತೆ ನಡೆಯಿಸುವನು.

೧೮. "ಅಯ್ಯಾ ತಾರಕಾ! ಪ್ರಸಿದ್ಧನಾದ ಅವನ ಚರಿತ್ರೆಯು ನಿನಗೆ ತಿಳಿದಿಲ್ಲವೆ? ಆರುಮಂದಿ ತಮ್ಮಂದಿರೊಡಗೂಡಿದ ನೀನೇ, ಕೃಷ್ಣಾಂಶಾದಿಗಳ ಸಹಾಯದಿಂದ ವಿವಾಹ ಮಾಡಿಕೊಂಡಿದ್ದೀಯೆ"

೧೯. "ಅಂತಹ ಕೃಷ್ಣಾಂಶ ಮೊದಲಾದ ಎಲ್ಲರೂ ಕೂಡ ಮೇಧಾವಿಯಾದ ಬ್ರಹ್ಮಾನಂದನಿಗೆ ಅಧೀನರಾಗಿರುವರು. ಅವನಿಗೆ ಸಮನಾದ ಬಲಿಷ್ಠ ರಾಜನು ಯಾರೂ ಇಲ್ಲ" ಎಂದು ಹೇಳಿದನು.

ಇತಿ ಶ್ರುತ್ವಾ ಯಯೌ ತೂರ್ಣಂ ತಾರಕಃ ಸ್ವಬಲೈಃ ಸಹ ।
ತತ್ಪದ್ಯಂ ಕಥಯಿತ್ವಾಗ್ರೇ ಹಸ್ತಬದ್ಧಸ್ತದಾಽಭವತ್ ॥ ೨೦ ॥

ಕೃಷ್ಣಾಂಶಸ್ತು ಗೃಹೀತ್ವಾಶು ಪದ್ಯಂ ವಾಕ್ಯಮುವಾಚ ಹ ।
ಅಹಂ ವಿವಾಹಯಿಷ್ಯಾಮಿ ಬ್ರಹ್ಮಾನಂದಂ ನೃಪೋತ್ತಮಂ ॥ ೨೧ ॥

ತೂಷ್ಣೀಂಭೂತಾಸ್ತದಾ ಸರ್ವೇ ತಾರಕಃ ಸ ದ್ವಿಜೈಃ ಸಹ ।
ಅಭಿಷೇಕಂ ತದಾ ಕೃತ್ವಾ ಸ್ವಗೇಹಂ ಪುನರಾಯಯೌ ॥ ೨೨ ॥

ಮಾಘಮಾಸೇ ಸಿತೇ ಪಕ್ಷೇ ತ್ರಯೋದಶ್ಯಾಂ ಸುವಾಸರೇ ।
ವಿವಾಹಲಗ್ನಂ ಶುಭದಂ ವರಕನ್ಯಾರ್ಥಯೋಸ್ತದಾ ॥ ೨೩ ॥

ಸಪ್ತಲಕ್ಷಬಲೈಃ ಸಾರ್ಧಂ ಲಕ್ಷಣಶ್ಚ ಸತಾಲನಃ ।
ಮಹಾವತೀಂ ಪುರೀಂ ಪ್ರಾಪ್ತೋ ಬಲೀ ಪರಿಮಲಾದಿಭಿಃ ॥ ೨೪ ॥

---

೨೦. ಸೋದಸ ಮಾವನು ಈರೀತಿ ಹೇಳಿದುದನ್ನು ಕೇಳಿ, ತಾರಕನು ತನ್ನ ಸೇನೆಯೊಡನೆ ಬ್ರಹ್ಮಾನಂದನ ಬಳಿಗೆ ಜಾಗ್ರತೆಯಾಗಿ ಬಂದು ಆತನ ಸಮ್ಮುಖದಲ್ಲಿ ಆ ಶ್ಲೋಕವನ್ನು ಓದಿ ಬಳಿಕ ವಿನಯದಿಂದ ಕೈಕಟ್ಟಿಕೊಂಡು ನಿಂತನು.

೨೧. ಆಗ ಕೃಷ್ಣಾಂಶನು ಥಟ್ಟನೆ ಆ ಸ್ವರ್ಣಪತ್ರವನ್ನು ತೆಗೆದುಕೊಂಡು ನೋಡಿ "ನೃಪಶ್ರೇಷ್ಠನಾದ ಬ್ರಹ್ಮಾನಂದನಿಗೆ ನಾನು ವೇಲೆಯನ್ನು ವಿವಾಹ ಮಾಡಿಸುವೆನು" ಎಂದು ಹೇಳಿದನು.

೨೨. ಈ ಮಾತನ್ನು ಕೇಳಿ ಆಗ ಅಲ್ಲಿ ನೆರೆದಿದ್ದವರೆಲ್ಲರೂ ಮೌನವಾಗಿದ್ದರು. ಬಳಿಕ ತಾರಕನು ಅಲ್ಲಿಂದ ಹೊರಟು ಬ್ರಾಹ್ಮಣರೊಡನೆ ದೇವಾಲಯಕ್ಕೆ ಹೋಗಿ, ದೇವರಿಗೆ ಅಭಿಷೇಕಾದಿಗಳನ್ನು ಮಾಡಿಸಿ ತನ್ನ ಊರಿಗೆ ಹಿಂದಿರುಗಿ ಬಂದನು.

೨೩. ಮಾಘ ಶುಕ್ಲ ತ್ರಯೋದಶೀ ಶುಭದಿನದಲ್ಲಿ ಕನ್ಯಾವರರ ವೀಕ್ಷಣೆಯು ಶುಭಲಗ್ನವು ನೆರವೇರತಕ್ಕದ್ದೆಂದು ನಿಶ್ಚಿತವಾಯಿತು.

೨೪. ಆಗ ಲಕ್ಷಣನು ತಾಲನನೊಡಗೂಡಿ ಏಳುಲಕ್ಷ ಸೇನೆಯೊಡನೆ ಹೊರಟು ಮಹಾವತೀ ನಗರಕ್ಕೆ ಬಂದನು. ಶೂರನಾದ ಅವನು ಅಲ್ಲಿ ಪರಿಮಳಾದಿಗಳ ಜತೆಗೆ ಸೇರಿದನು.

ಆಹ್ಲಾದೋ ಲಕ್ಷಸೈನ್ಯಾಢ್ಯಃ ಕೃಷ್ಣಾಂಶೇನ ಸಮನ್ವಿತಃ ।
ಬಲಖಾನಿರ್ಲಕ್ಷಸೈನ್ಯಃ ಸಂಯುತಃ ಸುಖಖಾನಿನಾ ॥ ೨೫ ॥

ನೇತ್ರಸಿಂಹೋ ಲಕ್ಷಸೈನ್ಯೋ ಯೋಗಭೋಗಸಮನ್ವಿತಃ ।
ರಣಜಿಚ್ಚ ಬಲೀ ಬಾಲೋ ದ್ವಿಲಕ್ಷಬಲಸಂಯುತಃ ॥ ೨೬ ॥

ಏವಂ ದ್ವಾದಶಲಕ್ಷಾಣಾಂ ಸೈನ್ಯಾನಾಮಧಿಪೋ ಬಲೀ ।
ತಾಲನಃ ಸಿಂಹಿನೀಸಂಸ್ಥೋ ವಡವಾಂ ಪ್ರಯಯೌ ಸಹ ॥ ೨೭ ॥

ಸೈನ್ಯೈರ್ದ್ವಾದಶಲಕ್ಷೈಶ್ಚ ಸಹಿತಸ್ತಾಲನೋ ಬಲೀ ।
ಆಯಯೌ ದೇಹಲೀಗ್ರಾಮೇ ಮಹೀರಾಜಾನುಪಾಲಿತೇ ॥ ೨೮ ॥

ದೇವೋ ಮನೋರಥಾರೂಢೋ ಬಿಂದುಲಸ್ಥಃ ಸ ಕೃಷ್ಣಕಃ ।
ವಡವಾಮೃತಮಾಸಾದ್ಯ ಸ್ವರ್ಣವತ್ಯಾಃ ಸುತೋ ಗತಃ ॥ ೨೯ ॥

---

೨೫. ಆಹ್ಲಾದನು ಲಕ್ಷಸೇನೆಯೊಡನೆ ಕೃಷ್ಣಾಂಶನ ಸಮೇತ ಬಂದಿದ್ದನು. ಬಲಖಾನಿಯು ಒಂದುಲಕ್ಷ ಸೈನ್ಯವನ್ನು ತೆಗೆದುಕೊಂಡು ಸುಖಖಾನಿಯ ಜತೆಗೂಡಿ ಬಂದಿದ್ದನು.

೨೬. ನೇತ್ರಸಿಂಹನು ಯೋಗಸಿಂಹ ಭೋಗಸಿಂಹರೊಡಗೂಡಿ ಒಂದುಲಕ್ಷ ಸೇನೆಯೊಡನೆ ಬಂದಿದ್ದನು. ಶೂರನಾದ ರಣಜಿತ್ ಎಂಬಾತನು ಎರಡು ಲಕ್ಷ ಸೇನೆಯೊಡನೆ ಅಲ್ಲಿಗೆ ಬಂದಿದ್ದನು.

೨೭. ಈ ಪ್ರಕಾರವಾದ ಹನ್ನೆರಡುಲಕ್ಷ ಸೈನ್ಯಕ್ಕೂ ತಾಲನನೇ ಸೇನಾಪತಿಯಾಗಿ ನಿಯಮಿತನಾದನು. ಸಿಂಹಿನಿಯೆಂಬ ಹೆಣ್ಣುಕುದುರೆಯನ್ನೇರಿಕೊಂಡು ಬಲಶಾಲಿಯಾದ ಆ ತಾಲನ ಸೇನಾಪತಿಯು ಪ್ರಯಾಣ ಹೊರಟನು.

೨೮. ಹೀಗೆ ಹನ್ನೆರಡುಲಕ್ಷ ಸೈನ್ಯದೊಡನೆ ಪ್ರಯಾಣ ಮಾಡಿಕೊಂಡು ಶೂರನಾದ ಆ ತಾಲನನು ಪೃಥ್ವೀರಾಜನು ಆಳುತ್ತಿದ್ದ. ದೆಹಲೀ ನಗರಕ್ಕೆ ಬಂದನು.

೨೯. ದೇವಸಿಂನು ಮನೋರಥವೆಂಬ ಕುದುರೆಯನ್ನೇರಿಕೊಂಡಿದ್ದನು. ಕೃಷ್ಣಾಂಶನಿಗೆ ಬಿಂದುಲವೆಂಬ ಅಶ್ವವು ವಾಹನವಾಯಿತು. ಸ್ವರ್ಣವತೀಪುತ್ರನಾದ ಇಂದುಲನು ವಡಬಾಮೃತವೆಂಬ ಕುದುರೆಯಮೇಲೆ ಕುಳಿತನು.

**ರೂಪಣಶ್ಚ ಕರಾಲಸ್ಥಃ ಆಹ್ಲಾದಶ್ಚ ಪಪೀಹಕೇ ।**
**ಬಲಖಾನಿಃ ಕಪೋತಸ್ಥೋ ಹರಿಣಸ್ಥೋಽನುಜಸ್ತತಃ ॥ ೩೦ ॥**

**ರಣಜಿನ್ಮಲನಾಪುತ್ರಃ ಸಂಸ್ಥಿತೋ ಹರಿನಾಗರೇ ।**
**ಪಂಚಶಬ್ದಗಜಾರೂಢೋ ಮಹಾವತ್ಯಧಿಪೋ ಗತಃ ॥ ೩೧ ॥**

**ವಿಮಾನವರಮಾರುಹ್ಯ ಧೀವರೈಃ ಶತವಾಹಿಕೈ ।**
**ಮಣಿಮುಕ್ತಾಸ್ವರ್ಣಮಯಂ ಸಹಸ್ರೈರ್ವಾದ್ಯಕೈರ್ಯುತಂ ॥ ೩೨ ॥**

**ಅಯುತೈಶ್ಚ ಪತಾಕೈಶ್ಚ ವೇತ್ರಪಾಣಿಸಹಸ್ರಕೈಃ ।**
**ಸಹಸ್ರೈಃ ಶಿಬಿಕಾಭಿಶ್ಚ ಪಂಚಸಾಹಸ್ರಕೈ ರಥೈಃ ॥ ೩೩ ॥**

**ಶಕಟೈರ್ಮಹಿಷೋಢೈಸ್ತು ತಥಾ ಪಂಚಸಹಸ್ರಕೈಃ ।**
**ಸರ್ವತೋಽಪಸ್ಕೃತಂ ರಮ್ಯಂ ಬ್ರಹ್ಮಾನಂದಂ ಸಮಾಗತಃ ॥ ೩೪ ॥**

---

೩೦ ರೂಪಣನು ಕರಾಲನಾಮಕವಾದ ಅಶ್ವವನ್ನು ಆರೋಹಣ ಮಾಡಿದನು. ಆಹ್ಲಾದನು ಪಪೀಹಕವೆಂಬ ಕುದುರೆಯನ್ನೇರಿದನು. ಬಲಖಾನಿಯು ಕಪೋತವೆಂಬ ಅಶ್ವದಮೇಲೂ ಅವನ ಸಹೋದರನಾದ ಸುಖಖಾನಿಯು ಹರಿಣವೆಂಬ ಕುದುರೆಯ ಮೇಲೂ ಕುಳಿತರು.

೩೧. ಮಲನಾದೇವಿಯ ಮಗನಾದ ರಣಜಿತ್ತನು ಹರಿನಾಗರವೆಂಬ ಅಶ್ವದ ಮೇಲೆ ಕುಳಿತಿದ್ದನು. ಮಹಾವತೀ ನಗರದ ಅಧಿಪನಾದ ಪರಿಮಲನು ಪಂಚಶಬ್ದವೆಂಬ ಗಜವನ್ನು ಏರಿ ಹೊರಟನು

೩೨-೩೪. ಮುತ್ತು, ರತ್ನ, ಚಿನ್ನ ಇವುಗಳಿಂದ ರಚಿತವಾದ ದಿವ್ಯವಿಮಾನದಲ್ಲಿ ಬ್ರಹ್ಮಾನಂದನು ಕುಳಿತಿದ್ದನು. ನೂರಾರು ಮಂದಿ ಬೋಯಿಗಳು ಆ ಮೇನ (ವಿಮಾನ) ವನ್ನು ಹೊತ್ತಿದ್ದರು. ಸಾವಿರಾರು ವಾದ್ಯಗಳೂ, ಹತ್ತುಸಾವಿರ ಪತಾಕೆಗಳೂ, ವೇತ್ರಪಾಣಿಗಳಾದ ಸಾವಿರಮಂದಿ ಕಾವಲುಗಾರರೂ,ಸಾವಿರಾರು ಮೇನೆಗಳೂ, ಐದು ಸಾವಿರ ರಥಗಳೂ, ಕೋಣಗಳನ್ನು ಕಟ್ಟಿದ ಐದುಸಹಸ್ರ ಬಂಡಿಗಳೂ, ಸಹ, ಬ್ರಹ್ಮಾನಂದನ ಸಂಗಡ ವೈಭವದಿಂದ ಹೊರಟುವು. ಪ್ರಯಾಣವು ಸಾಗುತ್ತಿತ್ತು.

ಶ್ರುತ್ವಾ ಕೋಲಾಹಲಂ ತೇಷಾಂ ಮಹೀರಾಜೋ ನೃಪೋತ್ತಮಃ ।
ವಿಸ್ಮಿತಃ ಸ ಬಭೂವಾತ್ರ ಶಿಬಿರಾಣಿ ಮುದಾ ದದೌ ॥ ೩೫ ॥

ದುರ್ಗದ್ವಾರಿ ಕ್ರಿಯಾಂ ರಮ್ಯಾಂ ಕೃತ್ವಾ ವಿಧಿವಿಧಾನತಃ ।
ದ್ರೌಪದ್ಯಾ ಭೂಷಣಂ ದೇಹಿ ವೇಲಾಯೈ ಸ ತಮಬ್ರವೀತ್ ॥ ೩೬ ॥

ಇಂದುಲಸ್ತು ಯಯೌ ಸ್ವರ್ಗಂ ವಾಸವಂ ಪ್ರತಿ ಚಾಬ್ರವೀತ್ ।
ದ್ರೌಪದ್ಯಾ ಭೂಷಣಂ ಸರ್ವಂ ದೇಹಿ ಮಹ್ಯಂ ಸುರೋತ್ತಮ ॥ ೩೭ ॥

ಕುಬೇರಾತ್ಸ ಸಮಾನೀಯ ದಿವ್ಯಮಾಭೂಷಣಂ ದದೌ ।
ಇಂದುಲಃ ಪ್ರಹರಾಂತೇ ಚ ಪ್ರಾಪ್ತಃ ಪಿತ್ರೇ ನ್ಯವೇದಯತ್ ॥ ೩೮ ॥

---

೩೫ ರಾಜಶ್ರೇಷ್ಠನಾದ ಪೃಥ್ವೀರಾಜನು ಈರೀತಿ ತನ್ನ ನಗರಿಗಭಿಮುಖವಾಗಿ ಬರುತ್ತಿರುವ ಈ ಜನಸಮೂಹದ ಕೋಲಾಹಲವನ್ನು ಕೇಳಿ ಆಶ್ಚರ್ಯಚಕಿತನಾದನು. ಕೂಡಲೆ ಸಂತೋಷದಿಂದ ಅವರಿಗೆಲ್ಲಾ ಅನುಕೂಲವಾದ ಶಿಬಿರಗಳನ್ನು ಏರ್ಪಡಿಸಿ ಕೊಟ್ಟನು.

೩೬. ಮತ್ತು ದುರ್ಗದ ಬಾಗಿಲಲ್ಲಿ ಅವರನ್ನು ಇದಿರುಗೊಳ್ಳುವುದಕ್ಕಾಗಿ ಶಾಸ್ತ್ರೋಕ್ತ ರೀತಿ ಮಾಡತಕ್ಕ ಶುಭ ಕಾರ್ಯಗಳನ್ನೆಲ್ಲಾ ಆಚರಿಸಿದನು. ಬಳಿಕ ಆಹ್ಲಾದನನ್ನು ಕುರಿತು " ವೇಲಾದೇವಿಯು ಧರಿಸುವುದಕ್ಕೆ ದ್ರಾಪದಿಯ ಒಡವೆಗಳನ್ನು ಕೊಡು " ಎಂದು ಕೇಳಿದನು.

೩೭. ಜಯಂತನ ಅವತಾರನಾದ ಇಂದುಲನು ಕೂಡಲೆ ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಕುರಿತು; ಎಲೈ ದೇವಾಧಿಪನೇ ! ದ್ರಾಪದಿಯು ಧರಿಸುತ್ತಿದ್ದ ಆಭರಣಗಳನ್ನೆಲ್ಲಾ ನೀನು ಈಗ ನನಗೆ ಕೊಡಿಸಬೇಕು ' ಎಂದು ಕೇಳಿದನು.

೩೮. ಆಗ ಇಂದ್ರನು ಕುಬೇರನ ವಶದಲ್ಲಿದ್ದ ಆ ದಿವ್ಯಾಭರಣಗಳನ್ನೆಲ್ಲಾ ತರಿಸಿ ಇಂದುಲನಿಗೆ ಕೊಟ್ಟನು. ಒಂದು ಜಾವದೊಳಗಾಗಿ ಇಂದುಲನು ಹಿಂದಿರುಗಿ ಬಂದು ಅದನ್ನು ತನ್ನ ತಂದೆಗೆ ಸಮರ್ಪಿಸಿದನು.

**ಆಹ್ಲಾದಸ್ತು ಸ್ವಯಂ ಗತ್ವಾ ವೇಲಾಯೈ ಭೂಷಣಂ ದದೌ ।**
**ಪ್ರಾಪ್ತೇ ಬ್ರಾಹ್ಮೇ ಮುಹೂರ್ತೇ ತು ವಿವಾಹಸ್ತತ್ರ ಚಾಭ್ಯಭವತ್ ॥ ೩೯ ॥**

**ಸಂಪ್ರಾಪ್ತೇ ಪ್ರಥಮಾವರ್ತೇ ತಾರಕಃ ಖಡ್ಗಮಾದದೌ ।**
**ಆಹ್ಲಾದಸ್ತಂ ಸಮಾಸಾದ್ಯ ಯುಯುಧೇ ಬಹುಲೀಲಯಾ ॥ ೪೦ ॥**

**ನೃಹರಿಸ್ತು ದ್ವಿತೀಯೇ ಚ ಕೃಷ್ಣಾಂಶಂ ಪ್ರತಿ ಚಾಭ್ಯರುಧತ್ ।**
**ತಥಾ ಸರದನಂ ವೀರಂ ಬಲಖಾನಿರುಪಾಯಯೌ ॥ ೪೧ ॥**

**ಮರ್ದನಂ ಸುಖಖಾನಿಸ್ತು ಚತುರ್ಥಾವರ್ತಕೇಽಭ್ಯರುಧತ್ ।**
**ರಣಜಿತ್ಸೂರ್ಯವರ್ಮಾಣಂ ಸ ಭೀಮಂ ರೂಪಣೋ ಬಲೀ ॥ ೪೨ ॥**

---

೩೯. ಆಗ ಆಹ್ಲಾದನು ತಾನೇ ಹೋಗಿ ವೇಲಾದೇವಿಗೆ ದ್ರೌಪದಿಯ ಆಭರಣಗಳನ್ನು ಕೊಟ್ಟನು. ಬಳಿಕ ಶುಭಕರವಾದ ಬ್ರಾಹ್ಮೀಮುಹೂರ್ತ ವೇಳೆಯೊದಗುತ್ತಲೆ ವಿವಾಹಕಾರ್ಯಕ್ಕೆ ಆರಂಭವಾಯಿತು.

೪೦. ಮೊದಲನೆಯ ಸರದಿಯಲ್ಲಿ ತಾರಕನು ಕತ್ತಿಯನ್ನು ಹಿಡಿದು ನಿಂತನು. (ಈಗಲೂ ರಾಜಪುಟಾನದಲ್ಲಿ ರಾಜಪುತ್ರರ ವಿವಾಹ ಕಾಲದಲ್ಲಿ ವರನ ಕಡೆಯವರು ವಧುವನ್ನು ಗೆದ್ದು ಸೆರೆಹಿಡಿಯುವ ರೀತಿಯಲ್ಲಿ ನಡೆಯಿಸುವುದು ಪದ್ಧತಿ ಎಂದು ತಿಳಿದವರು ಹೇಳುತ್ತಾರೆ.) ಆಹ್ಲಾದನು ತಾರಕನನ್ನು ಎದುರಿಸಿ ಲೀಲಾಜಾಲವಾಗಿ ಯುದ್ಧಮಾಡಿದನು.

೪೧. ಎರಡನೆಯ ಸರದಿಯಲ್ಲಿ ನೃಹರಿಯು ಕೃಷ್ಣಾಂಶನನ್ನು ಎದುರಿಸಿದನು. ಅದೇ ಪ್ರಕಾರ ಮೂರನೆಯ ಸರದಿಯಲ್ಲಿ ಸರದನನೆಂಬವನನ್ನು ಬಲಖಾನಿಯು ಪ್ರತಿಭಟಿಸಿದನು.

೪೨. ನಾಲ್ಕನೆಯ ಸರದಿಯಲ್ಲಿ ಮರ್ದನನೆಂಬವನನ್ನು ಸುಖಖಾನಿಯು ಅಡ್ಡಗಟ್ಟಿದನು. ಬಳಿಕ ಐದನೆಯ ಸರದಿಯಲ್ಲಿ ಸೂರ್ಯವರ್ಮನನ್ನು ರಣಜಿತ್ತುವೂ, ಆರನೆಯ ಸರದಿಯಲ್ಲಿ ಭೀಮನೆಂಬವನನ್ನು ಬಲಶಾಲಿಯಾದ ರೂಪಣನೂ, ಆಕ್ರಮಿಸಿದರು.

ದೇವಸ್ತು ವರ್ಧನಂ ವೀರಂ ಸಪ್ತಾವರ್ತೇ ಕ್ರಮಾದ್ಯಯೌ ।
ಶತಭೂಪಾನ್ ಖಡ್ಗಧರಾನ್ ಗಜಸೇನಾದಿಕಾಂಸ್ತದಾ ।
ಲಕ್ಷಣಾದ್ಯಾಃ ಸಮಾಜಗ್ಮುರ್ಮಂಡಪೇ ಬಹುವಿಸ್ತೃತೇ ॥ ೪೩ ॥

ಭಗ್ನಭೂತಂ ನೃಪಬಲಂ ದೃಷ್ಟ್ವಾ ರಾಜಾ ರುಷಾನ್ವಿತಃ ।
ಮಹೀರಾಜೋ ಯಯೌ ರೂಢೋ ಗಜಂ ಚಾರಿಭಯಂಕರಂ ॥ ೪೪ ॥

ಜಿತ್ವಾ ತಾನ್ನೇತ್ರಸಿಂಹಾದೀಞ್ಛಬ್ದವೇಧೀ ನೃಪೋತ್ತಮಃ ।
ಲಕ್ಷಣಂ ಪ್ರಯಯೌ ಶೀಘ್ರಂ ಬೌದ್ಧಿನೀಂ ಹಸ್ತಿನೀಂ ಸ್ಥಿತಂ ॥ ೪೫ ॥

ಶಿವಂ ಮನಸಿ ಸಂಸ್ಥಾಪ್ಯ ಜಿತ್ವಾ ಬಧ್ವಾ ರುಷಾನ್ವಿತಃ ।
ಅಗಮತ್ತಮುಪಗೃಹ್ಯ ದರ್ಶಯಾಮಾಸ ತಂ ನೃಪಂ ॥ ೪೬ ॥

---

೪೩. ಏಳನೆಯ ಸರದಿಯಲ್ಲಿ ದೇವಸಿಂಹನು ವರ್ಧನನನ್ನು ಎದುರಿಸಿದನು. ಈರೀತಿಯಲ್ಲಿ ಸರದಿಯ ಕ್ರಮದಿಂದ ಅವರು ಎದುರಿಸಲು ಸಿದ್ಧರಾಗಿ ಲೀಲೆಯಿಂದ ಬಂದು ಆಕ್ರಮಿಸಿದರು ಲಕ್ಷಣ ಮುಂತಾದವರು ಕತ್ತಿಯನ್ನು ಧರಿಸಿದ್ದ ಗಜಸೇನನೇ ಮೊದಲಾದ ನೂರುಮಂದಿ ರಾಜರನ್ನು ವಿಸ್ತಾರವಾದ ಆ ಮಂಟಪದಲ್ಲಿದ್ದಂತೆಯೇ ಆಕ್ರಮಿಸಿದರು.

೪೪. ತನ್ನ ಕಡೆಯ ರಾಜಸೇನೆಯಲ್ಲವೂ ಹೀಗೆ ನಿಸ್ತೇಜವಾದುದನ್ನು ನೋಡಿ ಪೃಥ್ವೀರಾಜನು ಕೋಪಾವಿಷ್ಟನಾಗಿ ಶತ್ರುಭಯಂಕರವಾದ ಆನೆಯನ್ನೇರಿ ಹೊರಟನು.

೪೫. ಶಬ್ಧವೇಧಿಯೆಂಬ ಬಾಣವಿದ್ಯಾಕುಶಲನಾದ ಆ ರಾಜಶ್ರೇಷ್ಠನು ನೇತ್ರಸಿಂಹನೇ ಮುಂತಾದವರನ್ನು ಜಯಿಸಿ, ಬೌದ್ಧಿನಿಯೆಂಬ ಹೆಣ್ಣಾನೆಯ ಮೇಲೆ ಕುಳಿತು ಹೋರಾಡುತ್ತಿದ್ದ ಲಕ್ಷಣನ ಬಳಿಗೆ ತೀವ್ರಗತಿಯಿಂದ ಬಂದನು.

೪೬. ಹೀಗೆ ಬಂದ ಪೃಥ್ವೀರಾಜನು ತನ್ನ ಮನಸ್ಸಿನಲ್ಲಿ ಪರಶಿವನನ್ನು ಧ್ಯಾನಿಸಿ ಅವನ ಕೃಪೆಯಿಂದ ಎದುರಾಳಿಯನ್ನು ಸೋಲಿಸಿದನು. ಬಳಿಕ ರೋಷದಿಂದ ಅವನನ್ನು ಹಿಡಿದು ಬಂಧಿಸಿ ಎಳೆದುಕೊಂಡು ಹೋಗಿ ಆ ಲಕ್ಷಣನನ್ನು ಎಲ್ಲರಿಗೂ ಕಾಣುವಂತೆ ಸೆರೆಯಿಡಿಸಿದನು.

ಶ್ರುತ್ವಾ ಪರಿಮಲೋ ರಾಜಾ ಕೃಷ್ಣಾಂಶಂ ಭೀರುಕೋ ಯಯೌ ।
ವೃತ್ತಾಂತಂ ಕಥಯಾಮಾಸ ಚಾಹ್ಲಾದಾದಿಪರಾಜಯಂ ॥ ೪೭ ॥

ಅಜಿತಃ ಸ ಚ ಕೃಷ್ಣಾಂಶೋ ನಭೋಮಾರ್ಗೇಣ ಮಂದಿರಂ ।
ಗತ್ವಾ ಜಗರ್ಜ ಬಲವಾನ್ಯೋಗಿನ್ಯಾನಂದದಾಯಕಃ ॥ ೪೮ ॥

ತದಾ ಸ ಲಕ್ಷಣೋ ವೀರಸ್ತ್ಯಕ್ತ್ವಾ ಬಂಧನಮುತ್ತಮಂ ।
ವಿಷ್ಣುಂ ಮನಸಿ ಸಂಸ್ಥಾಪ್ಯ ಮಹೀರಾಜಂ ಸಮಾಯಯೌ ॥ ೪೯ ॥

ಗೃಹೀತ್ವಾ ಚಾಗಮಾಂ ದೋಲಾಂ ಸ್ವಯಂ ಶಿಬಿರಮಾಪ್ತವಾನ್ ॥ ೫೦ ॥

ಏತಸ್ಮಿನ್ನಂತರೇ ಸರ್ವೇ ತ್ಯಕ್ತ್ವಾ ಮೂರ್ಛಾಂ ಸಮಂತತಃ ।
ಖಡ್ಗಯುದ್ಧೇನ ತಾಞ್ಜಿತ್ವಾ ಬದ್ಧ್ವಾ ತಾನ್ನಿಗಡೈರ್ದೃಢೈಃ ॥ ೫೧ ॥

---

೪೭. ಇದನ್ನು ಕೇಳಿ ಪರಿಮಳರಾಜನು ಭಯಪಟ್ಟು ಕೃಷ್ಣಾಂಶನ ಬಳಿಗೆ ಹೋಗಿ ಆಹ್ಲಾದ ಮುಂತಾದವರಿಗೆ ಸೋಲಾದ ಸಮಾಚಾರವನ್ನೆಲ್ಲಾ ಹೇಳಿದನು.

೪೮. ಬಲಶಾಲಿಯೂ ಯೋಗಿನಿಗೆ ಆನಂದದಾಯಕನೂ ಆದ ಕೃಷ್ಣಾಂಶನು ಈ ಮಾತನ್ನು ಕೇಳಿ ಆಕಾಶಮಾರ್ಗದಿಂದ ಲಕ್ಷಣನನ್ನು ಬಂಧಿಸಿದ್ದ ಸ್ಥಳಕ್ಕೆ ಬಂದು ಸೇರಿ ಅವನಿಗೆ ಕೇಳಿಸುವಂತೆ ಬಲವಾಗಿ ಆರ್ಭಟಿಸಿದನು.

೪೯. ಆಗ ವೀರನಾದ ಲಕ್ಷಣನು ಪ್ರಬಲವಾದ ಬಂಧನದಿಂದ ಹೇಗೋ ತಪ್ಪಿಸಿಕೊಂಡು ಮನದಲ್ಲಿ ವಿಷ್ಣುವನ್ನು ಧ್ಯಾನಿಸುತ್ತಾ ಪೃಥ್ವೀರಾಜನ ಸಮೀಪಕ್ಕೆ ಹೋಗಲು ಹೊರಟನು.

೫೦. ಆಗ ಅವನು ಆಗಮಾದೇವಿಯನ್ನೂ ಮೇನೆಯಲ್ಲಿ ಕೂರಿಸಿಕೊಂಡು ತಾನೂ ಶಿಬಿರಕ್ಕೆ ಬಂದನು.

೫೧. ಇಷ್ಟರೊಳಗೆ ಸುತ್ತಲೂ ಮೂರ್ಛೆ ಬಿದ್ದಿದ್ದವರೆಲ್ಲಾ ಎಚ್ಚತ್ತರು. ಅವರು ಇವನನ್ನು ತಡೆಯಲಾಗಿ ಕೂಡಲೆ ಕತ್ತಿ ಹಿರಿದು ಅವರೊಡನೆ ಯುದ್ಧಮಾಡಿ ಅವರನ್ನೆಲ್ಲಾ ಗೆದ್ದು ಗಟ್ಟಿಯಾದ ಸರಪಳಿಗಳಿಂದ ಅವರುಗಳನ್ನು ಬಂಧಿಸಿದನು.

ಸಾನ್ವಯಾಂಚ್ಛತಭೂಪಾಂಶ್ಚ ಹತ್ವಾ ತದ್ರುಧಿರಾವಹೈಃ ।
ದ್ರೌಪದೀಂ ಸ್ನಾಪಯಾಮಾಸುರ್ವೇಲಾರೂಪಾಂ ಕಲೋತ್ತಮಾಂ॥ ೫೨ ॥

ವಿವಾಹಾಂತೇ ಚ ತೇ ಸರ್ವೇ ಶಿಬಿರಾಣಿ ಸಮಾಯಯುಃ ।
ಸಮುತ್ಸೃಜ್ಯ ಸುತಾನ್ ಸಪ್ತ ಸುಭೋಜ್ಯೈಸ್ತೇ ಹ್ಯಭೋಜಯನ್॥ ೫೩ ॥

ಭುಕ್ತವತ್ಸು ಸುವೀರೇಷು ಸಾಹಸ್ರಾಸ್ತೈಃ ಸುತೈಃ ಸಹ ।
ರುರುಧುಃ ಸರ್ವತೋ ಜಘ್ನುರಸ್ತ್ರಶಸ್ತ್ರೈಃ ಸಮಂತತಃ ॥ ೫೪ ॥

ಸಹಸ್ರಶೂರಾಂಸ್ತಾನ್ಹತ್ವಾ ಪುನರ್ಬಧ್ವಾ ಮಹಾಬಲಾನ್ ।
ಶಿಬಿರಾಣಿ ಸಮಾಜಗ್ಮುಸ್ತೇಷಾಂ ಹಾಸ್ಯವಿಶಾರದಾಃ ॥ ೫೫ ॥

---

೫೨. ಮತ್ತು ಪ್ರತಿಭಟಿಸಲು ಬಂದ ನೂರುಜನ ರಾಜರನ್ನೂ ಅವರ ವಂಶಕ್ಕೆ ಒಬ್ಬರಾದರೂ ಉಳಿಯದಂತೆ ನಿಶ್ಶೇಷವಾಗಿ ಕೊಂದುಹಾಕಿ ಶ್ರೇಷ್ಠ ಕಾಂತಿಯುಕ್ತಳೂ ದ್ರೌಪದಿಯ ಅಂಶಸಂಭೂತೆಯೂ ಆದ ವೇಲಾದೇವಿಯನ್ನು ಅವರ ರಕ್ತವಾಹಿನಿಯಿಂದ ಸ್ನಾನಮಾಡಿಸಿದನು.

೫೩. ಸ್ವರ್ಣಪತ್ರದಲ್ಲಿ ಬರೆಸಿದ್ದಂತೆ ಎಲ್ಲವನ್ನೂ ನಡೆಸಿದ್ದರಿಂದ ರಾಜನು ವೇಲಾದೇವಿಯನ್ನು ವಿವಾಹ ಮಾಡಿಕೊಟ್ಟನು. ವಿವಾಹ ಸಮಾರಂಭವೆಲ್ಲಾ ಮುಗಿದ ಮೇಲೆ ವರನ ಪಕ್ಷದವರೆಲ್ಲರೂ ತಮ್ಮ ಶಿಬಿರಕ್ಕೆ ಬಂದರು ಪೃಥ್ವೀರಾಜನು ತನ್ನ ಏಳು ಮಕ್ಕಳು ಹೊರತು ಮಿಕ್ಕವರೆಲ್ಲರಿಗೂ ಶ್ರೇಷ್ಠವಾದ ಭೋಜ್ಯವಸ್ತುಗಳಿಂದ ಭೋಜನ ಮಾಡಿಸಿದನು.

೫೪. ಹೀಗೆ ಆ ವೀರರೆಲ್ಲರೂ ಭೋಜನ ಮಾಡುತ್ತಿರುವಾಗ ಆ ಏಳುಮಂದಿ ಪುತ್ರರು ಸಹಸ್ರ ರಾಜರೊಡನೆ ಬಂದು, ಅವರ ಸುತ್ತಲೂ ಮುತ್ತಿಗೆಹಾಕಿ ಅಸ್ತ್ರ ಶಸ್ತ್ರ ಇವುಗಳ ಮೂಲಕ ಅವರನ್ನು ಘಾತಿಸಿದರು.

೫೫. ಹಾಸ್ಯದಲ್ಲಿ ನಿಪುಣರಾದ ಕೃಷ್ಣಾಂಶಾದಿಗಳು ಆ ಸಹಸ್ರಮಂದಿ ಶೂರರನ್ನೂ ಹೊಡೆದುದಲ್ಲದೆ ಆ ಶೂರರನ್ನೆಲ್ಲಾ ಬಂಧಿಸಿ ತಮ್ಮ ಶಿಬಿರಕ್ಕೆ ಬಂದರು.

**ದಶಲಕ್ಷಸುವರ್ಣಾನಿ ಗೃಹೀತ್ವಾ ನೃಪತಿರ್ಬಲೀ ।**
**ವೇಲಾಂ ನವೋಢಾಮಾದಾಯ ಗತ್ವಾ ನತ್ವಾ ತಮಬ್ರವೀತ್ ॥ ೫೬ ॥**

**ಪ್ರದ್ಯೋತಸುತ ಹೇ ರಾಜನ್ ಲಕ್ಷಣೋಽಸೌ ಮಹಾಬಲಃ ।**
**ಮಮ ಪತ್ನೀಂ ಸಮಾದಾಯ ದಾಸೀಂ ಕರ್ತುಂ ಸಮಿಚ್ಛತಿ ॥ ೫೭ ॥**

**ಇತಿ ಶ್ರುತ್ವಾ ಪರಿಮಲಃ ಸರ್ವಭೂಪಸಮನ್ವಿತಃ ।**
**ಬಹುಧಾ ಬೋಧಿತಶ್ಚೈವ ನ ಬುಬೋಧ ತದಾ ನೃಪಃ ॥ ೫೮ ॥**

**ತದಾ ಮಹಾಸತೀ ವೇಲಾ ವಿಲಲಾಪ ಭೃಶಂ ಮುಹುಃ ।**
**ತಚ್ಛ್ರುತ್ವಾ ಸ ಚ ಕೃಷ್ಣಾಂಶಃ ಸಹಿತೋ ಬಲಖಾನಿನಾ ।**
**ತಾಮಾಶ್ವಾಸ್ಯ ತದಾ ವೇಲಾಂ ನಭೋಮಾರ್ಗೇಣ ಚಾಯಯೌ ॥ ೫೯ ॥**

---

೫೬. ಬಳಿಕ ಬಲಶಾಲಿಯಾದ ಪೃಥ್ವೀರಾಜನು ಹತ್ತುಲಕ್ಷ ಹೊನ್ನುಗಳನ್ನು ತೆಗೆಸಿಕೊಂಡು ನವವಧುವಾದ ವೇಳೆಯನ್ನೂ ಸಂಗಡ ಕರೆದುಕೊಂಡು ಬಂದು ಅವರಿಗೆ ನಮಸ್ಕರಿಸಿ ಇಂತೆಂದನು.

೫೭. ಪ್ರದ್ಯೋತ ಕುಮಾರನೆನಿಸಿದ ಮಹಾರಾಜನೆ! ಮಹಾಬಲಶಾಲಿಯಾದ ಈ ಲಕ್ಷಣನು "ದಾಸಿಯಾಗಿ ಮಾಡಿಕೊಳ್ಳುವುದಕ್ಕೆ ನನ್ನ ಹೆಂಡತಿಯನ್ನು ಎಳೆದು ಕೊಂಡುಹೋಗಿದ್ದಾನೆ" ಎಂದನು.

೫೮. ಸಮಸ್ತ ರಾಜಸಮೇತ ಕುಳಿತಿದ್ದ ಪರಿಮಲರಾಜನು ಈರೀತಿ ಅವನು ಹೇಳಿದುದನ್ನು ಕೇಳಿ ಯಾರು ಎಷ್ಟು ಪರಿಯಿಂದ ಹೇಳಿದರೂ ಅದನ್ನು ನಂಬಲಿಲ್ಲ (ಗಮನಕ್ಕೆ ತೆಗೆದುಕೊಳ್ಳಲಿಲ್ಲ.)

೫೯. ಆಗ ಮಹಾಪತಿವ್ರತೆಯಾದ ವೇಲಾದೇವಿಯು ಇದು ಸತ್ಯವೆಂದು ಪದೇ ಪದೇ ಹೇಳಿ ಬಹುವಾಗಿ ಗೋಳಿಟ್ಟಳು. ಬಳಿಕ ಇದನ್ನು ಕೇಳಿ ಕೃಷ್ಣಾಂಶನು ಬಲಖಾನಿಯ ಸಮೇತನಾಗಿ ವೇಲಾಕುಮಾರಿಯಿದ್ದೆಡೆಗೆ ಬಂದು ಅವಳನ್ನು ಸಂತೈಸಿ, ಪುನಃ ಆಕಾಶಮಾರ್ಗದಿಂದ ಹಿಂದಕ್ಕೆ ಹೊರಟನು.

ಲಕ್ಷಣಂ ತರ್ಜಯಿತ್ವಾಽಸೌ ಗೃಹೀತ್ವಾ ಚಾಽಗಮನ್ಮುದಾ ।
ನಭೋಮಾರ್ಗೇಣ ಗೇಹೇ ತಂ ಕೃಷ್ಣಾಂಶಃ ಸಮುಪೇಕ್ಷಯತ್ ॥ ೬೦ ॥

ಪುನಸ್ತ್ಯಕ್ತ್ವಾ ಸಪ್ತ ಸುತಾನ್‌ಸಹಿತಾನ್ನೃಪತೇಸ್ತು ತೇ ।
ಶಪಥಂ ಕಾರಯಾಮಾಸುರ್ದಂಭಂ ಪ್ರತಿ ಮಹಾಬಲಾಃ ॥ ೬೧ ॥

ಉಷಿತ್ವಾ ದಶರಾತ್ರಾಂತೇ ದಧ್ಯುರ್ಗಂತುಮನಾ ಮುನೇ ।
ಮಹೀರಾಜಸ್ತು ಬಲವಾನ್ ಗೃಹೀತ್ವಾ ಭೂಪತೇಃ ಪದೌ ।
ಸ ಉವಾಚಾಶ್ರುಪೂರ್ಣಾಕ್ಷಸ್ತದಾ ಪರಿಮಲಂ ನೃಪಂ ॥ ೬೨ ॥

ಮಹಾರಾಜ ವಧೂಸ್ತೇ ಚ ವೇಲೇಯಂ ದ್ವಾದಶಾಬ್ದಿಕಾ ।
ಪಿತೃಮಾತೃವಿಯೋಗಂ ಚ ನ ಕ್ಷಮಂತೀ ತು ಬಾಲಿಕಾ ॥ ೬೩ ॥

ತಸ್ಮಾತ್ತ್ವಾಂ ತ್ವಂ ಪರಿತ್ಯಜ್ಯ ಗಚ್ಛ ಗೇಹಂ ಸುಖೀ ಭವ ।
ಪತಿಯೋಗ್ಯಾ ಯದಾ ಭೂಯಾತ್ ತದಾ ತ್ವಾಂ ಪುನರೇಷ್ಯತಿ ॥ ೬೪ ॥

---

೬೦ ಹೀಗೆ ಹೊರಟ ಇವನು ಲಕ್ಷಣನನ್ನು ಗದರಿಸಿ ಜತೆಯಲ್ಲಿ ಕರೆದುಕೊಂಡು ಹರ್ಷಯುಕ್ತನಾಗಿ ಆಕಾಶಮಾರ್ಗದಿಂದ ಹಿಂದಿರುಗಿ ಬಂದನು. ಮನೆಗೆ ಬಂದಮೇಲೂ ಕೃಷ್ಣಾಂಶನು ಆ ಲಕ್ಷಣನನ್ನು ಚೆನ್ನಾಗಿ ಆಕ್ಷೇಪಿಸಿದನು.

೬೧. ಮತ್ತು ತಮಗೆ ದ್ರೋಹವೆಸಗಿದ್ದ ರಾಜನ ಏಳು ಮಕ್ಕಳನ್ನೂ ಮತ್ತು ಇತರ ರಾಜರನ್ನೂ ಸೆರೆಯಿಂದ ಬಿಡಿಸಿದನು. ಮಹಾಬಲಶಾಲಿಗಳಾದ ಅವರು ಆಗಲೂ ಕಾರ್ಯಸಾಧಿಸುವೆವೆಂದು ಡಂಭದಿಂದ ಶಪಥಮಾಡಿ ಇನ್ನೂ ಹತ್ತು ರಾತ್ರಿ ಅಲ್ಲಿದ್ದು ಆಮೇಲೆ ಏನೂ ಸಾಗದೆ ತಮ್ಮ ತಮ್ಮ ಊರಿಗೆ ಹೋಗುವ ಮನಸ್ಸುಮಾಡಿದರು.

೬೨. ಆಗ ಬಲಶಾಲಿಯಾದ ಪೃಥ್ವೀರಾಜನು ಪರಿಮಳರಾಜನ ಪಾದದ್ವಯವನ್ನು ಹಿಡಿದುಕೊಂಡು ಕಣ್ಣೀರು ಸುರಿಸುತ್ತಾ ಅವನನ್ನು ಕುರಿತು ಇಂತೆಂದನು.

೬೩. "ಅಯ್ಯಾ ಮಹಾರಾಜನೆ! ನಿನ್ನ ಈ ಸೊಸೆಯನ್ನು ಇನ್ನು ಹನ್ನೆರಡೇ ವರ್ಷದವಳು. ಹುಡುಗಿಯಾದ ಈಕೆ ತಂದೆ ತಾಯಿಗಳನ್ನು ಬಿಟ್ಟಿರಲಾರಳು."

೬೪. "ಆದಕಾರಣ ಅವಳನ್ನು ಸದ್ಯಕ್ಕೆ ಇಲ್ಲೇ ಬಿಟ್ಟು ನೀವು ಪ್ರಯಾಣ ಮಾಡಿ ಊರಿಗೆ ಹೋಗಿ ಸುಖದಿಂದ ಇರಿ. ಅವಳು ದೊಡ್ಡವಳಾಗಿ ಪತಿಯ ಭೋಗಕ್ಕೆ ಅರ್ಹಳಾದ ಮೇಲೆ ನಿಮ್ಮ ಸನ್ನಿಧಿಗೆ ಬಂದೇ ಬರುವಳು.

ಇತ್ಯುಕ್ತ್ವಾ ಸ ವಚೋ ರಾಜಾ ಸ ಸ್ನೇಹಾದಂಕಮಸ್ಪೃಶತ್ ।
ಚೂರ್ಣೀಭೂತೇ ಪರಿಮಲೇ ಚಾಹ್ಲಾದಸ್ತತ್ರ ದುಃಖಿತಃ ।
ಮಹೀರಾಜಂ ಸ ಪಸ್ಪರ್ಶ ಸ ರಾಜಾ ಚೂರ್ಣತಾಂ ಗತಃ ॥ ೬೫ ॥

ಭಗ್ನಾಸ್ಥೀ ಭೂಪತೀ ಚೋಭೌ ಪಾವಕೀಯೈಶ್ಚಿಕಿತ್ಸಕೈಃ ।
ಸುಖವಂತೌ ಗೃಹಂ ಪ್ರಾಪ್ಯ ಕೃತಕೃತ್ಯತ್ವಮಾಗತೌ ॥ ೬೬ ॥

ಮಲನಾ ಸ್ವಸುತಂ ದೃಷ್ಟ್ವಾ ಪ್ರಾಪ್ತಮುದ್ವಾಹಿತಂ ಗೃಹೇ ।
ಕೃತ್ವೋತ್ಸವಂ ಬಹುವಿಧಂ ವಿಪ್ರೇಭ್ಯಶ್ಚ ದದೌ ಧನಂ ।
ಹೋಮಂ ವೈ ಕಾರಯಾಮಾಸ ಚಂಡಿಕಾಯಾಃ ಪ್ರಸಾದತಃ ॥ ೬೭ ॥

ಸಭಾಯಾಂ ಲಕ್ಷಣೋ ವೀರೋ ಯಾತ್ರಾಕಾಲೇ ತಮಬ್ರವೀತ್ ।
ಅಗಮಾಂ ಜಯಚಂದ್ರಾಯ ಮತ್ವಾ ಜಿತ್ವಾ ಹೃತಾಂ ತು ತಾಂ ।
ನಭೋಮಾರ್ಗೇಣ ಸಂಪ್ರಾಪ್ತೌ ಯೋಗಿನೌ ಚ ಶಿವಾಜ್ಞಯಾ ॥ ೬೮ ॥

---

೬೫. ಈರೀತಿಯಾಗಿ ಸವಿಮಾತುಗಳನ್ನು ಆಡುತ್ತಾ ಸ್ನೇಹಾತಿಶಯದಿಂದಲೋ ಎಂಬಂತೆ ಅವನ ತೊಡೆಯನ್ನು ಮುಟ್ಟಿದನು. ಹೀಗೆ ಮುಟ್ಟಿದ ಕ್ಷಣ ಪರಿಮಳನ ದೇಹವು ಛಿದ್ರಛಿದ್ರವಾಯಿತು. ಇದನ್ನು ನೋಡಿ ಅವನ ಪುತ್ರನಾದ ಆಹ್ಲಾದನು ಮಹಾಖೇದಗೊಂಡಾಗ್ಯೂ ಅದನ್ನು ಹೊರಪಡಿಸದೆ ತಾನೂ ಪೃಥ್ವೀರಾಜನನ್ನು ಮುಟ್ಟಲಾಗಿ ಆ ರಾಜನ ದೇಹವೂ ಚಿಂದಿಚಿಂದಿಯಾಗಿ ಹೋಯಿತು.

೬೬. ಹಾಗೆ ಇಬ್ಬರು ರಾಜರೂ, ಮೂಳೆಯು ಹುಡಿಯಂತೆ ಆಗಿಹೋಗಲಾಗಿ ಅಗ್ನಿದೇವನ ಭಕ್ತರಾದ ಚಿಕಿತ್ಸಕರಿಂದ ಚಿಕಿತ್ಸೆಮಾಡಿಸಲು ಇಬ್ಬರೂ ಬದುಕಿ ಸುಖಿಗಳಾಗಿ ತಮ್ಮ ತಮ್ಮ ಮನೆಗೆ ಹೋಗಿ ಧನ್ಯರೆನಿಸಿದರು.

೬೭. ಮಲನಾದೇವಿಯು ಚಂಡಿಕೆಯ ಅನುಗ್ರಹದಿಂದ ವಿವಾಹಿತನಾಗಿ ಸುಖವಾಗಿ ಮನೆಗೆ ಬಂದ ಮೊಮ್ಮಗನನ್ನು ನೋಡಿ ವೈಭವದಿಂದ ನಾನಾಬಗೆಯ ಮಂಗಳೋತ್ಸವಗಳನ್ನು ಮಾಡಿದುದಲ್ಲದೆ ಬ್ರಾಹ್ಮಣರಿಗೆ ಸಮೃದ್ಧಿಯಾಗಿ ಧನವನ್ನು ದಾನಮಾಡಿದಳು. ಮತ್ತು ಚಂಡೀಹೋಮವನ್ನೂ ಮಾಡಿಸಿದಳು.

೬೮. ವೀರನಾದ ಲಕ್ಷಣನು ಸಭಾಮಧ್ಯೆ ಅವನನ್ನು ಕುರಿತು ನಿಜಾಂಶವನ್ನು ವಿವರಿಸುವನಾಗಿ "ವಿಜಯ ಯಾತ್ರಾಕಾಲದಲ್ಲಿ ಎಲ್ಲರನ್ನೂ ಗೆದ್ದು ಅಗಮಾದೇವಿಯನ್ನು ಜಯಚಂದ್ರನಿಗೆಂದು ನಾನು ಸಾಗಿಸಿಕೊಂಡು ಬರುತ್ತಿರಲು ಶಿವನ ಮಾಯೆಯಿಂದ ಇಬ್ಬರು ಯೋಗಿಗಳು ಆಕಾಶಮಾರ್ಗದಲ್ಲಿ ಬಂದರು."

ಜಹ್ರತುಸ್ತೌ ಚ ಮಾಂ ಜಿತ್ವಾ ತತ್ರೀಕ್ಷ್ಣ್ಯ ಭಯಮೋಹಿತಂ ।
ಅದ್ಯಾಹಂ ಧಾಮ ಗಚ್ಛಾಮಿ ಚಿರಂ ಜೀವ ನೃಪೋತ್ತಮ ।
ಇತ್ಯುಕ್ತವಂತಂ ತಂ ನತ್ವಾ ಯಯುರ್ಭೂಪಾಃ ಸ್ವಮಾಲಯಂ ॥ ೬೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಸಪ್ತದಶೋಽಧ್ಯಾಯಃ



---

೬೯. "ಅದನ್ನು ನೋಡಿ ಮಹಾಭಯದಿಂದ ನಾನು ಮೂರ್ಛಿತನಾದೆನು. ಆಗ ನನ್ನನ್ನು ಅವರು ಗೆದ್ದು ಆಕೆಯನ್ನು ಅಪಹರಿಸಿದರು. ಈಗ ನಾನು ನನ್ನ ಸ್ವಸ್ಥಾನಕ್ಕೆ ಹೋಗುತ್ತಿದ್ದೇನೆ, ಅಯ್ಯಾ ರಾಜೇಂದ್ರನೇ! ಬಹುಕಾಲ ಸುಖವಾಗಿ ಬದುಕು" ಎಂದನು. ಹೀಗೆ ಹೇಳಿದ ಅವನಿಗೆ ಎಲ್ಲಾ ರಾಜರೂ ನಮಿಸಿ ತಮ್ಮ ತಮ್ಮ ಊರಿಗೆ ಹೋದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಅಷ್ಟಾದಶೋಽಧ್ಯಾಯಃ

॥ ಸೂತ ಉವಾಚ ॥

ವಿಂಶಾಬ್ದೇ ಚೈವ ಕೃಷ್ಣಾಂಶೇ ಯಥಾ ಜಾತಂ ತಥಾ ಶೃಣು ।
ಸಾಗರಾಖ್ಯಸರಸ್ತೀರೇ ಕದಾಚಿದಿಂದುಲೋ ಬಲೀ ।
ಜಪ್ತ್ವಾ ಸಪ್ತಶತೀಸ್ತೋತ್ರಂ ತತ್ರ ಧ್ಯಾನಾನ್ವಿತೋಽಭವತ್ ॥ ೧ ॥

ಏತಸ್ಮಿನ್ನಂತರೇ ಹಂಸಾಃ ಆಕಾಶಾದ್ಭೂಮಿಮಾಗತಾಃ ।
ತೇಷಾಂ ಚ ರುತಶಬ್ದೈಶ್ಚ ಸ ಧ್ಯಾನಾದುತ್ಥಿತೋಽಭವತ್ ॥ ೨ ॥

ವಕ್ಷ್ಯಮಾಣಂ ವಚಃ ಪ್ರಾಹುರ್ಧನ್ಯೋಽಯಂ ದಿವ್ಯವಿಗ್ರಹಃ ।
ಪರ್ವತಾನಾಂ ಹಿಮಗಿರಿರ್ವನಂ ವೃಂದಾವನಂ ತಥಾ ॥ ೩ ॥

---

### ಹದಿನೆಂಟನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಕೃಷ್ಣಾಂಶನು ಇಪ್ಪತ್ತು ವರ್ಷದವನಾಗುತ್ತಲೆ ನಡೆದ ವಿಚಾರವನ್ನು ಈಗ ಹೇಳುವೆನು ಕೇಳು, ಬಲಶಾಲಿಯಾದ ಇಂದುಲನು ಒಂದಾನೊಂದು ದಿನ ಸಾಗರವೆಂಬ ಹೆಸರಿನ ಸರೋವರಕ್ಕೆ ಹೋಗಿ ಸ್ನಾನಾದಿಗಳನ್ನು ಮಾಡಿ ಅದರ ತೀರದಲ್ಲಿ ಕುಳಿತು ಸಪ್ತಶತೀ ಸ್ತೋತ್ರ ಜಪ ಮಾಡುತ್ತಾ ಅಲ್ಲಿಯೇ ಧ್ಯಾನಾರೂಢನಾದನು.

೨. ಈವೇಳೆಗೆ ಕೆಲವು ಹಂಸಗಳು ಆಕಾಶದಿಂದ ಭೂಮಿಗೆ ಇಳಿದುವು. ಅವುಗಳ ಧ್ವನಿಯು ಗಲಭೆಯಿಂದ ಧ್ಯಾನಾರೂಢನಾಗಿದ್ದ ಇಂದುಲನು ಎಚ್ಚೆತ್ತನು.

೩-೪. ಅನಂತರ ಹಂಸಗಳು ಇವನನ್ನು ನೋಡಿ " ಈ ಸುಂದರಾಕಾರನಾದ ಈತನೇ ಧನ್ಯನು, ಪರ್ವತಗಳಲ್ಲಿ ಹಿಮಾಲಯವೂ, ವನಗಳಲ್ಲಿ ಬೃಂದಾವನವೂ,

ಮಹಾವತೀ ಪುರೀಣಾಂ ಚ ಸಾಗರಃ ಸರಸಾಮಪಿ ।
ನಾರೀಣಾಂ ಪದ್ಮಿನೀ ನಾರೀ ನೃಣಾಂ ಶ್ರೇಷ್ಠಸ್ತ್ವಮಿಂದುಲಃ ॥ ೪ ॥

ಭೋ ಇಂದುಲ ಮಹಾಪ್ರಾಜ್ಞ ಮಾನಸೇ ಸರಸಿ ಸ್ಥಿತಾಃ ।
ವಯಂ ಶ್ರುತ್ವಾ ಶ್ರಿಯೋ ವಾಕ್ಯಂ ನಲಿನೀಸಾಗರಂ ಗತಾಃ ॥ ೫ ॥

ದೃಷ್ಟ್ವಾ ತತ್ರ ಶುಭಾಂ ನಾರೀಂ ಸರ್ವಾಭರಣಭೂಷಿತಾಂ ।
ಸಪ್ತಾಲಿಭಿರ್ಯುತಾಂ ರಮ್ಯಾಂ ಗೀತನಾಟ್ಯವಿಶಾರದಾಂ ॥ ೬ ॥

ದೃಷ್ಟ್ವಾ ಮೋಹತ್ವಮಾಪನ್ನಾ ವಯಂ ದೇಶಾಂತರಂ ಗತಾಃ ।
ವಿಲೋಕಿತಾ ನರಾಃ ಸರ್ವೇಽತ್ರಾಸ್ಮಾಭಿರ್ಜಗತೀತಲೇ ।
ತ್ವತ್ಸಮೋ ನ ಹಿ ಕೋಽಪ್ಯತ್ರ ಪದ್ಮಿನೀಸದೃಶೋ ವರಃ ॥ ೭ ॥

ತಸ್ಮಾತ್ತ್ವಂ ನಃ ಸಮಾರುಹ್ಯ ತಾಂ ದೇವೀಂ ದ್ರಷ್ಟುಮರ್ಹಸಿ ।
ತಥೇತ್ಯುಕ್ತ್ವಾ ಶಕ್ರಸುತೋ ಹಂಸರಾಜಂ ಸಮಾರುಹತ್ ॥ ೮ ॥

---

ಪಟ್ಟಣಗಳಲ್ಲಿ ಮಹಾವತಿಯೂ, ಸರೋವರಗಳಲ್ಲಿ ಸಾಗರವೂ, ನಾರಿಯರಲ್ಲಿ ಪದ್ಮಿನಿಯೂ, ಪುರುಷರಲ್ಲಿ ಇಂದುಲನಾದ ನೀನೂ ಸಹ ಶ್ರೇಷ್ಠರು ".

೫. "ಅಯ್ಯಾ ಪ್ರಾಜ್ಞನಾದ ಇಂದುಲನೇ ! ಮಾನಸಸರೋವರದಲ್ಲಿ ವಾಸಿಸುತ್ತಿದ್ದ ನಾವು ಲಕ್ಷ್ಮೀದೇವಿಯಿಂದ ಉಕ್ತವಾದ ಈ ಮೇಲೆ ಹೇಳಿದ ಮಾತುಗಳನ್ನು ಕೇಳಿ ಕಮಲಸಾಗರಕ್ಕೆ ಹೋದೆವು.

೬. ಅಲ್ಲಿ ಏಳು ಮಂದಿ ಸಖಿಯರೊಡನೆ ಇರುತ್ತಾ ಗೀತನಾಟ್ಯಪ್ರವೀಣೆಯೂ ಸಲುವಾಭರಣವನ್ನು ಧರಿಸಿ ಮನೋಹಾರಿಣಿಯೂ ಆದ ಸುಂದರಿ ಸ್ತ್ರೀಯನ್ನು ನೋಡಿ ವಿಸ್ಮಿತರಾದೆವು.

೭-೮. ಅಲ್ಲಿಂದ ಮುಂದೆ ನಾವು ದೇಶಾಂತರಗಳಲ್ಲಿ ಸಂಚರಿಸುತ್ತಾ ಅಲ್ಲಿನ ಅನೇಕ ಪುರುಷರನ್ನು ನೋಡಿದೆವು. ಆದರೆ ಪದ್ಮಿನಿಗೆ ಸದೃಶಳಾದ ಸ್ತ್ರೀಯೂ, ನಿನಗೆ ಸಮಾನನಾದ ಪುರುಷನೂ, ಎಲ್ಲೂ ಇಲ್ಲದುದರಿಂದ ಆ ಪದ್ಮಿನಿಯನ್ನು ವರಿಸಲು ನೀನೇ ಅನುರೂಪನಾದ ವರನೆಂದು ಭಾವಿಸಿರುವೆವು. ಆದುದರಿಂದ ನೀನು ನಮ್ಮ ಮೇಲೆ ಕುಳಿತುಕೋ ಅಲ್ಲಿಗೆ ಬಂದು ಆ ದೇವಿಯನ್ನು ನೋಡಿಕೊಂಡು ಬರುವೆಯಂತೆ" ಎಂದು ಹೇಳಿದುವು.

ಸಿಂಹಲದ್ವೀಪಕೇ ರಮ್ಯೇ ಹ್ಯಾರ್ಯಸಿಂಹೋ ನೃಪಃ ಸ್ಥಿತಃ ।
ತತ್ಸುತಾ ಪದ್ಮಿನೀ ನಾಮ್ನಾ ರೂಪಯೌವನಶಾಲಿನೀ ।
ರಾಗಿಣ್ಯಃ ಸಪ್ತ ವಿಖ್ಯಾತಾಸ್ತತ್ಸಖ್ಯಃ ಪ್ರಮದೋತ್ತಮಾಃ ॥ ೯ ॥

ನಲಿನೀಸಾಗರೇ ರಮ್ಯೇ ಗಿರಿಜಾಮಂದಿರಂ ಶುಭಂ ।
ತತ್ರ ಸ್ಥಿತಾಂ ಚ ತಾಂ ದೇವೀಮಿಂದುಲಃ ಸ ದದರ್ಶ ಹ ॥ ೧೦ ॥

ಸಾಪಿ ತಂ ಸುಂದರಂ ದೃಷ್ಟ್ವಾ ಹಂಸದೇಹೇ ಸಮಾಸ್ಥಿತಂ ।
ಸಂಮೋಹ್ಯಾಹೂಯ ತಂ ದೇವಂ ತೇನ ಸಾರ್ಧಮರೀರಮತ್ ॥ ೧೧ ॥

ವರ್ಷಮೇಕಂ ಯಯೌ ತತ್ರ ನಾನಾಲೀಲಾಸು ಮೋಹಿತಃ ।
ನಕ್ತಂ ದಿವಂ ನ ಬುಬುಧೇ ರಮಮಾಣಸ್ತಯಾ ಸಹ ॥ ೧೨ ॥

---

೯. ಇಂದ್ರಕುಮಾರನಾದ ಇಂದುಲನು "ಹಾಗೆಯೇ ಆಗಲಿ" ಎಂದು ಒಪ್ಪಿ ಆ ರಾಜಹಂಸವನ್ನೇರಿ ಹೊರಟನು. ಸಿಂಹಳವೆಂಬ ರಮ್ಯವಾದ ದ್ವೀಪದಲ್ಲಿ ಆರ್ಯಸಿಂಹನೆಂಬ ರಾಜನಿದ್ದನು. ಅವನಿಗೆ ರೂಪವತಿಯೂ ಪ್ರಾಯಸಮರ್ಥೆಯೂ ಆದ ಪದ್ಮಿನಿ ಎಂಬ ಮಗಳಿದ್ದಳು. ಅವಳಿಗೆ ನಾರೀರತ್ನರೆನಿಸಿದ ಏಳು ಮಂದಿ ಯುವತಿಯರು ಅತಿ ಪ್ರಿಯಸಖಿಯರೆನಿಸಿದ್ದರು.

೧೦. ರಮ್ಯವಾದ ಆ ಕಮಲಸಾಗರದಲ್ಲಿ ಶುಭಕರವಾದ ಒಂದು ದೇವಿಯ ಮಂದಿರವಿದ್ದಿತು ಇಂದುಲನು ಆ ಮಂದಿರದಲ್ಲಿದ್ದ ದೇವೀಮೂರ್ತಿಯನ್ನು ದರ್ಶನ ಮಾಡಿದನು.

೧೧. ಹಂಸವಾಹನನಾಗಿ ಬರುತ್ತಿರುವ ದಿವ್ಯಸುಂದರರೂಪನಾದ ಇವನನ್ನು ದೇವಿಯು ನೋಡಿ ಮೋಹಗೊಂಡು ಅವನನ್ನು ಕರೆದು ದೇವನಾದ ಅವನೊಡನೆ ರಮಿಸಿದಳು.

೧೨. ಅಲ್ಲಿ ಮೋಹಪರವಶನಾಗಿ ನಾನಾಲೀಲೆಗಳನ್ನನುಭವಿಸುತ್ತಾ ಒಂದು ವರ್ಷಕಾಲ ಕಳೆದನು. ಅವಳೊಡನೆ ಕ್ರೀಡಿಸುವ ಸಂಭ್ರಮದಲ್ಲಿ ಹಗಲುರಾತ್ರಿ ಎಂಬುದರ ಗಮನವೂ ಸಹ ಇರಲಿಲ್ಲ.

ಭಕ್ತಿಗರ್ವತ್ವಮಾಪನ್ನೇ ಚಾಹ್ಲಾದೇ ಜಗದಂಬಿಕಾ ।
ದೃಷ್ಟ್ವಾ ಚಾಂತರ್ದಧೇ ದೇವೀ ಗರ್ವಾಚರಣಕುಂಠಿತಾ ॥ ೧೩ ॥

ತಸ್ಯ ಪ್ರಾಪ್ತಂ ಮಹದ್ದುಃಖಮಾಹ್ಲಾದಸ್ಯ ಜಯೈಷಿಣಃ ।
ಸ ಕೈಶ್ಚಿತ್ಪುರುಷೈರ್ವೀರೈಃ ಕಥಿತೋಽಭೂತ್ಸ್ವಮಂದಿರೇ ॥ ೧೪ ॥

ಇಂದುಲಂ ರೂಪಸಂಪನ್ನಂ ಲಂಕಾಪುರನಿವಾಸಿನಃ ।
ರಾಕ್ಷಸಾಸ್ತೇಸಮಾಹೃತ್ಯ ಸ್ವಗೇಹಂ ಶೀಘ್ರಮಾಯಯುಃ ॥ ೧೫ ॥

ಇತಿ ಶ್ರುತ್ವಾ ವಚೋ ಘೋರಂ ಸಕುಲೋ ವಿಲಲಾಪ ಹ ।
ಹಾಹಾಶಬ್ದೋ ಮಹಾಂಶ್ಚಾಸೀತ್ತೇಷಾಂ ತು ರುದತಾಂ ಮುನೇ ॥ ೧೬ ॥

---

೧೩. ಆಹ್ಲಾದ ಪುತ್ರನು ಹೀಗೆ ಭಕ್ತಿಯಿಂದ ಒಂದು ಬಗೆಯ ಗರ್ವವುಳ್ಳವನಾಗಲು ಜಗದಂಬಿಕೆಯು ಇದನ್ನು ನೋಡಿ ಇವನ ಗರ್ವದ ನಡವಳಿಕೆಗೆ ಬೇಸತ್ತು ಅಲ್ಲಿಯೇ ಮಾಯವಾದಳು.

೧೪-೧೫. ಬಳಿಕ ಅವನಿಗೆ ದುಸ್ಸಹವಾದ ವ್ಯಥೆಯುಂಟಾಯಿತು. ಅತ್ತ ವಿಜಯಾಭಿಲಾಷಿಯಾಗಿದ್ದ ಆಹ್ಲಾದನಿಗೆ ತನ್ನ ಮಗನು ಎಲ್ಲಿಯೋ ಹೋಗಿ ಬಿಟ್ಟನೆಂದು ಮಹಾದುಃಖ ಪ್ರಾಪ್ತಿಯಾಯಿತು. ಆಗ ವೀರರಾದ ಕೆಲವರು ಪುರುಷರು ಆಹ್ಲಾದನ ಅರಮನೆಗೆ ಬಂದು "ಅಯ್ಯಾ ವೀರನೇ! ಬಹು ಸುಂದರವಾದ ರೂಪವುಳ್ಳ ಇಂದುಲ ಕುಮಾರನನ್ನು ಲಂಕಾಪಟ್ಟಣ ನಿವಾಸಿಗಳಾದ ರಾಕ್ಷಸರು ಅಪಹರಿಸಿ ಎತ್ತಿಕೊಂಡು ತಮ್ಮ ಪಟ್ಟಣಕ್ಕೆ ಹೋಗಿದ್ದಾರೆ" ಎಂಬದಾಗಿ ಹೇಳಿದರು.

೧೬. ಈ ದಾರುಣವಾದ ವೃತ್ತಾಂತವನ್ನು ಕೇಳಿ ಅವನ ಮನೆಯವರೆಲ್ಲಾ ದುಃಖಿತರಾದರು. ಅಯ್ಯಾ ಋಷಿಯೇ! ಕೇಳು, ಹೀಗೆ ಅವರುಗಳೆಲ್ಲಾ ದುಃಖಿಸುವ ಹಾಹಾಕಾರಯುಕ್ತವಾದ ರೋದನಧ್ವನಿಯಿಂದ ದೊಡ್ಡ ಗಲಭೆಯಾಯಿತು.

ಕೃಷ್ಣಾಂಶೋ ರುದಿತಂ ಪ್ರಾಹಾಽಹ್ಲಾದಂ ಜ್ಯೇಷ್ಠಂ ಶೃಣುಷ್ವ ಭೋಃ ।
ಜಿತ್ವಾಹಂ ರಾಕ್ಷಸಾನ್ಸರ್ವಾಂಸ್ತಾಲನಾದ್ಯೈಃ ಸಮನ್ವಿತಃ ।
ಇಂದುಲಂ ತ್ವಾಂ ಸಮೇಷ್ಯಾಮಿ ಭವಾನ್ಧೈರ್ಯಪರೋ ಭವೇತ್ ॥ ೧೭ ॥

ಬಲಖಾನಿಶ್ಚ ಕೃಷ್ಣಾಂಶೋ ದೇವಸಿಂಹಶ್ಚ ತಾಲನಃ ।
ಸಪ್ತಲಕ್ಷಬಲೈಃ ಸಾರ್ಧಂ ಲಂಕಾಂ ಪ್ರತಿ ಯಯುರ್ಮುದಾ ॥ ೧೮ ॥

ಮಾರ್ಗಪ್ರಾಪ್ತಾಶ್ಚ ಯೇ ಭೂಪಾಃ ಗ್ರಾಮಪಾ ರಾಷ್ಟ್ರಪಾಸ್ತಥಾ ।
ಯಥಾಯೋಗ್ಯಂ ಬಲಿಂ ರಮ್ಯಂ ಪ್ರಾಪ್ಯ ತಸ್ಮೈ ನ್ಯವೇದಯನ್ ॥ ೧೯ ॥

ಯೇ ಭೂಪಾ ಮದಮತ್ತಾಶ್ಚ ಜಿತ್ವಾ ತಾಂಸ್ತಾಲನೋ ಬಲೀ ।
ಬದ್ಧ್ವಾ ತೈಶ್ಚ ಸಮಾಗಚ್ಛತ್ಸೇತುಬಂಧಂ ಶಿವಸ್ಥಲಂ ॥ ೨೦ ॥

---

೧೭. ಅಣ್ಣನಾದ ಆಹ್ಲಾದನು ದುಃಖಿಸುತ್ತಿರುವುದನ್ನು ನೋಡಿ ಕೃಷ್ಣಾಂಶನು ಅವನ ಬಳಿಗೆ ಹೋಗಿ " ಅಣ್ಣಾ ! ಈಕ್ಷಣದಲ್ಲಿಯೇ ನಾನು ತಾಲನ ಮೊದಲಾದವರೊಡನೆ ಲಂಕೆಗೆ ಹೋಗಿ, ರಾಕ್ಷಸರನ್ನೆಲ್ಲಾ ಜಯಿಸಿ ಇಂದುಲನನ್ನು ನಿನ್ನ ಬಳಿಗೆ ಕರೆದುತರುತ್ತೇನೆ ; ನೀನು ಧೈರ್ಯವಾಗಿರು " ಎಂದು ಹೇಳಿ ಸಮಾಧಾನಪಡಿಸಿದನು.

೧೮. ಆ ಕೂಡಲೆ ಬಲಖಾನಿಯು, ದೇವಸಿಂಹ, ಕೃಷ್ಣಾಂಶ, ತಾಲನ, ಇವರೊಡನೆಯೂ ಏಳುಲಕ್ಷ ಸೇನೆಯೊಡನೆಯೂ ಉತ್ಸಾಹದಿಂದ ಲಂಕಾಪುರಿಗೆ ಪ್ರಯಾಣ ಹೊರಟನು.

೧೯. ದಾರಿಯಲ್ಲಿ ಸಿಕ್ಕಿದ ರಾಜರು, ಪಾಳೆಯಗಾರರು, ಗ್ರಾಮಾಧಿಪರು, ಇವರುಗಳು ತಮ್ಮ ದೇಶದಲ್ಲಿ ಸಿಕ್ಕುವ ಮನೋಹರವಾದ ವಸ್ತುಗಳನ್ನು ತಮ್ಮ ಶಕ್ತ್ಯನುಸಾರ ಕಾಣಿಕೆಯಾಗಿ ತಂದು ಆ ಕೃಷ್ಣಾಂಶನಿಗೆ ಸಮರ್ಪಿಸಿದರು.

೨೦. ಹಾಗೆ ಕಪ್ಪವನ್ನು ಒಪ್ಪಿಸದೆ ಮದೋದ್ಧತರಾಗಿ ವರ್ತಿಸಿದ ರಾಜರುಗಳನ್ನು ಬಲಶಾಲಿಯಾದ ತಾಲನನು ಹೋರಾಡಿ ಜಯಿಸಿ, ಅವರನ್ನು ಸೆರೆಹಿಡಿದುಕೊಂಡು ಕರೆದುಕೊಂಡು ರಾಮಸೇತು ಸಮೀಪದ ರಾಮೇಶ್ವರಕ್ಕೆ ಬಂದನು.

ಪೂಜಯಿತ್ವಾ ಚ ರಾಮೇಶಂ ರಾಮೇಣ ಸ್ಥಾಪಿತಂ ಶಿವಂ ।
ಸಿಂಹಲದ್ವೀಪಮಗಮನ್ ಷಣ್ಮಾಸಾಭ್ಯಂತರೇ ತದಾ ॥ ೨೧ ॥

ನಲಿನೀಸಾಗರಂ ಪ್ರಾಪ್ಯ ತತ್ರ ವಾಸಮಕಾರಯನ್ ।
ಪತ್ರಂ ಸಂಪ್ರೇಷಯಾಮಾಸ ಬಲಖಾನಿರ್ನೃಪಾಯ ಚ ॥ ೨೨ ॥

ಆರ್ಯಸಿಂಹ ಮಹಾಭಾಗ ಸ್ವಪೋತಾನ್ದೇಹಿ ತೀರ್ಣಕಾನ್ ।
ಭವಾಂಶ್ಚ ಸ್ವಬಲೈಃ ಸಾರ್ಧಂ ಲಂಕಾಂ ಪ್ರತಿ ವ್ರಜಾಧುನಾ ॥ ೨೩ ॥

ನೋ ಚೇತ್ತ್ವಾಂ ಸಬಲಂ ಜಿತ್ವಾ ರಾಷ್ಟ್ರಭಂಗಂ ಕರೋಮ್ಯಹಂ ।
ಇತಿ ಶ್ರುತ್ವಾ ಪತ್ರವಚೋ ಭೂಪತಿರ್ಬಲವತ್ತರಃ ।
ರಕ್ಷಿತಃ ಶಕ್ರಪುತ್ರೇಣ ಯುದ್ಧಾಯ ಸಮುಪಾಯಯೌ ॥ ೨೪ ॥

---

೨೧ ಅಲ್ಲಿ ಶ್ರೀರಾಮನಿಂದ ಪ್ರತಿಷ್ಠಿತವಾದ ರಾಮೇಶ್ವರ ಎಂಬ ಹೆಸರಿನ ಶಿವನನ್ನು ಪೂಜಿಸಿ ಸಿಂಹಳದ್ವೀಪಕ್ಕೆ ಬಂದರು. ಈ ವೇಳೆಗೆ ಅವರು ಹೊರಟು ಆರು ತಿಂಗಳಾಗಿತ್ತು. ಆಗ ಇವರೆಲ್ಲಾ ಅಲ್ಲಿದ್ದ ನಳಿನೀಸಾಗರವನ್ನು ತಲಪಿ ಅಲ್ಲಿ ಇಳಿದು ಕೊಂಡರು.

೨೨-೨೩. ಆಗ ಬಲಖಾನಿಯು ಸಿಂಹಳದ ರಾಜನಾದ ಅರ್ಯಸಿಂಹನಿಗೆ ಒಂದು ಪತ್ರವನ್ನು ಕಳುಹಿಸಿದನು. ಆ ಪತ್ರದ ಒಕ್ಕಣೆಯಲ್ಲಿ “ ಪೂಜ್ಯ ಆರ್ಯಸಿಂಹ ಮಹಾ ರಾಜನೇ ! ಸಮುದ್ರವನ್ನು ದಾಟಲು ಅರ್ಹವಾದ ನಿನ್ನ ನಾವೆಗಳನ್ನು ಈಗಲೇ ನಮಗೆ ಕಳುಹಿಸಿಕೊಡಬೇಕು. ಮತ್ತು ನಿಮ್ಮ ಸೇನಾಸಮೇತವಾಗಿ ನೀವು ಈಗಲೇ ಲಂಕೆಯಿಂದ ಹೊರಟು ಬಂದು ನಮ್ಮನ್ನು ಗೌರವದಿಂದ ಕರೆದೊಯ್ಯಬೇಕು. ಹೀಗೆ ಮಾಡದೆ ಹೋದರೆ ಸೇನಾಸಮೇತ ನಿನ್ನನ್ನು ಜಯಿಸಿ ನಿನ್ನ ರಾಜ್ಯವನ್ನು ಹಾಳು ಮಾಡುತ್ತೇನೆ ” ಎಂದು ಬರೆದಿದ್ದಿತು.

೨೪. ಮಹಾ ಬಲಶಾಲಿಯಾದ ಆರ್ಯಸಿಂಹನು ಹೀಗೆ ಪತ್ರದಲ್ಲಿ ಬರೆದಿದ್ದ ಪೌರುಷ ವಾಕ್ಯಗಳನ್ನು ಕೇಳಿ ಇಂದ್ರಪುತ್ರನಾದ ಇಂದುಲನ ಬೆಂಬಲವಿದ್ದುದರಿಂದ ಆ ಪತ್ರದ ಮಾತಿಗೆ ಗೌರವಕೊಡದೆ ಯುದ್ಧಕ್ಕೆ ಬಂದನು.

ಇಂದುಲಃ ಸ್ತಂಭನಂ ಮಂತ್ರಂ ಸಂಸ್ಥಾಪ್ಯ ಶರ ಉತ್ತಮೇ ।
ಸ್ತಂಭಯಾಮಾಸ ತತ್ಸೈನ್ಯಂ ತಾಲನಾದ್ಯೈಃ ಸುರಕ್ಷಿತಂ ॥ ೨೫ ॥

ದಿವಸೇ ಸುಖಶರ್ಮಾ ಚ ತ್ರಿಲಕ್ಷೈಃ ಸ್ವದಲೈಃ ಸಹ ।
ಆರ್ಯಸಿಂಹಸ್ಯ ತನಯೋ ಮಹದ್ಯುದ್ಧಮಚೀಕರತ್ ॥ ೨೬ ॥

ನಿಶಾಮುಖೇ ಚ ಸಂಪ್ರಾಪ್ತೇ ಶಕ್ರಪುತ್ರೋ ಮಹಾಬಲಃ ।
ಶತಪುತ್ರೈಃ ಕ್ಷತ್ರಿಯಾಣಾಂ ಸಾರ್ಧಂ ಯುದ್ಧಾಯ ಚಾಯಯೌ ॥ ೨೭ ॥

ತೇಷಾಂ ಹಯಾ ಹರಿದ್ವರ್ಣಾ ಯೋಗಿವೇಷಧರಾ ಬಲಾತ್ ।
ಮಹತೀಂ ತೇ ಸಹಸ್ರಂ ಚ ರಿಪೋಃ ಸೇನಾಂ ವ್ಯನಾಶಯನ್ ।
ತತ್ಪಶ್ಚಾದ್ಗೇಹಮಾಸಾದ್ಯ ತದಾ ತೈಃ ಸುಖಿತೋಽವಸತ್ ॥ ೨೮ ॥

---

೨೫. ಅನಂತರ ಇಂದುಲನು ಮಹಾಮಹಿಮೆಯುಳ್ಳ ಸ್ತಂಭನಮಂತ್ರವನ್ನು ಪುನಶ್ಚರಣಮಾಡಿ ಶ್ರೇಷ್ಠವಾದ ಬಾಣವನ್ನು ಪ್ರಯೋಗಿಸಿ ತಾಲನ ಮೊದಲಾದವರಿಂದ ರಕ್ಷಿತವಾಗಿದ್ದ ಅವರ ಸೇನೆಯನ್ನೆಲ್ಲಾ ಅಲುಗಾಡದಂತೆ ಸ್ತಂಭನಮಾಡಿದನು.

೨೬. ಆರ್ಯಸಿಂಹನ ಮಗನಾದ ಸುಖವರ್ಮನೆಂಬವನು ಹಗಲು ಹೊತ್ತು ತನ್ನ ಮೂರುಲಕ್ಷ ಸೈನ್ಯದೊಡನೆ ಬಂದು ತಾಲನನ ಸೇನೆಯನ್ನೆದುರಿಸಿ ದೊಡ್ಡ ಯುದ್ಧ ಮಾಡುತ್ತಿದ್ದನು.

೨೭. ಮಹಾಬಲಶಾಲಿಯಾದ ಇಂದುಲನು ರಾತ್ರಿಯವೇಳೆ ತನ್ನ ಜತೆಯಲ್ಲಿ ನೂರುಮಂದಿ ಕ್ಷತ್ರಿಯ ಕುಮಾರರನ್ನು ಕರೆದುಕೊಂಡು ಬಂದು ಯುದ್ಧಮಾಡುತ್ತಿದ್ದನು.

೨೮. ಆ ಇಂದುಲನು ಮತ್ತು ಅವನ ಸಂಗಡಿಗರು ಏರಿರುವ ಕುದುರೆಗಳು ಹಸುರು ಬಣ್ಣವಾಗಿದ್ದುವು. ಅವನೂ ಅವನ ಸಂಗಡಿಗರೂ ಯೋಗಿಗಳ ವೇಷವನ್ನು ಧರಿಸಿ ಯುದ್ಧಕ್ಕೆ ಬರುತ್ತಿದ್ದರು. ಹೀಗೆ ರಾತ್ರಿಯವೇಳೆ ಬರುತ್ತಿದ್ದ ಅವರು ದೊಡ್ಡದಾಗಿದ್ದ ಸಾವಿರಾರು ಶತ್ರುಸೇನೆಗಳನ್ನು ತಮ್ಮ ಸಾಮರ್ಥ್ಯದಿಂದ ನಾಶಮಾಡುತ್ತಿದ್ದರು

ಏವಂ ಜಾತಾಶ್ಚ ಷಣ್ಮಾಸಾಸ್ತಯೋರ್ಯುದ್ಧಂ ಹಿ ಸೇನಯೋಃ ।
ಕ್ರಮೇಣ ಸಂಕ್ಷಯಂ ಪ್ರಾಪ್ತಂ ಬಲಖಾನೇರ್ಮಹದ್ಬಲಂ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಅಷ್ಟಾದಶೋऽಧ್ಯಾಯಃ



---

೨೯. ಈರೀತಿ ಆ ಎರಡುಸೇನೆಗಳಿಗೂ ಆರುತಿಂಗಳಕಾಲ ಯುದ್ಧ ನಡೆಯಿತು. ಬಲಖಾನಿಯ ಮಹಾಸೇನೆಯು ದಿನದಿನಕ್ಕೆ ಕುಗ್ಗುತ್ತ ಬಂದಿತು. ಇಂದುಲ ಮೊದಲಾದವರು ಹೀಗೆ ಶತ್ರುಸೇನೆಯನ್ನೆಲ್ಲಾ ಧ್ವಂಸಮಾಡಿ ಸಂಗಡಿಗರೊಡನೆ ಮನೆಗೆ ಬಂದು ಸುಖವಾಗಿರುತ್ತಿದ್ದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಏಕೋನವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ದೃಷ್ಟ್ವಾ ಸ್ವಸೈನ್ಯನಿಪಾತಂ ಚ ಬಲಖಾನಿರ್ಮಹಾಬಲಃ ।
ಸಂಪ್ರಾಪ್ಯ ಮಾನಸೀಂ ಪೀಡಾಂ ಯುದ್ಧಾರ್ಥಂ ವಿಮುಖೋಽಭವತ್॥೧॥

ದೇವಸಿಂಹಂ ಸಮಾಹೂಯ ತ್ರಿಕಾಲಜ್ಞಂ ಮಹಾಮತಿಂ ।
ತಂ ಮಂತ್ರಂ ಮಂತ್ರಯಾಮಾಸ ಕಾರ್ಯಸಿದ್ಧಿರ್ಯಥಾ ಭವೇತ್ ॥ ೨ ॥

ಶ್ರುತ್ವೋವಾಚ ಮಹಾಯೋಗೀ ದೇವಸಿಂಹೋ ಮಹಾಬಲಃ ।
ಮಹೇಂದ್ರತನಯಃ ಕಶ್ಚಿತ್ಸರ್ವಶಸ್ತ್ರಾಸ್ತ್ರಕೋವಿದಃ ।
ತ್ವತ್ಸೈನ್ಯಂ ರೋಧಯಿತ್ವಾ ವೈ ದಿವ್ಯಾಸ್ತ್ರೇಣ ದಿವಾಮುಖೇ ॥ ೩ ॥

---

### ಹತ್ತೊಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ— ಮಹಾಬಲಶಾಲಿಯಾದ ಬಲಖಾನಿಯು ತನ್ನ ಸೇನೆಯೆಲ್ಲಾ ಹೀಗೆ ಧ್ವಂಸವಾಗುತ್ತಿರುವುದನ್ನು ನೋಡಿ ಮನೋವ್ಯಥೆಯಿಂದ ಕೂಡಿ ಯುದ್ಧದಲ್ಲಿ ನಿರುತ್ಸಾಹನಾದನು.

೨. ಆದರೂ ಮಹಾಮೇಧಾವಿಯಾದ ಅವನು ತ್ರಿಕಾಲಜ್ಞನಾದ ದೇವಸಿಂಹನನ್ನು ಕರೆದು ಕಾರ್ಯವು ಸಿದ್ಧಿಸಬೇಕಾದರೆ ಏನುಮಾಡಬೇಕೆಂದು ಅವನೊಡನೆ ಮಂತ್ರಾಲೋಚನೆಮಾಡಿದನು.

೩-೪. ಬಲಶಾಲಿಯೂ ಮಹಾಯೋಗಸಿದ್ಧನೂ ಆದ ದೇವಸಿಂಹನು ಈ ಮಾತನ್ನು ಕೇಳಿ "ಸಮಸ್ತ ಶಸ್ತ್ರಾಸ್ತ್ರಗಳಲ್ಲಿಯೂ ನಿಪುಣನಾದ ಇಂದ್ರಪುತ್ರನು

ರಾತ್ರೌ ಸ್ವಯಂ ಸಮಾಗಮ್ಯ ಕರೋತಿ ಬಲಸಂಕ್ಷಯಂ ।
ಅತಸ್ತ್ವಂ ಮತ್ಸಹಾಯೇನ ತಾಲನೇನ ಸಮನ್ವಿತಃ ।
ಕೃಷ್ಣಾಂಶೇನ ಸಮಾಗಮ್ಯ ಶಕ್ರಪುತ್ರಂ ಶುಭಾನನಂ ।
ವಿಜಯೀ ಭವ ಶೀಘ್ರಂ ಹಿ ನೋ ಚೇದ್ಯಾಮ್ಯಾಂ ಯಮಕ್ಷಯಂ ॥ ೪ ॥

ಇತಿ ಶ್ರುತ್ವಾ ವಚಸ್ತಸ್ಯ ದೇವಸಿಂಹಸ್ಯ ಭಾಷಿತಂ ।
ಯತ್ನಂ ಚಕಾರ ಬಲವಾನ್ ಭ್ರಾತೃಮಿತ್ರಸಮನ್ವಿತಃ ॥ ೫ ॥

ಏಕವಿಂಶಾಬ್ದಕೃಷ್ಣಾಂಶೇ ಸಂಪ್ರಾಪ್ತೇ ಯುದ್ಧಕೋವಿದೇ ।
ಸೇನಾಂ ನಿವೇಶಯಾಮಾಸ ಪೋತೇಷು ಹಯವಾಹನಃ ॥ ೬ ॥

ಅರ್ಧಂ ಸೈನ್ಯಂ ಚ ತತ್ರೈವ ಸ್ಥಾಪಯಿತ್ವಾ ಮಹಾಬಲಃ ।
ಅರ್ಧಸೈನ್ಯೇನ ಕೃಷ್ಣಾಂಶೋ ದಕ್ಷಿಣಾಂ ದಿಶಮಾಗಮತ್ ॥ ೭ ॥

---

ಪ್ರಾತಃಕಾಲ ತನ್ನ ದಿವ್ಯಾಸ್ತ್ರದಿಂದ ನಿನ್ನ ಸೈನ್ಯವೆಲ್ಲವನ್ನೂ ಅಲುಗಾಡದಂತೆ ಸ್ತಂಭನ ಮಾಡಿ, ರಾತ್ರಿಯವೇಳೆ ತಾನೇ ಬಂದು ನಿನ್ನ ಸೇನೆಯನ್ನು ನಾಶಪಡಿಸುತ್ತಿದ್ದಾನೆ. ಆದಕಾರಣ ನೀನು ತಾಲನ, ಕೃಷ್ಣಾಂಶ ಇವರೊಡಗೂಡಿ ಬಂದು ನನ್ನ ಸಹಾಯ ವನ್ನು ಪಡೆದು ಶುಭಮುಖನಾದ ಇಂದ್ರಕುಮಾರನನ್ನು ಜಾಗ್ರತೆ ಜಯಿಸು ; ಹಾಗೆ ಮಾಡದೆಹೋದರೆ ಎಲ್ಲರೂ ಯಮಲೋಕಕ್ಕೆ ಹೋಗಬೇಕಾಗುವುದು" ಎಂದು ಹೇಳಿದನು.

೫. ತ್ರಿಕಾಲಜ್ಞನಾದ ದೇವಸಿಂಹನು ಹೇಳಿದ ಈ ಮಾತನ್ನು ಕೇಳಿ ಪರಾಕ್ರಮಿಯಾದ ಬಲಖಾನಿಯು ತನ್ನ ಸೋದರರು, ಸ್ನೇಹಿತರು ಎಲ್ಲರ ಸಮೇತ ಹೋಗಿ ಅವನನ್ನು ಜಯಿಸುವ ಪ್ರಯತ್ನಮಾಡಿದನು.

೬-೭. ಯುದ್ಧದಲ್ಲಿ ನಿಪುಣನಾದ ಕೃಷ್ಣಾಂಶನಿಗೆ ಈ ವೇಳೆಗೆ ಇಪ್ಪತ್ತೊಂದು ವರ್ಷ ತುಂಬಿತು. ಮಹಾಬಲಶಾಲಿಯಾದ ಆ ಕೃಷ್ಣಾಂಶನು ತನ್ನ ಕುದುರೆಯನ್ನು ಹತ್ತಿಕೊಂಡು ಹೊರಟು ಅರ್ಧ ಸೈನ್ಯವನ್ನು ಅಲ್ಲಿಯೇ ನಿಲ್ಲಿಸಿ ಮಿಕ್ಕ ಅರ್ಧವನ್ನು ನಾವೆಗಳಲ್ಲಿ ಹತ್ತಿಸಿ ದಕ್ಷಿಣದ ಕಡೆಗೆ ಪ್ರಯಾಣಮಾಡಿದನು.

**ಹಯಾರೂಢಾಶ್ಚ ತೇ ಶೂರಾಃ ಸರ್ವೇ ಯುದ್ಧಸಮನ್ವಿತಾಃ ।**
**ಕಪಾಟಂ ದೃಢಮುದ್ಘಾಟ್ಯ ನಗರಾಂತಮುಪಾಯಯುಃ ॥ ೮ ॥**

**ಹತ್ವಾ ತೇ ರಕ್ಷಿಣಃ ಸರ್ವಾನ್ ಲುಂಠಯಿತ್ವಾ ಪುರಂ ಶುಭಂ ।**
**ರಿಪೋರ್ದುರ್ಗಂ ಸಮಾಸಾದ್ಯ ಚಕ್ರುಃ ಶತ್ರೋರ್ಮಹಾಕ್ಷಯಂ ॥ ೯ ॥**

**ರಾಜ್ಞೋಽಂತಃಪುರಮಾಗತ್ಯ ಕೃಷ್ಣಾಂಶೋ ಬಲವತ್ತರಃ ।**
**ದದರ್ಶ ಸುಂದರೀಂ ಬಾಲಾಂ ಪದ್ಮಿನೀಂ ಪದ್ಮಲೋಚನಾಂ ।**
**ಸಪ್ತಾಲಿಭಿರ್ಯುತಾಂ ರಮ್ಯಾಂ ಗೀತನೃತ್ಯವಿಶಾರದಾಂ ॥ ೧೦ ॥**

**ಬಲಾದ್ದೋಲಾಂ ಸಮಾರೋಪ್ಯ ಲುಂಠಯಿತ್ವಾ ರಿಪೋರ್ಗೃಹಂ ।**
**ಜಗಾಮ ಶಿಬಿರೇ ತಸ್ಮಿನ್ ಯತ್ರ ಜಾತೋ ಮಹಾರಣಃ ॥ ೧೧ ॥**

**ಬಲಖಾನಿಸ್ತು ಬಲವಾನ್ ದೇವತಾಲನಸಂಯುತಃ ।**
**ಜಘಾನ ಶಾತ್ರವೀಂ ಸೇನಾಂ ಇಂದುಲಾಸ್ತ್ರೇಣ ಪಾಲಿತಾಂ ॥ ೧೨ ॥**

೮-೯. ಇತ್ತ ಆ ಕೃಷ್ಣಾಂಶಾದಿ ಶೂರರೆಲ್ಲರೂ ಕುದುರೆಯನ್ನೇರಿಕೊಂಡು ಬಂದು ಯುದ್ಧವನ್ನು ಆರಂಭಿಸಿ ದುರ್ಗದ ಬಾಗಿಲಿನ ದೃಢವಾದ ಕದವನ್ನು ಭೇದಿಸಿ ನಗರದೊಳಗೆ ನುಗ್ಗಿದರು. ಅಲ್ಲಿ ನಗರ ರಕ್ಷಕರನ್ನೆಲ್ಲರನ್ನೂ ಕೊಂದು ಊರನ್ನೆಲ್ಲಾ ಲೂಟಿಮಾಡಿದರು. ಹೀಗೆ ಶತ್ರುವಿನ ದುರ್ಗವನ್ನು ಆಕ್ರಮಿಸಿಕೊಂಡು ಶತ್ರುಗಳನ್ನು ಸಂಪೂರ್ಣವಾಗಿ ನಾಶಮಾಡಿದರು

೧೦. ಕೂಡಲೆ ಶೂರನಾದ ಕೃಷ್ಣಾಂಶನು ರಾಣಿವಾಸಕ್ಕೆ ಬಂದು ಕಮಲದಂತೆ ಕಣ್ಣುಳ್ಳವಳೂ ಸೌಂದರ್ಯವತಿಯೂ ಆದ ಪದ್ಮಿನಿಯೆಂಬ ಕನ್ಯೆಯನ್ನು ಕಂಡನು.

೧೧. ನೃತ್ತಗೀತಗಳಲ್ಲಿ ಚದುರೆಯೂ, ಮನೋಹಾರಿಣಿಯೂ, ಆದ ಆಕೆ ತನ್ನ ಏಳುಮಂದಿ ಸಖಿಯರೊಡಗೂಡಿ ಇದ್ದಳು, ಆಗ ಕೃಷ್ಣಾಂಶನು ಬಲಾತ್ಕಾರದಿಂದ ಅವಳನ್ನು ಮೇನೆಯಲ್ಲಿ ಕೂರಿಸಿಕೊಂಡು ಹೊರಟು ಶತ್ರುವಿನ ಅರಮನೆಯನ್ನು ಕೊಳ್ಳೆ ಹೊಡೆದು ಸಿಕ್ಕಿದ ವಸ್ತುಗಳ ಸಮೇತವಾಗಿ ಮಹಾಯುದ್ಧ ನಡೆಯುತ್ತಿದ್ದ ತಮ್ಮ ಶಿಬಿರಕ್ಕೆ ಬಂದನು.

೧೨-೧೩. ಬಲಿಷ್ಠನಾದ ಬಲಖಾನಿಯು ತಾಲನನೊಡಗೂಡಿ ಶತ್ರುವಿನ ಸೇನೆಯೊಡನೆ ಹೋರಾಡುತ್ತಾ, ಇಂದುಲನಿಂದ ರಕ್ಷಿತವಾಗಿದ್ದ ಶತ್ರು ಸೇನೆಯನ್ನೆಲ್ಲಾ

ಸುಖವರ್ಮಾಣಮಾಗತ್ಯ ಸೇನಾಧ್ಯಕ್ಷಂ ರಿಪೋಃ ಸುತಂ ।
ಸರ್ವತಸ್ತಂ ಸ್ವಕೀಯಾಸ್ತ್ರೈರ್ಜಘ್ನುಸ್ತೇ ಮದವಿಹ್ವಲಾಃ ॥ ೧೩ ॥

ಹತೇ ತಸ್ಮಿನ್ಮಹಾವೀರ್ಯೇ ಜಯಂತಃ ಕ್ರೋಧಮೂರ್ಛಿತಃ ।
ಸೇನಾಮುಜ್ಜೀವಯಾಂಚಕ್ರೇ ಶಕ್ರಪುತ್ರಃ ಪ್ರತಾಪವಾನ್ ॥ ೧೪ ॥

ಶ್ಯಾಲಂ ಚ ಸುಖವರ್ಮಾಣಂ ಸಂಜೀವ್ಯ ಸ್ವಗೃಹಂ ಯಯೌ ।
ತತ್ರ ದೃಷ್ಟ್ವಾ ಜನಾನ್ಸರ್ವಾನ್ ಬಹುರೋದನತತ್ಪರಾನ್ ॥ ೧೫ ॥

ವಿಸ್ಮಿತಃ ಸ ಯಯೌ ಗೇಹಂ ಯಥಾ ಪೂರ್ವಂ ತಥಾವಿಧಃ ।
ನ ದದರ್ಶ ಪ್ರಿಯಾಂ ತತ್ರ ಸಖೀಭಿಃ ಸಹಿತಾಂ ಮುನೇ ॥ ೧೬ ॥

ಆರ್ಯಸಿಂಹಗೃಹಂ ಗತ್ವಾ ಪೃಷ್ಟವಾನ್ ಸರ್ವಕಾರಣಂ ।
ಜ್ಞಾತ್ವಾ ಸಂಲುಂಠಿತಂ ಗೇಹಂ ಶತ್ರುಭಿಃ ಶಸ್ತ್ರಕೋವಿದೈಃ ॥ ೧೭ ॥

---

ಕೊಂದುಹಾಕಿದುದಲ್ಲದೆ ಮದೋನ್ಮತ್ತರಾದ ಬಲಖಾನಿ ಮುಂತಾದವರು, ಶತ್ರು ರಾಜಪುತ್ರನೂ ಸೇನಾಪತಿಯೂ ಆದ ಸುಖವರ್ಮನಿದ್ದಲ್ಲಿಗೆ ಬಂದು ಅವನನ್ನು ಎಲ್ಲಾ ಕಡೆಯಿಂದಲೂ ಮುತ್ತಿ ತಮ್ಮ ಅಸ್ತ್ರಗಳಿಂದ ಘಾತಿಸಿ ಕೊಂದುಹಾಕಿದರು.

೧೪. ಮಹಾಶೂರನಾದ ಆ ರಾಜಪುತ್ರನು ಹತನಾದುದನ್ನು ನೋಡಿ ಇಂದ್ರ ಪುತ್ರನೂ ಪ್ರತಾಪಶಾಲಿಯೂ ಆದ ಇಂದುಲನು ರೋಷಾವೇಶದಿಂದ ಕಿಡಿಕಿಡಿಯಾದನು.

೧೫. ಯುದ್ಧದಲ್ಲಿ ಮೃತವಾಗಿದ್ದ ಸೇನೆಯನ್ನೆಲ್ಲಾ ತನ್ನ ಪ್ರಭಾವದಿಂದ ಬದುಕಿಸಿದುದಲ್ಲದೆ ತನ್ನ ಭಾವಮೈದುನನೂ, ಸೇನಾಪತಿಯೂ ಆದ ಸುಖವರ್ಮನನ್ನೂ ಬದುಕಿಸಿಕೊಂಡು ಮನೆಗೆ ಬಂದನು.

೧೬. ಹಾಗೆ ಬಂದು ನೋಡಲಾಗಿ ಅಲ್ಲಿ ಬಹುವಾಗಿ ಗೋಳಿಡುತ್ತಿದ್ದ ಜನರನ್ನು ಕಂಡು ಆಶ್ಚರ್ಯಗೊಂಡು ಎಂದಿನಂತೆ ಅಂತಃಪುರದೊಳಕ್ಕೆ ಪ್ರವೇಶಿಸಿದನು. ಅಯ್ಯಾ ಮುನಿಯೇ! ಕೇಳು, ಹಾಗೆ ಬಂದು ನೋಡಲಾಗಿ ಅಲ್ಲಿ ಸ್ನೇಹಿತೆಯರೊಡಗೂಡಿರುತ್ತಿದ್ದ ತನ್ನ ಪ್ರಿಯೆಯನ್ನು ಎಲ್ಲಿಯೂ ಕಾಣಲಿಲ್ಲ

೧೭-೧೮. ಬಳಿಕ ಆರ್ಯಸಿಂಹನ ಅರಮನೆಗೆ ಹೋಗಿ "ಹೀಗೆಲ್ಲಾ ಆಗಲು ಕಾರಣವೇನು"? ಎಂದು ಕೇಳಿದನು. "ಶಸ್ತ್ರ ಪ್ರಯೋಗಚತುರರಾದ ರಿಪುಗಳು

ರುರೋದ ಸುಭೃತಂ ವೀರೋ ಹಾ ಪ್ರಿಯೇ ಮದವಿಹ್ವಲೇ ।
ದರ್ಶಯಾsದ್ಯ ಮುಖಂ ರಮ್ಯಂ ತ್ವತ್ಪತಿಸ್ತ್ವಾಂ ಸಮುತ್ಸುಕಃ ॥ ೧೮ ॥

ಇತ್ಯೇವಂ ರೋದನಂ ಕೃತ್ವಾ ವಡವೋಪರಿ ಸಂಸ್ಥಿತಃ ।
ಧನುಸ್ತೂಣೀರಮಾದಾಯ ಖಡ್ಗಂ ಶತ್ರುವಿನೋಹನಂ ।
ಏಕಾಕೀ ಸ ಯಯೌ ಕ್ರುದ್ಧೋ ನಿಶಿ ಯತ್ರ ಸ್ಥಿತೋ ರಿಪುಃ ॥ ೧೯ ॥

ಏತಸ್ಮಿನ್ಸಮಯೇ ವೀರೋ ಬಲಖಾನಿರ್ಮಹಾಬಲಃ ।
ದೃಷ್ಟ್ವಾ ತಾಂ ಸುಂದರೀಂ ಬಾಲಾಂ ವಿಲಲಾಪ ಭೃಶಂ ಮುಹುಃ ॥ ೨೦ ॥

ಹಾ ಇಂದುಲ ಮಹಾವೀರ ಹಾ ಮದ್ಬಂಧೋ ಪ್ರಿಯಂಕರ ।
ತ್ವದ್ಯೋಗ್ಯೇಯಂ ಶುಭಾ ನಾರೀ ರೂಪಯೌವನಶಾಲಿನೀ ॥ ೨೧ ॥

ದರ್ಶನಂ ದೇಹಿ ಮೇ ಶೀಘ್ರಂ ಗೃಹಾಣಾದ್ಯ ಶುಭಾನನಾಂ ।
ಇತ್ಯುಕ್ತ್ವಾ ಮೂರ್ಛಿತೋ ಭೂತ್ವಾ ಮಾನಸೇsಪೂಜಯಚ್ಛಿವಾಂ ॥೨೨॥

---

ಬಂದು ಅರಮನೆಯನ್ನೆಲ್ಲಾ ಲೂಟಿ ಮಾಡಿಕೊಂಡು ಹೋದರು'' ಎಂದು ಅವರು ಹೇಳಿದುವನ್ನು ಕೇಳಿ ವೀರನಾದ ಅವನು "ಅಯ್ಯೋ ಪ್ರಿಯೇ! ಮದವಿಹ್ವಲೇ! ನಿನ್ನ ಸುಂದರವಾದ ಮುಖವನ್ನು ತೋರಿಸು ಈ ನಿನ್ನ ಗಂಡನು ನಿನ್ನನ್ನು ನೋಡಲು ಉತ್ಸುಕನಾಗಿದ್ದಾನೆ'' ಎಂದು ಗೋಳಾಡಿದನು.

೧೯. ಹೀಗೆ ಸ್ವಲ್ಪ ಹೊತ್ತು ರೋದಿಸಿ ಅನಂತರ ಕೋಪಾವೇಶದಿಂದ ತನ್ನ ವಡಬಾಶ್ವವನ್ನು ಏರಿ ಶತ್ರುಗಳನ್ನು ಮೂರ್ಛೆಗೊಳಿಸುವ ಖಡ್ಗ, ಬಿಲ್ಲು, ಬತ್ತಳಿಕೆ ಇವನ್ನು ತೆಗೆದುಕೊಂಡು ನಡುರಾತ್ರಿಯಲ್ಲಿ ಒಬ್ಬನೇ ಶತ್ರುಪಾಳೆಯಕ್ಕೆ ಬಂದನು.

೨೦–೨೨. ಆ ಸಮಯದಲ್ಲಿ ಬಲಖಾನಿಯು ಸುಂದರಿಯಾದ ಆ ವಧುವನ್ನು ನೋಡಿ "ಅಯ್ಯೋ ಮಹಾವೀರನೂ ನನ್ನ ಬಂಧುವೂ ನನಗೆ ಪ್ರಿಯವನ್ನು ಆಚರಿಸುತ್ತಿದ್ದವನೂ ಆದ ಇಂದುಲನೇ! ರೂಪಯೌವನ ಸಂಪನ್ನೆಯಾದ ಈ ಶೋಭನಾಂಗಿಯು ನಿನಗೆ ಬಹು ಅನುರೂಪೆಯಾಗಿದ್ದಳು. ನೀನು ಈಗಲೂ ಜಾಗ್ರತೆ ನನಗೆ ದರ್ಶನಕೊಡು; ಈ ಶೋಭನಾಗಿಯನ್ನು ಪರಿಗ್ರಹಿಸು'' ಎಂದು ಮತ್ತೆ ಮತ್ತೆ ಹಂಬಲಿಸಿ ಬಹುವಾಗಿ ರೋದಿಸುತ್ತಾ ಹಾಗೆಯೇ ಮೂರ್ಛೆಹೋದನು. ಆಗಲೂ ಮನಸ್ಸಿನಲ್ಲಿ ಸರ್ವಮಂಗಳೆಯನ್ನು ಆರಾಧಿಸುತ್ತಿದ್ದನು.

ತಸ್ಮಿನ್ಕಾಲೇ ಚ ಸಂಪ್ರಾಪ್ತಃ ಶಕ್ರಪುತ್ರೋ ಮಹಾಬಲಃ ।
ಜಘಾನ ಶಾತ್ರವೀಂ ಸೇನಾಂ ಕೃಷ್ಣಾಂಶೇನೈವ ಪಾಲಿತಾಂ ॥ ೨೩ ॥

ದೃಷ್ಟ್ವಾ ಸೈನ್ಯನಿಪಾತಂ ಚ ತಾಲನೋ ವಾಹಿನೀಪತಿಃ ।
ಸಿಂಹನಾದಂ ನನಾದೋಚ್ಚೈಃ ಸಿಂಹಿನ್ಯುಪರಿಸಂಸ್ಥಿತಃ ॥ ೨೪ ॥

ನ ಜಯಃ ಸೈನ್ಯನಾಶೇನ ತವ ವೀರ ಭವಿಷ್ಯತಿ ।
ಮಾಂ ಹತ್ವಾ ಜಹಿ ಮತ್ಸೈನ್ಯಂ ಯೋಗಿನ್ಬಾಲಸ್ವರೂಪಕ ॥ ೨೫ ॥

ಇತಿ ಶ್ರುತ್ವಾ ವಚಸ್ತಸ್ಯ ಶಕ್ರಪುತ್ರೋ ಭಯಂಕರಃ ।
ಜಘಾನ ಹೃದಯೇ ಬಾಣಾನ್ ಸ ತು ಖಡ್ಗೇನಚಾಚ್ಛಿನತ್ ।
ಸ್ವಭಲ್ಲೇನ ಪುನರ್ವೀರೋ ದಂಶಯಾಮಾಸ ವಕ್ಷಸಿ ॥ ೨೬ ॥

---

೨೩. ಮಹಾಬಲಶಾಲಿಯೂ ಶತ್ರುಪಕ್ಷದ ವೀರನೂ ಆದ ಇಂದುಲನು ಆ ವೇಳೆಗೆ ಸರಿಯಾಗಿ ಬಂದು ಕೃಷ್ಣಾಂಶನ ರಕ್ಷಣೆಯಲ್ಲಿದ್ದ ಈ ಸೇನೆಯನ್ನು ಘಾತಿಸಿದನು.

೨೪. ಈರೀತಿ ಇದ್ದಕ್ಕಿದ್ದ ಹಾಗೆ ತಮ್ಮ ಸೇನೆ ನಾಶವಾದುದನ್ನು ಸೇನಾಪತಿಯಾದ ತಾಲನನು ನೋಡಿ ಸಿಂಹಿನಿಯೆಂಬ ಕುದುರೆಯ ಮೇಲೆ ಕುಳಿತು ಹೊರಟು ಅಲ್ಲಿಗೆ ಬಂದನು.

೨೫. ಹಾಗೆ ಬಂದು ಎದುರಾಳಿಯನ್ನು "ಎಲೈ ವೀರನೇ ! ಸೈನ್ಯವನ್ನು ಸುಮ್ಮನೆ ನಾಶಮಾಡಿದ ಮಾತ್ರಕ್ಕೆ ನಿನಗೆ ಜಯವುಂಟಾಗುವುದಿಲ್ಲ. ಅಯ್ಯಾ ಬಾಲಸ್ವರೂಪವಾದ ಯೋಗಿಯೇ ! ಮೊದಲು ನನ್ನನ್ನು ಸಂಹರಿಸಿ ಅನಂತರ ಸೇನೆಯನ್ನು ನಾಶಮಾಡು" ಎಂದು ಗಟ್ಟಿಯಾಗಿ ಗರ್ಜನೆಮಾಡಿದನು.

೨೬. ಅತಿಭಯಂಕರನಾದ ಇಂದುಲನು ಈರೀತಿ ತಾಲನನು ಆಡಿದ ಮಾತನ್ನು ಕೇಳಿ ಅವನ ಹೃದಯಕ್ಕೆ ಗುರಿಯಿಟ್ಟು ಬಾಣಗಳನ್ನು ಪ್ರಯೋಗಿಸಿದನು. ಅವನು ಖಡ್ಗದಿಂದ ಅದನ್ನು ಕತ್ತರಿಸಿದ್ದಲ್ಲದೆ ತನ್ನ ಭಲ್ಲೆಯದಿಂದ ಇಂದುಲನ ಎದೆಗೆ ಇರಿದನು.

ಇಂದುಲೇ ಮೂರ್ಛಿತೇ ತಸ್ಮಿನ್ ವಡವಾ ದಿವ್ಯರೂಪಿಣೀ ।
ಆಕಾಶೋಽಪರಿ ಸಂಪ್ರಾಪ್ಯ ಜಯಂತಂ ಸಮಬೋಧಯತ್ ॥ ೨೭ ॥

ತದಾ ಸ ಬಾಲಸ್ತ್ವರಿತಃ ಕಾಲಾಸ್ತ್ರಂ ಚಾಪ ಆದಧೇ ।
ತೇನ ಜಾತೋ ಮಹಾಞ್ಛಬ್ದಂಸ್ತಾಲನಃ ಸ ಮಮಾರ ಹ ॥ ೨೮ ॥

ಮೃತೇ ಸೇನಾಪತೌ ತಸ್ಮಿನ್ ಕೃಷ್ಣಾಂಶೋ ಮದವಿಹ್ವಲಃ ।
ನಭೋಮಾರ್ಗೇಣ ಸಂಪ್ರಾಪ್ಯ ಜಗರ್ಜ ಚ ಮುಹುರ್ಮುಹುಃ ॥ ೨೯ ॥

ಇಂದುಲಃ ಕ್ರೋಧತಾಮ್ರಾಕ್ಷಸ್ತ್ವಾಗ್ನೇಯಂ ಶರಮಾದದೇ ।
ವಹ್ನಿಭೂತಂ ನಭಸ್ತತ್ರ ಸ್ವಯೋಗೇನ ಮಹಾಬಲಃ ।
ಕೃತ್ವಾ ಶೀಘ್ರಂ ಯಯೌ ಶತ್ರುಂ ಸ ತು ವಾಯವ್ಯಮಾದದೇ ॥ ೩೦ ॥

---

೨೭. ಆಗ ಇಂದುಲನು ಮೂರ್ಛಿತನಾಗಿ ಉರುಳಿದನು. ಆಗ ದೇವಲೋಕ ದಿಂದ ಬಂದಿದ್ದ ಆ ವಡಬಾಶ್ವವು ಆಕಾಶಕ್ಕೆ ಹಾರಿಹೋಗಿ ನಿಂತು ಜಯಂತನ ಅಂಶ ನಾದ ಇಂದುಲಯೋಗಿಯನ್ನು ಎಚ್ಚರಗೊಳಿಸಿತು.

೨೮. ಆಗ ಆ ಬಾಲಕನು ಎದ್ದು ಶೀಘ್ರವಾಗಿ ಮಹಾಕಾಲಾಸ್ತ್ರವನ್ನು ಬಿಲ್ಲಿ ನಲ್ಲಿ ಹೂಡಿ ಪ್ರಯೋಗಿಸಿದನು ಇದರಿಂದ ಮಹಾಶಬ್ದವುಂಟಾಗಿ ತಾಲನನು ಮೃತಿ ಹೊಂದಿದನು.

೨೯. ಸೇನಾಪತಿಯಾದ ತಾಲನನೇ ಮೃತನಾಗಲಾಗಿ ಕೃಷ್ಣಾಂಶನು ಮದೋ ನ್ಮತ್ತನಾಗಿ ಹಾರಿ ಆಕಾಶದಲ್ಲಿ ನಿಂತು ಅನೇಕಸಾರಿ ಗರ್ಜನೆಮಾಡಿದನು

೩೦. ಇಂದುಲನು ಕೋಪದಿಂದ ಕೆಂಗಣ್ಣುಳ್ಳವನಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆಗ ಆಕಾಶವೆಲ್ಲಾ ಜ್ವಾಲಾಮಯವಾಯಿತು. ಆಗ ಮಹಾ ಬಲಿಷ್ಠನಾದ ಕೃಷ್ಣಾಂಶನು ತನ್ನ ಯೋಗಶಕ್ತಿಯಿಂದ ಶತ್ರುವಿನ ಸಮೀಪಕ್ಕೆ ಹೋದನು.

ಸ್ವಯೋಗೇನೈವ ಕೃಷ್ಣಾಂಶಃ ಪೀತ್ವಾ ವಾಯವ್ಯಮುತ್ತಮಂ ।
ಪುನರ್ಜಗಾಮ ತತ್ಪಾರ್ಶ್ವಂ ಕಲ್ಕಿಕಃ ಸ ಹರೇಃ ಸ್ವಯಂ ॥ ೩೧ ॥

ತಥಾವಿಧಂ ರಿಪುಂ ದೃಷ್ಟ್ವಾ ಶಕ್ರಪುತ್ರೋ ಮಹಾಬಲಃ ।
ಗಂಧರ್ವಾಸ್ತ್ರಂ ಸಮಾದಾಯ ಮೋಹನಾಯೋಪಚಕ್ರಮೇ ॥ ೩೨ ॥

ಪುನರ್ಯೋಗಬಲೇನೈವ ತದಸ್ತ್ರಂ ಸಂಕ್ಷಯಂ ಗತಂ ।
ವಾರುಣಂ ಶರಮಾದಾಯ ತಸ್ಯೋಪರಿ ಸಮಾಕ್ಷಿಪತ್ ॥ ೩೩ ॥

ಸ್ವಯೋಗೇನೈವ ಕೃಷ್ಣಾಂಶೋ ಜಲಂ ಸರ್ವಂ ಮುಖೇಽಕರೋತ್ ।
ಏವಂ ಸರ್ವಾಣಿ ಚಾಸ್ತ್ರಾಣಿ ಪೀತ್ವಾ ಪೀತ್ವಾ ಪುನಃಪುನಃ ॥ ೩೪ ॥

ಯಯೌ ಶೀಘ್ರಂ ಪ್ರಸನ್ನಾತ್ಮಾ ಬಾಹುಶಾಲೀ ಯತೇಂದ್ರಿಯಃ ।
ಇಂದುಲಸ್ತು ತದಾ ಕ್ರುದ್ಧೋಽಶ್ವಿನೀಂ ತ್ಯಕ್ತ್ವಾ ಭುವಿ ಸ್ಥಿತಃ ।
ಚರ್ಮ ಖಡ್ಗಂ ಗೃಹೀತ್ವಾಶು ಖಡ್ಗಯುದ್ಧಮಚೀಕರತ್ ॥ ೩೫ ॥

---

೩೧ ಬಳಿಕ ಇಂದುಲನು ವಾಯವ್ಯಾಸ್ತ್ರವನ್ನು ಪ್ರಯೋಗಿಸಲು ಕೃಷ್ಣಾಂಶನು ತನ್ನ ಯೋಗಶಕ್ತಿಯಿಂದ ಆ ವಾಯವ್ಯಾಸ್ತ್ರವನ್ನು ನುಂಗಿದನು. ಮತ್ತು ವಿಷ್ಣುವಿನ ಕಲಾಂಶದಿಂದ ಜನಿಸಿದ ಕೃಷ್ಣಾಂಶನು ಪುನಃ ಅವನ ಸಮೀಪಕ್ಕೆ ಹೋದನು.

೩೨ ಮಹಾಬಲಶಾಲಿಯಾದ ಇಂದ್ರಪುತ್ರನು ಶತ್ರುವು ಆರೀತಿ ಬಹು ಸಮೀಪಕ್ಕೆ ಬಂದುದನ್ನು ನೋಡಿ ಗಂಧರ್ವಾಸ್ತ್ರವನ್ನು ಪ್ರಯೋಗಿಸಿ ಮೂರ್ಛೆಗೊಳಿಸಲು ಯತ್ನಿಸಿದನು.

೩೩. ಎದುರಾಳಿಯ ಯೋಗಶಕ್ತಿಯಿಂದ ಆ ಅಸ್ತ್ರವೂ ನಾಶಹೊಂದಿತು. ಆಗ ಇಂದುಲನು ವರುಣಾಸ್ತ್ರವನ್ನು ತೆಗೆದು ಅವನ ಮೇಲೆ ಪ್ರಯೋಗಿಸಿದನು.

೩೪-೩೫. ಕೃಷ್ಣಾಂಶನು ತನ್ನ ಯೋಗಬಲದಿಂದ ಆ ಅಸ್ತ್ರದ ಜಲವೆಲ್ಲವನ್ನು ತನ್ನ ಬಾಯಿಯಲ್ಲಿ ಅಡಕಮಾಡಿಕೊಂಡನು. ಹೀಗೆ ಸಮಸ್ತ ಅಸ್ತ್ರಗಳನ್ನೂ ನುಂಗಿ ಹಾಕುತ್ತಲೆ ಬಾಹುಪರಾಕ್ರಮಿಯೂ ಜಿತೇಂದ್ರಿಯನೂ ಆದ ಇಂದುಲನು ಉತ್ಸಾಹದಿಂದ ಬೇಗ ನುಗ್ಗಿದನು ಮಹಾಕೋಪಾವಿಷ್ಟನಾದ ಆವನು ಕುದುರೆಯ ಮೇಲಿಂದ ಇಳಿದು ಕತ್ತಿಗುರಾಣಿಗಳನ್ನು ಹಿಡಿದು ಶೀಘ್ರದಲ್ಲಿ ಖಡ್ಗಯುದ್ಧಕ್ಕೆ ಆರಂಭಿಸಿದನು

ಏತಸ್ಮಿನ್ನಂತರೇ ಪ್ರಾಪ್ತಾಃ ದೇವಾದ್ಯಾಃ ಸರ್ವಭೂಮಿಪಾಃ ।
ದದೃಶುಸ್ತನ್ಮಹದ್ಯುದ್ಧಂ ಸರ್ವವಿಸ್ಮಯಕಾರಣಂ ॥ ೩೬ ॥

ಪ್ರಾತಃಕಾಲೇ ಚ ಸಂಪ್ರಾಪ್ತೇ ಬಲಖಾನಿರ್ಮಹಾಬಲಃ ।
ದದರ್ಶ ಬಾಲಕಂ ರಮ್ಯಂ ಜಟಾಜಿನಸಮನ್ವಿತಂ ॥ ೩೭ ॥

ಶ್ರಮೇಣ ಕರ್ಶಿತೋ ವೀರಃ ಶಕ್ರಪುತ್ರಃ ಪ್ರತಾಪವಾನ್ ।
ಬಲಖಾನೇಃ ಪಿತುರ್ಬಂಧೋಃ ಶಪಥಂ ಕೃತವಾನ್ ಸ್ವಯಂ ॥ ೩೮ ॥

ಸ್ವಖಡ್ಗೇನೈವ ಕೃಷ್ಣಾಂಶ ಶಿರಸ್ತವ ಹರಾಮ್ಯಹಂ ।
ನೋ ಚೇನ್ಮೇ ದೂಷಿತಾ ಮಾತಾ ನಾಮ್ನಾ ಸ್ವರ್ಣವತೀ ಸತೀ ।
ಇತ್ಯುಕ್ತ್ವಾ ಖಡ್ಗಮಾದಾಯ ಯಯೌ ಶೀಘ್ರಂ ರುಷಾನ್ವಿತಃ ॥ ೩೯ ॥

ಬಲಖಾನಿಸ್ತು ತಂ ಜ್ಞಾತ್ವಾ ತ್ಯಕ್ತ್ವಾಸ್ತ್ರಂ ಪ್ರೇಮಕಾತರಃ ।
ಪುತ್ರಾಂತಿಕಮುಪಾಗಮ್ಯ ವಚನಂ ಚೇದಮಬ್ರವೀತ್ ॥ ೪೦ ॥

---

೩೬. ಇಷ್ಟರೊಳಗೆ ದೇವಸಿಂಹ ಮುಂತಾದ ರಾಜರೆಲ್ಲರೂ ಬಂದರು. ಸರ್ವರಿಗೂ ಆಶ್ಚರ್ಯವಾಗುವಂತಿದ್ದ ಆ ಮಹಾಯುದ್ಧವನ್ನು ಇವರೆಲ್ಲ ನೋಡಿದರು.

೩೭-೩೮. ಬೆಳಗಾಗುತ್ತಲೆ ವೀರನಾದ ಬಲಖಾನಿಯು ಜಡೆ ಕೃಷ್ಣಾಜಿನ ಇವುಗಳಿಂದ ಕೂಡಿದ ಸುಂದರನಾದ ಈ ಬಾಲಕನೇ ರಾತ್ರಿ ಯುದ್ಧಮಾಡಿದವನೆಂದು ಕಂಡನು. ಪ್ರತಾಪಿಯೂ ವೀರನೂ ಆದ ಇಂದುಲನು ಶ್ರಮಾಧಿಕ್ಯದಿಂದ ಕೃಶವಾಗಿದ್ದನು. ಅವನು ತನ್ನ ತಂದೆಯ ಬಂಧುವಾದ ಬಲಖಾನಿಯ ಎದುರಿಗೆ ನಿಂತು "ಎಲೈ ಕೃಷ್ಣಾಂಶನೇ !

೩೯. ನನ್ನ ತಾಯಿಯಾದ ಸ್ವರ್ಣವತಿಯು ನಿಜವಾಗಿಯೂ ಪತಿವ್ರತೆಯಾಗಿದ್ದರೆ ಈ ನನ್ನ ಖಡ್ಗದಿಂದ ನಿನ್ನ ಶಿರಸ್ಸನ್ನು ಛೇದಿಸುವೆನು." ಎಂದು ಪ್ರತಿಜ್ಞೆ ಮಾಡಿದನು. ಈರೀತಿ ಪ್ರತಿಜ್ಞೆಮಾಡಿ ಕೋಪಾವಿಷ್ಟನಾಗಿ ಕತ್ತಿಯನ್ನು ತೆಗೆದುಕೊಂಡು ವೇಗವಾಗಿ ನುಗ್ಗಿದನು.

೪೦-೪೨. ಅದನ್ನು ತಿಳಿದು ಬಲಖಾನಿಯು ಭ್ರಾತೃಪ್ರೇಮದಿಂದ ಕಾತರನಾಗಿ ತನ್ನ ಅಸ್ತ್ರವನ್ನು ಎಸೆದು ಮಗನ ಬಳಿಗೆ ಬಂದು "ಅಯ್ಯಾ ತಾಯಿತಂದೆಗಳಿಗೆ

ಹೇ ಇಂದುಲ ಮಹಾಭಾಗ ಪಿತೃಮಾತೃಯಶಸ್ಕರ ।
ಆಹ್ಲಾದಪ್ರಾಣಸದೃಶ ಸ್ವರ್ಣವತ್ಯಂಗಮಾನಸ ॥ ೪೧ ॥

ಪೂರ್ವಂ ಹತ್ವಾ ಚ ಮಾಂ ವೀರ ಸ್ವಪಿತೃವ್ಯಂ ತತಃ ಪುನಃ ।
ತಥೈವೋದಯಸಿಂಹಂ ಚ ದೇವಸಿಂಹಂ ತಥಾ ಕುಲಂ ।
ಸುಖೀ ಭವ ಮಹಾವೀರ ಗೇಹೇ ವೈ ಸುಖವರ್ಮಣಃ ॥ ೪೨ ॥

ಇತಿ ಶ್ರುತ್ವಾ ವಚಸ್ತಸ್ಯ ಜ್ಞಾತ್ವಾ ಚ ಸ್ವಕುಲಂ ಶಿಶುಃ ।
ತ್ಯಕ್ತ್ವಾ ಖಡ್ಗಂ ಪತಿತ್ವಾ ಚ ಸ್ವಪಿತೃವ್ಯಸ್ಯ ಪಾದಯೋಃ ।
ಕೃತವಾನ್ರೋದನಂ ಗಾಢಮಪರಾಧನಿವೃತ್ತಯೇ ॥ ೪೩ ॥

ಉವಾಚ ಮಧುರಂ ವಾಕ್ಯಂ ಶ್ರುಣು ತಾತ ಮಮ ಪ್ರಿಯ ।
ನಾರೀಯಂ ದೂಷಿತಾ ವೇದೈರ್ನೃಣಾಂ ಮೋಹಪ್ರದಾಯಿನೀ ॥ ೪೪ ॥

ದೇವೋ ವಾ ಮಾನುಷೋ ವಾಪಿ ಪನ್ನಗೋ ವಾಪಿ ದಾನವಃ ।
ಆರ್ಯ ನಾರೀಮಯೈರ್ಜಾಲೈರ್ಬಂಧನಾಯ ಸಮುದ್ಯತಃ ॥ ೪೫ ॥

---

ಯಶಸ್ಕರನೂ, ಆಹ್ಲಾದನ ಪ್ರಾಣಸದೃಶನೂ, ಸ್ವರ್ಣವತೀ ಗರ್ಭಸಂಭೂತನೂ, ಆದ ಪೂಜ್ಯ ಇಂದುಲ! ಮಹಾವೀರಾ! ನಿನ್ನ ಚಿಕ್ಕಪ್ಪನಾದ ನನ್ನನ್ನು ಮೊದಲು ಕೊಂದು ಅನಂತರ ದೇವಸಿಂಹ, ಉದಯಸಿಂಹ, ಮೊದಲಾದ ಸ್ವಕುಲದವರನ್ನೆಲ್ಲಾ ಕೊಲ್ಲು, ಬಳಿಕ ಸುಖವರ್ಮನ ಮನೆಯಲ್ಲಿ ಸುಖವಾಗಿರು ಎಂದು ಹೇಳಿದನು."

೪೩-೪೮. ಬಲಖಾನಿಯು ಆಡಿದ ಮಾತುಗಳನ್ನು ಕೇಳಿ ಬಾಲಕನಾದ ಇಂದುಲನು ಅವರೆಲ್ಲಾ ತನ್ನ ಬಂಧುಗಳೆಂದು ತಿಳಿದು ಕತ್ತಿಯನ್ನು ಬಿಸುಟು ತನ್ನ ಚಿಕ್ಕಪ್ಪನ ಪಾದಗಳಲ್ಲಿ ಬಿದ್ದು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬಹುವಾಗಿ ಗೋಳಾಡಿದನು ಅನಂತರ ಮೃದೂಕ್ತಿಯಿಂದ "ಪ್ರಿಯ ತಂದೆಯೇ! ಕೇಳು? ಮಾನವರನ್ನು ಮೋಹಗೊಳಿಸುವ ಸ್ತ್ರೀಯು ವೇದಗಳಿಂದ ದೂಷಿತೆಯಾಗಿರುವಳು. ದೇವ, ದಾನವ, ಮಾನವ, ಪನ್ನಗ ಇವರಲ್ಲಿ ಯಾರೇ ಆಗಲಿ, ನಾರಿಯ ಮೋಹ ಜಾಲಕ್ಕೆ ಸಿಕ್ಕಿದರೆ ಬಂಧಿತರಾಗುವರು. ಅಯ್ಯಾ ವಿಭುವೇ! ಇಂದ್ರಪುತ್ರನಾದ ಜಯಂತಾಂಶದ ಈ ನಾನು ಆ ಜನ್ಮಪರಿಶುದ್ಧನಾದ ಆಹ್ಲಾದನ ಮನೆಯಲ್ಲಿ ಅವನ

ಸೋಽಹಮಾಜನ್ಮಶುದ್ಧಸ್ಯ ಪಿತುರಾಹ್ಲಾದಕಸ್ಯ ಚ ।
ಗೇಹೇ ಜಾತೋ ಜಯಂತಶ್ಚ ಶಕ್ರಪುತ್ರಃ ಸ್ವಯಂ ವಿಭೋ ॥ ೪೬ ॥

ಪದ್ಮಿನ್ಯಾ ಜನಿತಂ ಮೋಹಂ ಗೃಹೀತ್ವಾ ಜ್ಞಾತವಾನ್ನಹಿ ।
ಕ್ಷಮಸ್ವ ಮಮ ಮಂದಸ್ಯ ದೋಷಮಜ್ಞಾನಜಂ ಪಿತುಃ ॥ ೪೭ ॥

ಇತ್ಯುಕ್ತ್ವಾ ಸ ಪುನರ್ಬಾಲೋ ರುರೋದ ಸ್ನೇಹಕಾತರಃ ।
ಸೇನಾಮುಜ್ಜೀವಯಾಮಾಸ ತಾಲನಂ ಚ ಮಹಾಬಲಂ ॥ ೪೮ ॥

ಇತಿ ಶ್ರುತ್ವಾ ವಚಸ್ತಸ್ಯ ಕೃಷ್ಣಾಂಶೋ ವಚನಂ ಶಿಶೋಃ ।
ಪರಮಾನಂದಮಾಗಮ್ಯ ಹೃದಯೇ ತಮರೋಪಯತ್ ।
ಉತ್ಸವಂ ಕಾರಯಾಮಾಸ ತತ್ರ ದೇಶೇ ಜನೇಜನೇ ॥ ೪೯ ॥

ಆರ್ಯಸಿಂಹಸ್ತು ತಚ್ಛ್ರುತ್ವಾ ನಾನಾದ್ರವ್ಯಸಮನ್ವಿತಃ ।
ದದೌ ಕನ್ಯಾಂ ವಿಧಾನೇನ ಪದ್ಮಿನೀಮಿಂದುಲಾಯ ವೈ ॥ ೫೦ ॥

---

ಪುತ್ರನಾಗಿ ಜನಿಸಿದೆ. ಹೀಗಿದ್ದರೂ ಆ ಸ್ತ್ರೀಯ ಪ್ರೇಮಪಾಶಕ್ಕೊಳಗಾಗಿ ನನ್ನ ಕರ್ತವ್ಯವನ್ನು ಮರೆತು ಭ್ರಷ್ಟನಾದೆನು. ಎಲೈ ತಂದೆಯೇ! ಮಂದಬುದ್ಧಿಯಾದ ನಾನು ಅಜ್ಞಾನವಶದಿಂದ ಪಿತೃಗಳ ವಿಷಯದಲ್ಲಿ ಈರೀತಿ ಆಚರಿಸಿದ ನನ್ನ ದೋಷವನ್ನು ಕ್ಷಮಿಸು" ಎಂದು ಹೇಳಿ ಸ್ನೇಹದಿಂದ ಕಾತರನಾಗಿ ಮತ್ತೆ ಗೋಳಾಡಿದನು.

೪೯. ಕೃಷ್ಣಾಂಶನು ಬಾಲಕನಾದ ಇಂದುಲನ ಈ ಮಾತುಗಳನ್ನು ಕೇಳಿ ಪರಮಾನಂದಭರಿತನಾಗಿ ಅವನನ್ನು ಬಾಚಿ ತಬ್ಬಿಕೊಂಡನು. ಮತ್ತು ತನ್ನ ರಾಜ್ಯದಲ್ಲಿ ಎಲ್ಲಾ ಜನರೂ ಉತ್ಸವವನ್ನಾಚರಿಸುವಂತೆ ಅಪ್ಪಣೆಮಾಡಿದನು.

೫೦. ಆರ್ಯಸಿಂಹನು ಈ ವೃತ್ತಾಂತವನ್ನೆಲ್ಲಾ ಕೇಳಿ ಬಹುವಿಧ ದ್ರವ್ಯಗಳನ್ನು ಉಪಹಾರವಾಗಿ ತೆಗೆದುಕೊಂಡು ಬಂದು ಅವರನ್ನು ಗೌರವಿಸಿ ಶಾಸ್ತ್ರೋಕ್ತರೀತಿಯಿಂದ ಪುತ್ರಿಯಾದ ಪದ್ಮಿನಿಯನ್ನು ಇಂದುಲನಿಗೆ ವಿವಾಹ ಮಾಡಿಕೊಟ್ಟನು.

ಶತಂ ಹಯಾಂಸ್ತಥಾ ನಾಗಾನ್ ಮುಕ್ತಾಮಣಿವಿಭೂಷಿತಾನ್ ।
ಕನ್ಯಾರ್ಥೇ ತಾನ್ ದದೌ ರಾಜಾ ಜಾಮಾತ್ರೇ ಬಹುಭೂಷಣಂ ॥ ೫೧ ॥

ಪ್ರಸ್ಥಾನಮಕರೋತ್ತೇಷಾಂ ಸ ಪ್ರೇಮ್ಣಾ ವಾಕ್ಯಗದ್ಗದಃ ।
ತೇ ತು ಸರ್ವೇ ಮುದಾ ಯುಕ್ತಾಃ ಸ್ವಗೇಹಂ ಶೀಘ್ರಮಾಯಯುಃ ॥೫೨॥

ಉಷಿತ್ವಾ ಮಾಸಮೇಕಂ ತು ತಸ್ಮಿನ್ಮಾರ್ಗೇ ಭಯಾನಕೇ ।
ಕೀರ್ತಿಸಾಗರಮಾಸಾದ್ಯ ಚಕ್ರುಸ್ತೇ ಬಹುಧೋತ್ಸವಂ ॥ ೫೩ ॥

ಆಹ್ಲಾದಸ್ತು ಪ್ರಸನ್ನಾತ್ಮಾ ಸುತಂ ಪತ್ನೀಸಮನ್ವಿತಂ ।
ದೃಷ್ಟ್ವಾ ವಿಪ್ರಾನ್ಸಮಾಹೂಯ ದದೌ ದಾನಾನ್ಯನೇಕಶಃ ॥ ೫೪ ॥

ದಶಹಾರಾಖ್ಯನಗರಂ ಸಂಪ್ರಾಪ್ತಃ ಸ್ವಕುಲೈಃಸಹ ।
ಕೃಷ್ಣಾಂಶಸ್ಯ ಮಹಾಕೀರ್ತಿರ್ಜಾತಾ ಲೋಕೇ ಜನೇಜನೇ ॥ ೫೫ ॥

---

೫೧ ಆಗ ರತ್ನಾಭರಣಗಳಿಂದ ಅಲಂಕೃತವಾದ ನೂರು ಆನೆ, ನೂರು ಕುದುರೆಗಳನ್ನು ತನ್ನ ಮಗಳಿಗೂ ಅನೇಕ ದಿವ್ಯಾಭರಣಗಳನ್ನು ಅಳಿಯನಿಗೂ ಕೊಟ್ಟನು.

೫೨. ಅವರುಗಳನ್ನು ಸಾಗಕಳುಹಿಸುವ ಪ್ರಸ್ಥಾನ ಮಹೋತ್ಸವವೂ ಆಯಿತು. ಹೀಗೆ ಕಳುಹಿಸುವಾಗ ಪ್ರೇಮಾತಿಶಯದಿಂದ ಕಂಠವು ಬಿಗಿದು ಒಂದು ಮಾತುಗಳು ಗದ್ಗದ ಧ್ವನಿಯುಕ್ತವಾದುವು.

೫೩. ಈರೀತಿ ಅವರನ್ನು ಸಾಗಕಳುಹಿಸಿಕೊಟ್ಟು, ಇವರು ಸಂತೋಷದಿಂದ ಜಾಗ್ರತೆ ತಮ್ಮ ನಿವಾಸಕ್ಕೆ ಬಂದರು ಕೃಷ್ಣಾಂಶಾದಿಗಳು ಭಯಂಕರವಾದ ಆ ಮಾರ್ಗ ದಲ್ಲಿ ಸಾಗುತ್ತಾ ಅಲ್ಲಲ್ಲಿ ತಳುಗುತ್ತಾ ಒಂದು ತಿಂಗಳು ಮಾರ್ಗ ಕ್ರಮಣಮಾಡಿ ಕೀರ್ತಿ ಸಾಗರವೆಂಬ ಕ್ಷೇತ್ರಕ್ಕೆ ಬಂದು ಅಲ್ಲಿ ನಾನಾ ಉತ್ಸವಗಳನ್ನು ಮಾಡಿದರು

೫೪. ತನ್ನ ಮಗ ಇಂದುಲನು ಪತ್ನೀಸಮೇತನಾಗಿ ಬಂದುದಕ್ಕೆ ಆಹ್ಲಾದನು ಪ್ರಸನ್ನಹೃದಯನಾಗಿ ಅನೇಕ ಬ್ರಾಹ್ಮಣರನ್ನು ಬರಮಾಡಿ ಆ ಕ್ಷೇತ್ರದಲ್ಲಿ ಸಮೃದ್ಧಿ ಯಾಗಿ ದಾನಗಳನ್ನು ಮಾಡಿದನು.

೫೫. ಬಳಿಕ ತನ್ನವರೆಲ್ಲರೊಡನೆ ಹೊರಟು ದಶಹಾರನಗರಕ್ಕೆ ಬಂದನು. ಕೃಷ್ಣಾಂಶನ ಅತಿಶಯವಾದ ಕೀರ್ತಿಯು ಈ ಲೋಕದಲ್ಲಿ ಜನಗಳಲ್ಲೆಲ್ಲಾ ವಿಖ್ಯಾತಿ ಹೊಂದಿತು.

ಪೃಥ್ವೀರಾಜಸ್ತು ತಚ್ಛ್ರುತ್ವಾ ವಿಸ್ಮಯಂ ಪರಮಂ ಯಯೌ ।
ಸಾ ತು ವೈ ಪದ್ಮಿನೀ ನಾರೀ ದುರ್ವಾಸಃ ಶಾಪಮೋಹಿತಾ ॥ ೫೬ ॥

ಅಪ್ಸರಸ್ತ್ವಂ ಸ್ವಯಂ ತ್ಯಕ್ತ್ವಾ ಭೂಮೌ ನಾರೀತ್ವಮಾಗತಾ ।
ದ್ವಾದಶಾಬ್ದಪ್ರಮಾಣೇನ ಸೋಷಿತ್ವಾ ಜಗತೀತಲೇ ॥ ೫೭ ॥

ಯಕ್ಷ್ಮಣಾ ಮರಣಂ ಪ್ರಾಪ್ಯ ಸ್ವರ್ಗಲೋಕಮುಪಾಯಯೌ ।
ನವ ಮಾಸಾನ್ ಕೃತೋ ವಾಸಸ್ತಯಾ ಚಾಹ್ಲಾದಮಂದಿರೇ ॥ ೫೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಏಕೋನವಿಂಶೋಽಧ್ಯಾಯಃ



---

೫೬-೫೭. ಇದನ್ನು ಕೇಳಿ ಪೃಥ್ವೀರಾಜನು ಅತ್ಯಾಶ್ಚರ್ಯ ಹೊಂದಿದನು. ಪದ್ಮಿನಿಯು ಹಿಂದೆ ದೇವಲೋಕದಲ್ಲಿ ಒಬ್ಬ ಅಪ್ಸರ ಸ್ತ್ರೀಯಾಗಿದ್ದು ದೂರ್ವಾಸರ ಶಾಪದಿಂದ ಮಹಿಮೆಯನ್ನು ಕಳೆದುಕೊಂಡು ಭೂಲೋಕದಲ್ಲಿ ಆರ್ಯವರ್ಮನ ಪುತ್ರಿಯಾಗಿ ಜನಿಸಿದ್ದಳು ಋಷಿಯ ಶಾಪವಂತೆ ಅವಳು ಹನ್ನೆರಡು ವರ್ಷಕಾಲ ಭೂಲೋಕದಲ್ಲಿ ಇರಬೇಕಾಗಿತ್ತು.

೫೮. ಬಳಿಕ ಆಕೆ ಕ್ಷಯರೋಗಕ್ಕೆ ತುತ್ತಾಗಿ ಮೃತಿಹೊಂದಿ ಶಾಪವಿಮುಕ್ತೆಯಾಗಿ ಪುನಃ ಸ್ವರ್ಗಕ್ಕೆ ಹೊರಟುಹೋದಳು. ಅಂತು ಅವಳು ಆಹ್ಲಾದನ ಮನೆಯಲ್ಲಿ ಒಂಬತ್ತು ತಿಂಗಳು ಮಾತ್ರ ವಾಸಮಾಡಿದ ಹಾಗಾಯಿತು

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸ ಸಮುದಾಯವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ವಿಂಶೋಽಧ್ಯಾಯಃ

॥ ಸೂತ ಉವಾಚ ॥

ಮುನೇ ಪಾಂಚಾಲದೇಶೇ ತು ರಾಜಾಽಽಸೀದ್ಬಲವರ್ಧನಃ ।
ತಸ್ಯ ಪತ್ನೀ ವಿಶಾಲಾಕ್ಷೀ ಜಲದೇವೀತಿ ವಿಶ್ರುತಾ ॥ ೧ ॥

ಬಿಸೇನವಂಶಭೂಪಾಲೋ ವೇದತತ್ವವಿಶಾರದಃ ।
ಸಸ್ತ್ರೀಕಃ ಪೂಜಯಾಮಾಸ ವರುಣಂ ಯಾದಸಾಂ ಪತಿಂ ॥ ೨ ॥

---

## ಇಪ್ಪತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ— ಅಯ್ಯಾ ಶೌನಕಮುನಿಯೇ ! ಪಾಂಚಾಲದೇಶದಲ್ಲಿ ಬಲವರ್ಧನನೆಂಬ ರಾಜನಿದ್ದನು. ಅವನಿಗೆ ವಿಶಾಲವಾದ ಕಣ್ಣುಗಳುಳ್ಳವಳೂ ಜಲದೇವಿಯೆಂಬ ಹೆಸರಿನಿಂದ ಪ್ರಸಿದ್ಧಳೂ ಆದ ರಮಣಿಯು ಪತ್ನಿಯಾಗಿದ್ದಳು.

೨. ಬಿಸೇನವಂಶದ ರಾಜನಾದ ಈ ಬಲವರ್ಧನನು ವೇದವೇದಾಂಗ ಪಾರಂಗತನೂ, ಸಕಲ ತತ್ವಗಳನ್ನೂ ತಿಳಿದವನೂ ಆಗಿದ್ದನು. ಈ ಮಹಾ ರಾಜನು ತನ್ನ ಪತ್ನಿಯೊಡನೆ ಒಂದುಸಾರಿ ಜಲಾಧಿಪತಿಯಾದ ವರುಣನನ್ನು ಪೂಜಿಸಿದನು.

**ತಸ್ಯ ಪುತ್ರಾವುಭೌ ಜಾತೌ ಕ್ಷತ್ರಧರ್ಮಪರಾಯಣೌ ।**
**ಲಹರೋ ಜ್ಯೇಷ್ಠತನಯೋ ಮಯೂರಧ್ವಜ ಏವ ಹಿ ॥ ೩ ॥**

**ದ್ವಾದಶಾಬ್ದವಯಾ ಭೂತ್ವಾ ಮಯೂರಧ್ವಜ ಏವ ಸಃ ।**
**ಆಜ್ಞಯಾ ಜ್ಯೇಷ್ಠಬಂಧೋಶ್ಚ ಸ್ಕಂದದೇವಮತೋಷಯತ್ ॥ ೪ ॥**

**ಯತೇಂದ್ರಿಯಸ್ತಥಾ ಮೌನೀ ವಾನಪ್ರಸ್ಥಪರಾಯಣಃ ।**
**ಪಂಚಾಬ್ದಂ ತದ್ವ್ರತೀ ಭೂತ್ವಾ ಜಪಧ್ಯಾನಪರೋಽಭವತ್ ॥ ೫ ॥**

**ತದಾ ಪ್ರಸನ್ನೋ ಭಗವಾನ್ ಸೇನಾನೀರಗ್ನಿಭೂಃ ಸ್ವಯಂ ।**
**ಸ್ವರೂಪಂ ದರ್ಶಯಾಮಾಸ ಸರ್ವಾಶ್ಚರ್ಯಸಮನ್ವಿತಂ ॥ ೬ ॥**

**ಮಯೂರಧ್ವಜ ಏವಾಽಪಿ ದೃಷ್ಟ್ವಾ ಸರ್ವಮಯಂ ಶಿಶುಂ ।**
**ದೇವಸೇನಾಸಹಾಯಂ ಚ ತುಷ್ಟಾವ ಶ್ಲಕ್ಷ್ಣಯಾ ಗಿರಾ ॥ ೭ ॥**

---

೩. ಬಲವರ್ಧನನ ಈ ಪೂಜೆಯಿಂದ ಸಂತುಷ್ಟನಾದ ವರುಣನು ಅವನಿಗೆ ಕ್ಷತ್ರಧರ್ಮನಿರತರಾದ ಇಬ್ಬರು ಪುತ್ರರು ಜನಿಸುವಂತೆ ಅನುಗ್ರಹಿಸಿದನು. ಈ ಪ್ರಕಾರವಾದ ವರದಿಂದ ಜನಿಸಿದ ಪುತ್ರರಲ್ಲಿ ಹಿರಿಯವನು ಲಹರನು, ಮಯೂರಧ್ವಜನು ಎರಡನೆಯವನು.

೪. ಮಯೂರಧ್ವಜನು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಅಣ್ಣನಾದ ಲಹರನ ಅಪ್ಪಣೆಯನ್ನು ಪಡೆದು ಕುಮಾರಸ್ವಾಮಿಯನ್ನು ಆರಾಧಿಸಲು ತೊಡಗಿದನು.

೫. ಜಿತೇಂದ್ರಿಯನಾಗಿದ್ದುಕೊಂಡು ಮೌನದಿಂದ ವಾನಪ್ರಸ್ಥನಿಯಮಯುಕ್ತನಾಗಿ ಐದು ವರ್ಷಗಳಕಾಲ ಜಪ ಧ್ಯಾನ ಇವುಗಳಲ್ಲಿ ಆಸಕ್ತನಾಗಿದ್ದನು.

೬. ಈರೀತಿ ಐದು ವರ್ಷಕಾಲ ವ್ರತಾಚರಣಮಾಡಲು, ದೇವತೆಗಳ ಸೈನ್ಯಕ್ಕೆ ಅಧಿಪತಿಯೂ ಷಡ್ಗುಣೈಶ್ವರ್ಯ ಸಂಪನ್ನನೂ ಆ ಷಣ್ಮುಖಸ್ವಾಮಿಯು ಪ್ರತ್ಯಕ್ಷನಾಗಿ ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ತನ್ನ ನಿಜರೂಪವನ್ನು ತೋರಿಸಿದನು.

೭. ಸರ್ವವ್ಯಾಪಕನೂ ಬಾಲಸ್ವರೂಪನೂ ದೇವಸೈನ್ಯಕ್ಕೆ ಅಧಿಪತಿಯೂ ಆದ ಷಣ್ಮುಖನನ್ನು ನೋಡಿ ಮಯೂರಧ್ವಜನು ಮೃದುಮಧುರ ವಾಕ್ಕುಗಳಿಂದ ಹೀಗೆ ಸ್ತುತಿಸತೊಡಗಿದನು.

॥ ಮಯೂರಧ್ವಜ ಉವಾಚ ॥

ಜಯತಿ ತೇ ವಪುರ್ದಿವ್ಯವಿಗ್ರಹಂ ।
ನಯತಿ ಸರ್ವದಾ ದೇವತಾಗಣಾನ್ ।
ಪಿಬತಿ ಮಾತ್ರಿಯಂ ದುಗ್ಧಮುತ್ತಮಂ ।
ವಧತಿ ಸರ್ವದಾ ದೈತ್ಯದಾನವಾನ್ ॥ ೮ ॥

ನಮಸ್ತೇ ದೇವಸೇನೇಶ ಮಹಿಷಾಸುರಮರ್ದನ ।
ಷಡಾನನ ಮಹಾಬಾಹೋ ತಾರಕಪ್ರಾಣನಾಶಕ ॥ ೯ ॥

ಪ್ರಸನ್ನೋ ಭವ ಸರ್ವಾತ್ಮನ್ ಗುಹ ಶಕ್ತಿಧರಾऽವ್ಯಯ ।
ಕಿಂಕರಂ ಪಾಹಿ ಮಾಂ ನಿತ್ಯಂ ಶರಣಾಗತವತ್ಸಲ ॥ ೧೦ ॥

ಇತಿ ಶ್ರುತ್ವಾ ಸ್ತುತಿಂ ತಸ್ಯ ಸೇನಾನೀಸ್ತಮುವಾಚ ವೈ ।
ಕಿಂ ತೇऽಭೀಷ್ಟಂ ನೃಪಶ್ರೇಷ್ಠ ಮತ್ತಃ ಸರ್ವಮವಾಪ್ಸ್ಯಸಿ ॥ ೧೧ ॥

---

೮. ಮಯೂರಧ್ವಜನು ಹೇಳುತ್ತಾನೆ:—ದೇವಾ! ದಿವ್ಯಮೂರ್ತಿಯುಳ್ಳ ನಿನ್ನ ಶರೀರವು ಬಹಳ ಶ್ರೇಷ್ಠವಾದುದು. ಈ ನೀನು ದೇವತೆಗಳನ್ನು ನ್ಯಾಯಮಾರ್ಗದಲ್ಲಿರುವಂತೆ ನೋಡಿಕೊಳ್ಳುತ್ತಾ ಅವರಿಗೆಲ್ಲಾ ಮುಂದಾಳಾಗಿರುವೆ. ಎಲೈ ದೇವೋತ್ತಮನೇ! ನೀನು ತಾಯಿಯರಾದ ಕೃತ್ತಿಕಾದೇವಿಯರ ಸ್ತನ್ಯಪಾನ ಮಾಡುತ್ತಿರುವೆ. ರಾಕ್ಷಸರನ್ನು ಯಾವಾಗಲೂ ಧ್ವಂಸಮಾಡುತ್ತಿರುವೆ.

೯. ಅಯ್ಯಾ ದೇವಸೇನಾಪತಿಯೇ! ನೀನು ಮಹಿಷಾಸುರನೆಂಬ ರಾಕ್ಷಸನನ್ನು ನಾಶಪಡಿಸಿರುವೆ. ತಾರಕಾಸುರನನ್ನು ಧ್ವಂಸಮಾಡಿರುವ ಎಲೈ ಮಹಾಬಲಶಾಲಿಯಾದ ಷಣ್ಮುಖನೇ! ನಿನಗೆ ನಮಸ್ಕಾರ.

೧೦. ಸರ್ವಪ್ರಾಣಿಗಳ ಆತ್ಮಸ್ವರೂಪನೇ! ಎಲೈ ಶಕ್ತ್ಯಾಯುಧಧಾರಿಯೇ! ನಾಶರಹಿತನೆನಿಸಿದ ಗುಹನೇ! ಮರೆಹೊಕ್ಕವರನ್ನು ಪ್ರೀತಿಯಿಂದ ಸಲಹುವ ನೀನು ಸೇವಕನಾದ ನನ್ನನ್ನು ಯಾವಾಗಲೂ ಕಾಪಾಡು." ಎಂದು ಪ್ರಾರ್ಥಿಸಿದನು.

೧೧. ಈರೀತಿ ಮಯೂರಧ್ವಜನು ಸ್ತುತಿಸಿದುದನ್ನು ಕೇಳಿ, ದೇವಸೇನಾಪತಿಯಾದ ಷಣ್ಮುಖನು ಪ್ರಸನ್ನನಾಗಿ, ಮಯೂರಧ್ವಜನನ್ನು ಕುರಿತು "ಎಲೈ ರಾಜೋತ್ತಮನೇ! ನಿನ್ನ ಅಭೀಷ್ಟವೇನು? ಹೇಳು. ಅದೆಲ್ಲವನ್ನೂ ನಾನು ನಿನಗೆ ಕೊಡುವೆನು" ಎಂದು ಹೇಳಿದನು.

ಇತ್ಯುಕ್ತಸ್ತೇನ ದೇವೇನ ಭೂಪತಿಃ ಪ್ರಾಹ ನಮ್ರಧೀಃ ।
ಬಲಂ ಮೇ ದೇಹಿ ಭಗವನ್ ಸಹಾಯಂ ಕುರು ಸರ್ವದಾ ॥ ೧೨ ॥

ತಥೇತ್ಯುಕ್ತ್ವಾ ತು ತಂ ಸ್ಕಂದಸ್ತತ್ರೈವಾಂತರ್ದಧೇ ಪುನಃ ।
ಸ ನೃಪಸ್ತು ಪ್ರಸನ್ನಾತ್ಮಾ ಕಾರಯಾಮಾಸ ವೈ ಪುರಂ ॥ ೧೩ ॥

ನಾಮ್ನಾ ಮಯೂರನಗರಂ ನರವೃಂದಸಮನ್ವಿತಂ ।
ದ್ವಿಯೋಜನಾಯಾಮಯುತಂ ಸ್ಕಂದದೇವೇನ ರಕ್ಷಿತಂ ॥ ೧೪ ॥

ಲಹರೋ ನಾಮ ತದ್ಬಂಧುರ್ದ್ವಿದಶಾಬ್ದಪ್ರಯತ್ನತಃ ।
ವರುಣಂ ಪೂಜಯಾಮಾಸ ನದೀನದಸಮನ್ವಿತಂ ॥ ೧೫ ॥

ತದಾ ಪ್ರಸನ್ನೋ ಭಗವಾನ್ ವರುಣೋ ಯಾದಸಾಂ ಪತಿಃ ।
ವರಂ ಬ್ರೂಹೀತಿ ವಚನಂ ಪ್ರೇಮ್ಣೋವಾಚ ಮಹೀಪತಿಂ ॥ ೧೬ ॥

---

೧೨. ಕುಮಾರಸ್ವಾಮಿಯು ಈರೀತಿ ಹೇಳಲಾಗಿ ಮಯೂರಧ್ವಜನು ವಿನಯ ನಮ್ರನಾಗಿ "ಭಗವಂತನಾದ ಷಣ್ಮುಖನೇ! ನನಗೆ ಸಮೃದ್ಧಿಯಾದ ಬಲವನ್ನು ಕರುಣಿಸಬೇಕು, ಮತ್ತು ಯಾವಾಗಲೂ ನೀನು ನನಗೆ ಸಹಾಯಕನಾಗಿರಬೇಕು" ಎಂದು ಪ್ರಾರ್ಥಿಸಿದನು.

೧೩. ಸ್ಕಂದನು "ಹಾಗೆಯೇ ಆಗಲಿ" ಎಂದು ಮಯೂರಧ್ವಜನಿಗೆ ವರವನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು. ಹೀಗೆ ವರವನ್ನು ಪಡೆದ ಮಯೂರ ಧ್ವಜನು ಪ್ರಸನ್ನಮನಸ್ಸಿನಿಂದ ಕೂಡಿ ಮಯೂರನಗರವೆಂಬ ಒಂದು ಪಟ್ಟಣವನ್ನು ನಿರ್ಮಿಸಿದನು.

೧೪. ಆ ಪಟ್ಟಣವು ಎರಡುಯೋಜನ ವಿಸ್ತಾರವುಳ್ಳದ್ದಾಗಿ ಜನಸಮೂಹ ದಿಂದ ನಿಬಿಡವಾಗಿ ಷಣ್ಮುಖನಿಂದ ರಕ್ಷಿಸಲ್ಪಡುತ್ತಿದ್ದಿತು.

೧೫. ಮಯೂರಧ್ವಜನ ಅಣ್ಣನಾದ ಲಹರನು ನದಿ, ನದಗಳು ಇವುಗಳಿಂದ ಯುಕ್ತನೂ, ಸಮುದ್ರಾಧಿಪನೂ ಆದ ವರುಣನನ್ನು ಇಪ್ಪತ್ತು ವರ್ಷಗಳಕಾಲ ಪ್ರಯತ್ನಪಟ್ಟು ಉಪಾಸನೆಮಾಡಿದನು.

೧೬. ಇದರಿಂದ ಜಲಾಧಿಪನಾದ ವರುಣನು ಸಂತೋಷಗೊಂಡು ಪ್ರೀತಿಯಿಂದ ರಾಜನಾದ ಲಹರನನ್ನು ಕುರಿತು "ನಿನಗೆ ಬೇಕಾದ ವರವನ್ನು ಬೇಡಿಕೋ" ಎಂದನು.

ಇತಿ ಶ್ರುತ್ವಾಮೃತಮಯಂ ವಚನಂ ಲಹರೋ ನೃಪಃ ।
ತುಷ್ಟಾವ ಶ್ಲಕ್ಷ್ಣಯಾ ವಾಚಾ ಪಾಶಿನಂ ಪಯಸಾಂ ಪತಿಂ ॥ ೧೭ ॥

॥ ಲಹರ ಉವಾಚ ॥

ಯಸ್ಯ ಚಿತ್ತಂ ಮಹಜ್ಜ್ಞೇಯಂ ತಪೋಬಲಸಮನ್ವಿತಂ ।
ಅತಃ ಪ್ರಚೇತಾಸ್ತೇ ನಾಮ ನಮಸ್ತುಭ್ಯಂ ಪ್ರಚೇತಸೇ ॥ ೧೮ ॥

ರುಣದ್ಧಿ ಪಯಸಾಂ ವೇಗಂ ನ ಕೇನಾಪ್ಯವರೋಧಿತಃ ।
ಅತಸ್ತ್ವಂ ವರುಣೋ ನಾಮ ನಮಸ್ತೇ ವರುಣಾಯ ವೈ ॥ ೧೯ ॥

ದೈತ್ಯಾನಾಂ ಬಂಧನಾರ್ಥಾಯ ದೇವಾನಾಂ ಜಯಹೇತವೇ ।
ದಿವ್ಯಃ ಪಾಶಸ್ತ್ವಯಾನೀತಃ ಪಾಶಿನೇ ತೇ ನಮೋನಮಃ ॥ ೨೦ ॥

ಇತಿ ಸ್ತುತಸ್ತದಾ ದೇವೋ ರಾಜ್ಞಾ ತೇನೈವ ಧೀಮತಾ ।
ನಗರೀಂ ಕಾರಯಾಮಾಸ ಲಾಹರೀಮಥ ಚೋತ್ತಮಾಂ ॥ ೨೧ ॥

---

೧೭. ವರುಣನು ಹೇಳಿದ ಅಮೃತಸದೃಶವಾದ ಈ ವಾಕ್ಯವನ್ನು ಕೇಳಿ ಲಹರನು ಜಲಾಧಿಪನಾದ ವರುಣದೇವನನ್ನು ಮೃದೂಕ್ತಿಗಳಿಂದ ಮುಂದೆ ಹೇಳುವಂತೆ ಸ್ತೋತ್ರಮಾಡಲು ತೊಡಗಿದನು.

೧೮. "ಸ್ವಾಮಿ! ನಿನ್ನ ಮನಸ್ಸು (ಚೇತಸ್ಸು) ಮಹಾಶಕ್ತಿಯುತವಾಗಿರುವುದರಿಂದ ನಿನಗೆ ಪ್ರಚೇತಸನೆಂದು ಹೆಸರಾಯಿತು. ಪ್ರಚೇತನಾಮದಿಂದ ವ್ಯವಹರಿಸಲ್ಪಡುವ ವರುಣದೇವನೆ! ನಿನ್ನನ್ನು ನಮಸ್ಕರಿಸುವೆನು."

೧೯. "ಯಾರಿಂದಲೂ ತಡೆಯಲು ಆಗದೆ ಇದ್ದ ಜಲವೇಗವನ್ನು ನೀನು ತಡೆದಿದ್ದೀಯೆ. ಆದುದರಿಂದ ವರುಣನೆಂದು ಹೆಸರನ್ನು ಪಡೆದಿರುವ ನಿನಗೆ ನಮಸ್ಕಾರ."

೨೦. "ದೈತ್ಯರನ್ನೆಲ್ಲಾ ಬಂಧಿತರನ್ನಾಗಿ ಮಾಡುವುದಕ್ಕಾಗಿಯೂ ದೇವತೆಗಳಿಗೆ ಜಯವನ್ನು ಸಂಪಾದಿಸುವುದಕ್ಕಾಗಿಯೂ ದೇವಲೋಕದ ಪಾಶವನ್ನು ತಂದುದರಿಂದ ಪಾಶಿ ಎಂಬ ಹೆಸರುಳ್ಳ ನಿನಗೆ ನಮಸ್ಕಾರ" ಎಂದು ಸ್ತುತಿಸಿದನು.

೨೧-೨೨. ಮೇಧಾವಿಯಾದ ಆ ರಾಜನು ಹೀಗೆ ಸ್ತೋತ್ರಮಾಡಲಾಗಿ ವರುಣದೇವನು ಮೂರುಯೋಜನ ವಿಸ್ತಾರವುಳ್ಳದ್ದೂ ಚಾತುರ್ವರ್ಣ್ಯದವರಿಂದ

ತ್ರಿಯೋಜನಾಯಾಮಯುತಾಂ ಚತುರ್ವರ್ಣಸಮನ್ವಿತಾಂ ।
ಸ್ವಯಂ ಚ ಗ್ರಾಮರಕ್ಷಾರ್ಥೇ ತತ್ರೋವಾಸ ಜಲಾಧಿಪಃ ॥ ೨೨ ॥

ಭೂಪಸ್ತು ತತ್ಪ್ರಸಾದೇನ ಪ್ರಾಪ ರಾಜ್ಞೀಂ ಶುಭಾನನಾಂ ।
ರಾವೀ ನಾಮ ಮಹಾಶ್ರೇಷ್ಠಾ ಜ್ಞೇಯಾ ದೇವಾಂಗನೋಪಮಾ ॥ ೨೩ ॥

ತಸ್ಯಾಂ ಸ ಜನಯಾಮಾಸ ಸುತಾನ್ ಷೋಡಶಸಂಮಿತಾನ್ ।
ಧಾರ್ತರಾಷ್ಟ್ರಾಂಶಜಾನ್ಮುಖ್ಯಾನ್ ಗಜತುಲ್ಯಬಲಾನ್ವಿತಾನ್ ॥ ೨೪ ॥

ತತ್ಪಶ್ಚಾತ್ಕನ್ಯಕಾ ಜಾತಾ ನಾಮ್ನಾ ಮದನಮಂಜರೀ ।
ದ್ವಾದಶಾಬ್ದವಯಃಪ್ರಾಪ್ತೇ ಸುತಾಯಾಃ ಸ ತು ಭೂಪತಿಃ ॥ ೨೫ ॥

ದೇವಸಿಂಹಂ ವರಂ ಮತ್ವಾ ಚಂದ್ರವಂಶಿನಮುತ್ತಮಂ ।
ಪ್ರಾಹೂಯ ಜ್ಯೇಷ್ಠತನಯಂ ಪ್ರೇಷಯಾಮಾಸ ಭೂಪತಿಃ ॥ ೨೬ ॥

---

ತುಂಬಿದುದೂ ಆಗಿ, ಲಾಹರಿ ಎಂಬ ಹೆಸರುಳ್ಳ ಶ್ರೇಷ್ಠವಾದ ನಗರವೊಂದನ್ನು ನಿರ್ಮಿಸಿ ಕೊಟ್ಟುದಲ್ಲದೆ ಆ ನಗರದ ರಕ್ಷಣೆಗಾಗಿ ಆ ವರುಣನೂ ಅಲ್ಲಿಯೇ ಇರ ತೊಡಗಿದನು.

೨೩. ಬಳಿಕ ವರುಣನ ಅನುಗ್ರಹದಿಂದ ರಾಜನು ಶುಭಮುಖಿಯೂ ದೇವತಾ ಸ್ತ್ರೀಸಮಾನಳೂ ಆದ ರಾವಿ ಎಂಬ ಹೆಸರುಳ್ಳ ನಾರೀರತ್ನವನ್ನು ಮದುವೆಯಾದನು.

೨೪. ಕೌರವಾಂಶಸಂಭೂತರಾಗಿ ಆನೆಗಳ ಬಲದಷ್ಟು ಶಕ್ತಿಯುಳ್ಳವರಾದ ರಣಧೀರ ಮುಂತಾದ ಹದಿನಾರುಮಂದಿ ಮಕ್ಕಳು ಆ ರಾವೀದೇವಿಯಲ್ಲಿ ಜನಿಸಿದರು.

೨೫. ಈ ಹದಿನಾರು ಗಂಡು ಮಕ್ಕಳಾದ ಮೇಲೆ ಒಂದು ಕನ್ಯಾರತ್ನವು ಜನಿಸಿತು. ಅದಕ್ಕೆ ಮದನಮಂಜರಿಯೆಂದು ಹೆಸರಿಟ್ಟರು ಆ ಕನ್ಯೆ ದಿನದಿನಕ್ಕೆ ವೃದ್ಧಿಹೊಂದುತ್ತಿದ್ದಳು.

೨೬. ತನ್ನ ಮಗಳಿಗೆ ಹನ್ನೆರಡು ವರ್ಷವಾಗುತ್ತಲೆ ರಾಜನು ಅವಳಿಗೆ ವಿವಾಹ ಮಾಡಲು ಮನಸ್ಸುಮಾಡಿದನು. ಚಂದ್ರವಂಶೀಯನಾದ ದೇವಸಿಂಹನು ಆಕೆಗೆ ಅನುರೂಪನಾದ ವರನಾಗಿರುವನೆಂದು ತಿಳಿಯಬಂದಿತು. ಆಗ ತನ್ನ ಹಿರಿಯ ಮಗನನ್ನು “ ದೇವಸಿಂಹನ ಬಳಿಗೆ ಹೋಗಿ ಬಾ ” ಎಂದು ಅಪ್ಪಣೆಮಾಡಿದನು.

ರಣಧೀರಸ್ತು ತನಯೋ ಲಕ್ಷಮುದ್ರಾನ್ವಿತೋ ಬಲೀ ।
ಸಹಸ್ರಶೂರಸಹಿತಃ ಪ್ರಾಪ್ತವಾನ್ ಸ ಮಹಾವತೀಂ ॥ ೨೭ ॥

ನತ್ವಾ ಪರಿಮಲಂ ಭೂಪಂ ತದೀಯಾನ್ಕುಲಶಾಲಿನಃ ।
ಸ್ವಹೇತುಂ ವರ್ಣಯಾಮಾಸ ವಿವಾಹಾರ್ಥೇ ಸ್ವಸುಃ ಸ್ವಯಂ ॥ ೨೮ ॥

ಶ್ರುತ್ವಾ ಪರಿಮಲೋ ಭೂಪೋ ದೇವಸಿಂಹಂ ಮಹಾಮತಿಂ ।
ಆಹೂಯ ವಚನಂ ಪ್ರಾಹ ವಿವಾಹಾರ್ಥೇ ಮನಃ ಕುರು ॥ ೨೯ ॥

ದೇವಸಿಂಹಸ್ತು ಬಲವಾನ್ ಪಿತೃವ್ಯಂ ಪ್ರಾಹ ನಮ್ರಧೀಃ ।
ವಿವಾಹಂ ನ ಕರಿಷ್ಯಾಮಿ ಬ್ರಹ್ಮಚರ್ಯಂ ವ್ರತಂ ಮಮ ॥ ೩೦ ॥

ಬಹುಧಾ ಪ್ರಾರ್ಥಿತ ಸ್ಸರ್ವೈರ್ದ್ವಿಜವೃಂದಸಮನ್ವಿತೈಃ ।
ನ ತತ್ಯಾಜ ವ್ರತಂ ಶ್ರೇಷ್ಠಂ ದೇವಸಿಂಹೋ ಮಹಾಮತಿಃ ॥ ೩೧ ॥

---

೨೭. ಬಲಶಾಲಿಯಾದ ರಣಧೀರಕುಮಾರನು ಸಾವಿರಜನ ಶೂರರಾದ ಸರದಾರರನ್ನೊಡಗೊಂಡು ಒಂದುಲಕ್ಷ ಸ್ವರ್ಣಮುದ್ರಿಕೆ ಸಮೇತನಾಗಿ ಹೊರಟು ದೇವಸಿಂಹನಿದ್ದ ಮಹಾವತೀ ನಗರಕ್ಕೆ ಹೋದನು.

೨೮. ಅಲ್ಲಿಗೆ ಹೋಗಿ ಕುಲಬಂಧುವಾದ ಪರಿಮಳರಾಜನನ್ನು ಕಂಡು ನಮಸ್ಕರಿಸಿ ಕುಶಲಪ್ರಶ್ನೆ ಮಾಡಿದನು. ಅನಂತರ ತನ್ನ ತಂಗಿಯ ವಿವಾಹಾರ್ಥವಾಗಿ ತಾನು ಬಂದಿರುವ ಕಾರಣವನ್ನು ವಿವರಿಸಿದನು.

೨೯. ಪರಿಮಳರಾಜನು ಈ ಮಾತನ್ನು ಕೇಳಿ ಮೇಧಾವಿಯಾದ ದೇವ ಸಿಂಹನನ್ನು ಕರೆದು "ಆ ಕನ್ಯೆಯನ್ನು ವಿವಾಹಮಾಡಿಕೊಳ್ಳಲು ಮನಸ್ಸುಮಾಡು" ಎಂದು ಹೇಳಿದನು.

೩೦. ಬಲಶಾಲಿಯೂ, ನಮ್ರಬುದ್ಧಿಯೂ ಆದ ದೇವಸಿಂಹನು ತನ್ನ ಚಿಕ್ಕಪ್ಪನಾದ ಪರಿಮಳರಾಜನನ್ನು ಕುರಿತು "ತಂದೆಯೇ! ನಾನು ವಿವಾಹಮಾಡಿ ಕೊಳ್ಳುವುದಿಲ್ಲ. ಬ್ರಹ್ಮಚರ್ಯ ವ್ರತದಲ್ಲಿಯೇ ಇದ್ದುಬಿಡುತ್ತೇನೆ" ಎಂದನು.

೩೧. ಆಗ ಅಲ್ಲಿದ್ದ ಬಹುಮಂದಿ ಬ್ರಾಹ್ಮಣರೂ ಮತ್ತು ಆಪ್ತವರ್ಗದವರೂ ಒಟ್ಟುಗೂಡಿ ದೇವಸಿಂಹನನ್ನು "ವಿವಾಹ ಮಾಡಿಕೊ" ಎಂದು ಬಹುವಾಗಿ ಪ್ರಾರ್ಥಿಸಿದರು. ಆದರೂ ಮಹಾಮೇಧಾವಿಯಾದ ದೇವಸಿಂಹನು ಆ ಶ್ರೇಷ್ಠ ವ್ರತಾನುಸರಣದ ವಿಚಾರದಲ್ಲಿ ತನ್ನ ಮನಸ್ಸನ್ನು ಬದಲಾಯಿಸಲಿಲ್ಲ.

**ತದಾ ಪರಿಮಲೋ ಭೂಪೋ ರಣಧೀರಂ ವಚೋಽಬ್ರವೀತ್ ।**
**ಸುಖಖಾನಿರಯಂ ಬಾಲೋ ವಿವಾಹಾರ್ಥೇ ವದಾಮ್ಯಹಂ ॥ ೩೨ ॥**

**ತಥೇತಿ ಮತ್ವಾ ಸ ನೃಪೋ ರಣಧೀರೋ ಗೃಹಂ ಯಯೌ ।**
**ಪಿತರಂ ಕಥಯಾಮಾಸ ಸುಖಖಾನಿರ್ಮಹಾವ್ರತಃ ॥ ೩೩ ॥**

**ಏತಸ್ಮಿನ್ನಂತರೇ ಧೂರ್ತೋ ಮಹೀಪತಿರುವಾಚ ತಂ ।**
**ಅಯೋಗ್ಯೋಽಯಂ ವಿವಾಹೋಽತ್ರ ಪಾವಕೀಯೇ ಕುಲೋತ್ತಮೇ॥೩೪॥**

**ಶೂದ್ರೀಯೋಽತ್ರ ವರೋ ರಾಜನ್ ವರ್ಣಸಂಕರಕಾರಕಃ ।**
**ತಸ್ಮಾತ್ತ್ವಂ ಸೈನ್ಯಸಹಿತೋ ಜೇತುಂ ತಾನ್ ಗಂತುಮರ್ಹಸಿ ॥ ೩೫ ॥**

**ಕಾರಾಗಾರೇ ಲೋಹಮಯೇ ಬಂಧನಂ ಕುರು ಭೂಪತೇ ।**
**ಮತ್ಕೀರ್ತಿಃ ಸ್ವರ್ಗಗಾ ನಿತ್ಯಂ ಜಗತ್ಯಂತೇ ಭವಿಷ್ಯತಿ ॥ ೩೬ ॥**

---

೩೨. ಆಗ ಪರಿಮಳರಾಜನು ಆ ರಣಧೀರಕುಮಾರನನ್ನು ಕುರಿತು, "ಬೇಕಾದರೆ ಬಾಲಕನಾದ ಈ ಸುಖಖಾನಿಯನ್ನೇ ವಿವಾಹವಾಗು (ಮಾಡಿಕೊಳ್ಳು) ವಂತೆ ಹೇಳುತ್ತೇನೆ" ಎಂದನು.

೩೩. ಆಗ ರಣಧೀರನು "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡು ತನ್ನ ಊರಿಗೆ ಬಂದನು. ಅಲ್ಲಿ ತನ್ನ ತಂದೆಯ ಸಂಗಡ "ಮಹಾನಿಯಮಿಷ್ಠನಾದ ಸುಖಖಾನಿಯನ್ನು ವರನನ್ನಾಗಿ ಗೊತ್ತುಮಾಡಿಕೊಂಡು ಬಂದಿರುವೆನು" ಎಂದು ಹೇಳಿದನು.

೩೪-೩೬. ಧೂರ್ತನಾದ ಮಹೀಪತಿರಾಜನು ಈ ಸಮಯಕ್ಕೆ ಅಲ್ಲಿಗೆ ಬಂದು ಆ ರಾಜನನ್ನು ಕುರಿತು, "ಪ್ರಭೂ ! ಪವಿತ್ರವಾದ ಅಗ್ನಿವಂಶದಲ್ಲಿ ಈರೀತಿ ವಿವಾಹ ನಡೆಯುವುದು ಯುಕ್ತವಲ್ಲ. ವರನು ಶೂದ್ರಜಾತಿಯವನು, ಪವಿತ್ರರಾದ ನೀವು ಅವನಿಗೆ ಕೊಟ್ಟು ವಿವಾಹಮಾಡಿದರೆ ವರ್ಣಸಾಂಕರ್ಯಕ್ಕೆ ಕಾರಣವಾಗುವುದು. ಆದುದರಿಂದ ನೀವು ಸೇನಾಸಮೇತರಾಗಿ ಹೋಗಿ ಅವರನ್ನು ಗೆದ್ದು ಆ ರಾಜನನ್ನು ಕೈಸೆರೆಹಿಡಿದು ಲೋಹನಿರ್ಮಿತವಾದ ಕಾರಾಗೃಹದಲ್ಲಿಡು. ಹೀಗೆಮಾಡಿದರೆ ನಮ್ಮ ಕೀರ್ತಿಯು ಸ್ವರ್ಗದವರೆಗೂ ವ್ಯಾಪಿಸುವುದಲ್ಲದೆ ಪ್ರಳಯಕಾಲದವರೆಗೂ ಚಿರಸ್ಥಾಯಿಯಾಗುವುದು. (ಹೇಗೆಂದರೆ) ಈ ಸುಖಖಾನಿ ಮೊದಲಾದವರು ಜಂಬುಕೇಶ್ವರ,

ಜಿತಸ್ತ್ವೈರ್ಜಂಬುಕೋ ರಾಜಾ ನೇತ್ರಸಿಂಹಸ್ತು ಯೋ ನೃಪಃ ।
ತಥಾ ಗಜಪತಿರ್ಭೂಪಃ ಪೃಥ್ವೀರಾಜೋ ಮಹಾಬಲಃ ॥ ೩೭ ॥

ಆರ್ಯಸಿಂಹಸ್ತಥಾನ್ಯೇ ಚ ಜಿತಾಸ್ತೇ ಬಲವತ್ತರಾಃ ।
ಇತಿ ಶ್ರುತ್ವಾ ವಚೋ ರಮ್ಯಂ ಲಹರೋ ನೃಪಸತ್ತಮಃ ॥ ೩೮ ॥

ಸೇನಾಂ ಸಂಸ್ಥಾಪಯಾಮಾಸ ಚತುರಂಗಬಲಾನ್ವಿತಾಂ ।
ಚತುರ್ಲಕ್ಷಮಿತಾಂ ಶ್ರೇಷ್ಠಾಂ ಪಾಲಿತಾಂ ಷೋಡಶಾತ್ಮಜೈಃ ॥ ೩೯ ॥

ಮಾಘಶುಕ್ಲದಶಮ್ಯಾಂ ಚ ಬಲಖಾನಿಂ ಮಹಾಬಲಃ ।
ಸಂಪ್ರಾಪ್ತಃ ಸ್ವಕುಲೈಸ್ಸಾರ್ಧಂ ಚತುರ್ಲಕ್ಷಬಲಾನ್ವಿತಃ ॥ ೪೦ ॥

ದೇಶೇ ಪಾಂಚಾಲಕೇ ರಮ್ಯೇ ಲಹರೀನಗರೇ ಸ್ಥಿತಃ ।
ದ್ವಾದಶಾಬ್ದೇ ಚ ಕೃಷ್ಣಾಂಶೇ ತತ್ರ ವಾಸಮಕಾರಯತ್ ॥ ೪೧ ॥

---

ನೇತ್ರಸಿಂಹ, ಗಜಪತಿ, ಮಹಾಪರಾಕ್ರಮಿಯಾದ ಪೃಥ್ವೀರಾಜ ಮುಂತಾದ ಮಹಾಮಹಿಮರನ್ನು ಗೆದ್ದಿರುವರು. ಅಲ್ಲದೆ ಆರ್ಯಸಿಂಹ ಮೊದಲಾದ ಅನೇಕ ಬಲಿಷ್ಠರು ಇವರಿಂದ ಜಯಿಸಲ್ಪಟ್ಟಿದಾರೆ, ಇಂಥವರನ್ನು ನೀನು ಜಯಿಸಿಬಿಟ್ಟರೆ ನಿನ್ನ ಕೀರ್ತಿಗೆ ಸಮಾನ ಉಂಟೇ!" ಎಂದು ಬೋಧಿಸಿದನು.

೩೯-೪೦. ತನ್ನ ಮನಸ್ಸಿಗೆ ಹಿತವಾಗುವಂತೆ ಹೇಳಿದ ಮಹೀಪತಿರಾಜನ ಈ ಮಾತನ್ನು ಕೇಳಿ ರಾಜಶ್ರೇಷ್ಠನಾದ ಲಹರನು ತನ್ನ ಹದಿನಾರುಜನ ಪುತ್ರರಿಂದಲೂ, ಸುಶಿಕ್ಷಿತವಾದ ನಾಲ್ಕುಲಕ್ಷ ಚತುರಂಗಬಲದಿಂದಲೂ ಯುಕ್ತನಾಗಿ ತನ್ನ ಬಂಧುಮಿತ್ರಾದಿಗಳನ್ನೊಡಗೊಂಡು ವಿಜಯಪ್ರಯಾಣ ಹೊರಟು ಮಾಘ ಶುದ್ಧ ದಶಮಿಯದಿನ ಮಹಾವೀರನಾದ ಬಲಖಾನಿಯ ರಾಜಧಾನಿಯನ್ನು ಸೇರಿದನು.

೪೧. ಕೃಷ್ಣಾಂಶನು ಹನ್ನೆರಡನೆಯ ವಯಸ್ಸಿನವನಾಗಿದ್ದಾಗ ರಮ್ಯವಾದ ಪಾಂಚಾಲದೇಶದ ಈ ಲಹರಿ ನಗರದಲ್ಲಿ ಕೆಲವುದಿನ ವಾಸಮಾಡುತ್ತಿದ್ದನು. ಆದ್ದರಿಂದ ಅಲ್ಲಿನ ವಿಚಾರ ತಿಳಿದಿದ್ದನು

ನೃಪತೇರಾಜ್ಞಯಾ ಶೂರಾಃ ಯುದ್ಧಾಯ ಸಮುಪಾಯಯುಃ ।
ಬಲಖಾನಿಸ್ತು ಧರ್ಮಾತ್ಮಾ ದೃಷ್ಟ್ವಾ ಶೂರಾಂಸ್ತಥಾಗತಾನ್ ।
ವೀರಾನಾಜ್ಞಾಪಯಾಮಾಸ ಸ್ವಕೀಯಾನ್ ಸಂಗರೇ ಪುನಃ ॥ ೪೨ ॥

ತಯೋರ್ಯುದ್ಧಮಭೂದ್ಘೋರಂ ಸೇನಯೋರ್ಲೋಮಹರ್ಷಣಂ ।
ಪಂಚಮೇಽಹ್ನಿ ದಿವಾ ಪ್ರಾಪ್ತೇ ಬಲಖಾನಿರ್ಮಹಾಬಲಃ ।
ಕೃಷ್ಣಾಂಶೇನೈವ ಸಹಿತೋ ರಿಪೋರ್ವಧಮಕಾರಯತ್ ॥ ೪೩ ॥

ಪರಾಜಿತಾಶ್ಚ ತೇ ಶೂರಾ ಹತಶೇಷಾ ಭಯಾತುರಾಃ ।
ತಾನ್ದೃಷ್ಟ್ವಾ ಷೋಡಶಸುತಾ ರಥಂ ಸ್ವಂಸ್ವಂ ಸಮಾಸ್ಥಿತಾಃ ।
ಯುದ್ಧಾಯಾಭಿಮುಖಂ ಜಗ್ಮುರ್ಧನುರ್ಬಾಣವಿಶಾರದಾಃ ॥ ೪೪ ॥

ಕೃಷ್ಣಾಂಶಸ್ತಾಂಸ್ತಥಾ ದೃಷ್ಟ್ವಾ ಶರವರ್ಷಸಮನ್ವಿತಾನ್ ।
ಏಕಾಕೀ ಪ್ರಯಯೌ ಶೀಘ್ರಂ ಖಡ್ಗಚರ್ಮಧರೋ ಬಲೀ ॥ ೪೫ ॥

---

೪೨. ಹೀಗೆ ಸೇನಾಸಮೇತನಾಗಿ ಬಂದು ಲಹರರಾಜನು ಸೈನಿಕರಿಗೆ ಆಜ್ಞೆ ಮಾಡಲು ಅವನ ಆಜ್ಞೆಯಂತೆ ಶೂರರು ಯುದ್ಧಮಾಡಲು ನುಗ್ಗಿದರು. ಧರ್ಮಾತ್ಮನಾದ ಬಲಖಾನಿಯು ಆ ಪ್ರಕಾರ ಬಂದ ಶೂರರನ್ನು ನೋಡಿ, ತನ್ನ ಕಡೆಯ ವೀರರಿಗೂ ಯುದ್ಧಮಾಡಲು ಅನುಜ್ಞೆಕೊಟ್ಟನು.

೪೩. ನಾಲ್ಕು ದಿನಗಳಕಾಲ ಆ ಎರಡು ಸೇನೆಗಳಿಗೂ ರೋಮಾಂಚವಾಗುವ ಮಟ್ಟಿಗೆ ಭಯಂಕರವಾದ ಯುದ್ಧ ನಡೆಯಿತು. ಐದನೆಯದಿನ ಮಧ್ಯಾಹ್ನ ಮಹಾಬಲನಾದ ಬಲಖಾನಿಯು ಕೃಷ್ಣಾಂಶನನ್ನು ಜತೆಮಾಡಿಕೊಂಡು ತಾನೇ ನುಗ್ಗಿ ಅನೇಕ ಶತ್ರುಗಳನ್ನು ವಧೆಮಾಡಿದನು.

೪೪. ಹೀಗೆ ಅನೇಕರು ಹತರಾಗಲು ಕಳೆದುಳಿದವರು ಸೋತು ಭೀತಿಯಿಂದ ಮುಂದುಗೆಟ್ಟು ನಿಂತರು. ಇವರನ್ನು ನೋಡಿ ಲಹರನ ಹದಿನಾರುಮಂದಿ ರಾಜಪುತ್ರರೂ ತಮ್ಮ ತಮ್ಮ ರಥಗಳನ್ನೇರಿ ಧನುರ್ಬಾಣಗಳನ್ನು ಧರಿಸಿ ನಿಪುಣತೆಯಿಂದ ಯುದ್ಧಕ್ಕೆ ನುಗ್ಗಿಬಂದರು.

೪೫. ಅವರು ಈರೀತಿ ಬಾಣವೃಷ್ಟಿಯನ್ನು ಕರೆಯುತ್ತಾ ಬಂದುದನ್ನು ನೋಡಿ ಕೃಷ್ಣಾಂಶನು ಕತ್ತಿ ಗುರಾಣಿ ಸಮೇತನಾಗಿ ತಾನೊಬ್ಬನೇ ಥಟ್ಟನೆ ನುಗ್ಗಿ ಅವರನ್ನು ಎದುರಿಸಿದನು.

ಶೇಷಾಂ ಧನೂಂಷಿ ಸಂಛಿದ್ಯ ಬದ್ಧ್ವಾ ತಾನ್ ಯುದ್ಧದುರ್ಮದಾನ್ ।
ಆಹ್ಲಾದಾಯ ದದೌ ವೀರಃ ಕೃಷ್ಣಾಂಶೋ ರಣಕೋವಿದಃ ॥ ೪೬ ॥

ಪುತ್ರಾಣಾಂ ಬಂಧನಂ ಶ್ರುತ್ವಾ ಲಹರೋ ನೃಪಸತ್ತಮಃ ।
ಪ್ಲಾವಯಾಮಾಸ ತತ್ಸೈನ್ಯಂ ಬಲಖಾನೇರ್ಮಹಾತ್ಮನಃ ॥ ೪೭ ॥

ಜಲೀಭೂತೇ ತಥಾ ಸೈನ್ಯೇ ಜಯಂತೋ ಬಲವತ್ತರಃ ।
ವಾಯವ್ಯಾಸ್ತ್ರೇಣ ಸಮರೇ ಶುಶೋಷ ಸಕಲಂ ಜಲಂ ।
ಲಹರಸ್ಯ ತತಃ ಸೇನಾಂ ಉವಾಹ ಬಹುಯೋಜನಂ ॥ ೪೮ ॥

ತದಾ ಚ ಭಗವಾನ್ದೇವೋ ವರುಣೋ ಯಾದಸಾಂ ಪತಿಃ ।
ಸುತಾಮುದ್ವಾಹಯಾಮಾಸ ಲಹರಸ್ಯ ಮಹೀಪತೇಃ ॥ ೪೯ ॥

---

೪೬. ಹೀಗೆ ಎದುರಿಸಿ ಸ್ವಲ್ಪ ಹೊತ್ತಿನಲ್ಲೇ ಅವರ ಧನುಸ್ಸುಗಳನ್ನೆಲ್ಲಾ ಖಂಡಿಸಿದ್ದಲ್ಲದೆ ಯುದ್ಧಮದದಿಂದ ಕೊಬ್ಬಿದ ಆ ಹದಿನಾರು ಮಂದಿಯನ್ನೂ ಹಿಡಿದು ಬಂಧಿಸಿದನು. ರಣಕುಶಲಿಯಾದ ಕೃಷ್ಣಾಂಶನು ಹೀಗೆ ಬಂಧಿಸಿದ ಆ ಹದಿನಾರು ಮಂದಿಯನ್ನೂ ತನ್ನ ಅಣ್ಣನಾದ ಆಹ್ಲಾದನ ವಶಕ್ಕೆ ಒಪ್ಪಿಸಿದನು.

೪೭. ನೃಪಶ್ರೇಷ್ಠನಾದ ಲಹರರಾಜನು ತನ್ನ ಮಕ್ಕಳು ಶತ್ರುವಿಗೆ ಕೈಸೆರೆ ಸಿಕ್ಕಿದ ಸಂಗತಿಯನ್ನು ಕೇಳಿ, ಕೂಡಲೆ ವರುಣಾಸ್ತ್ರವನ್ನು ಪ್ರಯೋಗಿಸಿ, ಮಹಾತ್ಮ ಬಲಖಾನಿಯ ಸೇನೆಯೆಲ್ಲವನ್ನೂ ನೀರಿನಲ್ಲಿ ತೇಲಾಡುವಂತೆ ಮಾಡಿದನು.

೪೮. ತಮ್ಮ ಕಡೆಯ ಸೇನೆಯೆಲ್ಲಾ ನೀರಿನ ಪಾಲಾದುದನ್ನು ನೋಡಿ ಬಲಶಾಲಿಯಾದ ಇಂದುಲನು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ, ಯುದ್ಧಭೂಮಿಯಲ್ಲಿದ್ದ ಜಲವನ್ನೆಲ್ಲಾ ಒಣಗುವಂತೆ ಮಾಡಿದುದಲ್ಲದೆ, ಲಹರರಾಜನ ಸೇನೆಯೆಲ್ಲವೂ ಬಹುಯೋಜನ ದೂರಕ್ಕೆ ತೂರಿಕೊಂಡು ಹೋಗಿ ಬೀಳುವಂತೆ ಮಾಡಿದನು.

೪೯. ಆ ಸಮಯದಲ್ಲಿ ಜಲಜಂತುಗಳ ಅಧಿಪತಿಯೂ ಪೂಜ್ಯನೂ ಆದ ವರುಣದೇವನು, ಲಹರರಾಜನ ಮಗಳನ್ನು ಸುಖಖಾನಿಗೆ ಕೊಟ್ಟು ಮದುವೆ ಮಾಡಿಸಿದನು.

ಲಹರೋಽಪಿ ಪ್ರಸನ್ನಾತ್ಮಾ ಜ್ಞಾತ್ವಾಂಶಂ ಜಗತೀತಲೇ ।
ಭಕ್ತಿಂ ಚಕಾರ ಶುದ್ಧಾನಾಮಂಶಾನಾಂ ಪರಯಾ ಮುದಾ ॥ ೫೦ ॥

ದತ್ವಾ ಚ ಬಹುಧಾ ದ್ರವ್ಯಂ ಪರಿಕ್ರಮ್ಯ ಪುನಃಪುನಃ ।
ಸ್ವಾಂತೇ ನಿವೇಶಯಾಮಾಸ ಮಾಸಮಾತ್ರಂ ಪ್ರಸನ್ನಧೀಃ ॥ ೫೧ ॥

ಅಂಶಾಸ್ತೇಽಪಿ ಮಹಾಪೂಜಾಂ ಗೃಹೀತ್ವಾ ಲಹರಪ್ರದಾಂ ।
ದೋಲಾಮಾರೋಪ್ಯ ತಾಂ ದೇವೀಂ ಸ್ವಗೇಹಾಯ ಯಯುರ್ಮುದಾ॥೫೨॥

ಇತಿ ತೇ ಕಥಿತಂ ವಿಪ್ರ ಕೃಷ್ಣಾಂಶಚರಿತಂ ಶುಭಂ ।
ಸುಖಖಾನೇರ್ವಿವಾಹಂ ಚ ಶ್ರುತ್ವಾನಂದಮವಾಪ್ನುಯಾತ್ ॥ ೫೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ವಿಂಶೋಽಧ್ಯಾಯಃ

---

೫೦. ಬಳಿಕ ಲಹರರಾಜನು ಪ್ರಸನ್ನವಾದ ಮನಸ್ಸಿನಿಂದ ಕೂಡಿ, ಇವರುಗಳು ಸಾಮಾನ್ಯರಲ್ಲ. ಭೂಮಂಡಲದಲ್ಲಿ ಜನಿಸಿದ ದೇವಾಂಶಪುರುಷರು ಎಂದು ತಿಳಿದು ಶುದ್ಧವಾದ ಅಂಶಗಳುಳ್ಳ ಕೃಷ್ಣಾಂಶ ಮುಂತಾದವರಲ್ಲಿ ಭಕ್ತಿಯುಕ್ತನಾದನು.

೫೧. ಅಲ್ಲದೆ ಅವರಿಗೆ ಸಮೃದ್ಧಿಯಾಗಿ ದ್ರವ್ಯವನ್ನು ಕೊಟ್ಟು ಪದೇ ಪದೇ ಅವರೊಡನೆ ಕಲೆಯುತ್ತಾ, ಪ್ರಸನ್ನಮನಸ್ಸಿನಿಂದ ಒಂದು ತಿಂಗಳವರೆಗೂ ತನ್ನ ಮನೆಯಲ್ಲೇ ಇರಿಸಿಕೊಂಡಿದ್ದನು.

೫೨ ದೇವಾಂಶಸಂಭೂತರಾದ ಕೃಷ್ಣಾಂಶ ಮೊದಲಾದವರು ಲಹರರಾಜನು ತಮಗೆ ಮಾಡಿದ ಅದ್ಭುತ ಸತ್ಕಾರವನ್ನು ಸ್ವೀಕರಿಸಿ, ಆ ರಾಜಪುತ್ರಿಯನ್ನು ಮೇನೆಯ ಮೇಲೆ ಕೂರಿಸಿಕೊಂಡು ಸಂತೋಷದಿಂದ ತಮ್ಮ ಮನೆಗೆ ಬಂದರು.

೫೩. ಅಯ್ಯಾ ವಿಪ್ರನೇ ! ಶುಭಕರವಾದ ಕೃಷ್ಣಾಂಶನ ಚರಿತ್ರವನ್ನೂ ಸುಖಖಾನಿಯ ವಿವಾಹವನ್ನೂ ಈ ಪ್ರಕಾರ ನಿನಗೆ ಹೇಳಿದುದಾಯಿತು. ಇದನ್ನು ಕೇಳಿದವನು ಆನಂದವನ್ನು ಹೊಂದುವನು ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯಖಂಡದಲ್ಲಿ
ಕಲಿಯುಗದ ಇತಿಹಾಸಸಮುಚ್ಚಯವೆಂಬ ಇಪ್ಪತ್ತನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಏಕವಿಂಶೋಽಧ್ಯಾಯಃ

॥ ಋಷಿರುವಾಚ ॥

ಗೃಹಂ ಗತ್ವಾ ಚ ತೇ ವೀರಾಃ ಕಿಂ ಚಕ್ರುಶ್ಚರಿತಂ ಶುಭಂ ।
ತತ್ವಂ ಕಥಯ ವಿಪ್ರೇಂದ್ರ ಸರ್ವಜ್ಞೋಽಸಿ ಮತೋ ಹಿ ನಃ ॥ ೧ ॥

॥ ಸೂತ ಉವಾಚ ॥

ಗೃಹಮಾಗತ್ಯ ತೇ ಸರ್ವೇ ಪರಿತೋ ಭೂಪತೇಃ ಸಭಾಂ ।
ಗತ್ವಾ ವಾರ್ತಾಂ ತಥಾ ಚಕ್ರುರ್ಯಥಾ ಜಾತೋ ಮಹಾರಣಃ ॥ ೨ ॥

ಶ್ರುತ್ವಾ ಪರಿಮಲೋ ಭೂಪೋ ವಾಜಿವೃಂದಂ ಕ್ಷಯಂ ಗತಂ ।
ಆಹೂಯ ಸ ಚ ಕೃಷ್ಣಾಂಶಂ ವಚನಂ ಪ್ರಾಹ ನಮ್ರಧೀಃ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧. ಋಷಿವರ್ಯನು ಹೇಳುತ್ತಾನೆ—“ ಅಯ್ಯಾ ಬ್ರಾಹ್ಮಣೋತ್ತಮನೇ! ಆ ವೀರರೆಲ್ಲಾ ಊರಿಗೆ ಬಂದಮೇಲೆ ಯಾವ ಶುಭಕಾರ್ಯ ಮಾಡಿದರು? ನೀನು ಸರ್ವಜ್ಞನಾದ್ದರಿಂದ ಇದರ ತತ್ತ್ವಾಂಶವನ್ನು ತಿಳಿಸು ” ಎಂದನು

೨. ಸೂತಮುನಿವರ್ಯನು ಹೇಳುತ್ತಾನೆ—ಅವರೆಲ್ಲರೂ ಊರಿಗೆ ಬಂದಮೇಲೆ ಸಭೆಯಲ್ಲಿ ರಾಜನ ಸುತ್ತಲೂ ಕುಳಿತು ಆ ದೊಡ್ಡ ಯುದ್ಧವು ನಡೆದ ಪ್ರಕಾರವನ್ನು ವಿಶದವಾಗಿ ವರ್ಣಿಸಿದರು.

೩-೪. ತನ್ನ ಸೈನ್ಯದ ಕುದುರೆಗಳೆಲ್ಲ ನಾಶವಾದುದನ್ನು ಕೇಳಿ ಪರಿಮಳ ರಾಜನು ಕೃಷ್ಣಾಂಶನನ್ನು ಕರೆದು ಪ್ರೀತಿ ಪೂರ್ವಕವಾಗಿ “ ಅಯ್ಯಾ ಬಲಶಾಲಿಯೇ!

ಸಿಂಧುದೇಶೇ ಚ ಗಂತವ್ಯಂ ತ್ವಯಾ ಚ ಬಲಶಾಲಿನಾ ।
ಪಂಚಲಕ್ಷಾನ್ ಹಯಾನ್ ಕೃತ್ವಾ ಪುನರಾಗಚ್ಛ ವೈ ಗೃಹಂ ॥ ೪ ॥

ಇತಿ ಶ್ರುತ್ವಾ ತು ಕೃಷ್ಣಾಂಶೋ ದೇವಸಿಂಹೇನ ಸಂಯುತಃ ।
ಸ್ವರ್ಣಭಾರಸಹಸ್ರೋಷ್ಟ್ರಾನ್ ಗೃಹೀತ್ವಾ ತರಸಾ ಯಯೌ ॥ ೫ ॥

ಶೂರೈಶ್ಚ ದಶಸಾಹಸ್ರೈಃ ಸಾರ್ಧಂ ತತ್ರ ಸಮಾಗತಃ ।
ಮಯೂರನಗರೀ ಯತ್ರ ಚತುರ್ವರ್ಣಸಮನ್ವಿತಾ ॥ ೬ ॥

ಪ್ರಾತಃಕಾಲೇ ತು ಸಂಪ್ರಾಪ್ತೇ ಮಾಲಾಕಾರಸ್ಯ ವೈ ಸುತಾ ।
ಪುಷ್ಪಾನಾಮ ಸಮಾಸನ್ನಾ ಚಾರಂಭೇ ಕುಸುಮಾರ್ಥಿನೀ ॥ ೭ ॥

ಕೃಷ್ಣಾಂಶಸ್ತು ತದಾ ಪೂಜಾಂ ಕೃತ್ವಾ ದೇವಮಯೋ ಮುದಾ ।
ಜಗಾಮ ವಿಪಿನಂ ರಮ್ಯಂ ವಸಂತೇ ಪುಷ್ಪನಾಲಿಕೇ ॥ ೮ ॥

---

ನೀನು ಸಿಂಧೂದೇಶಕ್ಕೆ ಹೋಗಿ ಶ್ರೇಷ್ಠವಾದ ಐದುಲಕ್ಷ ಕುದುರೆಗಳನ್ನು ತೆಗೆದು ಕೊಂಡು ಬರಬೇಕು. ಕುದುರೆ ಇಲ್ಲದೆ ಸೈನ್ಯಕ್ಕೆ ನಿರ್ವಾಹವಿಲ್ಲ" ಎಂದನು

೫. ಈ ಮಾತನ್ನು ಕೇಳಿ ಕೃಷ್ಣಾಂಶನು ದೇವಸಿಂಹನೊಡನೆ ಹೊರಟು ಸಾವಿರಾರು ಒಂಟೆಗಳ ಮೇಲೆ ಧನವನ್ನು ಹೇರಿಸಿಕೊಂಡು ಹತ್ತುಸಾವಿರ ಮಂದಿ ಶೂರರನ್ನೂ ಜತೆಯಲ್ಲಿ ಕರೆದುಕೊಂಡು ಪ್ರಯಾಣ ಮಾಡಿದನು.

೬. ತ್ವರೆಯಿಂದ ಪ್ರಯಾಣವನ್ನು ಸಾಗಿಸಿ, ಸಿಂಧೂದೇಶವನ್ನು ಸೇರಿ ಚಾತುರ್ವರ್ಣ್ಯದ ಜನರಿಂದ ನಿಬಿಡವಾದ ಮಯೂರನಗರವೆಂಬ ಮುಖ್ಯ ಪಟ್ಟಣವನ್ನು ಸೇರಿದನು.

೭. ಆ ಊರಿನಲ್ಲಿದ್ದ ಒಬ್ಬ ಹೂವಾಡಿಗನ ಮಗಳಾದ ಪುಷ್ಪಾ ಎಂಬುವಳು ಬೆಳಗಾಗುವ ಹೊತ್ತಿಗೆ ಆ ಗ್ರಾಮದ ಹೊರಗಿನ ತೋಟಕ್ಕೆ ಬಂದು ಹೂ ಕುಯ್ಯುವುದಕ್ಕೆ ಆರಂಭಿಸಿದಳು.

೮. ಕೃಷ್ಣಾಂಶನು ಆವೇಳೆಯಲ್ಲಿ ದೇವರನ್ನು ಧ್ಯಾನಿಸುತ್ತಾ ತಲ್ಲೀನವಾದ ಮನಸ್ಸುಳ್ಳವನಾಗಿ ವಸಂತಕಾಲದ ಪುಷ್ಪಪಂಜ್ತಿಯಿಂದ ಸುಂದರವಾದ ಆ ವನವನ್ನು ಸಂತೋಷದಿಂದ ಪ್ರವೇಶಿಸಿದನು.

ಬಹ್ವಾಶ್ಚರ್ಯಯುತಂ ಪುಷ್ಪಂ ಮತ್ತಭ್ರಮರನಾದಿತಂ ।
ದೃಷ್ಟ್ವಾ ಮುಮೋಹ ಕೃಷ್ಣಾಂಶಸ್ತದರ್ಥೇ ಸ್ವಯಮುದ್ಯತಃ ॥ ೯ ॥

ಏತಸ್ಮಿನ್ನಂತರೇ ಪುಷ್ಪಾ ಪುಷ್ಪಾರ್ಥೇ ಸಮುಪಾಗತಾ ।
ದದರ್ಶ ದೇವಸದೃಶಂ ಷೋಡಶಾಬ್ದಮಯಂ ನರಂ ।
ಪ್ರಸನ್ನವದನಂ ಶಾಂತಮಿಂದ್ರನೀಲಮಣಿದ್ಯುತಿಂ ॥ ೧೦ ॥

ಕೃಷ್ಣಾಂಶಸ್ತು ಶುಭಾಂ ನಾರೀಂ ದೃಷ್ಟ್ವಾಶ್ಚರ್ಯಮುಪಾಗತಃ ।
ಪಪ್ರಚ್ಛ ವಚಸಾ ತಾಂ ವೈ ಕಸ್ಯೇಯಂ ಸುರಸುಂದರೀ ।
ಸ್ವರ್ಗಲೋಕಾದಿಹಾಯಾತಾ ಯದಿ ವಾ ಪನ್ನಗೀ ಸ್ವಯಂ ॥ ೧೧ ॥

ಇತಿ ಶ್ರುತ್ವಾ ಚ ಸಾ ಪ್ರಾಹ ಮಾಲಾಕಾರಸ್ಯ ವೈ ಸುತಾ ।
ಅಹಂ ಶೂದ್ರೀ ಮಹಾಬಾಹೋ ಪುಷ್ಪಾರ್ಥೇ ಸಮುಪಾಗತಾ ॥ ೧೨ ॥

---

೯. ಅಲ್ಲಿ ಮಸಿದಿದ ಭ್ರಮರಗಳಿಂದ ಶಬ್ದಾಯಮಾನವಾಗಿ ಬಹು ಆಶ್ಚರ್ಯಕರವಾದ ಒಂದು ಹೂವನ್ನು ನೋಡಿ ಅದರಲ್ಲಿ ಮೋಹಗೊಂಡು ಅದನ್ನು ಕೊಯ್ದುಕೊಳ್ಳಲು ತಾನೇ ಪ್ರಯತ್ನಿಸುತ್ತಿದ್ದನು.

೧೦. ಇಷ್ಟರೊಳಗೆ ಹೂವಾಡಿಗನ ಪುತ್ರಿಯಾದ ಪುಷ್ಪೆಯು ಆ ಹೂವನ್ನು ಕುಯ್ಯುವುದಕ್ಕಾಗಿ ಅಲ್ಲಿಗೆ ಬಂದಳು. ಹಾಗೆ ಬಂದ ಅವಳು ದೇವತಾಸದೃಶನೂ ಇಂದ್ರನೀಲದಂತೆ ಕಾಂತಿಯುಕ್ತನೂ, ಶಾಂತನೂ, ಹಸನ್ಮುಖಿಯೂ, ಹದಿನಾರು ವರ್ಷದ ಪ್ರಾಯದಿಂದ ಕೂಡಿದವನೂ ಆದ ಈ ಕೃಷ್ಣಾಂಶನನ್ನು ಕಂಡಳು.

೧೧. ಆ ಕೃಷ್ಣಾಂಶನು ಮಂಗಳಾಂಗಿಯಾದ ಆ ಸ್ತ್ರೀಯನ್ನು ನೋಡಿ ಆಶ್ಚರ್ಯಯುಕ್ತನಾಗಿ ಮೃದುನುಡಿಯಿಂದ "ಎಲೌ! ಸುಂದರಿಯಾದ ನೀನು ಯಾರ ಮಗಳು? ಸಾಮಾನ್ಯ ಮಾನವಿಯೋ? ಅಥವಾ ಸ್ವರ್ಗದಿಂದ ಇಳಿದು ಬಂದ ದೇವಕನ್ಯೆಯೋ? ಪಾತಾಳದಿಂದ ಭೂಮಿಗೆ ಬಂದ ನಾಗಕನ್ಯೆಯೋ? ನಿಜವಾಗಿ ಹೇಳು" ಎಂದು ಕೇಳಿದನು.

೧೨. ಈ ಮಾತನ್ನು ಕೇಳಿ ಆಕೆಯು "ಅಯ್ಯಾ ಮಹಾಬಾಹುವೇ! ನಾನು ಈ ನಗರದ ಹೂವಾಡಿಗನ ಪುತ್ರಿ; ಜಾತಿಯಲ್ಲಿ ಶೂದ್ರಸ್ತ್ರೀ; ಹೂ ಕುಯ್ಯುವುದಕ್ಕಾಗಿ ಬಂದಿದ್ದೇನೆ.

ಪುಷ್ಪೇಣಾನೇನ ಭೂಪಾಲ ತುಲಿತಾ ಭೂಪತೇಃ ಸುತಾ ।
ನಾಮ್ನಾ ಪುಷ್ಪವತೀ ದೇವೀ ರಾಧೇವ ಸಗುಣಾವಲೀ ॥ ೧೩ ॥

ದೇವೈಶ್ಚ ಪ್ರಾರ್ಥಿತಾ ಬಾಲಾ ರೂಪಯೌವನಶಾಲಿನೀ ।
ಮಕರಂದಭಯಾದ್ದೇವಾಸ್ತಸ್ಯಾ ಯೋಗ್ಯಾ ನ ವೈ ಬಲಾತ್ ॥ ೧೪ ॥

ಶೃಣು ತತ್ಕಾರಣಂ ಭೂಪ ಮಕರಂದೋ ಯಥಾ ಭವೇತ್ ।
ಮಯೂರಧ್ವಜಭೂಪೇನ-ಸಂಪ್ರಾಪ್ತೋ ಗುಹತೋ ವರಃ ॥ ೧೫ ॥

ಅಜೇಯೋಽನ್ಯೈಶ್ಚ ಕೃಷ್ಣಾಂಶಾದೃತೇ ತ್ವಂ ಜಗತೀತಲೇ ।
ತನ್ಮಿತ್ರಂ ಪೃಥಿವೀರಾಜೋ ರಾಜರಾಜಃ ಶಿವಪ್ರಿಯಃ ॥ ೧೬ ॥

ಸ ರಾಜಾ ಕಾರಯಾಮಾಸ ಧರ್ಮಮೇಧಂ ಹರಿಪ್ರಿಯಂ ।
ತದಾ ಪ್ರಸನ್ನೋ ಭಗವಾನ್ ಯಜ್ಞೇಶೋ ಯಜ್ಞಮೂರ್ತಿಮಾನ್ ॥೧೭॥

---

೧೩. "ಈ ಹೂವಿನಂತೆ ಮೃದುಶರೀರವುಳ್ಳವಳೂ, ರಾಧೆಯಂತೆ ಬಹು ಸುಗುಣಯುಕ್ತೆಯೂ, ರೂಪವತಿಯೂ, ಯೌವನಶಾಲಿನಿಯೂ ಆದ ನಮ್ಮ ರಾಜ ಪುತ್ರಿಯೊಬ್ಬಳಿರುವಳು. ಅವಳ ಹೆಸರು ಪುಷ್ಪವತಿ."

೧೪. "ಆಕೆಯನ್ನು ದೇವತೆಗಳು ಸಹ ಆಸೆಪಟ್ಟು ಯಾಚಿಸುತ್ತಿರುವರು. ಇವಳ ಸಹೋದರನಾದ ಮಕರಂದನ ಶಕ್ತಿಗೆ ಹೆದರುತ್ತಿರುವುದರಿಂದ ದೇವತೆಗಳು ಸಹ ಅವಳನ್ನು ವರಿಸಲು ಸಮರ್ಥರಾಗಲಿಲ್ಲ."

೧೫. "ಅಯ್ಯಾ ರಾಜನೇ! ಮಕರಂದನು ಅಷ್ಟು ಶಕ್ತನೆನಿಸುವುದಕ್ಕೆ ಕಾರಣ ವನ್ನು ತಿಳಿಸುವೆನು ಕೇಳು. ತಂದೆಯಾದ ಮಯೂರಧ್ವಜರಾಜನು "ನೀನು ಕಷ್ಣಾಂಶನೊಬ್ಬನಿಂದ ಹೊರತು ಭೂಮಂಡಲದಲ್ಲಿ ಇತರರ್ಯಾರಿಂದಲೂ ಜಯಿಸಲ್ಪ ಅಸಾಧ್ಯನಾಗು" ಎಂಬದಾಗಿ ಷಣ್ಮುಖನಿಂದ ವರಪಡೆದನು."

೧೬. "ರಾಜಾಧಿರಾಜನೂ ಶಿವನಿಗೆ ಅತ್ಯಂತ ಪ್ರಿಯನೂ, ಅವನಿಂದ ವರಪಡೆದ ವನೂ ಆದ ಪೃಥ್ವೀರಾಜನು ಅವನಿಗೆ ಆಪ್ತ ಸ್ನೇಹಿತನಾಗಿರುವನು. ಆ ಮಯೂರ ಧ್ವಜರಾಜನು ಮಹಾವಿಷ್ಣು ಪ್ರೀತ್ಯರ್ಥವಾಗಿ ಒಂದು ಯಜ್ಞವನ್ನು ಮಾಡಿಸಿದನು."

೧೭-೧೮. "ಆಗ ಭಗವಂತನೂ ಯಜ್ಞಾಧಿಪನೂ ಯಜ್ಞಸ್ವರೂಪನೂ ಆದ ಅಗ್ನಿದೇವನು ಪ್ರಸನ್ನನಾಗಿ ಸುಂದರರೂಪವುಳ್ಳ ಒಂದು ಪುರುಷ ಶಿಶು, ಒಂದು ಸ್ತ್ರೀ

ಮಿಥುನಂ ಜನಯಾಮಾಸ ಪಾವಕಾತ್ಸುಂದರಾನನಂ ।
ಮಕರಂದಃ ಸುತೋ ಜ್ಞೇಯಃ ಕನ್ಯಾ ಪುಷ್ಪವತೀ ಮತಾ ॥ ೧೮ ॥

ಪಂಚಮಾಬ್ದವಯಾ ಭೂತ್ವಾ ಮಕರಂದೋ ಮಹಾಬಲಃ ।
ತುಷ್ಟಾವ ತಪಸಾ ಧರ್ಮಂ ವೇದಧರ್ಮಪರಾಯಣಃ ॥ ೧೯ ॥

ದ್ವಾದಶಾಬ್ದವಯಃ ಪ್ರಾಪ್ತೇ ಮಕರಂದೇ ನೃಪಪ್ರಿಯೇ ।
ಪ್ರಸನ್ನೋ ಭಗವಾನ್ಧರ್ಮೋ ದದೌ ತಸ್ಮೈ ಮಹಾಹಯಂ ॥ ೨೦ ॥

ಶಿಲಾಮಯಂ ಮಹಾವೇಗಂ ಶತ್ರುಸೇನಾಕ್ಷಯಂಕರಂ ।
ತಮಶ್ವಂ ಸ್ವಯಮಾರುಹ್ಯ ಸರ್ವಪೂಜ್ಯೋ ಹ್ಯಭೂತ್ಸುಖೀ ॥ ೨೧ ॥

ತಸ್ಯೇಯಂ ಸುಂದರಂ ದಿವ್ಯಂ ವಿಪಿನಂ ಸುರಪೂಜಿತಂ ।
ಭವಾನರ್ಹತಿ ವೈ ಶ್ರೇಷ್ಠಃ ಪುಷ್ಪವತ್ಯಾಃ ಕಲೇವರಮ್ ॥ ೨೨ ॥

---

ಶಿಶು, ಎರಡನ್ನೂ ಅಗ್ನಿಕುಂಡದಿಂದ ಉದ್ಭವವಾಗುವಂತೆ ಮಾಡಿದನು. ಆ ಗಂಡು ಮಗುವೇ ಮಕರಂದನು, ಆ ಹೆಣ್ಣುಮಗುವೇ ಪುಷ್ಪವತಿ, ಎಂದು ತಿಳಿ."

೧೯. "ಮಹಾಬಲಶಾಲಿಯಾದ ಮಕರಂದನು ಐದು ವರ್ಷದವನಾದನು. ಅಷ್ಟು ವಯಸ್ಸಿನಲ್ಲೇ ಅವನು ತನ್ನ ಪೂರ್ವಾರ್ಜಿತ ತಪಃಪ್ರಭಾವದಿಂದ ವೇದಧರ್ಮ ಪರಾಯಣನಾಗಿ ಧರ್ಮಪುರುಷನನ್ನು ತುಷ್ಟಿಪಡಿಸಿದನು."

೨೦. "ರಾಜನಿಗೆ ಅತಿ ಪ್ರಿಯನಾದ ಮಕರಂದಕುಮಾರನಿಗೆ ಹನ್ನೆರಡುವರ್ಷ ತುಬುತ್ತಲೆ ಧರ್ಮಪುರುಷನು ಅವನಲ್ಲಿ ಪ್ರಸನ್ನಹೃದಯನಾಗಿ ಶ್ರೇಷ್ಠವಾದ ಒಂದು ಮಹಾಶ್ವವನ್ನು ಕೃಪೆಮಾಡಿ ಕೊಟ್ಟನು."

೨೧. "ಆ ಕುದುರೆಯು ಕಲ್ಲಿನಂತೆ ಗಟ್ಟಿಯಾದ ದೇಹವುಳ್ಳದ್ದೂ, ಬಹು ವೇಗ ಶಾಲಿಯೂ, ಶತ್ರುಸೇನೆಯನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡತಕ್ಕದ್ದೂ, ಆದುದರಿಂದ ಇಂಥ ಮಹಿಮೆಯುಳ್ಳ ಆ ಕುದುರೆಯನ್ನು ತಾನು ಏರಿಕೊಂಡು ಕಾರ್ಯ ನಡೆಸುವುದರಿಂದ ಆ ಬಾಲಕನೂ ಅಜೇಯನೂ, ಸರ್ವರಿಂದಲೂ ಪೂಜಾರ್ಹನೂ, ಸುಖಿಯೂ ಆಗಿರುವನು."

೨೨. "ರಮ್ಯವೂ ದೇವಪೂಜಿತವೂ ಆದ ಈ ಉದ್ಯಾನವು ಆ ಮಕರಂದನದು. ಪುಷ್ಪವತಿಯ ಸುಂದರವಾದ ರೂಪಿಗೆ ನೀನೇ ಅನುರೂಪನೂ ಶ್ರೇಷ್ಠನೂ ಆದ ವರನಾಗಿದ್ದೀ" ಎಂದು ಹೇಳಿದಳು.

ಇತಿ ಶ್ರುತ್ವಾ ತು ವಚನಂ ಕೃಷ್ಣಾಂಶಃ ಸ್ಮರಪೀಡಿತಃ ।
ದದೌ ಬಹುಧನಂ ತಸ್ಯೈ ಮಾಲಿನ್ಯಾ ಗೇಹಮಾಗತಃ ॥ ೨೩ ॥

ದೇವಸಿಂಹಸ್ತ್ರಿಕಾಲಜ್ಞೋ ಜ್ಞಾತ್ವಾ ಮೋಹತ್ವಮಾಗತಂ ।
ಕೃಷ್ಣಾಂಶಂ ಬೋಧಯಾಮಾಸ ಪದ್ಯೈಃ ಸಾಂಖ್ಯಸಮುದ್ಭವೈಃ ॥ ೨೪ ॥

ಕೃಷ್ಣಾಂಶಸ್ತು ತತಸ್ತಾರ್ಥಂ ದೇವಸಿಂಹೇನ ತನ್ಮಯಃ ।
ಸಿಂಧುದೇಶಂ ಸಮಾಗತ್ಯ ಕ್ರೀತ್ವಾ ಸರ್ವಹಯಾಂಸ್ತದಾ ॥ ೨೫ ॥

ಮಾಸಾಂತೇ ಗೃಹಮಾಗತ್ಯ ರಾಜ್ಞೇ ಸರ್ವಾನ್ ನ್ಯವೇದಯತ್ ।
ಪುಷ್ಪವತ್ಯಾಃ ಶುಭಂ ರೂಪಂ ಧ್ಯಾತ್ವಾ ಪುಷ್ಪೇರಿತಂ ಬಲೀ ।
ಕೃಷ್ಣಾಂಶೋ ಮೋಹಮಾಗತ್ಯ ತುಷ್ಟಾವ ಜಗದಂಬಿಕಾಂ ॥ ೨೬ ॥

---

೨೩. ಕೃಷ್ಣಾಂಶನು ಈ ಮಾತನ್ನು ಕೇಳಿ ಪುಷ್ಪವತಿಯಲ್ಲಿ ಮನಸ್ಸು ನಾಟಿ, ಕಾಮಬಾಣದಿಂದ ಪೀಡಿತನಾಗಿ ಆ ಮಾಲಾಕಾರನ ಪುತ್ರಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟು ಅವಳ ಮನೆಗೆ ತಾನು ಗುಟ್ಟಾಗಿ ಹೋದನು.

೨೪. ತ್ರಿಕಾಲಜ್ಞನಾದ ದೇವಸಿಂಹನು ಕೃಷ್ಣಾಂಶನು ಮೋಹಪರವಶನಾದ ಸ್ಥಿತಿಯನ್ನು ತಿಳಿದು, ಸಾಂಖ್ಯತತ್ವದಿಂದ ಯುಕ್ತವಾಗಿ ಪದ್ಯರೂಪವಾಗಿರುವ ಸ್ತೋತ್ರಗಳಿಂದ ಅವನನ್ನು ಎಚ್ಚರಿಸಿ, ಜ್ಞಾನೋಪದೇಶ ಮಾಡಿದನು.

೨೫. ಬಳಿಕ ಕೃಷ್ಣಾಂಶನು ಎಚ್ಚತ್ತು ಪುಷ್ಪವತಿಯಲ್ಲಿ ನೆಟ್ಟ ಮನಸುಳ್ಳವನಾಗಿದ್ದರೂ ತಾನು ಉದ್ದೇಶಮಾಡಿ ಬಂದ ಕಾರ್ಯವನ್ನು ನೆನೆದು, ದೇವಸಿಂಹನೊಡನೆ ಸಿಂಧೂದೇಶಕ್ಕೆ ಹೋಗಿ, ತನಗೆ ಬೇಕಾದಷ್ಟು ಕುದುರೆಗಳನ್ನು ಕೊಂಡುಕೊಂಡು, ಒಂದು ತಿಂಗಳು ಆಗುವ ಹೊತ್ತಿಗೆ ತಮ್ಮ ಊರಿಗೆ ಬಂದು ಪರಿಮಳ ರಾಜನಿಗೆ ಎಲ್ಲಾ ವೃತ್ತಾಂತವನ್ನೂ ತಿಳಿಸಿದನು.

೨೬. ಬಳಿಕ ಬಲಶಾಲಿಯಾದ ಕೃಷ್ಣಾಂಶನು ಹೂವಾಡಿಗನ ಮಗಳು ಹೇಳಿದ ಮಯೂರಧ್ವಜ ಕುಮಾರಿ ಪುಷ್ಪವತಿಯ ಸುಂದರವಾದ ರೂಪನ್ನು ನೆನೆದುಕೊಂಡು ಅವಳಲ್ಲಿ ಮೋಹಯುಕ್ತನಾಗಿ ಅವಳನ್ನು ಪಡೆಯಲು ಜಗಜ್ಜನನಿಯಾದ ದುರ್ಗಾದೇವಿಯನ್ನು ಸ್ತೋತ್ರಮಾಡಿದನು.

॥ ಕೃಷ್ಣಾಂಶ ಉವಾಚ ॥

ದೇವಮಾಯೇ ಮಹಾಮಾಯೇ ನಿತ್ಯಶುದ್ಧಸ್ವರೂಪಿಣೀ ।
ಪಾಹಿ ಮಾಂ ಕಾಮದೇವಾರ್ತಂ ಪುಷ್ಪವತ್ಯೈ ಪ್ರಬೋಧಯ ॥ ೨೭ ॥

ಮಧುಕೈಟಭಸಂಮೋಹೇ ಮಹಿಷಾಸುರಘಾತಿನಿ ।
ಪಾಹಿ ಮಾಂ ಕಾಮದೇವಾರ್ತಂ ಪುಷ್ಪವತ್ಯೈ ಪ್ರಬೋಧಯ ॥ ೨೮ ॥

ಧೂಮ್ರಲೋಚನಸಂದಾಹೇ ಚಂಡಮುಂಡವಿನಾಶಿನಿ ।
ಪಾಹಿ ಮಾಂ ಕಾಮದೇವಾರ್ತಂ ಪುಷ್ಪವತ್ಯೈ ಪ್ರಬೋಧಯ ॥ ೨೯ ॥

ರಕ್ತಬೀಜಾಸೃಕ್ಪೀತೇ ಸರ್ವದೈತ್ಯಭಯಂಕರೇ ।
ಪಾಹಿ ಮಾಂ ಕಾಮದೇವಾರ್ತಂ ಪುಷ್ಪವತ್ಯೈ ಪ್ರಬೋಧಯ ॥ ೩೦ ॥

---

೨೭. ಕೃಷ್ಣಾಂಶನು ಪ್ರಾರ್ಥಿಸಿದ ರೀತಿಯಿದು :—ದೇವಮಾಯೆಯ ಸ್ವರೂಪಳೂ, ಮಹಾಮಾಯೆಗೆ ಅಧಿಷ್ಠಾನಳೂ, ನಿತ್ಯವೂ ಪರಿಶುದ್ಧವಾದ ಆಕಾರವುಳ್ಳವಳೂ ಆದ ದೇವಿಯೇ ! ಮನ್ಮಥನಿಂದ ಪೀಡಿತನಾದ ನನ್ನನ್ನು ರಕ್ಷಿಸು. ಪುಷ್ಪವತಿಗೆ ನನ್ನ ಮೇಲೆ ಅನುರಾಗವುಂಟಾಗುವಂತೆ ಮಾಡು.

೨೮. ಮಧುಕೈಟಭರೆಂಬ ರಾಕ್ಷಸರನ್ನು ಮೂರ್ಛೆಗೊಳಿಸಿದವಳೂ ಮಹಿಷಾಸುರನನ್ನು ಧ್ವಂಸಮಾಡಿದವಳೂ ಆದ ದೇವಿಯೇ ! ಕಾಮಪೀಡಿತನಾದ ನನ್ನನ್ನು ರಕ್ಷಿಸು. ಪುಷ್ಪವತಿಗೆ ನನ್ನಲ್ಲಿ ಮನಸ್ಸುಂಟಾಗುವಂತೆ ಮಾಡು.

೨೯. ಧೂಮ್ರಲೋಚನನೆಂಬ ರಾಕ್ಷಸನನ್ನು ದಹಿಸಿದವಳೂ ಚಂಡಮುಂಡರೆಂಬ ರಾಕ್ಷಸರನ್ನು ನಾಶಮಾಡಿದವಳೂ ಆದ ದೇವಿಯೇ ! ಕಾಮಪೀಡಿತನಾದ ನನ್ನನ್ನು ರಕ್ಷಿಸು. ಪುಷ್ಪವತಿಯ ಮನಸ್ಸು ನನ್ನಲ್ಲಿ ಅನುರಕ್ತವಾಗುವಂತೆ ಎಚ್ಚರಿಸು.

೩೦. ದೇವಿಯೇ ! ನೀನು ರಕ್ತಬೀಜಾಸುರನ ರಕ್ತ ಪಾನಮಾಡಿದವಳೂ, ರಾಕ್ಷಸರಿಗೆಲ್ಲಾ ಭಯಕಾರಿಣಿಯೂ, ಆಗಿರುವೆ. ಅಂಬಾ ! ಕಾಮಪರವಶನಾದ ನನ್ನನ್ನು ರಕ್ಷಿಸು. ಪುಷ್ಪವತಿಯು ನನ್ನಲ್ಲಿ ಅನುರಕ್ತೆಯಾಗುವಂತೆ ಪ್ರೇರಿಸು.

ನಿಶುಂಭದೈತ್ಯಸಂಹಾರೇ ಶುಂಭದೈತ್ಯವಿನಾಶಿನಿ ।
ಪಾಹಿ ಮಾಂ ಕಾಮದೇವಾರ್ತಂ ಪುಷ್ಪವತ್ಯೈ ಪ್ರಬೋಧಯ ॥ ೩೧ ॥

ಇತಿ ಸ್ತುತ್ವಾ ಚ ಸುಷ್ವಾಪ ಸ ವೀರಃ ಪರಮಾಸನೇ ।
ತದಾ ತು ಶಾರದಾ ದೇವೀ ತಸ್ಯಾಃ ಸ್ವಪ್ನ ಪ್ರದರ್ಶನಂ ॥ ೩೨ ॥

ಚಕಾರ ಪ್ರತ್ಯಹಂ ದೇವೀ ವರದಾಽಭಯಕಾರಿಣೀ ।
ಏವಂ ಗತೇ ಚತುರ್ಮಾಸೇ ಜಲವೃಷ್ಟಿಕರೇ ಮುನೇ ।
ತ್ರಿವಿಂಶಾಬ್ದವಯಶ್ಚಾಸೀತ್ ಕೃಷ್ಣಾಂಶಸ್ಯ ಯಶಸ್ಕರಂ ॥ ೩೩ ॥

ಕಾರ್ತಿಕೇ ಕೃಷ್ಣಪಕ್ಷೇ ತು ಗತೋಽಸೌ ದೇವಸಂಯುತಃ ।
ಮಯೂರನಗರೇ ರಮ್ಯೇ ಮಕರಂದೇನ ರಕ್ಷಿತೇ ॥ ೩೪ ॥

ಪುಷ್ಪಾಗೃಹಮುಪಾಗಮ್ಯ ತತ್ರ ವಾಸಮಚೀಕರತ್ ॥ ೩೫ ॥

---

೩೧. "ನಿಶುಂಭ ರಾಕ್ಷಸನನ್ನು ಸಂಹರಿಸಿ, ಶುಂಭ ದೈತ್ಯನನ್ನು ನಾಶಮಾಡಿದ ದುರ್ಗಿಯೇ! ಕಾಮಪೀಡಿತನಾದ-ನನ್ನನ್ನು ಸಲಹು. ಪುಷ್ಪವತಿಗೆ ನನ್ನಲ್ಲಿ ಅನುರಾಗ ಹುಟ್ಟುವಂತೆಮಾಡು" ಎಂದು ಸ್ತುತಿಸಿದನು.

೩೨. ವೀರನಾದ ಕೃಷ್ಣಾಂಶನು ಈರೀತಿ ದೇವಿಯನ್ನು ಸ್ತುತಿಮಾಡಿ ದೇವಿಯ ಸನ್ನಿಧಿಯಲ್ಲಿ ಪವಿತ್ರವಾದ ಒಂದು ಶಯ್ಯೆಯಲ್ಲಿ ಮಲಗಿಕೊಂಡನು. ವರ ಕೊಡುವವಳೂ, ಅಭಯವನ್ನು ಕರುಣಿಸುವಳೂ ಆದ ಶಾರದಾದೇವಿಯು ಪ್ರತಿನಿತ್ಯವೂ ಪುಷ್ಪವತಿಯ ಸ್ವಪ್ನದಲ್ಲಿ ಕೃಷ್ಣಾಂಶನು ಬಂದು ಕಾಣಿಸಿಕೊಳ್ಳುವಂತೆ ಮಾಡುತ್ತಿದ್ದಳು.

೩೩. ಎಲೌ ಶೌನಕ ಮಹರ್ಷಿಯೇ! ಕೇಳು; ಹೀಗೆ ಮಳೆಗಾಲದ ನಾಲ್ಕು ತಿಂಗಳು ಕಳೆಯಲು ಕಷ್ಣಾಂಶನಿಗೆ ಕೀರ್ತಿಪ್ರದವಾದ ಇಪ್ಪತ್ತಮೂರನೇ ವಯಸ್ಸು ಪ್ರಾಪ್ತಿಯಾಯಿತು.

೩೪. ಕಾರ್ತಿಕಮಾಸದ ಕೃಷ್ಣಪಕ್ಷದಲ್ಲಿ ಒಂದುದಿನ ಈ ಕೃಷ್ಣಾಂಶನು ದೇವಸಿಂಹನೊಡನೆ ಹೊರಟನು.

೩೫. ಮಕರಂದನಿಂದ ರಕ್ಷಿತವೂ ರಮ್ಯವೂ ಆದ ಮಯೂರನಗರಕ್ಕೆ ಅವರಿಬ್ಬರೂ ಹೋದರು. ಬಳಿಕ ಹಿಂದೆ ಪರಿಚಯವಾಗಿದ್ದ ಅಲ್ಲಿಯ ಹುವಾಡಿಗನ ಮಗಳಾದ ಪುಷ್ಪಳ ಮನೆಗೆ ಹೋಗಿ, ಇಳಿದುಕೊಂಡರು.

ಏಕದಾ ಸುಂದರ ಹಾರಂ ಕೃಷ್ಣಾಂಶೇನೈವ ಗುಂಠಿತಂ ।
ಮಣಿಮುಕ್ತಾಯುತಂ ರಮ್ಯಂ ನಾನಾಪುಷ್ಪಸಮನ್ವಿತಂ ।
ಗೃಹೀತ್ವಾ ಪ್ರಯಯೌ ಪುಷ್ಪಾ ಪುಷ್ಪವತ್ಯಾಶ್ಚ ಮಂದಿರೇ ॥ ೩೬ ॥

ಸಾ ತು ಗ್ರೈವೇಯಕಂ ದೃಷ್ಟ್ವಾ ತ್ವಷ್ಟ್ರೇವ ರಚಿತಂ ಪ್ರಿಯಂ ।
ಹೃದಿ ಕೃತ್ವಾ ಮುಮೋಹಾಶು ಕಾಮಿನೀ ರತಿರೂಪಿಣೀ ॥ ೩೭ ॥

ಅಯೇ ಸಖಿ ಮಹಾಮಾಯೇ ಸತ್ಯಂ ಕಥಯ ಮೇSಗ್ರತಃ ।
ಗ್ರೈವೇಯಕಮಿದಂ ರಮ್ಯಂ ಕುತಃ ಪ್ರಾಪ್ತಂ ಮಮ ಪ್ರಿಯಂ ॥ ೩೮ ॥

ಇತಿ ಶ್ರುತ್ವಾ ವಚಸ್ತಸ್ಯಾಃ ಮಕರಂದಭಯಾತುರಾ ।
ಪುಷ್ಪಾ ಪುಷ್ಪಾಂಜಲಿಂ ಕೃತ್ವಾ ವಚನಂ ಪ್ರಾಹ ತಾಂ ಪ್ರತಿ ॥ ೩೯ ॥

ಜೀವದಾನಂ ಚ ಮೇ ದೇಹಿ ತರ್ಹಿ ತೇ ಕಥಯಾಮ್ಯಹಂ ।
ತಥೇತ್ಯುಕ್ತವತೀಂ ಕನ್ಯಾಂ ಸಾಹ ಮೇ ಭಗಿನೀ ಶುಭೇ ॥ ೪೦ ॥

---

೩೬. ಒಂದುದಿನ ಮಣಿಮುತ್ತುಗಳನ್ನೂ ಬಹುವಿಧವಾದ ಪುಷ್ಪಗಳನ್ನೂ ಸೇರಿಸಿ, ಸುಂದರವಾಗುವಂತೆ ಜೋಡಿಸಿ ಮನೋಹರವಾಗಿರುವಂತೆ ಕೃಷ್ಣಾಂಶನು ಕಟ್ಟಿದ ಹಾರವನ್ನು ಪುಷ್ಪಳು ತೆಗೆದುಕೊಂಡು ರಾಜಪುತ್ರಿಯಾದ ಪುಷ್ಪವತಿಯ ಸಮೀಪಕ್ಕೆ ಹೋದಳು.

೩೭. ಪುಷ್ಪವತಿಯು ಆ ಮಾಲಿಕೆಯನ್ನು ನೋಡಿ ಇದು ಬ್ರಹ್ಮನಿರ್ಮಿತವಾದುದೇ ಸರಿ ಎಂದು ಭಾವಿಸಿ, ರತಿಯಂತೆ ಸುಂದರಿಯಾದ ಆಕೆಯು ಆ ಹಾರವನ್ನು ಕಂಠದಲ್ಲಿ ಧರಿಸಲು ಅದು ಹೃದಯವನ್ನು ಸೋಕುತ್ತಲೆ ಮೋಹಪರವಶೆಯಾದಳು.

೩೮. ಅನಂತರ ಪುಷ್ಪಳನ್ನು ಕುರಿತು “ ಸಖೀ ! ನೀನು ಮಹಾಮಾಯಕಾತಿ. ನನ್ನ ಮುಂದೆ ಯಥಾಸ್ಥಿತಿಯನ್ನು ಹೇಳು. ನನಗೆ ಅತ್ಯಂತ ಪ್ರಿಯವೂ ಸುಂದರವೂ ಆದ ಈ ಹಾರವು ನಿನಗೆ ಎಲ್ಲಿ ದೊರೆಯಿತು ? ” ಎಂದು ಕೇಳಿದಳು.

೩೯. ಪುಷ್ಪವತಿಯು ಈರೀತಿ ಕೇಳಿದುದಕ್ಕೆ ಪುಷ್ಪಳು, ಮಕರಂದನ ಭಯದಿಂದ ಹೆದರಿ, ಕೈ ಮುಗಿದುಕೊಂಡು ರಾಜಕುಮಾರಿಯನ್ನು ಕುರಿತು ಹೀಗೆಂದಳು.

೪೦-೪೧. “ ದೇವಿ ! ನನಗೆ ಪ್ರಾಣದಾನ ಮಾಡುವುದಾಗಿ ಅಭಯ ಕೊಟ್ಟರೆ ಎಲ್ಲ ವಿಷಯಗಳನ್ನೂ ತಿಳಿಸುವೆನು ” ಎಂದು ಪುಷ್ಪಳು ಹೇಳಲು, ರಾಜಕುಮಾರಿ

**ಕೃಷ್ಣಾನಾಮ ಮಹಾರಮ್ಯಾ ಸರ್ವಲೋಕವಿಮೋಹಿನೀ ।**
**ಮಹಾವತ್ಯಾಂ ಗೃಹಂ ತಸ್ಯಾಃ ಮದ್ಗೃಹೇ ಸಾ ಸಮಾಗತಾ ।**
**ತಯಾ ವಿರಚಿತಂ ಸುಭ್ರೂಗ್ರೈರ್ವೇಯಕಮನುತ್ತಮಂ　　॥ ೪೧ ॥**

**ಇತಿ ಶ್ರುತ್ವಾ ತು ವಚನಂ ದೇವೀ ಪುಷ್ಪವತೀ ಸ್ವಯಂ ।**
**ಉವಾಚ ಮಾಲಿನೀಂ ವಾಕ್ಯಂ ಶೀಘ್ರಂ ದರ್ಶಯ ತಾಂ ಮಮ　　॥ ೪೨ ॥**

**ಮಕರಂದಭಯಾದ್ದೇವಾಸ್ತಥಾನ್ಯೇ ಪುರುಷಾ ಭುವಿ ।**
**ಮತ್ಸಮೀಪೇ ಗತಿರ್ನಾಸ್ತಿ ತೇಷಾಂ ಸತ್ಯಂ ಬ್ರವೀಮ್ಯಹಂ　　॥ ೪೩ ॥**

**ಇತಿ ಶ್ರುತ್ವಾ ವಚೋ ಘೋರಂ ಪುಷ್ಪಾ ತು ಭಯಕಾತರಾ ।**
**ನೋವಾಚ ವಚನಂ ಕಿಂಚಿತ್ಪೃಚ್ಛ್ಯಮಾನಾ ಪುನಃಪುನಃ　　॥ ೪೪ ॥**

---

ಪುಷ್ಪವತಿಯು "ತಂಗೀ! ಹಾಗೆಯೇ ಆಗಲಿ" ಎಂದು ಅಭಯ ಕೊಟ್ಟಳು. ಅನಂತರ ಪುಷ್ಪಳು "ಓ ರಾಜಪುತ್ರೀ! ನನಗೆ ಕೃಷ್ಣಾ ಎಂಬ ಹೆಸರಿನ ಒಬ್ಬಳು ಸಹೋದರಿ ಇರುವಳು. ಆಕೆ ಮಹಾಸುಂದರಿ. ಎಲ್ಲರನ್ನೂ ಮೋಹಗೊಳಿಸುವಷ್ಟು ರೂಪವತಿ. ಅವಳು ಈವರೆಗೂ ಮಹಾವತಿನಗರದಲ್ಲಿ ವಾಸಿಸುತ್ತಿದ್ದಳು. ಈಗ ಕಾರಣಾಂತರದಿಂದ ನಮ್ಮ ಮನೆಗೆ ಬಂದಿದ್ದಾಳೆ, ಶೋಭನಾಂಗಿಯಾದ ರಾಜ ಕುಮಾರಿಯೇ! ಆ ನನ್ನ ಸಹೋದರಿಯಾದ ಕೃಷ್ಣೆಯೇ ಈ ಉತ್ತಮವಾದ ಹಾರ ವನ್ನು ರಚಿಸಿದಳು" ಎಂದು ಹೇಳಿದಳು.

೪೨. ಪುಷ್ಪಳು ಈರೀತಿ ಆಡಿದ ಮಾತನ್ನು ಕೇಳಿ ಪುಷ್ಪವತೀ ಕುಮಾರಿಯು ಆ ಹೂವಾಡಿಗಿತ್ತಿಯನ್ನು ಕುರಿತು "ತಂಗೀ! ನೀನು ಹೋಗಿ ಅವಳನ್ನು ಜಾಗ್ರತೆ ಇಲ್ಲಿಗೆ ಕರೆದುಕೊಂಡು ಬಾ ನಾನು ಅವಳನ್ನು ನೋಡಬೇಕು."

೪೩. "ನನ್ನ ಅಣ್ಣನಾದ ಮಕರದಂನ ಭಯದಿಂದ ದೇವತೆಗಳಾಗಲಿ ಭೂಲೋಕದ ಇತರ ಪುರುಷರಾಗಲಿ ನನ್ನ ಬಳಿಗೆ ಬರಲಾರರು, ಇದು ನಿಶ್ಚಯ. ಈ ಕಾರಣದಿಂದ ನೀನು ಏನಾದರೂ ಒಂದು ಯುಕ್ತಿಯಿಂದ ಅವಳನ್ನು ಕರೆತರಬೇಕು" ಎಂದಳು.

೪೪. ರಾಜಕುಮಾರಿ ಈರೀತಿ ಹೇಳಿದುದನ್ನು ಕೇಳಿ, ಪುಷ್ಪಳು ಭಯದಿಂದ ಕಂಗೆಟ್ಟು ಪೆಚ್ಚುಮುಖವುಳ್ಳವಳಾದಳು. ಮತ್ತು ರಾಜಕುಮಾರಿಯು ಪದೇ ಪದೇ ಅವಳನ್ನು ಪ್ರಶ್ನಿಸಿದರೂ ಯಾವ ಮಾತನ್ನೂ ಆಡದೆ ಸುಮ್ಮನೆ ಇದ್ದಳು.

ತದಾ ಪುಷ್ಪವತೀ ಪ್ರಾಹ ಕಿಂ ತೇ ಭಯಮುಪಾಗತಂ ।
ಸಾಹ ಮೇ ಭಗಿನೀ ರಮ್ಯಾ ಯದಿ ತ್ವದ್ಗೇಹಮಾಗತಾ ॥ ೪೫ ॥

ಮೋಹಿತಃ ಪುರುಷಃ ಕಶ್ಚಿದ್ಬಲಾತ್ತಾಂ ಹಿ ಭಜಿಷ್ಯತಿ ।
ತರ್ಹಿ ಮೇ ಮರಣಂ ಜ್ಞೇಯಂ ಕುಲಧರ್ಮಪರಾಯಣೇ ॥ ೪೬ ॥

ಇತಿ ಶ್ರುತ್ವಾ ಪುಷ್ಪವತೀ ಪುನಃ ಪ್ರೋವಾಚ ಧರ್ಮಿಣೀ ।
ಮಯೂರಧ್ವಜ ಏವಾಪಿ ಮತ್ಪಿತಾ ನೀತಿತತ್ಪರಃ ।
ಅಯೋಗ್ಯಂ ಯೇ ಕರಿಷ್ಯಂತಿ ತೇ ಯಾಸ್ಯಂತಿ ಯಮಾಲಯಂ ॥ ೪೭ ॥

ಅತಸ್ತ್ವಂ ಶೀಘ್ರಮಾದಾಯ ತದ್ದೋಲಾಂ ಚ ಮದಂತಿಕೇ ।
ದರ್ಶಯಿತ್ವಾ ಚ ತಾಂ ರಮ್ಯಾಂ ಪುನರ್ಗಚ್ಛ ಗೃಹಂ ಸ್ವಕಂ ॥ ೪೮ ॥

---

೪೫-೪೬. ಆಗ ರಾಜಕುಮಾರಿ ಪುಷ್ಪವತಿಯು ಹೂವಾಡಿಗಿತ್ತಿಯನ್ನು ಕುರಿತು "ಇದೇನು! ನೀನು ಹೀಗೆ ಹೆದರಿಕೊಳ್ಳಲು ಕಾರಣವೇನು?" ಎಂದು ಪ್ರಶ್ನಿಸಲು ಆಗ ಪುಷ್ಪಳು "ನನ್ನ ಸಹೋದರಿಯು ಬಹು ಸುಂದರಿ. ಅವಳು ಇಲ್ಲಿಗೆ ಬಂದರೆ, ಯಾವನಾದರೂ ಪುರುಷನು ಅವಳಲ್ಲಿ ಮೋಹಗೊಂಡು ಬಲಾತ್ಕಾರದಿಂದ ಅವಳನ್ನು ಭೋಗಿಸುವನು. ಕುಲಧರ್ಮಾಸಕ್ತಳಾದ ಎಲೌ ರಾಜಕುಮಾರಿಯೇ! ಹಾಗೇನಾದರೂ ಸಂಭವಿಸಿದರೆ ನನಗೆ ಮರಣಪ್ರಾಪ್ತಿಯೇ ಖಂಡಿತ" ಎಂದು ಹೇಳಿದಳು.

೪೭-. ಪುಷ್ಪವತಿಯು ಇದನ್ನು ಕೇಳಿ, ಪುನಃ ಪುಷ್ಪಳನ್ನು ಕುರಿತು "ನನ್ನ ತಂದೆಯಾದ ಮಯೂರಧ್ವಜರಾಜನು ತುಂಬಾ ನೀತಿತತ್ಪರನು. ದುಷ್ಕಾರ್ಯಗಳನ್ನು ನಡೆಯಿಸಿದವರಿಗೆ ಯಮಲೋಕಪ್ರಾಪ್ತಿಯಾಗುವಂತೆ ಮಾಡುವುದು ಖಂಡಿತ."

೪೮. "ಆದುದರಿಂದ ನೀನು ಜಾಗ್ರತೆಯಾಗಿ ಹೋಗಿ ನಿನ್ನ ಸಹೋದರಿಯನ್ನು ಒಂದು ಮೇನೆಯಲ್ಲಿ ಕೂರಿಸಿಕೊಂಡು ಇಲ್ಲಿಗೆ ಕರೆದುಕೊಂಡು ಬಂದು ನನಗೆ ತೋರಿಸು. ಬಳಿಕ ಆ ಸುಂದರಿಯನ್ನು ಅದೇ ಮೇನೆಯಲ್ಲಿ ಪುನಃ ನಿನ್ನ ಮನೆಗೆ ಕರೆದುಕೊಂಡು ಹೋಗುವೆಯಂತೆ" ಎಂದು ಹೇಳಿದಳು.

ತಥೇತಿ ಮತ್ವಾ ಸಾ ಶೂದ್ರೀ ಗೃಹಮಾಗತ್ಯ ಭಾಮಿನೀ ।
ಕೃಷ್ಣಾಂಶಂ ವರ್ಣಯಾಮಾಸ ಯಥಾಪ್ರೋಕ್ತಂ ತಯಾ ಮುನೇ ॥ ೪೯ ॥

ಇತಿ ಶ್ರುತ್ವಾ ವಚೋ ರಮ್ಯಂ ಕೃಷ್ಣಾಂಶೋ ಬಲವತ್ತರಃ ।
ನಾಸಾವೇಧಂ ಸ್ವಯಂ ಕೃತ್ವಾ ಪುನರ್ನಾರೀಮಯಂ ವಪುಃ ।
ಜಗಾಮ ಪುಷ್ಪಯಾ ಸಾರ್ಧಂ ದೋಲಾಮಾರುಹ್ಯ ವೀರ್ಯವಾನ್ ॥೫೦॥

ತದಾ ಪುಷ್ಪವತೀ ದೇವೀ ದೃಷ್ಟ್ವಾ ಕೃಷ್ಣಾಂ ಮನೋರಮಾಂ ।
ಉವಾಚ ವಚನಂ ಪುಷ್ಪಾಂ ಶೃಣು ಮೇ ವಚನಂ ಸಖಿ ॥ ೫೧ ॥

ಯಾದೃಶೀಯಂ ಶುಭಾ ನಾರೀ ತಾದೃಶಃ ಪುರುಷೋ ಮಯಾ ।
ಸ್ವಪ್ನಾಂತೇ ಪ್ರತ್ಯಹಂ ದೃಷ್ಟೋ ರಮಮಾಣೋ ಮಯಾ ಸಹ ॥ ೫೨ ॥

ಕೃಷ್ಣಾಂಶಶ್ಚ ಸ ತಾಮಾಹ ದೇಶರಾಜಸುತೋ ವರಃ ।
ಉದಯೋ ನಾಮ ವಿಖ್ಯಾತಸ್ತಸ್ಯಾಹಂ ಲಲಿತಾ ಸಖೀ ॥ ೫೩ ॥

---

೪೯. ಆಗ ಆ ಶೂದ್ರ ಸ್ತ್ರೀಯಾದ ಪುಷ್ಪಳು "ಹಾಗೆಯೇ ಆಗಲಿ" ಎಂದು ಒಪ್ಪಿ, ಮನೆಗೆ ಹೋಗಿ ನಡೆದ ವೃತ್ತಾಂತವನ್ನೆಲ್ಲಾ ಕೃಷ್ಣಾಂಶನಿಗೆ ತಿಳಿಸಿದಳು.

೫೦. ಅಯ್ಯಾ ಮಹರ್ಷಿಯೇ! ಕೇಳು, ಬಲಶಾಲಿಯಾದ ಕೃಷ್ಣಾಂಶನು ಮನೋಹರವಾದ ಈ ಮಾತುಗಳನ್ನು ಕೇಳಿ, ತಾನು ಮೂಗು ಚುಚ್ಚಿಕೊಂಡು ಸ್ತ್ರೀವೇಷವನ್ನು ಧರಿಸಿ, ಪುಷ್ಪಳೊಡನೆ ಮೇನೆಯನ್ನೇರಿ ರಾಜಕುಮಾರಿಯ ಬಳಿಗೆ ಹೋದನು.

೫೧-೫೨. ರಾಜಕುಮಾರಿ ಪುಷ್ಪಾವತಿಯು ರೂಪಿನಲ್ಲಿ ಮನೋಹರಳಾಗಿದ್ದ ಕೃಷ್ಣಳನ್ನು ನೋಡಿ ಪುಷ್ಪಳನ್ನು ಕುರಿತು "ಸಖೀ! ಒಂದು ರಹಸ್ಯ ವಿಚಾರವನ್ನು ಹೇಳುತ್ತೇನೆ ಕೇಳು, ಈ ಸ್ತ್ರೀಯು ಯಾವರೀತಿ ಇದ್ದಾಳೆಯೋ ಇದೇ ತರಹ ಆಕಾರವುಳ್ಳ ಪುರುಷನೊಬ್ಬನು ನಿತ್ಯವೂ ರಾತ್ರಿ ನನಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ನನ್ನೊಡನೆ ಕ್ರೀಡಿಸುವನು" ಎಂದಳು.

೫೩. ಕೃಷ್ಣೆಯ ವೇಷದ ಕೃಷ್ಣಾಂಶನು ಆ ರಾಜಕುಮಾರಿಯನ್ನು ಕುರಿತು, ದೇಶರಾಜನ ಮಗನೂ ಶ್ರೇಷ್ಠನೂ ಆದ ಉದಯ (ಸಿಂಹ) ನೆಂಬವನು ಬಹು ಪ್ರಖ್ಯಾತಿ ಹೊಂದಿರುವನು

**ಪ್ರತ್ಯಹಂ ರಚಿತಂ ಹಾರಮಥ ಪೂಜನಹೇತವೇ ।**
**ಸ ವೀರಸ್ತು ಗೃಹೀತ್ವಾ ತಂ ದೇವೀಂ ಪೂಜ್ಯ ನ್ಯವೇದಯತ್ ॥ ೫೪ ॥**

**ಏಕದಾ ಪ್ರಸ್ಥಿತಂ ವೀರಂ ಪುಷ್ಪಮಧ್ಯೇ ಶನೈಃಶನೈಃ ।**
**ಉದಾಸೀನಂ ಚ ತಂ ದೃಷ್ಟ್ವಾ ಪ್ರೋವಾಚಾಹಂ ಸಮಾಗತಾ ॥ ೫೫ ॥**

**ಮೋಹೋಽಯಂ ತೇ ಕುತಃ ಪ್ರಾಪ್ತಃ ಸ ತ್ವಂ ಕಥಯ ಮಾ ಚಿರಂ ।**
**ಇತ್ಯುಕ್ತಃ ಸ ತು ಮಾಮಾಹ ಸ್ವಪ್ನಾಂತೇ ಪ್ರತ್ಯಹಂ ಸಖಿ ॥ ೫೬ ॥**

**ಮಯಾ ದೃಷ್ಟಾ ಶುಭಾ ನಾರೀ ರೂಪಯೌವನಶಾಲಿನೀ ।**
**ತದ್ವಿಯೋಗೇನ ದುಃಖಾರ್ತಂ ಮುಖಂ ಮ್ಲಾನತ್ವಮಾಗತಂ ॥ ೫೭ ॥**

**ಇತಿ ಶ್ರುತ್ವಾ ಪುಷ್ಪವತೀ ತಾಮಾಹ ರುಚಿರಾನನಾಂ ।**
**ವಿವಾಹೋ ಮೇ ಯದಾ ತೇನ ಸಾರ್ಧಂ ರಮ್ಯೋ ಭವಿಷ್ಯತಿ ॥ ೫೮ ॥**

---

೫೪. ನಾನು ಅವನಿಗೆ ಪ್ರಿಯ ಸಖಿಯಾಗಿರುವೆನು, ನಾನು ಪ್ರತಿನಿತ್ಯವೂ ರಚಿಸಿದ ಹಾರವನ್ನು ತೆಗೆದುಕೊಂಡು ಹೋಗಿ ಆ ವೀರನು ನಿತ್ಯವೂ ದೇವಿಗೆ ಸಮರ್ಪಿಸುವನು.

೫೫ ಒಂದುದಿನ ಪುಷ್ಪವಾಟಿಕೆಯಲ್ಲಿ ಆತನು ಉದಾಸೀನನಾಗಿ ಕುಳಿತಿರುವುದನ್ನು ಮೆಲ್ಲಗೆ ನೋಡಿ ನಾನು ಅವನ ಸಮೀಪಕ್ಕೆ ಹೋಗಿ ಹೀಗೆ ಕೇಳಿದೆನು.

೫೬-೫೭ "ಎಲೈ ವೀರನೇ ! ನೀನು ಈರೀತಿ ಏನೋ ಯೋಚನೆಮಾಡುತ್ತಿರಲು ಕಾರಣವೇನು ? ಅದನ್ನು ಜಾಗ್ರತೆ ತಿಳಿಸು" ಎಂದು ಕೇಳಲಾಗಿ ಅದಕ್ಕೆ ಆತನು ನನ್ನನ್ನು ಕುರಿತು 'ಸಖೀ! ರೂಪವತಿಯೂ ಯೌವನವತಿಯೂ ಆದ ಒಬ್ಬಳು ರಮಣಿಯು ನನಗೆ ಪ್ರತಿನಿತ್ಯವೂ ಸ್ವಪ್ನದಲ್ಲಿ ಕಾಣಿಸುವಳು. ಅವಳ ವಿಯೋಗದಿಂದ ನನ್ನ ಮುಖವು ಮ್ಲಾನವಾಗಿ ಕಾಂತಿಹೀನವಾಗಿ ಇದೆ' ಎಂದು ಹೇಳಿದನು. ಆತನೇ ನಿನಗೆ ಸ್ವಪ್ನದಲ್ಲಿ ಕಾಣಿಸಿರಬಹುದು" ಎಂದಳು.

೫೮-೫೯. ಪುಷ್ಪವತಿಯು ಈ ಮಾತನ್ನು ಕೇಳಿ ಸುಂದರವಾದ ಮುಖವುಳ್ಳ ಕೃಷ್ಣಳನ್ನು ಕುರಿತು, ನನ್ನ ಮನಸ್ಸಿಗೆ ಆನಂದವುಂಟುಮಾಡುವ ಆ ಪುರುಷನೊಡನೆ

ತದಾ ತ್ವಾಂ ತರ್ಪಯಿಷ್ಯಾಮಿ ಬಹುದ್ರವ್ಯೈಃ ಶುಭಾನನೇ ।
ಅತಸ್ತ್ವಂ ಗಚ್ಛ ತತ್ಪಾರ್ಶ್ವಂ ಶೀಘ್ರಂ ತಸ್ಮೈ ನಿವೇದಯ ॥ ೫೯ ॥

ಇತಿ ಶ್ರುತ್ವಾ ತು ತದ್ವಾಕ್ಯಂ ಪುಷ್ಪಾ ಪ್ರೇಮಸಮನ್ವಿತಾ ।
ದೋಲಾಮಾರೋಪ್ಯ ತಾಂ ಕೃಷ್ಣಾಂ ಸ್ವಗೇಹಂ ಗಂತುಮುದ್ಯತಾ ॥ ೬೦ ॥

ದುರ್ಗದ್ವಾರೇ ತು ಪ್ರಾಪ್ತಾಯಾಂ ತದ್ದೋಲಾಯಾಂ ಚ ಭಾರ್ಗವ ।
ಮಕರಂದೋ ಮಹಾವೀರ್ಯೋ ಷೋಡಶಾಬ್ದವಯಾ ಬಲೀ ॥ ೬೧ ॥

ದೋಲಾಸಮೀಪಮಾಗತ್ಯ ದದರ್ಶ ರುಚಿರಾನನಾಂ ।
ಕೃಷ್ಣಾಮಿಂದೀವರಶ್ಯಾಮಾಂ ಚಾರುನೇತ್ರಾಂ ಮನೋಹರಾಂ ॥ ೬೨ ॥

ಮುಮೋಹ ಬಲವಾನ್ವೀರೋ ಗೋವರ್ಧನಕಲಾಂಶಕಃ ।
ಪ್ರೇಮ್ಣೋವಾಚ ಸ ಚಾರ್ವಂಗಿ ಶೃಣು ಮೇ ವಚನಂ ಪ್ರಿಯೇ ॥ ೬೩ ॥

---

ನನಗೆ ವಿವಾಹವಾಗುವ ಸುಯೋಗವು ಲಭಿಸಿದಾಗ ನಿನಗೆ ತುಂಬಾ ಬಹುಮಾನ ಕೊಟ್ಟು ಸಂತೋಷಪಡಿಸುವೆನು."

೬೦. "ಆದುದರಿಂದ ನೀನು ಜಾಗ್ರತೆ ಅವನ ಸಮೀಪಕ್ಕೆ ಹೋಗಿ ನನ್ನ ವಿಷಯವನ್ನು ಅವನಿಗೆ ತಿಳಿಸು" ಎಂದು ಹೇಳಿ ಅವಳಿಗೆ ಅನುಜ್ಞೆಕೊಟ್ಟಳು. ಬಳಿಕ ಪುಷ್ಪಳು ಪ್ರೇಮದಿಂದ ಆ ಕೃಷ್ಣಳನ್ನು ಮೇನೆಯಲ್ಲಿ ಕೂರಿಸಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗುತ್ತಿದ್ದಳು".

೬೧. ಅಯ್ಯಾ ಭೃಗುವಂಶದ ಮಹರ್ಷಿಯೇ! ಕೇಳು, ಕೃಷ್ಣಳು ಇದ್ದ ಮೇನೆಯು ಕೋಟೆಯ ಬಾಗಿಲಿಗೆ ಬರುವಷ್ಟರಲ್ಲಿಯೇ ಹದಿನಾರುವರ್ಷ ವಯಸ್ಕನೂ ಮಹಾವೀರ್ಯವಂತನೂ ಬಲಶಾಲಿಯೂ ಆದ ಮಕರಂದನು ಅಲ್ಲಿಗೆ ಬಂದನು.

೬೨. ಮನೋಹರವಾದ ಮುಖವುಳ್ಳವಳೂ, ಕನ್ನೈದಿಲೆ ಪುಷ್ಪದಂತೆ ನೀಲ ವರ್ಣದ ಶರೀರವುಳ್ಳವಳೂ, ಬಹು ಸುಂದರವಾದ ಕಣ್ಣುಳ್ಳವಳೂ ಆದ ಕೃಷ್ಣಳನ್ನು ಆ ಮಕರಂದನು ನೋಡಿದನು.

೬೩-೬೪. ವಸ್ತುತಃ ಗೋವರ್ಧನನ ಅಂಶಸಂಭೂತನೂ ಬಲಶಾಲಿಯೂ, ವೀರನೂ, ಆದ ಕೃಷ್ಣಾಂಶನೆನಿಸಿ ಸದ್ಯಃ ಕೃಷ್ಣೆಯ ವೇಷಧಾರಿಯಾಗಿರುವ ಅವಳಲ್ಲಿ ಮಕರಂದನು, ಮೋಹಗೊಂಡು ಪ್ರೀತಿಯಿಂದ "ಪ್ರಿಯೆ! ಸುಂದರಾಂಗೀ! ನನ್ನ

ಮದ್ಗೃಹಂ ಶೀಘ್ರಮಾಗಚ್ಛ ಪತ್ನೀ ಮಮ ಭವಾದ್ಯಧುನಾ ।
ಇತಿ ಶ್ರುತ್ವಾ ತು ಸಾ ಕೃಷ್ಣಾ ವಿಹಸ್ಯೋವಾಚ ಭೂಪತಿಂ ॥ ೬೪ ॥

ಕುಲೀನಸ್ತ್ವಂ ಮಹಾವೀರ ವಹ್ನಿಕುಂಡಾತ್ಸಮುದ್ಭವಃ ।
ಷೋಡಶಾಬ್ದವಯಾಸ್ತ್ವಾಣೀ ಶತಭಲ್ಲಸಮನ್ವಿತಃ ॥ ೬೫ ॥

ತ್ವದ್ಯೋಗ್ಯಾ ಭೂಪತೇಃ ಕನ್ಯಾ ಚಂದ್ರಸೂರ್ಯಾನ್ವಯಸ್ಯ ವೈ ।
ಅಹಂ ಶೂದ್ರೀ ಹೀನತಮಾ ಕಥಂ ಯೋಗ್ಯಾ ತವೇಹ ವೈ ॥ ೬೬ ॥

ಕನ್ಯಾಹಂ ಶೂದ್ರಜಾತೇಶ್ಚ ಬ್ರಹ್ಮಚರ್ಯವ್ರತೇ ಸ್ಥಿತಾ ।
ಇತಿ ಶ್ರುತ್ವಾ ತು ವಚನಂ ಮಕರಂದೋ ನೃಪಾತ್ಮಜಃ ॥ ೬೭ ॥

ಬಲಾದ್ಗೃಹೀತ್ವಾ ತಾಂ ನಾರೀಂ ಪಸ್ಪರ್ಶ ಹೃದಯೇ ಸ್ವಯಂ ।
ಕೃಷ್ಣಾಂಶಸ್ತು ತದಾ ತಸ್ಮೈ ದತ್ವಾ ಹೃದಯವೇದನಾಂ ।
ಮೋಹಯಿತ್ವಾ ನೃಪಸುತಂ ಸ ದೇವಃ ಸ್ವಗೃಹಂ ಯಯೌ ॥ ೬೮ ॥

---

ಮಾತನ್ನು ಲಾಲಿಸು, ನೀನು ನನ್ನ ಪತ್ನಿಯಾಗು ಜಾಗ್ರತೆ ನನ್ನ ಮನೆಗೆ ಬಾ" ಎಂದು ಹೇಳಿದನು. ಈ ಮಾತನ್ನು ಕೇಳಿ ಕೃಷ್ಣಳು ಸ್ವಲ್ಪ ನಕ್ಕು ಮಕರಂದನನ್ನು ಕುರಿತು–

೬೫. "ಎಲೈ ಮಹಾವೀರನೇ! ನೀನು ಅಗ್ನಿಕುಂಡದಲ್ಲಿ ಜನಿಸಿದವನು. ಸತ್ಕುಲಪ್ರಸೂತನು, ಹದಿನಾರು ವರ್ಷದ ಪ್ರಾಯದವನು. ಶನಿಯ ಅನುಗ್ರಹದಿಂದ ಬತ್ತಳಿಕೆಯನ್ನೂ, ಭಲ್ಲೆಯುವನ್ನೂ ಪಡೆದವನು."

೬೬. "ನಿನಗೆ ಚಂದ್ರವಂಶದ ಮತ್ತು ಸೂರ್ಯವಂಶದ ರಾಜಕನ್ಯೆಯರು ವಿವಾಹಕ್ಕೆ ಯೋಗ್ಯರು. ನಾನು ಹೀನಕುಲದಲ್ಲಿ ಜನಿಸಿದ ಶೂದ್ರಸ್ತ್ರೀ ಹೀಗಿರುವಾಗ ನಿನಗೆ ನಾನು ಹೇಗೆ ತಾನೇ ಯೋಗ್ಯಳಾದೇನು.?"

೬೭ "ಅಲ್ಲದೆ ನಾನು ಶೂದ್ರಜಾತಿಯವಳಾದರೂ ಕನ್ಯೆಯಾಗಿ ಬ್ರಹ್ಮಚರ್ಯವ್ರತದಲ್ಲಿರುವೆನು. ಇದೇ, ನನ್ನ ನಿಶ್ಚಯ" ಎಂದಳು.

೬೮. ಈ ಮಾತನ್ನು ಕೇಳಿ ರಾಜಕುಮಾರನಾದ ಮಕರಂದನು ಆ (ವೇಷ ಧಾರಿಣಿ) ಸ್ತ್ರೀಯನ್ನು ಬಲತ್ಕಾರದಿಂದ ಹಿಡಿದುಕೊಂಡು ವಕ್ಷಸ್ಥಳವನ್ನು ಸ್ಪರ್ಶ ಮಾಡಿದನು. ಆಗ ಕೃಷ್ಣಳ ವೇಷವನ್ನು ಧರಿಸಿದ್ದ ಕೃಷ್ಣಾಂಶನು ಮಕರಂದನ ಹೃದಯಕ್ಕೆ ರಭಸದಿಂದ ಗುದ್ದಿ ರಾಜಪುತ್ರನನ್ನು ಮೂರ್ಛೆ ಬೀಳಿಸಿ ಕೆಡವಿ ತಾನು ಇಳಿದಿದ್ದ ಮನೆಗೆ ಹೊರಟು ಹೋದನು.

ಮಕರಂದಸ್ತು ಸಂಬುದ್ಧೋ ಮದನಾಗ್ನಿಪ್ರಪೀಡಿತಃ ।
ಗೇಹಮಾಗತ್ಯ ಪುಷ್ಪಾಯಾಃ ಸರ್ವಂ ತಸ್ಯೈ ನ್ಯವೇದಯತ್ ॥ ೬೯ ॥

ತತ್ಸ್ನೇಹಕಾತರಂ ಭೂಪಂ ಮಕರಂದಂ ಮಹಾಬಲಂ ।
ಪುಷ್ಪಾಹ ಶ್ಲಕ್ಷ್ಣಯಾ ವಾಚಾ ಶೃಣು ಪಾರ್ಥಿವಸತ್ತಮ ॥ ೭೦ ॥

ಮಹಾವತೀ ಪುರೀ ರಮ್ಯಾ ತತ್ರ ಕೃಷ್ಣಾಗೃಹಂ ಶುಭಂ ।
ತ್ವದ್ಭಯಾಚ್ಚ ಗತಾ ಗೇಹಂ ಕೃಷ್ಣಾಂಶಸ್ಯ ಚ ಸಾ ಸಖೀ ॥ ೭೧ ॥

ರೋದನಂ ಕುರ್ವತೀ ಗಾಢಂ ತವ ನಿಂದನತತ್ಪರಾ ॥ ೭೨ ॥

ಆಗಮಿಷ್ಯತಿ ವೈ ವೀರೋ ಬಲೈಃ ಸಾರ್ಧಂ ಮಹಾಬಲಃ ।
ಅತಸ್ತ್ವಂ ಸರ್ವಸೈನ್ಯಾನಿ ಸಜ್ಜೀಭೂತಾನಿ ವೈ ಕುರು ॥ ೭೩ ॥

---

೬೯. ಸ್ವಲ್ಪ ಹೊತ್ತಿನಲ್ಲಿ ಮಕರಂದನು ಎಚ್ಚತ್ತು, ಕಾಮಾಂಧನಾಗಿ ಪುಷ್ಪಳ ಮನೆಗೆ ಬಂದು ಅವಳೊಡನೆ ತನ್ನ ಮನಸ್ಸಿನ ವ್ಯಾಮೋಹವನ್ನೆಲ್ಲಾ ತಿಳಿಸಿದನು.

೭೦. ಕೃಷ್ಣಳ ಮೇಲಿನ ವ್ಯಾಮೋಹದಿಂದ ಕಾತರನೂ ಮಹಾಬಲಶಾಲಿಯೂ ಆದ ಮಕರಂದನನ್ನು ಕುರಿತು ಪುಷ್ಪಳು ಇಂತೆಂದಳು.

೭೧. "ಅಯ್ಯಾ ರಾಜಶ್ರೇಷ್ಠನೇ! ಮಹಾವತಿಯೆಂಬ ಸುಂದರ ನಗರದಲ್ಲಿ ಕೃಷ್ಣಳ ಮನೆಯಿರುವುದು. ನಿನ್ನ ಭೀತಿಯಿಂದ ಆ ಕೃಷ್ಣಳು ಆಪ್ತನಾದ ಕೃಷ್ಣಾಂಶನ ಮನೆಗೆ ಹೋದಳು."

೭೨ ". ಹೋಗುತ್ತಿರುವಾಗ ನಿನ್ನನ್ನು ನಿಂದಿಸುತ್ತ ಗಟ್ಟಿಯಾಗಿ ರೋದನ ಮಾಡುತ್ತ ಹೋದಳು."

೭೩. "ಆ ಮಹಾಪರಾಕ್ರಮಿಯಾದ ಕೃಷ್ಣಾಂಶನು ಕೃಷ್ಣಳಿಗೆ ಆದ ಅಪಮಾನ ತಿಳಿದೊಡನೆ ರೇಗಿ ನಿನ್ನನ್ನು ನಿಗ್ರಹಿಸುವುದಕ್ಕಾಗಿ ತನ್ನ ಅಪಾರ ಸೇನೆಯೊಡನೆ ತ್ವರೆಯಿಂದ ಬರುತ್ತಿರುವನು. ಆದುದರಿಂದ ನೀನೂ ಕೂಡ ನಿನ್ನ ಸೇನೆಯನ್ನೆಲ್ಲಾ ಯುದ್ಧಕ್ಕೆ ಸಿದ್ಧಪಡಿಸಿಕೋ."

ಜಿತೋ ಯೇನ ಮಹಾವೀರಃ ಪಿತೃವ್ಯೋ ಲಹರಸ್ತವ ।
ವಿವಾಹಂ ಕಾರಯಾಮಾಸ ತದ್ಬಂಧೋ ಸುತಯಾ ಸಹ ॥ ೭೪ ॥

ಇತಿ ಶ್ರುತ್ವಾ ವಚೋ ಘೋರಂ ಮಕರಂದೋಃ ಮಹೀಪತಿಃ ।
ಶತಘ್ನೀಃ ಸ್ಥಾಪಯಾಮಾಸ ದುರ್ಗಕೋಟೀಷು ದಾರುಣಾಃ ॥ ೭೫ ॥

ಸ್ವಸೈನ್ಯಂ ಚ ಸಮಾಹೂಯ ತ್ರಿಲಕ್ಷಂ ಖಡ್ಗಸಂಯುತಂ ।
ತತ್ರೈವ ಸ್ಥಾಪಯಾಮಾಸ ರಾಷ್ಟ್ರರಕ್ಷಾರ್ಥಮುದ್ಯತಃ ॥ ೭೬ ॥

ಕೃಷ್ಣಾಂಶಸ್ತು ಗೃಹಂ ಪ್ರಾಪ್ಯ ಬಲಖಾನಿಮುವಾಚ ತತ್ ।
ಶ್ರುತ್ವಾ ಸ ಚ ಮಹಾವೀರೋ ಭ್ರಾತೃಮಿತ್ರಸಮನ್ವಿತಃ ।
ಪಂಚಲಕ್ಷಬಲೈಃಸಾರ್ಧಂ ಮಯೂರನಗರಂ ಯಯೌ ॥ ೭೭ ॥

---

೭೪. "ಆ ಮಹಾ ಶೂರನಾದ ಕೃಷ್ಣಾಂಶನು ನಿನ್ನ ಚಿಕ್ಕಪ್ಪನಾದ ಲಹರ ರಾಜನನ್ನು ಜಯಿಸಿ ಅವನ ಮಗಳನ್ನು ತನ್ನ ಸಹೋದರನಾದ ಸುಖಖಾನಿಗೆ ವಿವಾಹ ಮಾಡಿಸಿದನು." ಎಂದು ಹೇಳಿದಳು.

೭೫-೭೬. ಘೋರವಾದ ಈ ಮಾತನ್ನು ಕೇಳಿ ಮಕರಂದಮಹಾರಾಜನು ತನ್ನ ರಾಜ್ಯರಕ್ಷಣೆಗಾಗಿ ಕೋಟೆಯ ಸುತ್ತಲೂ ಭಯಂಕರವಾದ ಫಿರಂಗಿಗಳನ್ನು ಇಡಿಸಿದನು. ಮತ್ತು ಖಡ್ಗಧಾರಿಗಳಾದ ತನ್ನ ಮೂರುಲಕ್ಷ ಸೇನೆಯನ್ನು ಪ್ರಯತ್ನ ಪೂರ್ವಕವಾಗಿ ಸಿದ್ಧಗೊಳಿಸಿ ಆ ಕೋಟೆಯಲ್ಲಿ ನಿಲ್ಲಿಸಿದನು.

೭೭. ಈ ಕಡೆ ಕೃಷ್ಣಾಂಶನೂ ತನ್ನ ಊರಿಗೆ ಬಂದು ಮಯೂರನಗರದಲ್ಲಿ ನಡೆದ ವೃತ್ತಾಂತವನ್ನೆಲ್ಲಾ ತನ್ನ ಬಂಧುಗಳಿಗೆ ತಿಳಿಸಿದನು. ಇದನ್ನು ಕೇಳಿ ಮಹಾವೀರನಾದ ಬಲಖಾನಿಯು ತನ್ನ ಸ್ನೇಹಿತರು ಸಹೋದರರು ಇವರುಗಳೊಡನೆ ಐದು ಲಕ್ಷ ಸೇನೆಯನ್ನು ತೆಗೆದುಕೊಂಡು ಮಯೂರನಗರಕ್ಕೆ ಪ್ರಯಾಣ ಮಾಡಿದನು ಅವನಲ್ಲಿ ಐದು ಸಾವಿರ ಫಿರಂಗಿಗಳು, ಹತ್ತು ಸಾವಿರ ಆನೆ, ಒಂದುಲಕ್ಷ ಕುದುರೆಗಳು, ಉಳಿದ ಮೂರುಲಕ್ಷ ಪದಾತಿ ಸೈನ್ಯ ಸಹ ಇದ್ದುವು.

ಶತಘ್ನ್ಯಃ ಪಂಚಸಾಹಸ್ರಾ ಗಜಾ ದಶಸಹಸ್ರಕಾಃ ।
ಏಕಲಕ್ಷಂ ಹಯಾಸ್ಸರ್ವೇ ಶೇಷಾ ಜ್ಞೇಯಾಃ ಪದಾತಯಃ ।
ಉಷಿತ್ವಾ ಪಕ್ಷಮಾತ್ರಂ ತು ಮಾರ್ಗೇ ಪಾಂಚಾಲಕೇ ತದಾ ॥ ೭೮ ॥

ಮಕರಂದಸ್ತು ತಚ್ಛ್ರುತ್ವಾ ಶನಿಭಲ್ಲಕರಃ ಸ್ಥಿತಃ ।
ಸೇನಾಮಾಜ್ಞಾಪಯಾಮಾಸ ಜಹಿ ಶತ್ರೂನ್ ಮಹಾಬಲಾನ್ ॥ ೭೯ ॥

ಶ್ರುತ್ವಾ ಪದಾತಯೋ ಲಕ್ಷಂ ಶತಘ್ನೀರ್ವಹ್ನಿಮಾದದನ್ ।
ತೇ ತು ವೈ ಸಪ್ತಸಾಹಸ್ರಾಶ್ಚಕ್ರುಃ ಶತ್ರುಬಲಕ್ಷಯಂ ॥ ೮೦ ॥

ಗ್ರಾಮಸ್ಯ ದಕ್ಷಿಣದ್ವಾರೇ ಹಯಾರೂಢಾಸ್ತದಾ ಯಯುಃ ।
ಭುಶುಂಡೀಕ್ಷೇಪಣೀಶಕ್ತಿಖಡ್ಗಯುದ್ಧವಿಶಾರದಾಃ ॥ ೮೧ ॥

---

೭೮. ಈರೀತಿ ತನ್ನ ಐದುಲಕ್ಷ ಸೇನೆಯೊಡನೆ ಹೊರಟ ಬಲಖಾನಿಯು ದಾರಿಯಲ್ಲಿ ಹದಿನೈದು ದಿವಸಗಳು ಪಾಂಚಾಲದೇಶದಲ್ಲಿ ತಳುಗಿದ್ದು ಬಳಿಕ ಮಯೂರನಗರಕ್ಕೆ ಬಂದನು.

೭೯. ಬಲಖಾನಿಯು ಸೇನಾಸಮೇತನಾಗಿ ಬಂದುದನ್ನು ತಿಳಿದು ಮಕರಂದನು ತಾನು ಶನಿಯ ಅನುಗ್ರಹದಿಂದ ಪಡೆದ ಭಲ್ಲೆಯನ್ನು ಹಿಡಿದುಕೊಂಡು ತನ್ನ ಸೇನೆಯನ್ನು ಯುದ್ಧಕ್ಕೆ ಹೊರಡಿಸಿ ಬಲಶಾಲಿಗಳಾದ ಶತ್ರುಗಳನ್ನು ಧ್ವಂಸ ಮಾಡುವಂತೆ ಆಜ್ಞಾಪಿಸಿದನು.

೮೦. ರಾಜನು ಹೀಗೆ ಅಪ್ಪಣೆಮಾಡಿದ ಕೂಡಲೆ ಇವನ ಸೈನ್ಯದವರು ಫಿರಂಗಿಗಳಿಗೆ ಬೆಂಕಿಯನ್ನು ತೋರಿಸಿ ಹಾರಿಸತೊಡಗಿದರು. ಆ ಏಳುಸಾವಿರ ಫಿರಂಗಿಗಳು ಲಕ್ಷಮಂದಿ ಶತ್ರು ಪದಾತಿ ಸೈನಿಕರನ್ನು ನಾಶಮಾಡತೊಡಗಿದವು.

೮೧. ಪಟ್ಟಣದ ದಕ್ಷಿಣಭಾಗಿಲಲ್ಲಿ ಭುಶುಂಡಿ, ಕ್ಷೇಪಣಿ, ಶಕ್ತ್ಯಾಯುಧ, ಖಡ್ಗ ಇವುಗಳ ಯುದ್ಧಗಳಲ್ಲಿ ವಿಶಾರದರೆನಿಸಿದ ಕುದುರೆಯ ಸೈನಿಕರು ಭಯಂಕರವಾಗಿ ಯುದ್ಧಮಾಡತೊಡಗಿದರು.

ಏಕಲಕ್ಷಂ ಹಯಾಸ್ಸರ್ವೇ ಮಕರಂದಸ್ಯ ಭೂಪತೇಃ ।
ತಯೋಶ್ಚಾಸೀನ್ಮಹದ್ಯುದ್ಧಂ ತುಮುಲಂ ಹಯಸೇನಯೋಃ ॥ ೮೨ ॥

ತದಾ ತು ಪಶ್ಚಿಮದ್ವಾರೇ ಗಜಾವಿಂಶತ್ಸಹಸ್ರಕಾಃ ।
ತಥಾ ದಶಸಹಸ್ರೈಶ್ಚ ಶತ್ರುಭಿಃ ಸಹ ಸಂಯಯುಃ ॥ ೮೩ ॥

ಉಷ್ಟ್ರರಕ್ಷಾ ಮಹಾವೀರಾಶ್ಚತ್ವಾರಿಂಶತ್ಸಹಸ್ರಕಾಃ ।
ಬಲಖಾನ್ಯಾದಿಭಿಃ ಸಾರ್ಧಂ ಯುಯುಧುರ್ದಿಶಿಚೋತ್ತರೇ ॥ ೮೪ ॥

ಅಹೋರಾತ್ರಮಭೂದ್ಯುದ್ಧಂ ತುಮುಲಂ ಲೋಮಹರ್ಷಣಂ ।
ತತಃ ಪರಾಜಿತಾಸ್ಸರ್ವೇ ಬಲಖಾನೇರ್ಮಹಾಬಲಾಃ ॥ ೮೫ ॥

ತ್ಯಕ್ತ್ವಾ ಯುದ್ಧಂ ತು ತೇ ಸರ್ವೇ ದುದ್ರುವುಶ್ಚ ದಿಶೋ ದಶ ।
ಕೃಷ್ಣಾಂಶೋ ಬಿಂದುಲಾರೂಢೋ ಬಲಖಾನಿಃ ಕಪೋತಗಃ ॥ ೮೬ ॥

---

೮೨. ಮಕರಂದನ ಕಡೆಯ ಒಂದುಲಕ್ಷ ಕುದುರೆ ಸೈನಿಕರು, ಬಲಖಾನಿಯ ಕಡೆಯ ಕುದುರೆಯ ಸೈನಿಕರನ್ನು ಶೌರ್ಯದಿಂದ ಎದುರಿಸಿದರು. ಎರಡು ಕುದುರೆ ಸೈನ್ಯಗಳಿಗೂ ಭಯಂಕರವಾದ ಯುದ್ಧವಾಯಿತು.

೮೩. ಆಗ ಕೋಟೆಯ ಪಶ್ಚಿಮ ಬಾಗಿಲಿನಕಡೆ, ಮಕರಂದನ ಇಪ್ಪತ್ತು ಸಾವಿರ ಆನೆಗಳು, ಬಲಖಾನಿಯ ಹತ್ತುಸಾವಿರ ಆನೆಗಳೊಡನೆ ಹೋರಾಡಿದವು.

೮೪. ಮಹಾವೀರರಾದ ನಲವತ್ತುಸಾವಿರ ಒಂಟೆಯ ಸವಾರರು ಉತ್ತರ ದಿಕ್ಕಿನ ಬಾಗಿಲಲ್ಲಿ ಬಲಖಾನಿ ಮುಂತಾದ ವೀರರೊಡನೆ ಹೋರಾಡಿದರು.

೮೫. ಈ ಎರಡು ಸೇನೆಗಳಿಗೂ ರೋಮಾಂಚವುಂಟಾಗುವಂಥ ಘೋರ ಯುದ್ಧವು ಹಗಲು ರಾತ್ರಿಗಳಲ್ಲಿ ಸಹ ಎಡೆಬಿಡದೆ ನಡೆಯಿತು. ಆಗ ಬಲಖಾನಿಯ ಪಕ್ಷದ ಪರಾಕ್ರಮಿಗಳಾದ ಸೈನಿಕರೆಲ್ಲರೂ ಪರಾಜಿತರಾದರು.

೮೬. ಹೀಗೆ ಪರಾಜಿತರಾದ ಸೈನಿಕರು ಯುದ್ಧವನ್ನು ಬಿಟ್ಟು ದಶದಿಕ್ಕು ಗಳಿಗೂ ಚೆದರಿ ಓಡಿದರು ಆಗ ಅದನ್ನು ನೋಡಿ ಕೃಷ್ಣಾಂಶನು ಬಿಂದುಲವೆಂಬ ಕುದುರೆಯನ್ನೂ, ಬಲಖಾನಿಯು ಕಪೋತ ಎಂಬ ಅಶ್ವವನ್ನೂ ಏರಿದರು.

ಮನೋರಥಸ್ಥಿತೋ ದೇವಶ್ಚಾಹ್ಲಾದಸ್ತು ಗಜಸ್ಥಿತಃ ।
ಪೂರ್ವಾದಿಕ್ರಮತೋ ದ್ವಾರಿ ಗತಾಸ್ತೇ ರಣದುರ್ಮದಾಃ ॥ ೮೭ ॥

ತತ್ಸರುಂ ಖಡ್ಗಮುತ್ಸೃಜ್ಯ ಚಕ್ರುಃ ಶತ್ರುಮಹಾವಧಂ ।
ಪರಾಜಿತಾಶ್ಚ ತೇ ಶೂರಾ ಮಕರಂದಮುಪಾಯಯುಃ ॥ ೮೮ ॥

ವಹ್ನಿಪುತ್ರಸ್ತು ಬಲವಾನ್ ವಾಜಿನಂ ಚ ಶಿಲಾಮಯಂ ।
ಶನಿಭಲ್ಲಕರಗ್ರಾಹೀ ತಮಾರುಹ್ಯ ರಣಂ ಯಯೌ ॥ ೮೯ ॥

ಕೃಷ್ಣಾಂಶಾದ್ಯಾಶ್ಚ ತೇ ಶೂರಾಃ ರುರುಧು ಸ್ಸರ್ವತೋ ದಿಶಂ ।
ತಂ ಚ ಕಂಠೇ ದದೌ ಖಡ್ಗಂ ಬಲಖಾನಿರ್ಮಹಾಬಲಃ ॥ ೯೦ ॥

ಸ್ವಭಲ್ಲಂ ದೇವಸಿಂಹಶ್ಚ ತಮಂಕೇ ಚ ಸಮಾಹನತ್ ।
ಆಹ್ಲಾದೋ ವಕ್ಷಸಿ ಶರಂ ಕೃಷ್ಣಾಂಶಃ ಖಡ್ಗಮುತ್ತಮಂ ॥ ೯೧ ॥

---

೮೭. ದೇವಸಿಂಹನು ಮನೋರಥವೆಂಬ ಅಶ್ವವನ್ನೂ, ಆಹ್ಲಾದನು ಗಜವನ್ನೂ ಏರಿದರು. ಯುದ್ಧೋನ್ಮತ್ತರಾದ ಆ ನಾಲ್ವರು ಶೂರರೂ ಪೂರ್ವ ದಕ್ಷಿಣ ಮೊದಲಾದ ನಾಲ್ಕು ದಿಕ್ಕುಗಳ ಕೋಟೆಯ ಬಾಗಿಲುಗಳಿಗೂ ಕ್ರಮವಾಗಿ ಹೋದರು.

೮೮. ಅಲ್ಲಿ ನಿಂತು ಒರೆಯಿಂದ ಖಡ್ಗವನ್ನು ಸೆಳೆದು ಶತ್ರುಗಳನ್ನು ಸಂಪೂರ್ಣವಾಗಿ ಧ್ವಂಸಮಾಡಹತ್ತಿದರು. ಆಗ ಮಕರಂದನ ಕಡೆಯ ಶೂರರೆಲ್ಲಾ ಸೇರಿ ಮಕರಂದನ ಬಳಿ ಹೋಗಿ ಮರೆಹೊಕ್ಕರು.

೮೯. ಬಲಶಾಲಿಯೂ ವಹ್ನಿಪುತ್ರನೂ ಆದ ಮಕರಂದನು ಶಿಲಾಕಲ್ಪವಾದ ತನ್ನ ಕುದುರೆಯನ್ನೇರಿ ಶನಿದೇವನು ಕರುಣಿಸಿದ ಭರ್ಜಿಯನ್ನು ಹಿಡಿದು ಯುದ್ಧಕ್ಕೆ ತೆರಳಿದನು.

೯೦. ಕೃಷ್ಣಾಂಶನೇ ಮೊದಲಾದ ಆ ನಾಲ್ಕುಮಂದಿ ಶೂರರೂ ಸಹ ಇವನನ್ನು ಎಲ್ಲ ಕಡೆಯಿಂದಲೂ ಮುತ್ತಿದರು. ಬಲಿಷ್ಠನಾದ ಬಲಖಾನಿಯು ಮಕರಂದನ ಕುತ್ತಿಗೆಗೆ ಖಡ್ಗದಿಂದ ಹೊಡೆದನು.

೯೧. ದೇವಸಿಂಹನು ತನ್ನ ಭರ್ಜಿಯಿಂದ ಮಕರಂದನ ತೊಡೆಗೆ ಚುಚ್ಚಿದನು. ಆಹ್ಲಾದನು ಮಕರಂದನ ಎದೆಯಲ್ಲಿ ಬಾಣವನ್ನು ನಾಟಿದನು. ಕೃಷ್ಣಾಂಶನು ಶ್ರೇಷ್ಠವಾದ ಖಡ್ಗದಿಂದ ಎಲ್ಲ ಕಡೆಗೂ ಹೊಡೆದನು.

ಶಿಲಾವಾಜಿಪ್ರಭಾವೇಣ ಕಶ್ಮಲಂ ನ ಜಗಾಮ ಹ ।
ಸ ದೃಷ್ಟ್ವಾ ನಿಷ್ಫಲಾನ್ ವೀರಾನ್ ಜಗರ್ಜ ಭೈರವಂ ಧ್ವನಿಂ ॥ ೯೨ ॥

ಶನಿಭಲ್ಲೇನ ತೇ ಸರ್ವೇ ಬಭೂವುರ್ಮೂರ್ಛಿತಾ ರಣೇ ।
ತೇಽಶ್ವಾಃ ಶಿಲಾಶ್ವವೇಗೇನ ಮೂರ್ಛಿತಾಶ್ಚಾಭವನ್ ಕ್ಷಣಾತ್ ॥ ೯೩ ॥

ಮಕರಂದಸ್ತು ಬಲವಾನ್ ಬಧ್ವಾ ತಾನ್ ಯುದ್ಧದುರ್ಮದಾನ್ ।
ಪ್ರಸನ್ನಾತ್ಮಾ ಯಯೌ ಗೇಹಂ ಸ್ವಪಿತ್ರೇ ತಾನ್ ನ್ಯವೇದಯತ್ ॥ ೯೪ ॥

ದೃಷ್ಟ್ವಾ ಪರಾಜಿತಾನ್ ವೀರಾನ್ ರೂಪಣೋ ಭಯಕಾತರಃ ।
ಮಹಾವತೀಂ ಪುರೀಂ ಪ್ರಾಪ್ಯ ಭೂಪತಿಂ ಸಮವರ್ಣಯತ್ ॥ ೯೫ ॥

---

೯೨ ಈರೀತಿ ನಾಲ್ವರೂ ಏಕಕಾಲದಲ್ಲಿ ಆಯುಧವನ್ನು ಪ್ರಯೋಗಿಸಿದರೂ ಶಿಲಾಮಯವಾದ ಕುದುರೆಯ ಪ್ರಭಾವದಿಂದ ಮಕರಂದನಿಗೆ ಯಾವ ತೊಂದರೆಯೂ ಆಗಲಿಲ್ಲ. ಆಗ ಮಕರಂದನು, ಈರೀತಿ ನಿಷ್ಫಲವಾದ ಅಸ್ತ್ರಗಳುಳ್ಳ ಕೃಷ್ಣಾಂಶಾದಿಗಳನ್ನು ನೋಡಿ ಭಯಂಕರ ಧ್ವನಿಯಿಂದ ಸಿಂಹನಾದ ಮಾಡಿದನು.

೯೩. ಅಲ್ಲದೆ ಕೃಷ್ಣಾಂಶಾದಿಗಳೆಲ್ಲರೂ ಈ ಮಕರಂದನ ಶನಿಭಲ್ಲೆಯಿಂದ ಯುದ್ಧರಂಗದಲ್ಲಿ ಮೂರ್ಛಿತರಾದರು. ಅವರ ಕುದುರೆಗಳೆಲ್ಲವೂ ಮಕರಂದನ ಶಿಲಾಮಯವಾದ ಕುದುರೆಯ ವೇಗಾತಿಶಯದಿಂದ ಕ್ಷಣಮಾತ್ರದಲ್ಲಿ ಬಳಲಿ ಮೂರ್ಛೆ ಹೊಂದಿದುವು.

೯೪. ಆಗ ಬಲಶಾಲಿಯಾದ ಮಕರಂದನು ಯುದ್ಧೋನ್ಮತ್ತರಾದ ನಾಲ್ಕು ಮಂದಿಯನ್ನೂ ಬಂಧಿಸಿ, ಸಂತುಷ್ಟಾಂತರಂಗನಾಗಿ ತನ್ನ ಮನೆಯನ್ನು ಸೇರಿ ಆ ನಾಲ್ಕು ಮಂದಿಯನ್ನೂ ತಂದೆಯಾದ ಮಯೂರಧ್ವಜ ಮಹಾರಾಜನಿಗೆ ಒಪ್ಪಿಸಿದನು.

೯೫. ಈರೀತಿ ಕೃಷ್ಣಾಂಶನೇ ಮುಂತಾದ ನಾಲ್ಕು ಮಂದಿ ವೀರರೂ ಸೋತು ಸೆರೆಸಿಕ್ಕಿದುದನ್ನು ನೋಡಿ, ರೂಪಣನು ಭಯದಿಂದ ಹೆದರಿ, ಮಹಾವತೀ ನಗರಕ್ಕೆ ಹಿಂತಿರುಗಿ ಹೋಗಿ ಪರಿಮಳರಾಜನಿಗೆ ಇವೆಲ್ಲವನ್ನೂ ತಿಳಿಸಿದನು.

ಬ್ರಹ್ಮಾನಂದಸ್ತು ತಚ್ಛ್ರುತ್ವಾ ಲಕ್ಷಸೈನ್ಯಸಮನ್ವಿತಃ ।
ಇಂದುಲೇನ ಸಹಾಯೇನ ಮಯೂರನಗರಂ ಯಯೌ ॥ ೯೬ ॥

ಲಿಖಿತ್ವಾ ನಿರ್ಮಲಂ ಪತ್ರಂ ತದ್ರಾಜ್ಞೇ ತ್ವರಿತೋ ದದೌ ।
ಭೂಮಿರಾಜಸುತಾಕಾಂತಂ ವಿದ್ಧಿ ಮಾಂ ಮನುಜರ್ಷಭ ॥ ೯೭ ॥

ಕೃಷ್ಣಾಂಶಾಯ ಸುತಾಂ ದೇಹಿ ನಾಮ್ನಾ ಪುಷ್ಪವತೀಂ ಶುಭಾಂ ।
ನೋ ಚೇನ್ಮತ್ತ್ಯಶಿನ್ಯೈರ್ಬಾಣೈಃ ಕ್ಷಯಂ ಯಾಸ್ಯಂತಿ ಸೈನಿಕಾಃ ॥ ೯೮ ॥

ನಿಶಮ್ಯೇತಿ ನೃಪಶ್ರೇಷ್ಠೋ ಮಯೂರಧ್ವಜ ಏವ ಸಃ ।
ಮಕರಂದೇನ ಸಹಿತೋ ದ್ವಿಲಕ್ಷಬಲಸಂಯುತಃ ।
ಅಹೋರಾತ್ರಂ ಕೃತಂ ಯುದ್ಧಂ ತೇನ ಸಾರ್ಧಂ ಭಯಪ್ರದಂ ॥ ೯೯ ॥

---

೯೬. ಬ್ರಹ್ಮಾನಂದನು ಈ ಮಾತನ್ನು ಕೇಳಿ ಲಕ್ಷ ಸೇನೆಯೊಡನೆ ಹೊರಟು ಇಂದುಲನ ಬೆಂಬಲದೊಡನೆ ಮಯೂರನಗರಕ್ಕೆ ಬಂದನು.

೯೭. ಕೂಡಲೆ ಶ್ರೇಷ್ಠವಾದ ಒಂದು ಲೇಖನವನ್ನು ಬರೆಯಿಸಿ ಅದನ್ನು ಮಯೂರಧ್ವಜನ ಬಳಿಗೆ ಜಾಗ್ರತೆ ಕಳುಹಿಸಿದನು. ಅದರ ಒಕ್ಕಣೆ ಈರೀತಿ ಇದ್ದಿತು. “ ಮಾನವಶ್ರೇಷ್ಠನೇ ! ನನ್ನನ್ನು ಪೃಥ್ವೀರಾಜನ ಅಳಿಯನೆಂದು ತಿಳಿ.

೯೮. ಮಂಗಳಸ್ವರೂಪಿಣಿಯಾದ ನಿನ್ನ ಕುಮಾರಿ ಪುಷ್ಪಾವತಿಯನ್ನು ಕೃಷ್ಣಾಂಶನಿಗೆ ಕೊಟ್ಟು ಮದುವೆಮಾಡು. ಇಲ್ಲದೇ ಇದ್ದರೆ ನಿನ್ನ ಸೈನಿಕರು ನನ್ನ ಕ್ರೂರ ಬಾಣಗಳಿಗೆ ತುತ್ತಾಗಿ ನಾಶಹೊಂದುವರು (ಎಂದು ಬರೆದಿದ್ದಿತು.)

೯೯. ಈ ರೀತಿಯಾಗಿ ಲೇಖನ ಬರೆದಿರುವುದನ್ನು ರಾಜಶ್ರೇಷ್ಠನಾದ ಮಯೂರಧ್ವಜನು ನೋಡಿ, ಎರಡು ಲಕ್ಷ ಸೇನೆಯನ್ನು ತೆಗೆದುಕೊಂಡು ಮಕರಂದ ನನ್ನೂ ಜೊತೆಯಲ್ಲಿ ಕರೆದುಕೊಂಡು ಯುದ್ಧಕ್ಕೆ ಬಂದು ಹಗಲು ರಾತ್ರಿ ಎನ್ನದೆ ಬ್ರಹ್ಮಾನಂದನೊಡನೆ ಭಯಂಕರವಾಗಿ ಯುದ್ಧಮಾಡಿದನು

ಬ್ರಹ್ಮಾನಂದಸ್ತು ಬಲವಾನ್ ಬಾಣಯುದ್ಧಮಚೀಕರತ್ ।
ಮಕರಂದಸ್ಯ ಭಲ್ಲೇನ ಮೂರ್ಛಿತಃ ಸೋಽಪತದ್ಭುವಿ ॥ ೧೦೦ ॥

ತದಾ ಸ್ವರ್ಣವತೀಪುತ್ರೋ ಜಯಂತಃ ಶಕ್ರಸಂಭವಃ ।
ಸ್ವವಿದ್ಯಾಂ ದರ್ಶಯಾಮಾಸ ಮಕರಂದಾಯ ಧೀಮತೇ ॥ ೧೦೧ ॥

ವೈಷ್ಣವಾಸ್ತ್ರಪ್ರಭಾವೇಣ ಶಿಲಾಶ್ವೋ ಭಸ್ಮಚಾಽಭವತ್ ।
ಬ್ರಹ್ಮಾಸ್ತ್ರೇಣ ಭೃಗುಶ್ರೇಷ್ಠ ಶನಿಭಲ್ಲೋಽಪತದ್ಭುವಿ ॥ ೧೦೨ ॥

ನಾಗಪಾಶೇನ ತಂ ಬಧ್ವಾ ಮಕರಂದಂ ಮಹಾಬಲಂ ।
ವಿವಾಹಂ ಕಾರಯಾಮಾಸ ಕೃಷ್ಣಾಂಶಸ್ಯ ಮಹಾತ್ಮನಃ ॥ ೧೦೩ ॥

ಸೇನಾಮುಜ್ಜೀವಯಾಮಾಸ ಸ್ವಕೀಯಾಮಿಂದುಲೋ ಬಲೀ ।
ಮಂಗಲಂ ಕಾರಯಾಮಾಸ ಮಕರಂದೋ ಗೃಹೇಗೃಹೇ ॥ ೧೦೪ ॥

---

೧೦೦. ಬಲಶಾಲಿಯಾದ ಬ್ರಹ್ಮಾನಂದನು ಬಾಣ ಪ್ರಯೋಗಮಾಡಲು ಪ್ರಾರಂಭಿಸಿದನು. ಆದರೆ ಮಕರಂದನ ಭಲ್ಲೆಯ ಏಟು ತಗಲಿ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು.

೧೦೧ ಸ್ವರ್ಣವತಿಯ ಮಗನೂ, ಇಂದ್ರಪುತ್ರನಾದ ಜಯಂತನ ಅವತಾರನೂ ಆದ ಇಂದುಲನು, ಇದನ್ನು ನೋಡಿ, ಮೇಧಾವಿಯಾದ ಮಕರಂದನಿಗೆ ತನ್ನ ಯುದ್ಧ ಕೌಶಲವನ್ನು ತೋರಿಸಿದನು.

೧೦೨. ಜಯಂತನ ವೈಷ್ಣವಾಸ್ತ್ರದ ಮಹಿಮೆಯಿಂದ ಮಕರಂದನ ಶಿಲಾಮಯವಾದ ಅಶ್ವವು ಭಸ್ಮವಾಯಿತು. ಆಯ್ಯಾ ಶೌನಕನೇ! ಬ್ರಹ್ಮಾಸ್ತ್ರದ ಪ್ರಭಾವದಿಂದ ಮಕರಂದನಿಗೆ ಲಭ್ಯವಾಗಿದ್ದ ಶನಿಭಲ್ಲೆಯವೂ ಮುರಿದು ನೆಲಕ್ಕೆ ಬಿತ್ತು

೧೦೩ ಅನಂತರ ಇಂದುಲನು ಆ ವೀರ ಮಕರಂದನನ್ನು ನಾಗಪಾಶದಿಂದ ಬಂಧಿಸಿ ಕೂರಿಸಿ, ಅವನ ತಂಗಿಯಾದ ಪುಷ್ಪವತಿಯನ್ನು ಮಹಾಪುರುಷನಾದ ಕೃಷ್ಣಾಂಶನಿಗೆ ಕೊಟ್ಟು ವಿವಾಹ ಮಾಡಿಸಿದನು.

೧೦೪. ಅಲ್ಲದೆ ಆ ಮಹಾಬಲಶಾಲಿಯಾದ ಇಂದುಲನು ಮೃತರಾಗಿದ್ದ ತನ್ನ ಸೇನೆಯವರೆಲ್ಲರನ್ನೂ ಪುನಃ ಬದುಕಿಸಿದನು. ಈರೀತಿ ಸುಮುಖವಾದುದನ್ನು ನೋಡಿ ಮಕರಂದನು ತನ್ನ ಪಟ್ಟಣದ ಪ್ರತಿಮನೆಯಲ್ಲೂ ಮಂಗಳಮಹೋತ್ಸವವನ್ನು ಮಾಡಿಸಿದನು.

**ದದೌ ಕನ್ಯಾಂ ವಿಧಾನೇನ ಬಹುದ್ರವ್ಯಸಮನ್ವಿತಾಂ ।**
**ಮಯೂರಧ್ವಜಭೂಪಾಲೋ ಮಹಾಸ್ನೇಹಮಚೀಕರತ್ ।**
**ನೃಪಾಜ್ಞಾಂ ತೇ ಪುರಸ್ಕೃತ್ಯ ಯಯುಃ ಸಾರ್ಧಂ ಮಹಾವತೀಂ ॥ ೧೦೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಕೃಷ್ಣಾಂಶ ವಿವಾಹೋ ನಾಮೈಕವಿಂಶೋಽಧ್ಯಾಯಃ**



---

೧೦೫. ಮಯೂರಧ್ವಜರಾಜನು ಸಹ ಮಗಳಾದ ಪುಷ್ಪವತಿಯನ್ನು ಶಾಸ್ತ್ರ ರೀತಿಯಿಂದ ವಿವಾಹ ಮಾಡಿಕೊಟ್ಟು ಅವಳಿಗೆ ಅನೇಕ ಉಡುಗೊರೆಗಳನ್ನು ಕೊಟ್ಟು ಕೃಷ್ಣಾಂಶಾದಿಗಳಲ್ಲಿ ಅತ್ಯಂತ ಸ್ನೇಹದಿಂದ ನಡೆದುಕೊಂಡನು. ಕೃಷ್ಣಾಂಶ ಮೊದಲಾದವರೆಲ್ಲರೂ ಮಯೂರಧ್ವಜನ ಅಪ್ಪಣೆ ಪಡೆದು ಮಹಾವತೀ ನಗರಕ್ಕೆ ಬಂದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯಖಂಡದ ಕಲಿಯುಗದ ಇತಿಹಾಸಸಮುಚ್ಚಯದಲ್ಲಿ ಕೃಷ್ಣಾಂಶ ವಿವಾಹ ವರ್ಣನೆ ಎಂಬ ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ದ್ವಾವಿಂಶೋಽಧ್ಯಾಯಃ

॥ ಸೂತ ಉವಾಚ ॥

ಮಹಾವತ್ಯಾಂ ತು ಸಂಪ್ರಾಪ್ತೇ ಕೃಷ್ಣಾಂಶೇ ಬಲವತ್ತರೇ ।
ಮಂಗಲಂ ಕೃತವಾನ್ ರಾಜಾ ತದಾ ಪರಿಮಲೋ ಬಲೀ ॥ ೧ ॥

ಪುಷ್ಪವತ್ಯಾ ತಯಾ ಸಾರ್ಧಂ ಗೀತನೃತ್ಯವಿಶಾರದಃ ।
ಕೃಷ್ಣಾಂಶಃ ಪ್ರತ್ಯಹಂ ಗೇಹೇ ಮುಮೋದಹ ಸಖಿಭಿಃ ಸಹ ॥ ೨ ॥

ಹೇಮಂತಶಿಶಿರೇ ವೀರೋ ರಹಃಕ್ರೀಡಾಂ ಕರೋತಿ ವೈ ।
ಯಥಾ ಶಕ್ರೋಽಪ್ಸರೋಭಿಶ್ಚ ತಥೈವ ಹೃದಯೋ ಬಲೀ ॥ ೩ ॥

---

### ಇಪ್ಪತ್ತೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಬಲಶಾಲಿಯಾದ ಕೃಷ್ಣಾಂಶನು ವಿಜಯಿಯಾಗಿ ಮದುವೆಮಾಡಿಕೊಂಡು ಮಹಾವತೀ ನಗರಕ್ಕೆ ಬಂದ ಮೇಲೆ ಶೂರನಾದ ಪರಿಮಳರಾಜನು ಅನೇಕ ಮಂಗಳಕಾರ್ಯಗಳನ್ನು ವೈಭವದಿಂದ ನಡೆಯಿಸಿದನು.

೨. ಗೀತ ಮತ್ತು ನಾಟ್ಯಗಳಲ್ಲಿ ನಿಪುಣನಾದ ಕೃಷ್ಣಾಂಶನು, ಸಖಿಯರೊಡಗೂಡಿದ ಆ ಪುಷ್ಪವತಿಯೊಡನೆ ಪ್ರತಿದಿನವೂ ಆಕೆಯ ಮನೆಯಲ್ಲಿ ವಿಹರಿಸುತ್ತಾ ಆನಂದಪರವಶನಾಗಿದ್ದನು.

೩. ಇಂದ್ರನು ಅಪ್ಸರಸ್ತ್ರೀಯರುಗಳಿಂದ ಸುತ್ತುವರಿಯಲ್ಪಟ್ಟು ವಿಹರಿಸುವಂತೆ, ವೀರನಾದ ಕೃಷ್ಣಾಂಶನು ಹೇಮಂತ ಮತ್ತು ಶಿಶಿರಋತುಗಳಲ್ಲಿ ಆ ಪುಷ್ಪವತಿಯೊಡನೆ ರಹಸ್ಯವಾದ ವಿನೋದಗಳಿಂದ ಕ್ರೀಡಿಸುತ್ತಿದ್ದನು.

ಗ್ರಾಮ್ಯಧರ್ಮಂ ನ ಕೃತವಾನ್ ಸರ್ವಸ್ಪರ್ಶವಿಶಾರದಃ ।
ಏಕದಾ ನೃತ್ಯಕ್ರೀಡಾಯಾಂ ದೇವೀ ಪುಷ್ಪವತೀ ಸ್ವಯಂ ॥ ೪ ॥

ಕೃಷ್ಣಾಂಶಂ ವಚನಂ ಪ್ರಾಹ ಪೂರ್ವಜನ್ಮನಿ ಕೋ ಭವಾನ್ ।
ಇತಿ ಶ್ರುತ್ವೋದಯೋ ವೀರೋ ವಿಹಸ್ಯೋವಾಚ ವೈ ವಚಃ ॥ ೫ ॥

ನೃಪೋಽಹಂ ಚಂದ್ರದಾ(ಹಾ)ಸಶ್ಚ ಪೂರ್ವಜನ್ಮನಿ ಹೇ ಪ್ರಿಯೇ ।
ಬಾಲ್ಯಾತ್ಪ್ರಭೃತಿ ಮೇ ದುಃಖಂ ಪ್ರಾಪ್ತಂ ದೈವವಿನಿರ್ಮಿತಂ ॥ ೬ ॥

ಶಾಲಗ್ರಾಮಶಿಲಾಪೂಜಾ ಪ್ರತ್ಯಹಂ ವೈ ಮಯಾ ಕೃತಾ ।
ತೇನ ಪುಣ್ಯಪ್ರಭಾವೇಣ ಸಾರ್ವಭೌಮೋ ಬಭೂವ ಹ ॥ ೭ ॥

ಮೃತೇಽಹನಿ ತು ಸಂಪ್ರಾಪ್ತೇ ಶಾಲಗ್ರಾಮೇ ಮನೋ ದಧೌ ।
ಸಾಯುಜ್ಯಂ ಮೇ ಹರೇಶ್ಚಾಸೀತ್ ಸ್ವಯಂ ಬ್ರಹ್ಮಪ್ರಸಾದತಃ ॥ ೮ ॥

---

೪-೫. ಸ್ಪರ್ಶವಿಶಾರದನಾದ ಕೃಷ್ಣಾಂಶನು ಹೀಗೆ ತನ್ನ ಪ್ರಿಯೆಯೊಡನೆ ಬಗೆ ಬಗೆಯಾಗಿ ವಿಹರಿಸುತ್ತಿದ್ದರೂ ಎಂದೂ ಗ್ರಾಮ್ಯಧರ್ಮವನ್ನು ನಡೆಯಿಸುತ್ತಿರಲಿಲ್ಲ ಒಂದುದಿನ ನರ್ತನಮಾಡುತ್ತಿರುವಾಗ ಪುಷ್ಪವತೀದೇವಿಯು ತಾನಾಗಿಯೇ, ತನ್ನ ಪ್ರಿಯನಾದ ಕೃಷ್ಣಾಂಶನನ್ನು ಕುರಿತು "ಪ್ರಿಯನೇ! ಹಿಂದಿನ ಜನ್ಮದಲ್ಲಿ, ನೀನು ಯಾರಾಗಿದ್ದೆ ?" ಎಂದು ಕೇಳಲು ಕೃಷ್ಣಾಂಶನು ಸ್ವಲ್ಪ ನಕ್ಕು ಮುಂದೆ ಹೇಳುವಂತೆ ಹೇಳಿದನು.

೬. "ನಾನು ಹಿಂದಿನ ಜನ್ಮದಲ್ಲಿ ಚಂದ್ರಹಾ(ದಾ)ಸನೆಂಬ ರಾಜನಾಗಿದ್ದೆನು. ಪ್ರಿಯೇ! ದೈವವಶದಿಂದ ಬಾಲ್ಯಾರಭ್ಯ ನನಗೆ ಆಗ ದುಃಖವೇ ಪ್ರಾಪ್ತಿಯಾಗಿದ್ದಿತು.

೭. ಆದಾಗ್ಯೂ ನಾನು ಪ್ರತಿದಿನವೂ ಸಾಲಿಗ್ರಾಮ ಶಿಲೆಯನ್ನು ಭಕ್ತಿಯಿಂದ ಪೂಜಿಸುತ್ತಿದ್ದೆನು. ಆ ಪೂಜೆಯ ಪುಣ್ಯಪ್ರಭಾವದಿಂದ ಈಗ ನಾನು ಸಾರ್ವಭೌಮನಾಗಲು ಕಾರಣವಾಯಿತು.

೮. ಸಾಯುವ ದಿವಸವೂ ಸಹ ನಾನು ಸಾಲಿಗ್ರಾಮ ಶಿಲೆಯಲ್ಲಿ ನೆಟ್ಟ ಮನಸ್ಸುಳ್ಳವನಾಗಿದ್ದೆನು. ಆದಕಾರಣ ಬ್ರಹ್ಮನ ಅನುಗ್ರಹವೊದಗಿ ನನಗೆ ಮಹಾವಿಷ್ಣುವಿನ ಸಾನ್ನಿಧ್ಯ ಪ್ರಾಪ್ತವಾಯಿತು.

ಕಲಿನಾ ಪ್ರಾರ್ಥಿತೋ ವಿಷ್ಣುಃ ಕಾಲಾತ್ಮಾ ಪರಮೇಶ್ವರಃ ।
ಸ್ವದೇಹಾನ್ಮಾಂ ತು ನಿಷ್ಕಾಸ್ಯ ಭೂಮೌ ಜನಿಮಚೀಕರತ್ ॥ ೯ ॥

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ವೈ ಪ್ರಿಯೇ ।
ಯುಗಧರ್ಮಸ್ಯ ಮರ್ಯಾದಾಸ್ಥಾಪನಾಯ ಭವಾಮ್ಯಹಂ ॥ ೧೦ ॥

ಸತ್ಯೇ ತು ಮಾನಸೀ ಪೂಜಾ ದೇವಾನಾಂ ತೃಪ್ತಿಹೇತವೇ ।
ತ್ರೇತಾಯಾಂ ವಹ್ನಿಪೂಜಾ ಚ ಯಜ್ಞದಾನಾದಿಕಾ ಕ್ರಿಯಾ ॥ ೧೧ ॥

ದ್ವಾಪರೇ ಮೂರ್ತಿಪೂಜಾ ಚ ದೇವಾನಾಂ ವೈ ಪ್ರಿಯಂಕರೀ ।
ಕಲೌ ತು ದಾರುಣೇ ಪ್ರಾಪ್ತೇ ಬ್ರಹ್ಮಪೂಜನಮುತ್ತಮಂ ॥ ೧೨ ॥

---

೯. ಅನಂತರ ಕಲಿಪುರುಷನು ಮಹಾವಿಷ್ಣುವನ್ನು ಪ್ರಾರ್ಥಿಸಲಾಗಿ, ಆಗ ಕಾಲಪುರುಷನಾದ ಆ ಪರಮೇಶ್ವರನು ತನ್ನ ದೇಹದಲ್ಲಿ ಐಕ್ಯನಾಗಿದ್ದ ನನ್ನನ್ನು ಬೇರ್ಪಡಿಸಿ, ಭೂಮಿಯಲ್ಲಿ ಹುಟ್ಟುವಂತೆ ಮಾಡಿದನು.

೧೦. ಪ್ರಿಯಳೆ! ಧರ್ಮಗಳಿಗೆ ವಿನಾಶಕಾಲವು ಒದಗಿದ್ದಾಗಲೆಲ್ಲ ನಾನು ಅವತರಿಸಿ ಆಯಾಯ ಯುಗಧರ್ಮಗಳ ಎಲ್ಲೆಯನ್ನು ಸ್ಥಾಪಿಸುವೆನು.

೧೧. (ಕೃತಯುಗ) ಸತ್ಯಯುಗದಲ್ಲಿ ಮಾನಸಿಕಪೂಜೆಯು ದೇವತೆಗಳಿಗೆ ತೃಪ್ತಿಯನ್ನುಂಟುಮಾಡುತ್ತಿದ್ದಿತು. ತ್ರೇತಾಯುಗದಲ್ಲಿ ಅಗ್ನಿಪೂಜೆಯೂ ಯಜ್ಞ, ದಾನ ಮೊದಲಾದ ಕರ್ಮಗಳೂ ಸಹ ಜನಗಳಿಂದ ಆಚರಿಸಲ್ಪಟ್ಟು, ದೇವತೆಗಳನ್ನು ಸಂತೋಷಗೊಳಿಸುತ್ತಿದ್ದುವು.

೧೨. ದ್ವಾಪರಯುಗದಲ್ಲಿ ದೇವಮೂರ್ತಿ (ವಿಗ್ರಹ) ಗಳನ್ನಿರಿಸಿಕೊಂಡು ಪೂಜೆಮಾಡುವುದು ದೇವತೆಗಳಿಗೆ ಪ್ರಿಯಕರವಾಗಿರುತ್ತಿದ್ದಿತು. ಈ ಭಯಂಕರವಾದ ಕಲಿಯುಗವು ಒದಗಿರುವಾಗ ಬ್ರಹ್ಮಪೂಜೆಯೇ ಶ್ರೇಷ್ಠವೆನಿಸಿ, ದೇವತೆಗಳಿಗೆ ಪ್ರಿಯಕರ ವಾಗಿರುವುದು.

ಅಹಂ ಹಂಸಃ ಸತ್ಯಯುಗೇ ತ್ರೇತಾಯಾಂ ಯಜ್ಞಪೂರುಷಃ ।
ಹಿರಣ್ಯಗರ್ಭಶ್ಚ ಪ್ರಿಯೇ ದ್ವಾಪರೇಽಹಂ ಸುಖಪ್ರದಃ ॥ ೧೩ ॥

ಶಾಲಗ್ರಾಮಃ ಕಲೌ ಪ್ರಾಪ್ತೇ ದೇವಾನಾಂ ತೃಪ್ತಯೇ ಹ್ಯಹಂ ।
ಮುನಯೋ ದೇವತಾ ಸ್ಸರ್ವಾಸ್ತಥಾ ಪಿತೃಗಣಾಃ ಪ್ರಿಯೇ ।
ಸರ್ವೇ ತೇ ತೃಪ್ತಿಮಾಯಾಂತಿ ಶಾಲಗ್ರಾಮಸ್ಯ ಪೂಜನಾತ್ ॥ ೧೪ ॥

ದ್ವಿಜಾತಿಭಿಸ್ತ್ರಿವರ್ಣೈಶ್ಚ ಪೂಜನಂ ಚಂದನಾದಿಕೈಃ ।
ಶೂದ್ರೈಶ್ಚ ಸ್ನಾನಮಾತ್ರೇಣ ಭಕ್ತಿಭಾವೇನ ಪೂಜನಂ ॥ ೧೫ ॥

ಮ್ಲೇಚ್ಛೈಶ್ಚ ದರ್ಶನಂ ಪುಣ್ಯಂ ವಿನಯಾದ್ಭಕ್ತಿಭಾವತಃ ।
ಶಾಲಗ್ರಾಮಃ ಸ್ವಯಂ ಬ್ರಹ್ಮ ಸಚ್ಚಿದಾನಂದವಿಗ್ರಹಃ ॥ ೧೬ ॥

---

೧೩. ನಾನು ಸತ್ಯ (ಕೃತ) ಯುಗದಲ್ಲಿ ಹಂಸ, ತ್ರೇತಾಯುಗದಲ್ಲಿ ಯಜ್ಞ ಪುರುಷ, ದ್ವಾಪರಯುಗದಲ್ಲಿ ಸುಖಕರನಾದ ಹಿರಣ್ಯಗರ್ಭ, ಕಲಿಯುಗದಲ್ಲಿ ಸಾಲಿಗ್ರಾಮ ಈ ಪ್ರಕಾರವಾದ ರೂಪಗಳನ್ನು ಧರಿಸಿ, ದೇವತೆಗಳಿಗೆ ತೃಪ್ತಿಯನ್ನುಂಟು ಮಾಡುವೆನು.

೧೪. ಎಲೌ ಪ್ರಿಯೆಯೇ! ಮಹರ್ಷಿಗಳು, ದೇವತೆಗಳು, ಮತ್ತು ಪಿತೃದೇವತಾಸಮೂಹ ಎಲ್ಲರೂ ಸಾಲಿಗ್ರಾಮ ಪೂಜೆಯಿಂದ ತೃಪ್ತಿಹೊಂದುವರು.

೧೫. ಪ್ರಿಯಳೆ! ಬ್ರಹ್ಮ, ಕ್ಷತ್ರಿಯ, ವೈಶ್ಯ ಈ ಮೂರು ದ್ವಿಜ ವರ್ಣದವರೂ ಚಂದನ, ಗಂಧ ಮೊದಲಾದ ಪೂಜಾಸಾಮಾಗ್ರಿಗಳಿಂದ ಸಾಲಿಗ್ರಾಮಸ್ವರೂಪನಾದ ದೇವನನ್ನು ಷೋಡಶೋಪಚಾರಗಳಿಂದ ಮಂತ್ರಪೂರ್ವಕ ಪೂಜಿಸಬಹುದು. ಶೂದ್ರನು ಸ್ನಾನ ಮಾತ್ರ ಮಾಡಿಸಿ, ಕೇವಲ ಭಕ್ತಿಯಿಂದ ಪೂಜಿಸಬೇಕು.

೧೬. ಮ್ಲೇಚ್ಛರು ಸಾಲಿಗ್ರಾಮಸ್ವರೂಪನಾದ ದೇವರ ದರ್ಶನವನ್ನು ಮಾತ್ರ ಆಚರಿಸಿ ಭಕ್ತಿಭಾವದಿಂದ ಯುಕ್ತರಾಗಿ ವರ್ತಿಸಬೇಕು. ಇದರಿಂದ ಪುಣ್ಯ ಲಭಿಸುವುದು. ಸಾಲಿಗ್ರಾಮವು ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮವೇ ಆಗಿರುವುದು. ಅದರ ದರ್ಶನ ಮಾತ್ರದಿಂದಲೇ ಸಕಲ ಪಾಪಗಳೂ ನಿವೃತ್ತಿಯಾಗಿ ಪುರುಷನು ಪವಿತ್ರನಾಗುವನು.

ತಸ್ಯ ದರ್ಶನಮಾತ್ರೇಣ ಕ್ಷಯಂ ಯಾಸ್ಯಂತಿ ವೈ ಮಲಾಃ ।
ಇತಿ ತೇ ಕಥಿತಂ ದೇವಿ ಯುಗಮರ್ಯಾದಮುತ್ತಮಂ ॥ ೧೭ ॥

ಪುರಾ ತ್ವಂ ಕಸ್ಯ ತನಯಾ ಸತ್ಯಂ ಕಥಯ ಮೇಽಚಿರಂ ।
॥ ಪುಷ್ಪವತ್ಯುವಾಚ ॥
ಪೂರ್ವಜನ್ಮನಿ ವೇಶ್ಯಾಹಂ ಚಂದ್ರಕಾಂತಿರಿತಿ ಶ್ರುತಾ ।
ಗಾನನೃತ್ಯಾದಿಕಂ ವಾದ್ಯಂ ದೇವಸ್ಯಾಗ್ರೇ ಮಯಾ ಕೃತಂ ॥ ೧೮ ॥

ತೇನ ಪುಣ್ಯಪ್ರಭಾವೇಣ ಸ್ವರ್ಗಲೋಕಮುಪಾಗತಾ ।
ದೇವೈಶ್ಚ ಪ್ರಾರ್ಥಿತಾ ತತ್ರ ರೂಪಯೌವನಶಾಲಿನೀ ॥ ೧೯ ॥

ಬ್ರಹ್ಮಚರ್ಯಂ ನ ತತ್ಯಾಜ ಸ್ವರ್ಗಲೋಕೇಽಪಿ ವೈ ಹ್ಯಹಂ ।
ತೇನ ಪುಣ್ಯಪ್ರಭಾವೇಣ ಚೋಷಾ ಬಾಣಸುತಾಽಭವಂ ।
ಅನಿರುದ್ಧಃ ಸ್ವಯಂ ಬ್ರಹ್ಮ ಮಮ ಪಾಣಿಂ ಗೃಹೀತವಾನ್ ॥ ೨೦ ॥

---

೧೭. "ಎಲೌ ದೇವಿಯೇ! ಹೀಗೆ ಶ್ರೇಷ್ಠವಾದ ಯುಗಗಳ ಮರ್ಯಾದೆಯನ್ನು ನಿನಗೆ ತಿಳಿಸಿದೆನು. ನೀನು ಹಿಂದಿನ ಜನ್ಮದಲ್ಲಿ ಯಾರ ಮಗಳಾಗಿದ್ದೆಯೆಂಬುದನ್ನು ಈಗ ಜಾಗ್ರತೆ ತಿಳಿಸು." ಎಂದು ಕೃಷ್ಣಾಂಶನು ಕೇಳಿದನು.

೧೮. ಆಗ ಪುಷ್ಪವತಿಯು, "ಸ್ವಾಮೀ! ಹಿಂದಿನ ಜನ್ಮದಲ್ಲಿ ನಾನು ಚಂದ್ರಕಾಂತಿಯೆಂದು ಪ್ರಸಿದ್ಧಳಾದ ವೇಶ್ಯೆಯಾಗಿದ್ದೆನು. ಪರಮಾತ್ಮನೆದುರಿಗೆ ಸಂಗೀತ ಮತ್ತು ನಾಟ್ಯವಿದ್ಯೆಗಳನ್ನೂ ವಾದ್ಯಕಲೆಗಳನ್ನೂ ಸಹ ಚೆನ್ನಾಗಿ ಪ್ರದರ್ಶಿಸಿ ಸೇವೆಮಾಡಿದನು

೧೯. ಆ ಸೇವೆಯ ಪುಣ್ಯಪ್ರಭಾವದಿಂದ ಸ್ವರ್ಗಲೋಕಕ್ಕೆ ತೆರಳಿದೆನು. ರೂಪ ಯೌವಗಳಿಂದ ಕೂಡಿರುವ ನನ್ನನ್ನು ನೋಡಿ, ಅನೇಕ ದೇವತೆಗಳು ಉಪಭೋಗಿಸಲು ಅಪೇಕ್ಷಿಸಿದರು.

೨೦. ಹೀಗೆ ದೇವತೆಗಳಿಂದ ಅಪೇಕ್ಷಿಸಲ್ಪಟ್ಟರೂ ನಾನು ಮನಸ್ಸನ್ನು ದೃಢವಾಗಿರಿಸಿ ಬ್ರಹ್ಮಚರ್ಯವನ್ನು ಬಿಡಲಿಲ್ಲ ಈ ವ್ರತದ ಪುಣ್ಯ ಪ್ರಭಾವದಿಂದ ಉಷಾ ಎಂಬ ಹೆಸರಿನಿಂದ ಬಾಣನಿಗೆ ಮಗಳಾಗಿ ಹುಟ್ಟಿದೆನು. ಸಾಕ್ಷಾತ್ ಬ್ರಹ್ಮಸ್ವರೂಪನಾದ ಅನಿರುದ್ಧನು ನನ್ನನ್ನು ವಿವಾಹ ಮಾಡಿಕೊಂಡನು.

ಕಲಿನಾ ಪ್ರಾರ್ಥಿತೋ ದೇವೋ ಮಮ ಸ್ವಾಮೀ ಸ್ವಹೇತವೇ ।
ಅರ್ಚಾವತಾರಮಾಸಾದ್ಯ ಮಾರ್ಕಂಡೇಯಸ್ಥಲಂ ಗತಃ ॥ ೨೧ ॥

ಸ್ವಪ್ರಸಾದಸ್ಯ ಮಹಿಮಾ ದರ್ಶಿತಸ್ತೇನ ತತ್ರ ವೈ ।
ಅತ್ರೈವ ಸ್ಥಿತಿಮರ್ಯಾದೋ ದಾರುರೂಪಸ್ಯ ಮೇ ಪತೇಃ ॥ ೨೨ ॥

ಅಹಂ ತಸ್ಯಾಜ್ಞಯಾ ಸ್ವಾಮಿನ್ ಜಂಬುಕಸ್ಯ ಸುತಾಭವಂ ।
ದಿವ್ಯರೂಪಸಮಾಯುಕ್ತಾ ನಾಮ್ನಾಹಂ ವಿಜಯೈಷಿಣೀ ॥ ೨೩ ॥

ಕೃತಂ ಮಮೈವ ಮರಣಂ ತ್ವದ್ಭ್ರಾತ್ರಾ ಬಲಖಾನಿನಾ ।
ಮಕರಂದಸ್ಯ ಭಗಿನೀ ಭೂತ್ವಾ ತ್ವಾಂ ಪತಿಮಾಗತಾ ॥ ೨೪ ॥

ತೇನ ದೋಷೇಣ ತ್ವದ್ಭ್ರಾತಾ ಯಾತನಾಂ ತೀವ್ರಮಾಗತಃ ।
ರಾಜ್ಞ ಇನ್ನಗಢಸ್ಯೈವ ಗೇಹೇ ಗಜಪತೇಃ ಸ್ವಯಂ ।
ಇತ್ಯುಕ್ತ್ವಾ ಮೌನಮಾಸ್ಥಾಯ ರೇಮೇ ಪತ್ಯಾ ಸಮಂ ಮುದಾ ॥ ೨೫ ॥

---

೨೧. ಸ್ವಲ್ಪ ದಿನವಾದ ಮೇಲೆ, ಕಲಿಪುರುಷನು ತನ್ನ ಪ್ರಾಬಲ್ಯದ ಅನುಕೂಲ್ಯಕ್ಕಾಗಿ ನನ್ನ ಪತಿಯನ್ನು ಪ್ರಾರ್ಥಿಸಿದ ಕಾರಣ ಆತನು ಅರ್ಚಾವತಾರವನ್ನು ಧರಿಸಿ ಮಾರ್ಕಂಡೇಯ ಸ್ಥಳಕ್ಕೆ ಹೊರಟು ಹೋದನು.

೨೨. ಅಲ್ಲಿ ನನ್ನ ಸ್ವಾಮಿಯು ತನ್ನ ಅನುಗ್ರಹದ ಪ್ರಭಾವವನ್ನು ತೋರಿಸಿದನು. ಅಲ್ಲಿಯೇ ಸ್ವಾಮಿಯು ಮರದ ರೂಪಿನಿಂದ ನಿಂತು ರಕ್ಷಣೆ ಮಾಡುತ್ತಿದ್ದನು.

೨೩. ಸ್ವಾಮೀ! ನಾನು ನನ್ನ ಪತಿಯ ಅಪ್ಪಣೆಯಿಂದ, ಸುಂದರವಾದ ರೂಪುಳ್ಳವಳಾಗಿ ವಿಜಯೈಷಿಣಿ ಎಂಬ ಹೆಸರಿನಿಂದ ಜಂಬುಕರಾಜನ ಮಗಳಾಗಿ ಹುಟ್ಟಿದೆನು.

೨೪. ಆಗ ನಿಮ್ಮಣ್ಣನಾದ ಬಲಖಾನಿಯು ನನ್ನನ್ನು ಕೊಂದುಹಾಕಿದನು. ಈಗ ನಾನು ಮಕರಂದನ ತಂಗಿಯಾಗಿ ಜನಿಸಿ ನಿನ್ನನ್ನು ಸೇರಿರುವೆನು.

೨೫ ನನ್ನನ್ನು ಕೊಂದ ದೋಷದಿಂದ ನಿನ್ನ ಅಣ್ಣನಾದ ಬಲಖಾನಿಯು ಇನ್ನಗಢದ ರಾಜನಾದ ಗಜಪತಿರಾಜನ ಮನೆಯಲ್ಲಿ ತೀವ್ರವಾದ ಯಾತನೆಗಳನ್ನು ಅನುಭವಿಸಿದನು. ("ಅಯ್ಯಾ ಬಲಖಾನಿ! ನಿನ್ನ ಮದುವೆಯ ಸಮಯದಲ್ಲಿ ಈ ಸ್ತ್ರೀಹತ್ಯೆ ಮಾಡಿದುದರ ಫಲವು ನಿನಗೆ ಪ್ರಾಪ್ತಿಯಾಗುವು" ಎಂದು ಅಶರೀವಾಣಿಯಾಗಿದ್ದಿತು. ಅದರಂತೆ ಬಲಖಾನಿಯು ತೊಂದರೆಯನ್ನನುಭವಿಸಿದನೆಂದು ತಿಳಿಯ

**ಹೋಲಿಕಾಸಮಯೇ ಪ್ರಾಪ್ತೇ ಮಲನಾ ಸ್ನೇಹದುಃಖಿತಾ ।**
**ಸುತಾಂ ಚಂದ್ರಾವಲೀಂ ರಮ್ಯಾಂ ಸ್ವಪ್ನಾಂತೇ ಸಾ ದದರ್ಶ ಹ ।**
**ರುರೋದ ನಿಶಿ ದುಃಖೇನ ಸ್ವಸುತಾಸ್ನೇಹಕಾತರಾ ॥ ೨೬ ॥**

**ತದೋದಯೋ ಮಹಾವೀರೋ ಜ್ಞಾತ್ವಾ ರೋದನಕಾರಣಂ ।**
**ಶೂರೈಶ್ಚ ದಶಸಾಹಸ್ರೈಃ ಸಾರ್ಧಂ ಬಹುಧನೈರ್ಯುತಃ ।**
**ಏಕಾಕೀ ಪ್ರಯಯೌ ವೀರೋ ಯತ್ರ ಚಂದ್ರಾವಲೀಗೃಹಂ ॥ ೨೭ ॥**

**ಮಹೀಪತಿಸ್ತು ತಚ್ಛತ್ರುಃ ಜ್ಞಾತ್ವಾ ಕಾರಣಮುತ್ತಮಂ ।**
**ಪಶ್ಚಾಜ್ಜಗಾಮ ಕಾರ್ಯಾರ್ಥೀ ಸ ತು ದುರ್ಯೋಧನಾಂಶಕಃ ।**
**ಬಲೀಖಾಖಮಿತಿ ಖ್ಯಾತಂ ಗ್ರಾಮಂ ಯಾದವಪಾಲಿತಂ ॥ ೨೮ ॥**

---

ಬೇಕು.) ಎಂದು ಹೇಳಿ ಪುಷ್ಪವತೀ ದೇವಿಯು ಮೌನವನ್ನು ಧರಿಸಿ ತನ್ನ ಪತಿಯೊಡನೆ ಸಂತೋಷದಿಂದ ವಿಹರಿಸಿದಳು.

೨೬ ಹೀಗೆ ಕೃಷ್ಣಾಂಶನು ಸಂತೋಷದಿಂದ ಕಾಲಕಳೆಯುತ್ತಿರಲು ಹೋಳಿ ಹಬ್ಬವು (ಕಾಮನ ಹಬ್ಬವು) ಬಂದಿತು. ಆ ದಿವಸ ಮಲನಾದೇವಿಯು ತನ್ನ ಮಗಳಾದ ಚಂದ್ರಾವಳಿಯನ್ನು ನೆನಸಿಕೊಂಡು ಅವಳಲ್ಲಿ ತನಗಿದ್ದ ಸ್ನೇಹದಿಂದ ದುಃಖಗೊಂಡಿರಲು, ಅವಳ ಸ್ವಪ್ನದಲ್ಲಿ ಚಂದ್ರಾವಳಿಯು ಕಾಣಿಸಿಕೊಂಡಳು. (ಹಬ್ಬದ ದಿವಸ ಎಲ್ಲರೂ ಒಂದುಕಡೆ ಸೇರುವುದು ವಾಡಿಕೆ ಅದರಲ್ಲೂ ಉತ್ತರದೇಶದಲ್ಲಿ ಹೋಳೀಹಬ್ಬವು ಅತ್ಯಂತ ಮುಖ್ಯವೆಂದು ತಿಳಿದಿರುವರು. ಆ ದಿವಸ ತಮ್ಮ ಮನೆಯ ಹೆಣ್ಣುಮಕ್ಕಳು ತಮ್ಮ ಗಂಡಂದಿರೊಡನೆ ತವರುಮನೆಗೆ ಬರುವ ಪದ್ಧತಿಯುಂಟು. ಹೀಗಿರುವಾಗ ಚಂದ್ರಾವಳಿಯು ಬಾರದಿರುವುದರಿಂದ ಮಲನಾದೇವಿಗೆ ದುಃಖವುಂಟಾಗಿದ್ದಿತು.) ಹೀಗೆ ಸ್ವಪ್ನದಲ್ಲಿ ಮಗಳು ಕಾಣಿಸಿಕೊಂಡದ್ದರಿಂದ ಮಲನಾದೇವಿಯು ಆ ರಾತ್ರಿಯೆಲ್ಲಾ ಅವಳನ್ನು ನೆನಸಿಕೊಂಡು ರೋದನಮಾಡಿದಳು.

೨೭. ತಾಯಿಯಾದ ಮಲನಾದೇವಿಯು ಅಳುವ ಕಾರಣವನ್ನರಿತು, ಮಹಾವೀರನಾದ ಕೃಷ್ಣಾಂಶನು ತುಂಬಾ ಹಣವನ್ನು ತೆಗೆದುಕೊಂಡು, ಅಣ್ಣತಮ್ಮಂದಿರನ್ನು ಕರೆದುಕೊಳ್ಳದೆ ಒಬ್ಬನೇ ಹೊರಟು ಹತ್ತುಸಾವಿರ ಶೂರರೊಡನೆ ಚಂದ್ರಾವಲಿಯ ಮನೆಗೆ ಬಂದನು.

೨೮. ದುರ್ಯೋಧನಾಂಶಪುರುಷನೂ ಕೃಷ್ಣಾಂಶನ ವೈರಿಯೂ ಆದ ಮಹೀಪತಿ ರಾಜನು ಈ ವಿಷಯವನ್ನು ತಿಳಿದು ವೈರವನ್ನು ಸಾಧಿಸುವುದಕ್ಕೋಸ್ಕರ ಯಾದವರ ರಾಜ್ಯವಾದ ಬಲೀಖಾಖ ಗ್ರಾಮಕ್ಕೆ ಜಾಗ್ರತೆ ಬಂದನು.

ವೀರಸೇನೋ ನೃಪಸ್ತತ್ರ ತ್ರಿಲಕ್ಷಬಲಸಂಯುತಃ ।
ಅಷ್ಟೌ ಸುತಾಶ್ಚ ತಸ್ಯಾಸನ್ ರೂಪಯೌವನಶಾಲಿನಃ ॥ ೨೯ ॥

ಕಾಮಸೇನಃ ಪ್ರಸೇನಶ್ಚ ಮಹಾಸೇನಸ್ತಥೈವ ಚ ।
ಸುಖಸೇನೋ ರೂಪಸೇನೋ ವಿಷ್ವಕ್ಸೇನೋ ಮಧುವ್ರತಃ ।
ಮಧುಪಶ್ಚ ಕ್ರಮಾಜ್ಜಾತಾಃ ಯಾದವಾಂಶಾಶ್ಚ ಯಾದವಾಃ ॥ ೩೦ ॥

ತತ್ರ ಗತ್ವಾ ಚ ಕೃಷ್ಣಾಂಶಃ ಸಭಾಯಾಂ ನರಕೇಸರೀ ।
ದಂಡವತ್ಪ್ರಣತೋ ಭೂತ್ವಾ ವೀರಸೇನಂ ಮಹೀಪತಿಂ ॥ ೩೧ ॥

ಮಲನಾಲಿಖಿತಂ ಪತ್ರಂ ದತ್ವಾ ರಾಜ್ಞೇ ಮಹಾಮನಾಃ ।
ದಶಭಾರಂ ಸುವರ್ಣಸ್ಯ ಪುನರ್ವಾಸಮಚೀಕರತ್ ॥ ೩೨ ॥

ವ್ಯಂಜನಾನಿ ವಿಚಿತ್ರಾಣಿ ಭುಕ್ತ್ವಾ ಯಾದವಸಂಯುತಃ ।
ಚಂದ್ರಾವಲೀಂ ಸಮಾಗತ್ಯ ಕುಶಲಂ ಚ ನ್ಯವೇದಯತ್ ॥ ೩೩ ॥

---

೨೯-೩೦. ಆ ಗ್ರಾಮದಲ್ಲಿ ವೀರಸೇನನೆಂಬ ರಾಜನು ಆಳುತ್ತಿದ್ದನು. ಅವನಲ್ಲಿ ಮೂರುಲಕ್ಷ ಸೈನ್ಯವಿದ್ದಿತು. ಅವನಿಗೆ ರೂಪ, ಯೌವನ ಇವುಗಳಿಂದ ಕೂಡಿದ ಕಾಮಸೇನ, ಪ್ರಸೇನ, ಮಹಾಸೇನ, ಸುಖಸೇನ, ರೂಪಸೇನ, ವಿಷ್ವಕ್ಸೇನ, ಮಧುವ್ರತ ಮತ್ತು ಮಧುಪ ಎಂಬ ಹೆಸರುಳ್ಳ ಎಂಟುಮಂದಿ ಮಕ್ಕಳಿದ್ದರು. ಇವರೆಲ್ಲರೂ ಯಾದವಾಂಶದಿಂದ ಕೂಡಿದವರಾಗಿದ್ದರು.

೩೧-೩೨. ಪುರುಷಸಿಂಹನೂ ಉದಾರಹೃದಯನೂ ಆದ ಕೃಷ್ಣಾಂಶನು ಆ ವೀರಸೇನರಾಜನ ಸಭೆಗೆ ಹೋಗಿ ಸಾಷ್ಟಾಂಗ ನಮಸ್ಕಾರಮಾಡಿ, ಮಲನಾದೇವಿಯು ಬರೆದು ಕಳುಹಿಸಿಕೊಟ್ಟಿದ್ದ ಕಾಗದವನ್ನು ವೀರಸೇನನಿಗೆ ಕೊಟ್ಟು, ಹತ್ತು ಭಾರ ತೂಕದಷ್ಟು ಚಿನ್ನವನ್ನು ಕಾಣಿಕೆ ಸಮರ್ಪಿಸಿ, ಅವನ ಅರಮನೆಯಲ್ಲಿ ಇಳಿದುಕೊಂಡನು.

೩೩. ಅನಂತರ ಯದುಕುಮಾರರೊಡನೆ ಕುಳಿತು ಬಗೆಬಗೆಯ ಉಪಾಹಾರಗಳನ್ನು ಸೇವಿಸಿ, ಸಂತೋಷದಿಂದ ಚಂದ್ರಾವಲಿಯಿದ್ದೆಡೆಗೆ ಬಂದು ಅವಳಿಗೆ ಕುಶಲ ಸಮಾಚಾರವನ್ನು ತಿಳಿಸಿದನು.

**ಪ್ರೇಮೋತ್ಸುಕಾ ಚ ಭಗಿನೀ ಕೃಷ್ಣಾಂಶಂ ಪ್ರಾಹ ದುಃಖಿತಾ ।**
**ಭವಾನ್ ದ್ವ್ಯಬ್ದವಯಾ ವೀರ ತದಾಹಂ ಚ ವಿವಾಹಿತಾ ॥ ೩೪ ॥**

**ವಿಂಶದಬ್ದಸ್ತತೋ ಜಾತೋ ವಿಸ್ಮೃತಾ ಪಿತೃಮಾತೃಭಿಃ ।**
**ಸಮರ್ಥೇನ ತ್ವಯಾ ವೀರ ಸಂಸ್ಮೃತಾ ಭಗಿನೀ ಸ್ವಯಂ ॥ ೩೫ ॥**

**ಅದ್ಯ ಮೇ ಸಫಲಂ ಜನ್ಮ ಜೀವಿತಂ ಸಫಲಂ ಚ ಮೇ ।**
**ಬಂಧುದರ್ಶನಮಾತ್ರೇಣ ಸರ್ವಂ ಚ ಸಫಲಂ ಮಮ ॥ ೩೬ ॥**

**ಪ್ರಸನ್ನಾತ್ಮೋದಯಸ್ತತ್ರ ಭಗಿನೀಂ ಪ್ರಾಹ ನಮ್ರಧೀಃ ।**
**ಜಂಬುಕೇನ ಗೃಹಂ ಸರ್ವಂ ಲುಂಠಿತಂ ಬಲಶಾಲಿನಾ ॥ ೩೭ ॥**

**ತಸ್ಯ ದುಃಖೇನ ಭೂಪಾಲೋ ಭಯಭೀತೋ ದಿನೇದಿನೇ ।**
**ಮಹಾಕಷ್ಟೇನ ವಿಜಯೋ ಜಂಬುಕಾಚ್ಚಾಽಭಯೋಽಭವತ್ ॥ ೩೮ ॥**

---

೩೪. ಆಗ ಚಂದ್ರಾವಲೀದೇವಿಯು ಬಂಧುಪ್ರೇಮದಿಂದ ಅತ್ಯಂತ ಸಂತೋಷಪಟ್ಟು, ಬಳಿಕ ಕೃಷ್ಣಾಂಶನನ್ನು ಕುರಿತು, ದುಃಖದಿಂದ "ಎಲೈ ವೀರನೇ! ನನಗೆ ಮದುವೆಯಾದಾಗ ನೀನಿನ್ನೂ ಎರಡುವರುಷ ವಯಸ್ಸಿನವನು."

೩೫-೩೬. "ನನ್ನ ಮದುವೆಯಾಗಿ ಇಪ್ಪತ್ತುವರ್ಷ ಕಳೆದುಹೋಯಿತು. ಆದುದರಿಂದ ತಂದೆತಾಯಿಗಳೆಲ್ಲಾ ನನ್ನನ್ನು ಮರೆತುಬಿಟ್ಟರು. ವೀರನಾದ ನೀನು ಮಾತ್ರ ನಿನ್ನ ಅಕ್ಕನನ್ನು ಮರೆತಿಲ್ಲ. ಆದ್ದರಿಂದ ಬಂಧುವಾದ ನಿನ್ನನ್ನು ನೋಡುವ ಮಟ್ಟಿಗಾದರೂ ಈಗ ನನ್ನ ಜನ್ಮವು ಸಾರ್ಥಕವೆಂದು ಭಾವಿಸುವೆನು. ನನ್ನ ಬದುಕು ಇಂದಿಗೆ ಸಫಲವಾಯಿತು" ಎಂದು ಹೇಳಿದಳು.

೩೭ ಆಗ ಅಕ್ಕನು ಆಡಿದ ಮಾತುಗಳನ್ನು ಕೇಳಿ ಉದಯನು (ಕೃಷ್ಣಾಂಶನು) ಸಂತೋಷಗೊಂಡು, ಅಕ್ಕನನ್ನು ಕುರಿತು ವಿನಯದಿಂದ "ಎಲೌ ದೇವೀ! ಬಲಶಾಲಿಯಾದ ಜಂಬುಕರಾಜನು ನಮ್ಮ ಮನೆಯನ್ನೆಲ್ಲಾ ಲೂಟಿಮಾಡಿದನು.

೩೮. "ರಾಜನಾದ ಪರಿಮಳನು ಅವನ ಸಂಬಂಧವಾದ ಕ್ಲೇಶದಿಂದ ದಿನದಿನಕ್ಕೆ ಹೆಚ್ಚು ಭಯಪಡುತ್ತಾ ಇದ್ದನು. ಅನಂತರ ಬಹಳ ಕಷ್ಟದಿಂದ ಜಂಬುಕರಾಜನನ್ನು ಗೆದ್ದೆವು. ಆಮೇಲೆ ಸ್ವಲ್ಪ ನಿರಾತಂಕವಾಗಿರಬಹುದಾಯಿತು."

ಮಹೀರಾಜಸ್ತು ಬಲವಾನ್ ರುರೋಧ ನಗರೀಂ ಮಮ ।
ಮಯಾ ವಿವಾಹಿತೋ ಭ್ರಾತಾ ಬ್ರಹ್ಮ ತತ್ಸುತಯಾ ಸಹ ॥ ೩೯ ॥

ಪುನಶ್ಚ ಸಿಂಹಲದ್ವೀಪೇ ಜಯಂತಾರ್ಥೇ ವಯಂ ಗತಾಃ ।
ಏವಂ ವಿಧಾನಿ ದುಃಖಾನಿ ಬಹೂನಿ ಹ್ಯಭವನ್ ಪಿತುಃ ॥ ೪೦ ॥

ಅತಸ್ತ್ವಾಂ ಪ್ರತಿ ಸುಪ್ರೀತಾ ವಯಂ ಭಗಿನಿ ಕಿಂಕರಾಃ ।
ಮೃದುವಾಕ್ಯಮಿತಿ ಶ್ರುತ್ವಾ ತದಾ ಚಂದ್ರಾವಲೀ ಮುದಾ ॥ ೪೧ ॥

ಗೇಹಂ ನಿವಾಸಯಾಮಾಸ ಸ್ವಕೀಯಂ ಪ್ರೇಮವಿಹ್ವಲಾ ।
ಏತಸ್ಮಿನ್ನಂತರೇ ಧೂರ್ತೋ ಮಹೀಪತಿರುಪಾಯಯೌ ॥ ೪೨ ॥

ಸಭಾಯಾಂ ವೀರಸೇನಸ್ಯ ರಾಜ್ಞಾ ತೇನೈವ ಸತ್ಕೃತಃ ।
ವಾರ್ತಾಂತರಂ ಸಮಾಸಾದ್ಯ ತಮುವಾಚ ಮಹೀಪತಿಃ ॥ ೪೩ ॥

---

೩೯. "ಸ್ವಲ್ಪದಿವಸದ ಮೇಲೆ ಶೂರನಾದ ಪೃಥ್ವೀರಾಜನು ನಮ್ಮ ಪಟ್ಟಣವನ್ನು ಮುತ್ತಿದನು. ಆಗ ನಾನು ಅವನನ್ನು ಸೋಲಿಸಿ ನಮ್ಮಣ್ಣನಾದ ಬ್ರಹ್ಮಾನಂದನಿಗೆ ಪೃಥ್ವೀರಾಜನ ಮಗಳಾದ ವೇಲಾದೇವಿಯನ್ನು ವಿವಾಹಮಾಡಿಸಿದೆನು"

೪೦-೪೧. "ಪುನಃ ಜಯಂತ (ಇಂದುಲ) ನನ್ನು ಹುಡುಕುವುದಕ್ಕೋಸ್ಕರ ಸಿಂಹಳದ್ವೀಪಕ್ಕೆ ನಾವೆಲ್ಲ ಹೋಗಬೇಕಾಯಿತು. ಈರೀತಿ ತಂದೆಯವರಿಗೆ ಅನೇಕ ವಿಧವಾದ ತಾಪತ್ರಯಗಳೊದಗಿ ಕ್ಲೇಶಗೊಂಡಿದ್ದರೂ ನಿನ್ನಲ್ಲಿ ಸಹಜವಾದ ಪ್ರೀತಿಯಿದ್ದೇ ಇದೆ. ಅದಕ್ಕೆ ಕೊರತೆಯಿಲ್ಲ. ನಾವೆಲ್ಲರೂ ನಿನ್ನ ಸೇವಕರೆಂದು ತಿಳಿ" ಎಂದು ಕೃಷ್ಣಾಂಶನು ಚಂದ್ರಾವಲಿಗೆ ಹೇಳಿದನು.

೪೨. ತಮ್ಮನಾದ ಕೃಷ್ಣಾಂಶನು ಈರೀತಿ ಮೃದುವಾಗಿ ಮಾತನಾಡಿದ್ದನ್ನು ಚಂದ್ರಾವಲಿದೇವಿಯು ಸಂತೋಷದಿಂದ ಕೇಳಿ, ಅವನನ್ನು ತನ್ನ ಮನೆಯಲ್ಲಿಯೇ ಪ್ರೀತಿಯಿಂದ ಇರಿಸಿಕೊಂಡಳು. ಇಷ್ಟರಲ್ಲಿ ಮೋಸಗಾರನಾದ ಮಹೀಪತಿರಾಜನು ವೀರಸೇನನ ಸಮೀಪಕ್ಕೆ ಬಂದನು.

೪೩. ತನ್ನ ಬಳಿಗೆ ಬಂದ ಮಹೀಪತಿರಾಜನನ್ನು ವೀರಸೇನನು ಸಭೆಯಲ್ಲಿ ಸತ್ಕರಿಸಿ ಕುಶಲ ಸಮಾಚಾರಗಳನ್ನು ಕೇಳಲು, ಆಗ ಮಹೀಪತಿರಾಜನು ವೀರಸೇನನನ್ನು ಕುರಿತು ಹೀಗೆಂದನು.

ನಿಷ್ಕಾಸಿತಾಶ್ಚ ತೇ ಸರ್ವೇ ರಾಜ್ಞಾಹ್ಲಾದಾದಯಃ ಖಲಾಃ ।
ಚೌರಿತೋ ನೃಪತೇಃ ಕೋಶೋ ಹೀನಜಾತ್ಯೈರ್ಮಹಾಬಲೈಃ ॥ ೪೪ ॥

ತದಾ ತು ಕುಂಠಿತಾಃ ಸರ್ವೇ ಶಿರೀಷಾಖ್ಯಪುರೇಽವಸನ್ ।
ಛಿದ್ರದರ್ಶೀ ತು ಕೃಷ್ಣಾಂಶೋ ಗೇಹಂ ತವ ಸಮಾಗತಃ ॥ ೪೫ ॥

ಚಂದ್ರಾವಲ್ಯಾಶ್ಚ ವೈ ದೋಲಾಂ ಗೃಹೀತ್ವಾ ಸ ಗಮಿಷ್ಯತಿ ।
ಸತ್ಯಂ ಬ್ರವೀಮಿ ಭೂಪಾಲ ನಾನ್ಯಥಾ ವಚನಂ ಮಮ ॥ ೪೬ ॥

ಇತಿ ಶ್ರುತ್ವಾ ವೀರಸೇನೋ ಜ್ಞಾತ್ವಾ ತತ್ಸತ್ಯಕಾರಣಂ ।
ಕಾಮಸೇನಂ ಸಮಾಹೂಯ ಚಂದ್ರಾವಲ್ಯಾಃ ಪತಿಂ ಸುತಂ ॥ ೪೭ ॥

---

೪೪. " ಎಲೈ ವೀರಸೇನನೆ! ಮಹಾಬಲಶಾಲಿಗಳೂ, ಹೀನಜಾತಿಯವರೂ ಆದ ಆಹ್ಲಾದಾದಿಗಳು ರಾಜಭಂಡಾರವನ್ನು ಲೂಟಿಮಾಡಿ ಕಳ್ಳತನಮಾಡಿದರೆಂದು ಪರಿಮಲರಾಜನು ಆಹ್ಲಾದನೇ ಮೊದಲಾದ ಎಲ್ಲರನ್ನೂ ಮನೆಯಿಂದ ಹೊರಡಿಸಿರುವನು."

೪೫. "ಅನಂತರ ಆ ಆಹ್ಲಾದಿಗಳೆಲ್ಲರೂ ಆಶ್ರಯರಹಿತರಾಗಿ ಶಿರೀಷನಗರದಲ್ಲಿ ಬಂದು ವಾಸಮಾಡುತ್ತಿರುವರು. ಸಮಯವನ್ನು ಕಾಯ್ದು ಕಾರ್ಯಸಾಧಿಸಿಕೊಳ್ಳುವ ಕೃಷ್ಣಾಂಶನು ಈಗ ನಿನ್ನ ಮನೆಗೆ ಬಂದಿರುವನು."

೪೬. ಈ ಕೃಷ್ಣಾಂಶನು ಈಗ ಉಪಾಯದಿಂದ ಚಂದ್ರಾವಲಿಯನ್ನು ಮೇನೆಯಲ್ಲಿ ಕೂರಿಸಿ ಕರೆದುಕೊಂಡು ಹೋಗುವನು. ಎಲೈ ರಾಜನೇ! ನಾನು ಸತ್ಯವಾದ ಸಂಗತಿಯನ್ನು ಮರೆಮಾಚದೆ ತಿಳಿಸಿದ್ದೇನೆ. ಜೋಪಾನವಾಗಿ ನೋಡಿಕೋ" ಎಂದು ಮಹೀಪತಿರಾಜನು ವೀರಸೇನನ ಮನಸ್ಸು ಕುಲುಕುವಂತೆ ಇಲ್ಲದುದನ್ನೆಲ್ಲಾ ಹೇಳಿದನು.

೪೭. ಆ ವೀರಸೇನಮಹಾರಾಜನು ಮಹೀಪತಿರಾಜನ ಮಾತನ್ನು ನಿಜವೆಂದು ತಿಳಿದು ಚಂದ್ರಾವಲೀದೇವಿಯ ಗಂಡನೂ ತನ್ನ ಮಗನೂ ಆದ ಕಾಮಸೇನನನ್ನು ಕರೆದು ಕೃಷ್ಣಾಂಶನನ್ನು ಕೂಡಲೆ ಬಂಧಿಸುವಂತೆ ಆಜ್ಞೆಮಾಡಿದನು.

ವಚನಂ ಪ್ರಾಹ ಭೋಃ ಪುತ್ರ ಬಂಧನಂ ಕುರು ತಸ್ಯ ವೈ ।
ಇತಿ ಶ್ರುತ್ವಾ ಕಾಮಸೇನೋ ವಿಷಮಾದಾಯ ದಾರುಣಂ ॥ ೪೮ ॥

ಭೋಜನಾಯ ದದೌ ತಸ್ಮೈ ಜ್ಞಾತ್ವಾ ಚಂದ್ರಾವಲೀ ತದಾ ।
ಭ್ರಾತುರಂತಿಕಮಾಸಾದ್ಯ ಪಾತ್ರಮಾದಾಯ ಸಾ ಯಯೌ ॥ ೪೯ ॥

ಕಾಮಸೇನಶ್ಚ ಕುಪಿತೋ ಗೃಹೀತ್ವಾ ದಂಡವೇತಸಂ ।
ಸ್ವಪ್ರಿಯಾಂ ತಾಡಯಾಮಾಸ ಸ ದೃಷ್ಟ್ವಾ ತಂ ತದಾಽಕುಪತ್ ॥ ೫೦ ॥

ಗೃಹೀತ್ವಾ ಭುಜಯೋಸ್ತಂ ವೈ ಬಂಧನಾಯ ಸಮುದ್ಯತಃ ।
ಬಂಧನತ್ವಂ ಗತೇ ಪುತ್ರೇ ವೀರಸೇನೋ ಮಹಾಬಲಃ ॥ ೫೧ ॥

ಪುತ್ರಾನಾಜ್ಞಾಪಯಾಮಾಸ ತಸ್ಯ ಬಂಧನಹೇತವೇ ।
ಏತಸ್ಮಿನ್ನಂತರೇ ವೀರೋ ದೋಲಾಮಾದಾಯ ಸತ್ವರಂ ॥ ೫೨ ॥

---

೪೮. ಅವನು "ಊಗೆಯೇ ಆಗಲಿ" ಎಂದು ತಂದೆಯ ಅಪ್ಪಣೆಯ ಪ್ರಕಾರ ಭಯಂಕರವಾದ ವಿಷವನ್ನು ತರಿಸಿ ಆಹಾರದಲ್ಲಿ ಬೆರಸಿ ಅದನ್ನು ತಿನ್ನುವಂತೆ ಹೇಳಿ ಕೃಷ್ಣಾಂಶನಿಗೆ ಕೊಟ್ಟನು.

೪೯. ಚಂದ್ರಾವಲಿಯು ಇದನ್ನು ತಿಳಿದು ತಮ್ಮನ ಸಮೀಪಕ್ಕೆ ಬಂದು ವಿಷಮಿಶ್ರವಾದ ಆಹಾರವನ್ನು ಬಡಿಸಿದ್ದ ಪಾತ್ರೆಯನ್ನು ತೆಗೆದುಕೊಂಡುಹೋದಳು.

೫೦. ಅದನ್ನು ನೋಡಿ ಕಾಮಸೇನನು ಕೋಪಗೊಂಡು ಬೆತ್ತವನ್ನು ತೆಗೆದು ಕೊಂಡು ತನ್ನ ಹೆಂಡತಿಯಾದ ಚಂದ್ರಾವಲಿಯನ್ನು ಹೊಡೆದನು. ಕೃಷ್ಣಾಂಶನು ಇದನ್ನು ನೋಡಿ ಕಾಮಸೇನನ ಮೇಲೆ ಕೋಪಗೊಂಡನು.

೫೧ ಕೂಡಲೆ ಅವನನ್ನು ತನ್ನ ತೋಳುಗಳಿಂದ ತಬ್ಬಿ ಹಿಡಿದುಕೊಂಡು ಬಿಗಿದು ಕಟ್ಟಿಬಿಟ್ಟನು. ತನ್ನ ಮಗನೇ ಹೀಗೆ ಬಂಧಿತನಾದುದನ್ನು ನೋಡಿ ಮಹಾಬಲನಾದ ವೀರಸೇನನು ತನ್ನ ಉಳಿದ ಮಕ್ಕಳನ್ನು ಕರೆದು ಕೃಷ್ಣಾಂಶನನ್ನು ಕೂಡಲೇ ಸೆರೆ ಹಿಡಿಯಲು ಆಜ್ಞಾಪಿಸಿದನು.

೫೨-೫೩. ಇಷ್ಟರೊಳಗೆ ಕೃಷ್ಣಾಂಶನು ಚಂದ್ರಾವಲಿಯನ್ನು ಮೇನೆಯಲ್ಲಿ ಕೂರಿಸಿಕೊಂಡು ಜಾಗ್ರತೆಯಾಗಿ ತನ್ನ ಶಿಬಿರಕ್ಕೆ ಬಂದು ದೊಡ್ಡ ಯುದ್ಧಕ್ಕೆ ಸಿದ್ಧನಾಗಿ

ಸೇನಾಮಧ್ಯೇ ಸಮಾಗಮ್ಯ ಮಹದ್ಯುದ್ಧಮಚೀಕರತ್ ।
ಏಕತೋ ದಶಸಾಹಸ್ರಾಃ ತ್ರಿಲಕ್ಷಾಸ್ತು ತಥೈಕತಃ ।
ಅಹೋರಾತ್ರಮಭೂದ್ಯುದ್ಧಂ ದಾರುಣಂ ರೋಮಹರ್ಷಣಂ ॥ ೫೩ ॥

ಹತಾ ಲಕ್ಷಂ ಮಹಾಶೂರಾ ಉದಯೇನ ಮಹಾಬಲಾಃ ।
ಶೇಷಾಃ ಪ್ರದುದ್ರುವುಸ್ಸರ್ವೇ ಯಾದವಾ ಭಯಕಾತರಾಃ ॥ ೫೪ ॥

ದೃಷ್ಟ್ವಾ ಪರಾಜಿತಂ ಸೈನ್ಯಂ ಸಪ್ತಪುತ್ರಾ ಮಹಾಬಲಾಃ ।
ಸ್ವಾನ್ ಗಜಾಂಶ್ಚ ಸಮಾರುಹ್ಯ ಕೃಷ್ಣಾಂಶಂ ರುರುಧೂ ರುಷಾ ॥ ೫೫ ॥

ಸ ವೀರೋ ಬಿಂದುಲಾರೂಢೋ ಭೂಮೌ ತ್ಯಕ್ತ್ವಾ ಗಜಾಸನಾನ್ ।
ತೇಷಾಮಸ್ತ್ರಾಣಿ ಸಂಛಿದ್ಯ ಬಧ್ನಾತಿ ಬಲದರ್ಪಿತಃ ॥ ೫೬ ॥

---

ನಿಂತನು. ಇವನ ಸೈನ್ಯದಲ್ಲಿ ಹತ್ತುಸಾವಿರ ಮಂದಿ ಇದ್ದರು. ವೀರಸೇನನ ಕಡೆ ಮೂರುಲಕ್ಷ ಸೈನಿಕರಿದ್ದರು. ಈ ಎರಡು ಸೇನೆಗಳಿಗೂ ಹಗಲು ರಾತ್ರಿ ಎಡೆಬಿಡದೆ ಹೋರಾಟವಾರಂಭಿಸಿ ನೋಡಿದವರಿಗೆ ರೋಮಾಂಚವುಂಟಾಗುವಂತಹ ಘೋರ ಯುದ್ಧವಾಯಿತು.

೫೪. ವೀರಸೇನನ ಕಡೆಯ ಮಹಾಬಲಶಾಲಿಗಳಾದ ಒಂದುಲಕ್ಷ ಸೈನಿಕರನ್ನು ಕೃಷ್ಣಾಂಶನೊಬ್ಬನೇ ಕೊಂದನು. ಇದನ್ನು ನೋಡಿ ಉಳಿದ ಯಾದವರು ಭಯದಿಂದ ಕಂಗೆಟ್ಟು ಓಡಿಹೋದರು.

೫೫. ಹೀಗೆ ತಮ್ಮ ಸೈನ್ಯವು ಸೋತು ಹಿಂದೆಗೆದುದನ್ನು ಕಂಡು ಮಹಾಬಲಶಾಲಿಗಳಾದ ವೀರಸೇನ ಪುತ್ರರು ಏಳುಜನವೂ, ತಮ್ಮ ತಮ್ಮ ಆನೆಗಳನ್ನು ಏರಿ ಕೋಪದಿಂದ ಕೃಷ್ಣಾಂಶನ ಸುತ್ತಲೂ ಮುತ್ತಿದರು.

೫೬. ಬಲದಿಂದ ಕೊಬ್ಬಿದ ವೀರನಾದ ಕೃಷ್ಣಾಂಶನು ಆಗ ಬಿಂದುಲವೆಂಬ ತನ್ನ ಕುದುರೆಯನ್ನೇರಿ ಹೋರಾಡುತ್ತಾ ಆನೆಗಳ ಮೇಲೆ ಕುಳಿತ್ತಿದ್ದ ಆ ಏಳು ಮಂದಿಯನ್ನೂ ನೆಲಕ್ಕೆ ಇಳಿಯುವಂತೆ ಮಾಡಿ, ಅವರ ಆಯುಧಗಳನ್ನೆಲ್ಲಾ ಕತ್ತರಿಸಿ, ಅವರನ್ನೆಲ್ಲಾ ಬಿಗಿದು ಕಟ್ಟಿದನು.

ಇತಿ ಶ್ರುತ್ವಾ ವೀರಸೇನಃ ಸೂರ್ಯಭಕ್ತಿಪರಾಯಣಃ ।
ಸೌರಮಸ್ತ್ರಂ ಸಮಾದಾಯ ತಸ್ಯ ಸೈನ್ಯಮದಾಹಯತ್ ॥ ೫೭ ॥

ತೇನಾಸ್ತ್ರೇಣೈವ ಕೃಷ್ಣಾಂಶಃ ಸಹಯೋ ಮೂರ್ಛಿತೋ ಭುವಿ ।
ವೀರಸೇನಸ್ತು ತಂ ಬದ್ಧ್ವಾ ಮೋಚಯಿತ್ವಾ ಸುತಾನ್ವಧೂಂ ।
ಸ್ವಗೇಹಮಾಗತಸ್ತೂರ್ಣಂ ನಾನಾವಾದ್ಯಾನ್ಯವಾದಯತ್ ॥ ೫೮ ॥

ಹತಶೇಷಾಸ್ತದಾ ವೀರಾಃ ಕೃಷ್ಣಾಂಶಸ್ಯ ಯಯುರ್ದಿಶಃ ।
ಹೇತುಂ ಪರಿಮಲಸ್ಯಾಗ್ರೇ ಸರ್ವಮೂಚುಸ್ತದಾದಿತಃ ॥ ೫೯ ॥

ಮಹೀಪತಿಂ ಮಹಾಧೂರ್ತಂ ಮತ್ವಾ ರಾಜಾಬ್ರವೀದಿದಂ ।
ಗಚ್ಛ ತ್ವಂ ಮಲನಾಪುತ್ರ ಲಕ್ಷಸೈನ್ಯಸಮನ್ವಿತಃ ॥ ೬೦ ॥

---

೫೭. ಹೀಗೆ ತನ್ನ ಮಕ್ಕಳೆಲ್ಲ ಬಂಧನಕ್ಕೊಳಗಾದುದನ್ನು ಕೇಳಿ, ಸೂರ್ಯಭಕ್ತಿಪರಾಯಣನಾದ ವೀರಸೇನ ಮಹಾರಾಜನು ಸೌರಾಸ್ತ್ರವನ್ನು ಪ್ರಯೋಗಿಸಿ ಆ ಕೃಷ್ಣಾಂಶನ ಸೈನ್ಯವನ್ನೆಲ್ಲಾ ಸುಟ್ಟುಬಿಟ್ಟನು. ಆ ಅಸ್ತ್ರದ ಮಹಿಮೆಯಿಂದ ಕೃಷ್ಣಾಂಶನು ತನ್ನ ಕುದುರೆಯೊಡನೆ ತಾನೂ ಮೂರ್ಛೆ ಹೊಂದಿದನು.

೫೮. ಆಗ ವೀರಸೇನನು ಕೃಷ್ಣಾಂಶನನ್ನು ಹಿಡಿದು ಬಂಧಿಸಿ ತನ್ನ ಮಕ್ಕಳನ್ನೂ ಸೊಸೆಯನ್ನೂ ಬಂಧನದಿಂದ ಬಿಡಿಸಿ, ಜಾಗ್ರತೆ ತನ್ನ ಮನೆಗೆ ಬಂದು ವಿಜಯೋತ್ಸವಕ್ಕಾಗಿ ಅನೇಕ ಮಂಗಳವಾದ್ಯಗಳನ್ನು ಮೊಳಗಿಸಿದನು.

೫೯. ಕೃಷ್ಣಾಂಶನ ಕಡೆಯಲ್ಲಿ ಕಳೆದುಳಿದಿದ್ದ ವೀರರು ದಿಕ್ಕುದಿಕ್ಕಿಗೆ ಚದರಿ ಓಡಿಹೋಗಿ, ಕೊನೆಗೆ ಪರಿಮಲರಾಜನ ಸಮೀಪಕ್ಕೆ ಬಂದು ನಡೆದ ವಿಷಯವನ್ನೆಲ್ಲಾ ಸಾದ್ಯಂತವಾಗಿ ಅರಿಕೆಮಾಡಿದರು.

೬೦. ಇದನ್ನು ಕೇಳಿ ಪರಿಮಳರಾಜನು ತನ್ನ ಮನಸ್ಸಿನಲ್ಲಿ ಮಹೀಪತಿ ರಾಜನು ಮಹಾ ಮೋಸಗಾರನೆಂದು ನಿಶ್ಚಯಿಸಿ ಬ್ರಹ್ಮಾನಂದನನ್ನು ಕರೆದು " ಎಲೈ ಮಲನಾಕುಮಾರನೇ ! ನೀನು ಒಂದುಲಕ್ಷ ಸೈನ್ಯದೊಡನೆ ಈ ಕ್ಷಣವೇ ಹೋಗಿ ನಿನ್ನ ಭಾವನನ್ನು ಸೆರೆಹಿಡಿದು ನಿನ್ನ ತಮ್ಮನನ್ನು ಬಿಡಿಸಿಕೊಂಡು ಬಾ " ಎಂಬದಾಗಿ ಹೇಳಿದನು.

ಬದ್ಧ್ವಾ ಸ್ವಭಗಿನೀಕಾಂತಂ ಸ್ವಬಂಧುಂ ಮೋಚಯಾಶು ವೈ ।
ಇತಿ ಶ್ರುತ್ವಾ ಚ ಸ ಸುತೋ ಲಕ್ಷಸೇನಾಸಮನ್ವಿತಃ ॥ ೬೧ ॥

ಶೀಘ್ರಂ ಗತ್ವಾ ಚ ನಗರೀಂ ರುರೋಧ ಬಲವಾನ್ರುಷಾ ।
ಯುದ್ಧೀಭೂತೇ ಬಲೇ ತಸ್ಮಿನ್ ವೀರಸೇನೋ ನೃಪೋತ್ತಮಃ ।
ಸೌರಮಸ್ತ್ರಮುಪಾದಾಯ ದಾಹನಾರ್ಥಂ ಸಮುದ್ಯತಃ ॥ ೬೨ ॥

ಸಜ್ಜೀಭೂತೇ ತದಸ್ತ್ರೇ ತು ಬ್ರಹ್ಮಾನಂದೋ ಮಹಾಬಲಃ ।
ಬ್ರಹ್ಮಾಸ್ತ್ರೇಣೈವ ಸ ಶರಂ ವಾರಯಾಮಾಸ ವೈ ರುಷಾ ॥ ೬೩ ॥

ದೃಷ್ಟ್ವಾ ಭಯಾನ್ವಿತೋ ಭೂಪಸ್ತಮೇವ ಶರಣಂ ಯಯೌ ।
ಬ್ರಹ್ಮಾನಂದಸ್ತು ತಂ ಭೂಪಂ ವಚನಂ ಪ್ರಾಹ ನಿರ್ಭಯಃ ॥ ೬೪ ॥

---

೬೧ ಬ್ರಹ್ಮಾನಂದನು ಲಕ್ಷ ಸೈನ್ಯದೊಡನೆ ಹೊರಟು ರೋಷಾವೇಶದಿಂದ ಸಾಗುತ್ತಾ, ವೀರಸೇನನ ಪಟ್ಟಣಕ್ಕೆ ಜಾಗ್ರತೆಯಾಗಿ ಬಂದು ಮುತ್ತಿಗೆ ಹಾಕಿದನು. ಎರಡು ಪಕ್ಷದ ಸೈನಿಕರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತು.

೬೨. ಹೀಗೆ ತನ್ನ ಸೈನಿಕರು ಯುದ್ಧ ಮಾಡುತ್ತಿರಲು ವೀರಸೇನನು ಸೌರಾಸ್ತ್ರವನ್ನು ಪ್ರಯೋಗಿಸಿ ಎದುರಾಳಿಗಳನ್ನು ದಹಿಸುವುದಕ್ಕೆ ಸಿದ್ಧನಾದನು.

೬೩. ವೀರಸೇನನು ಹೀಗೆ ಸೌರಾಸ್ತ್ರ ಪ್ರಯೋಗಕ್ಕೆ ಸಿದ್ಧನಾದುದನ್ನು ನೋಡಿ ಮಹಾಬಲಶಾಲಿಯಾದ ಬ್ರಹ್ಮಾನಂದನು ಕೋಪದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಸೌರಾಸ್ತ್ರವನ್ನು ಖಂಡಿಸಿ ನಿವಾರಣೆ ಮಾಡಿದನು.

೬೪. ಹೀಗೆ ತನ್ನ ಸೌರಾಸ್ತ್ರವು ನಿಷ್ಫಲವಾದುದನ್ನು ನೋಡಿ ವೀರಸೇನನು ಭಯಗೊಂಡು ಆ ಬ್ರಹ್ಮಾನಂದನನ್ನೇ ಮರೆಹೊಕ್ಕನು. ಆಗ ಬ್ರಹ್ಮಾನಂದನು ಆ ವೀರಸೇನನ್ನು ಕುರಿತು ನಿರ್ಭಯದಿಂದ ಹೀಗೆಂದನು.

ಧೂರ್ತವಾಕ್ಯೇನ ಹೇ ಭೂಪ ಮದ್ಬಂಧುರ್ಬಾಧಿತಸ್ತ್ವಯಾ ।
ಅವಧ್ಯಾ ಚ ಸದಾ ನಾರೀ ತ್ವತ್ಸುತಸ್ತಾಮತಾಡಯತ್ ।
ಅತಸ್ತ್ವಂ ಭಗಿನೀಯುಕ್ತಂ ಸ್ವಸುತಂ ದೇಹಿ ಮೇ ನೃಪ ॥ ೬೫ ॥

ಇತಿ ಶ್ರುತ್ವಾ ಚ ನೃಪತಿರ್ವಚನಂ ಪ್ರಾಹ ನಮ್ರಧೀಃ ।
ಮತ್ಸುತಾ ಚ ಗೃಹೇ ನಾಸ್ತಿ ಕಾಮಸೇನಂ ಗೃಹಾಣ ಭೋಃ ॥ ೬೬ ॥

ಇತ್ಯುಕ್ತ್ವಾ ವೀರಸೇನಶ್ಚ ಸುತಂ ಚಂದ್ರಾವಲೀಂ ತಥಾ ।
ದತ್ವಾ ತಸ್ಮೈ ಪ್ರಸನ್ನಾತ್ಮಾ ತತ್ಪ್ರಸ್ಥಾನಮಕಾರಯತ್ ॥ ೬೭ ॥

ಬ್ರಹ್ಮಾನಂದೋಽಪಿ ಬಲವಾನ್ ಕೃಷ್ಣಾಂಶೇನ ಸಮನ್ವಿತಃ ।
ಸೇನಯಾಶೀತಿಸಾಹಸ್ರ್ಯಾ ಯಯೌ ಸಾರ್ಧಂ ಮಹಾವತೀಂ ॥ ೬೮ ॥

---

೬೫. "ಎಲೈ ವೀರಸೇನನೇ! ಧೂರ್ತನಾದ ಮಹೀಪತಿರಾಜನ ಮಾತನ್ನು ಕೇಳಿಕೊಂಡು ನೀನು ನನ್ನ ತಮ್ಮನನ್ನು ಬಂಧಿಸಿರುವೆ ಸ್ತ್ರೀಯು ಯಾವಾಗಲೂ ಅವಧ್ಯಳು ಎಂಬುದನ್ನು ಗಮನಿಸದೆ ನಿನ್ನ ಮಗನು ತನ್ನ ಹೆಂಡತಿಯನ್ನು ಹೊಡೆದಿರುವನು. ಆದ್ದರಿಂದ ನಿನ್ನ ಮಗನನ್ನು ತಂಗಿಯ ಸಮೇತ ನನ್ನ ವಶಕ್ಕೆ ಸಮರ್ಪಿಸು" ಎಂದು ಹೇಳಿದನು.

೬೬. ಈ ಮಾತನ್ನು ಕೇಳಿ ವೀರಸೇನನು ನಮ್ರಭಾವದಿಂದ "ನನ್ನ ಮನೆಯಲ್ಲಿ ಹೆಣ್ಣುಮಗಳು ಇಲ್ಲ. ಕಾಮಸೇನನ್ನು ನಿನ್ನ ವಶಪಡಿಸಿದ್ದೇನೆ" ತೆಗೆದುಕೋ ಎಂದು ಹೇಳಿದನು.

೬೭. ಹೀಗೆ ಹೇಳಿ ಕೂಡಲೆ ತನ್ನ ಮಗ ಕಾಮಸೇನನನ್ನೂ ಚಂದ್ರಾವಲಿಯನ್ನೂ ಬ್ರಹ್ಮಾನಂದನ ವಶಕ್ಕೆ ಸಮರ್ಪಿಸಿ ಸಂತೋಷದಿಂದ ಅವರನ್ನು ಸುಖವಾಗಿ ಸಾಗಕಳುಹಿಸಿದನು.

೬೮ ಬಲಶಾಲಿಯಾದ ಬ್ರಹ್ಮಾನಂದನು ಕೃಷ್ಣಾಂಶನನ್ನು ಜೊತೆಯಲ್ಲಿ ಕರೆದುಕೊಂಡು ಎಂಭತ್ತುಸಾವಿರ ಸೈನ್ಯದೊಡನೆ ಮಹಾವತೀ ನಗರಕ್ಕೆ ಬಂದು ಸೇರಿದನು.

ಮಲನಾ ಸ್ವಸುತಂ ದೃಷ್ಟ್ವಾ ಪ್ರೇಮವಿಹ್ವಲಕಂಪಿತಾ ।
ಸ್ನಾಪಯಿತ್ವಾಶ್ರುಭಾರಾಭಿ ರ್ದ್ವಿಜಾತಿಭ್ಯೋ ದದೌ ಧನಂ ॥ ೬೯ ॥

ಇತಿ ತೇ ಕಥಿತಂ ವಿಪ್ರ ಕೃಷ್ಣಾಂಶಚರಿತಂ ಶುಭಂ ।
ಶೃಣ್ವತಾಂ ಕಲಿಪಾಪಘ್ನಂ ಕಥಯಿಷ್ಯಾಮಿ ವೈ ಪುನಃ ॥ ೭೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ದ್ವಾವಿಂಶೋಽಧ್ಯಾಯಃ.



೬೯. ತನ್ನ ಪುತ್ರನು ಗಂಡಾಂತರದಿಂದ ಪಾರಾಗಿ ಮನೆಗೆ ಬಂದುದನ್ನು ನೋಡಿ ಮಲನಾದೇವಿಯು ವಾತ್ಸಲ್ಯಾತಿಶಯದಿಂದ ಕೂಡಿ, ಆನಂದಬಾಷ್ಪದ ಹನಿಗಳಿಂದ ಸ್ನಾನಮಾಡಿಸಿ ಬ್ರಾಹ್ಮಣರಿಗೆ ಸಮೃದ್ಧಿಯಾಗಿ ದ್ರವ್ಯದಾನ ಮಾಡಿಸಿದಳು.

೭೦. ಅಯ್ಯಾ ಶೌನಕಮಹರ್ಷಿಯೇ ! ಶುಭಕರವಾದ ಕೃಷ್ಣಾಂಶನ ಚರಿತ್ರೆಯನ್ನು ಈ ಪ್ರಕಾರ ನಿನಗೆ ಹೇಳಿದೆನು. ಇದನ್ನು ಕೇಳಿದವರಿಗೆ ಕಲಿದೋಷಜನಿತವಾದ ಪಾಪವು ಧ್ವಂಸವಾಗುವುದು. ಇದನ್ನೇ ಇನ್ನೂ ಮುಂದುವರಿಸಿ ಹೇಳುವೆನು ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ ಖಂಡದಲ್ಲಿ
ಕಲಿಯುಗೀಯ ಇತಿಹಾಸ ಸಮುಚ್ಚಯದಲ್ಲಿ ಕೃಷ್ಣಾಂಶ ಚರಿತ್ರೆ ಎಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ತ್ರಯೋವಿಂಶೋಽಧ್ಯಾಯಃ

॥ ಸೂತ ಉವಾಚ ॥

**ಚತುರ್ವಿಂಶಾಬ್ದಕಂ ಪ್ರಾಪ್ತೇ ಕೃಷ್ಣಾಂಶೇ ಬಲಶಾಲಿನಿ ।**
**ಇಷಶುಕ್ಲದಶಮ್ಯಾಂ ಚ ಕೃತೋ ರಾಜ್ಞಾ ಮಹೋತ್ಸವಃ ॥ ೧ ॥**

**ಭೋಜಯಿತ್ವಾ ದ್ವಿಜಶ್ರೇಷ್ಠಾನ್ ದತ್ವಾ ತೇಭ್ಯೋ ಹಿ ದಕ್ಷಿಣಾಃ ।**
**ಸ್ವಭೃತ್ಯೇಭ್ಯಸ್ತಥಾ ವಿತ್ತಂ ಯಥಾಯೋಗ್ಯಂ ಕ್ರಮಾದ್ದದೌ ॥ ೨ ॥**

**ಕಾರ್ತಿಕ್ಯಾಂ ಶುಭಯುಕ್ತಾಯಾಂ ಕೃಷ್ಣಾಂಶೋ ಬಲಸಂಯುತಃ ।**
**ಇಂದುಲೇನ ಚ ಸಂಯುಕ್ತೋ ದೇವಸಿಂಹೇನ ಸಂಯುತಃ ॥ ೩ ॥**

---

### ಇಪ್ಪತ್ತಮೂರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಬಲಶಾಲಿಯಾದ ಕೃಷ್ಣಾಂಶನಿಗೆ ಇಪ್ಪತ್ತುನಾಲ್ಕು ವರ್ಷವಾಗುತ್ತಲೇ ಆಶ್ವಯುಜಮಾಸದ ಶುಕ್ಲ ಪಕ್ಷದ ದಶಮಿಯ (ವಿಜಯದಶಮಿ) ದಿವಸ ಪರಿಮಳರಾಜನು ದೊಡ್ಡ ಉತ್ಸವವನ್ನು ನಡೆಯಿಸಿದನು.

೨. ಆ ಸಮಯದಲ್ಲಿ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ಭೂರಿ ದಕ್ಷಿಣೆಯನ್ನು ಕೊಟ್ಟುದಲ್ಲದೆ ತನ್ನ ಸೇವಕರುಗಳೆಲ್ಲರಿಗೂ ಕ್ರಮವಾಗಿ ಅವರವರ ಯೋಗ್ಯತಾನುಸಾರ ಬಹುಮಾನ ಕೊಟ್ಟು ಮರ್ಯಾದಿಸಿದನು.

೩. ಮತ್ತು ಕಾರ್ತಿಕಮಾಸದ ಶುಭದಿವಸದಲ್ಲಿ ಕೃಷ್ಣಾಂಶನು ಇಂದುಲ ದೇವಸಿಂಹರೊಡನೆ ಸೈನ್ಯಸಮೇತನಾಗಿ ವಿಜಯಯಾತ್ರೆ ಹೊರಡಲು ನಿಶ್ಚಯಿಸಿದನು.

ಅಯುತೈಃ ಸ್ವರ್ಣದ್ರವ್ಯೈಶ್ಚ ಶೂರೈರ್ದಶಸಹಸ್ರಕೈಃ ।
ಯಯೌ ಬರ್ಹಿಷ್ಮತೀಸ್ಥಾನೇ ನಾನಾಭೂಪಸಮನ್ವಿತೇ ॥ ೪ ॥

ಏತಸ್ಮಿನ್ನಂತರೇ ತತ್ರ ಚಿತ್ರರೇಖಾ ಸಮಾಗತಾ ।
ವೃತಾ ಸಪ್ತಾಲಿಭಿರ್ದೇವೀ ಚಿತ್ರಗುಪ್ತಪ್ರಪೂಜಿನೀ ॥ ೫ ॥

ಗಂಗಾಮಧ್ಯೇ ಮಹಾರಮ್ಯಂ ಯಾನಂ ಮಾಯಾಮಯಂ ತಯಾ ।
ಕೃತಂ ಕೌತೂಹಲಯುತಂ ಬಹುಸಂಪತ್ಸಮನ್ವಿತಂ ॥ ೬ ॥

ಆಗತಾಸ್ತತ್ರ ರಾಜಾನೋ ನಾನಾ ತದ್ದರ್ಶನೋತ್ಸುಕಾಃ ।
ತದೋದಯೋ ದೇವಯುತೋ ಜಯಂತೇನ ಸಮನ್ವಿತಃ ॥ ೭ ॥

ಶತಶೂರೈಶ್ಚ ಸಹಿತೋ ದರ್ಶನಾರ್ಥಮುಪಾಯಯೌ ।
ಚಿತ್ರರೇಖಾ ಮಹಾರಮ್ಯಾ ವಾಹ್ಲೀಕನೃಪತೇಃ ಸುತಾ ।
ದದರ್ಶ ಸುಂದರಂ ಕಾಂತಮಿಂದುಲಂ ಶಶಿವನ್ಮುಖಂ ॥ ೮ ॥

---

೪. ಬಳಿಕ ಹತ್ತುಸಾವಿರ ಸುವರ್ಣನಾಣ್ಯಗಳನ್ನು ಜತೆಯಲ್ಲಿ ತೆಗೆದುಕೊಂಡು, ಹತ್ತುಸಾವಿರಮಂದಿ ಶೂರರನ್ನೂ ಕರೆದುಕೊಂಡು, ಅನೇಕ ರಾಜರುಗಳು ಸೇರಿರುವ ಬರ್ಹಿಷ್ಮತಿ ಎಂಬ ಸ್ಥಳಕ್ಕೆ ಬಂದನು.

೫. ಚಿತ್ರಗುಪ್ತರನ್ನು ಪೂಜಿಸುವಳಾದ ಚಿತ್ರರೇಖಾದೇವಿಯು ತನ್ನ ಏಳು ಮಂದಿ ಸಖಿಯರೊಡನೆ ಅಲ್ಲಿಗೆ ಬಂದಿದ್ದಳು.

೬. ಅವಳು ಗಂಗಾನದಿಯ ಮಧ್ಯದಲ್ಲಿ ಬಹು ಸುಂದರವೂ, ಮಾಯಾಮಯವೂ ಆಗಿ, ಅನೇಕ ಭೋಗಸಾಮಗ್ರಿಯುಕ್ತವಾದ ನಾವೆಯನ್ನು ನಿರ್ಮಿಸಿದಳು. ಆ ನಾವೆಯು ನೋಡುವವರಿಗೆ ಆಶ್ಚರ್ಯವನ್ನುಂಟುಮಾಡುತ್ತಿದ್ದಿತು.

೭. ಅಲ್ಲಿ ನೆರೆದಿದ್ದ ರಾಜರೆಲ್ಲರೂ ಆ ಚಿತ್ರರೇಖೆಯನ್ನು ನೋಡುವುದರಲ್ಲಿ ಕುತೂಹಲಿಗಳಾಗಿದ್ದರು. ಆಗ ಕೃಷ್ಣಾಂಶನು ದೇವಸಿಂಹ, ಜಯಂತ, (ಇಂದುಲ) ಇವರುಗಳೊಡನೆ ನೂರುಜನ ವೀರರನ್ನು ಕರೆದುಕೊಂಡು ಅವಳ ದರ್ಶನಕ್ಕಾಗಿ ಹೋದನು.

೮. ವಾಹ್ಲೀಕರಾಜನ ಮಗಳೂ ಅತಿ ಸುಂದರಿಯೂ ಆದ ಆ ಚಿತ್ರರೇಖೆಯು, ಚಂದ್ರನಂತೆ ಮುಖವುಳ್ಳವನೂ, ಸುಂದರನೂ, ಮನೋಹರಾಕಾರನೂ ಆದ ಇಂದುಲನನ್ನು ನೋಡಿದಳು.

ಯೇನ ಸ್ವಪ್ನಾಂತರೇ ರಮ್ಯಂ ಸಾರ್ಧಂ ಭುಕ್ತಂ ತಯಾ ಸುಖಂ ।
ತಮಾಹ್ಲಾದಸುತಂ ಜ್ಞಾತ್ವಾ ಸಾಭಿನಂದನದೇಹಜಾ ।
ಕೃತ್ವಾ ಮೋಹಮಯಂ ಜಾಲಂ ಶುಕಭೂತಂ ತದೇಂದುಲಂ ॥ ೯ ॥

ಹೃತ್ವಾ ಸ್ವಯಂವರೇ ರಮ್ಯೇ ಪರಮಾನಂದಮಾಯಯಾ ।
ಪುನರಾಹೃತ್ಯ ತಾಂ ಮಾಯಾಂ ಸ್ವಗೇಹಾಯ ಯಯೌ ಮುದಾ ॥ ೧೦ ॥

ಕೃಷ್ಣಾಂಶಸ್ತು ತದಾ ಬುದ್ಧ್ವಾ ನ ದದರ್ಶ ಸ್ವಕಂ ಶಿಶುಂ ।
ದೇವಸಿಂಹಂ ಬೋಧಯಿತ್ವಾ ಪಪ್ರಚ್ಛ ಕ್ವ ಗತಃ ಶಿಶುಃ ॥ ೧೧ ॥

ಕಾಲಜ್ಞೋ ದೇವಸಿಂಹೋಽಪಿ ಮೋಹಿತಶ್ಚಿತ್ರಮಾಯಯಾ ।
ನಜ್ಞಾತಸ್ತೇನ ವೈ ಬಾಲಃ ಕ್ವ ಗತಃ ಕೇನ ವಾ ಹೃತಃ ॥ ೧೨ ॥

---

೯. ಅಭಿನಂದನ ರಾಜಕುಮಾರಿಯಾದ ಆ ಚಿತ್ರರೇಖೆಯು ತಾನು ಅವನೊಡನೆ ವಿಹರಿಸಿ ಸುಖಪಟ್ಟಂತೆ ಸ್ವಪ್ನದಲ್ಲಿ ಕಂಡಿದ್ದಳು. ಆದರೆ ಅವನು ಯಾರ ಮಗನೆಂದು ತಿಳಿದಿರಲಿಲ್ಲ. ಆತನು ಆಹ್ಲಾದ ರಾಜನ ಕುಮಾರನು ಎಂದು ಈಗ ತಿಳಿದಳು.

೧೦. ಕೂಡಲೆ ಅವಳು ಎಲ್ಲರಿಗೂ ಮೂರ್ಛೆಯನ್ನುಂಟುಮಾಡುವ ಮಾಯಾ ಜಾಲವನ್ನು ಏರ್ಪಡಿಸಿ, ಸ್ವಯಂವರದಲ್ಲಿ ಇಂದುಲನನ್ನು ವರಿಸಿ, ಅವನೊಡನೆ ವಿಹರಿಸಿ ಸಂತೋಷಹೊಂದಿ ಅವನನ್ನು ಒಂದು ಗಿಣಿಯಾಗಿ ಮಾಡಿದಳು. ಅನಂತರ ತಾನು ಪ್ರಯೋಗಿಸಿದ್ದ ಮಾಯೆಯನ್ನು ಪರಿಹರಿಸಿ ಸಂತೋಷದಿಂದ ತನ್ನ ಮನೆಗೆ ಬಂದಳು.

೧೧. ಸ್ವಲ್ಪಹೊತ್ತಾದ ಮೇಲೆ ಕೃಷ್ಣಾಂಶನು ಎಚ್ಚತ್ತು ತನ್ನ ಮಗನಾದ ಇಂದುಲನನ್ನು ಕಾಣದೆ, ದೇವಸಿಂಹನನ್ನು ಎಚ್ಚರಿಸಿ "ಮಗು ಎಲ್ಲಿ ಹೋದ?" ಎಂದು ಪ್ರಶ್ನೆಮಾಡಿದನು.

೧೨. ತ್ರಿಕಾಲಜ್ಞನಾದ ದೇವಸಿಂಹನೂ ಸಹ ಚಿತ್ರರೇಖೆಯ ಮಾಯಾಜಾಲದಿಂದ ಮುಗ್ಧನಾಗಿ, ಹುಡುಗನು ಎಲ್ಲಿ ಹೋದನು? ಯಾರು ಅಪಹರಿಸಿದರು? ಎಂಬುದನ್ನು ತಿಳಿಯಲಾರದೆ ಹೋದನು.

ವಿಸ್ಮಿತಂ ದೇವಸಿಂಹಂ ಚ ದೃಷ್ಟ್ವಾ ಕೃಷ್ಣಾಂಶಕೋ ಬಲೀ ।
ರುರೋದೋಚ್ಚೈಸ್ತದಾ ಗಾಢಂ ಚಿತ್ರಮಾಯಾವಿಮೋಹಿತಃ ॥ ೧೩ ॥

ಶ್ರುತ್ವಾ ತು ರೋದನಂ ತಸ್ಯ ಖಲಸ್ತತ್ರ ಮಹೀಪತಿಃ ।
ಯಯೌ ಶೀಘ್ರಂ ಪ್ರಸನ್ನಾತ್ಮಾ ಯತ್ರಾಹ್ಲಾದಃ ಸ್ವಯಂ ಸ್ಥಿತಃ ॥ ೧೪ ॥

ರುದಿತ್ವಾ ತತ್ರ ವೈ ಗಾಢಂ ವಚನಂ ಪ್ರಾಹ ನಮ್ರಧೀಃ ।
ಉದಯೋ ನಾಮ ತೇ ಭ್ರಾತಾ ಮೋಹಯಿತ್ವಾ ಮದೇನ ತೌ ।
ದೇವಮಿಂದುಲಮೇವಾಸೌ ಹತ್ವಾ ಧಾರಾಸ್ವರೋಪಯತ್ ॥ ೧೫ ॥

ಪ್ರತ್ಯಕ್ಷಂ ಚ ಮಯಾ ದೃಷ್ಟಂ ತೇನ ವೀರೇಣ ವೈ ಕೃತಂ ।
ಶತಂ ಸ್ವರ್ಣಂ ಚ ಮೇ ದತ್ವಾ ವಿನಯೇನಾವರೋಧಿತಃ ॥ ೧೬ ॥

---

೧೩. ತ್ರಿಕಾಲಜ್ಞಾನಿಯಾದ ದೇವಸಿಂಹನು ಈರೀತಿ ಮುಗ್ಧನಾದುದನ್ನು ನೋಡಿ, ಶೂರನಾದ ಕೃಷ್ಣಾಂಶನು ಆಶ್ಚರ್ಯಗೊಂಡು ತಾನೂ ಚಿತ್ರರೇಖಾಮಾಯೆಯಿಂದ ಮುಗ್ಧನಾಗಿ ಗಟ್ಟಿಯಾಗಿ ರೋದಿಸತೊಡಗಿದನು.

೧೪. ಕೃಷ್ಣಾಂಶನು ರೋದಿಸುತ್ತಿರುವುದನ್ನು ನೋಡಿ, ಧೂರ್ತನಾದ ಮಹೀಪತಿರಾಜನು ಸಂತೋಷದಿಂದ ಆಹ್ಲಾದನಿದ್ದೆಡೆಗೆ ಜಾಗ್ರತೆಯಾಗಿ ಬಂದನು.

೧೫. ಅಲ್ಲಿ ಆಹ್ಲಾದನ ಮನಸ್ಸು ಕೆಡಿಸುವುದಕ್ಕಾಗಿ ತಾನೂ ಗಟ್ಟಿಯಾಗಿ ರೋದನಮಾಡುತ್ತಾ ವಿನಯದಿಂದ ಕೂಡಿ ಅವನನ್ನು ಕುರಿತು "ನಿನ್ನ ಸಹೋದರನಾದ ಉದಯನು ಗರ್ವದಿಂದ ಜತೆಯವರಿಬ್ಬರನ್ನೂ ಮೂರ್ಛೆಗೊಳಿಸಿ ಇಂದುಲನನ್ನು ಹೊಡೆದು ಕತ್ತಿಯ ಬಾಯಿಗೆ ಆಹುತಿಗೊಳಿಸಿದ್ದಾನೆ."

೧೬. "ಆ ವೀರನು ಹೀಗೆ ಮಾಡಿದುದನ್ನು ನಾನೇ ಪ್ರತ್ಯಕ್ಷವಾಗಿ ನೋಡುತ್ತಿದ್ದೆನು. ನಾನು ನೋಡುತ್ತಿದ್ದುದನ್ನು ಅವನು ಕಂಡು, ನನಗೆ ನೂರು ಸುವರ್ಣ ಮುದ್ರೆಗಳನ್ನು ಕೊಟ್ಟು ಯಾರಿಗೂ ಹೇಳಬೇಡವೆಂದು ನನ್ನನ್ನು ಕೇಳಿಕೊಂಡು ತಡೆಗಟ್ಟಿರುವನು" ಎಂದನು.

ದೇವಸಿಂಹಸ್ತತೋ ಬುದ್ಧ್ವಾ ನ ಜ್ಞಾತಂ ತೇನ ಯತ್ಕೃತಂ ।
ಇತಿ ಶ್ರುತ್ವಾ ತು ವಚನಂ ನಿಶ್ಚಯಂ ನಾಧಿಗಚ್ಛತಿ ॥ ೧೭ ॥

ಏತಸ್ಮಿನ್ನಂತರೇ ಪ್ರಾಪ್ತೌ ತೌ ವೀರೌ ರೋದನೇ ರತೌ ।
ತದ್ವಿಯೋಗೇನ ಕೃಷ್ಣಾಂಶಃ ಸ್ವದೇಹಂ ತ್ಯಕ್ತುಮುದ್ಯತಃ ॥ ೧೮ ॥

ಆಹ್ಲಾದೋ ನಿಶ್ಚಯಂ ಜ್ಞಾತ್ವಾ ಭಾಷಿತಂ ಚ ಮಹೀಪತೇಃ ।
ಕೃಷ್ಣಾಂಶಂ ತಾಡಯಾಮಾಸ ವೇತಸ್ಯೈಶ್ಚರ್ಮಕರ್ತನ್ಯೈಃ ॥ ೧೯ ॥

ತಸ್ಯ ಮಾತಾ ತಥಾ ಪತ್ನೀ ಭಗಿನೀಪ್ರೇಮದುಃಖಿತಾಃ ।
ಆಹ್ಲಾದಂ ಬೋಧಯಾಮಾಸುರ್ಧೂರ್ತಮಾಯಾವಿಮೋಹಿತಂ ।
ನಬೋಧಿತಸ್ತದಾ ವೀರಶ್ಚಿತ್ರಮಾಯಾವಿಮೋಹಿತಃ ॥ ೨೦ ॥

---

೧೭. ಅನಂತರ ದೇವಸಿಂಹನು ಎಚ್ಚೆತ್ತು ನಿಜವಾಗಿ ನಡೆದದ್ದೊಂದನ್ನೂ ತಿಳಿಯದೆ, ನಾನು ಹೇಳಿದ ಮಾತನ್ನೂ ತಾನು ನಂಬದೇ ಇದ್ದಾನೆ" ಎಂದು ಚಾಡಿ ಹೇಳಿದನು.

೧೮. ಇಷ್ಟರಲ್ಲಿ ಶೂರರಾದ ಕೃಷ್ಣಾಂಶ, ದೇವಸಿಂಹ ಇಬ್ಬರೂ ರೋದನ ಮಾಡುತ್ತಾ ಅಲ್ಲಿಗೆ ಬಂದರು. ಪ್ರಿಯಪುತ್ರನಾದ ಇಂದುಲನ ವಿಯೋಗದಿಂದ ಕೃಷ್ಣಾಂಶನು ತನ್ನ ಶರೀರತ್ಯಾಗಮಾಡಲು ಉದ್ಯುಕ್ತನಾದನು.

೧೯. ಆಗ ಮಹೀಪತಿರಾಜನು ಹೇಳಿದ ಚಾಡಿಯ ಮಾತನ್ನೇ ನಿಶ್ಚಯವೆಂದು ಆಹ್ಲಾದನು ತಿಳಿದು ಕೃಷ್ಣಾಂಶನನ್ನು ಚರ್ಮದಿಂದ ರಚಿತವಾದ ಬಾರುಕೋಲು ಗಳಿಂದ ಹೊಡೆಯಿಸಿದನು.

೨೦. ಆ ಕೃಷ್ಣಾಂಶನ ತಾಯಿ, ಪತ್ನಿ, ಸಹೋದರಿ ಇವರು ಕೃಷ್ಣಾಂಶನ ಮೇಲಿನ ಪ್ರೇಮದಿಂದ ದುಃಖಿತೆಯರಾಗಿ ಆಹ್ಲಾದನನ್ನು ಕುರಿತು "ಮೋಸಗಾರ ನಾದ ಮಹೀಪತಿರಾಜನ ಚಾಡಿಯ ಮಾತುಗಳನ್ನು ಕೇಳಿ ನೀನು ಮುಗ್ಧನಾಗಿದ್ದೀ" ಎಂದು ಎಷ್ಟು ಬಗೆಯಿಂದ ತಿಳಿಸಿದರೂ ಚಿತ್ರರೇಖೆಯ ಮಾಯೆಗೆ ಒಳಗಾದ ಆಹ್ಲಾದನು ಆಗಲೂ ಎಚ್ಚೆತ್ತುಕೊಳ್ಳಲಿಲ್ಲ.

ತದಾ ಪುಷ್ಪವತೀ ದೇವೀ ಸ್ವಪತಿಂ ಭ್ರಾತೃಪೀಡಿತಂ ।
ದೃಷ್ಟ್ವಾ ತತ್ರ ಗತಾ ಶೀಘ್ರಂ ಪತಿದುಃಖೇನ ದುಃಖಿತಾ ॥ ೨೦ ॥

ವಿನಾಪರಾಧಂ ಕೃಷ್ಣಾಂಶೋ ಮಹಾನಿಂದಾಮವಾಪ್ತವಾನ್ ।
ತದಾ ವೇದವಿದೋ ವಿಪ್ರಾ ಆಹ್ಲಾದಂ ಪ್ರಾಹುರೂರ್ಜಿತಂ ॥ ೨೨ ॥

ವಧಸ್ತ್ಯಾಗಃ ಸಮೋ ಜ್ಞೇಯೋ ಯೋಗ್ಯಂ ಬುದ್ಧ್ಯಾ ವಿಚಾರಯ ।
ಇತ್ಯುಕ್ತಃ ಸ ತುರೀಯಾತ್ಮಾ ಪುತ್ರಶೋಕೇನ ದುಃಖಿತಃ ॥ ೨೩ ॥

ಚಾಂಡಾಲಾಂಶ್ಚ ಸಮಾಹೂಯ ಬದ್ಧ್ವಾ ತಂ ಪುತ್ರಘಾತಿನಂ ।
ದತ್ವಾ ತೇಭ್ಯಃ ಸಪತ್ನೀಕಂ ವಧಂ ಕುರುತ ಮಾ ಚಿರಂ ॥ ೨೪ ॥

---

೨೧. ಬಳಿಕ ಕೃಷ್ಣಾಂಶನ ಪತ್ನಿಯಾದ ಪುಷ್ಪವತೀ ದೇವಿಯು, ತನ್ನ ಪತಿ ಈ ಪ್ರಕಾರ ಸಹೋದರನ ಶಿಕ್ಷೆಗೆ ಗುರಿಯಾದ್ದನ್ನು ನೋಡಿ, ಪತಿಗೆ ಒದಗಿದ ದುಃಖಕ್ಕಾಗಿ ತಾನು ಖಿನ್ನೆಯಾಗಿ ಜಾಗ್ರತೆ ಪತಿಯ ಸಮೀಪಕ್ಕೆ ಬಂದಳು.

೨೨. ವಸ್ತುತಃ ಯಾವ ಅಪರಾಧವನ್ನೂ ಮಾಡದೆ ಇರುವ ಕೃಷ್ಣಾಂಶನು ಈ ಪ್ರಕಾರ ತುಂಬ ನಿಂದೆಗೆ ಗುರಿಯಾದನು. ಬಳಿಕ ವೇದಜ್ಞರಾದ ವಿಪ್ರಶ್ರೇಷ್ಠರು ಕ್ರೋಧಾವಿಷ್ಟನಾದ ಆಹ್ಲಾದನ ಬಳಿಗೆ ಹೋಗಿ ಇಂತೆಂದರು.

೨೩. "ಪ್ರಭೂ! ವಧೆಯೂ ಪರಿತ್ಯಾಗವೂ ಎರಡೂ ಸಮಾನವಾದ ಶಿಕ್ಷೆಗಳು. ಇದನ್ನು ನಿನ್ನ ಬುದ್ಧಿಪೂರ್ವಕವಾಗಿ ವಿಚಾರಮಾಡಿ ತಿಳಿದುಕೊ" ಎಂದು ಹೇಳಿದರು. ಮಾಯಾಮೋಹಿತನಾದ ಆಹ್ಲಾದನು ಇದನ್ನೂ ಗಮನಿಸದೆ ಪುತ್ರಶೋಕಾಕುಲಹೃದಯನಾಗಿದ್ದನು.

೨೪. ಅವನು ಕೂಡಲೆ ಚಂಡಾಲರನ್ನು ಬರಮಾಡಿ, ತನ್ನ ಪುತ್ರವಧಕಾರಿಯಾದ ಕೃಷ್ಣಾಂಶನನ್ನು ಬಂಧಿಸಿ ಅವರ ವಶಕ್ಕೆ ಕೊಟ್ಟು, ಪತ್ನೀಸಮೇತ ಇವನನ್ನು ಜಾಗ್ರತೆ ಕೊಂದುಹಾಕಿಬಿಡಿ; ಇದಕ್ಕೆ ಗುರುತಾಗಿ ಇವನ ಕಣ್ಣನ್ನು ತಂದು ನನಗೆ ತೋರಿಸಬೇಕು. ಗೊತ್ತಾಯಿತೆ?" ಎಂದನು.

**ಅಸ್ಯ ನೇತ್ರೇ ಸಮುತ್ಪಾಟ್ಯ ಮಾಂ ದರ್ಶಯತ ಸಂಯುತಾಃ ।**
**ಇತಿ ಶ್ರುತ್ವಾ ಗತಾಸ್ತೇ ವೈ ಗಹನಂ ವ್ಯಾಘ್ರಸೇವಿತಂ ॥ ೨೫ ॥**

**ದೇವಸಿಂಹಸ್ತತೋ ಗತ್ವಾ ದತ್ವಾ ತೇಭ್ಯೋ ಮಹದ್ಧನಂ ।**
**ಸಂಪ್ರಾಪ್ಯ ದಂಪತೀ ವೀರಶ್ಚಾಂಡಾಲೇಭ್ಯೋ ವನಂ ಯಯೌ ॥ ೨೬ ॥**

**ಬಲಖಾನೇಸ್ತು ಯಾ ಪತ್ನೀ ಗಜಮುಕ್ತಾ ಪತಿವ್ರತಾ ।**
**ದಂಪತೀ ಪಾಲಯಾಮಾಸ ಗುಹ್ಯಗೇಹೇ ಮುದಾ ಯುತಾ ॥ ೨೭ ॥**

**ಚಾಂಡಾಲಾಸ್ತೇ ತು ಸಂಗತ್ಯ ಮೃಗನೇತ್ರೇ ಚ ತಂ ದದುಃ ।**
**ದೇವಸಿಂಹಸ್ತದಾಗತ್ಯ ಕ್ರೋಧಾತ್ಮಾ ಚ ತಮಬ್ರವೀತ್ ।**
**ಧಿಕ್ತ್ವಾಂ ಪಾಪಂ ದುರಾಚಾರಂ ತ್ವಯಾ ಮೇ ಹಿಂಸಿತಃ ಸಖಾ ॥ ೨೮ ॥**

---

೨೫. ಆ ಚಂಡಾಲರು ರಾಜನ ಆಜ್ಞೆಯಂತೆ ನಡೆಸುವುದಕ್ಕಾಗಿ ಹುಲಿ ಮೊದಲಾದ ಕ್ರೂರಮೃಗಭರಿತವಾದ ಘೋರಾರಣ್ಯಕ್ಕೆ ಇವರನ್ನು ಕರೆದುಕೊಂಡು ಹೋದರು.

೨೬. ಆಗ ವೀರನಾದ ದೇವಸಿಂಹನು ಅವರ ಹಿಂದೆಯೇ ಹೋಗಿ ಆ ಚಂಡಾಲರಿಗೆ ತುಂಬಾ ಹಣವನ್ನು ಲಂಚ ಕೊಟ್ಟು, ಕೃಷ್ಣಾಂಶನನ್ನೂ ಅವನ ಪತ್ನಿಯನ್ನೂ ಬಿಡಿಸಿ, ಆ ದಂಪತಿಗಳನ್ನು ಕರೆದುಕೊಂಡು ಹೊರಟು ಒಂದು ಅರಣ್ಯ ಮಾರ್ಗವನ್ನು ಹಿಡಿದರು. ಅಲ್ಲಿಂದ ಶಿರೀಷಪುರಕ್ಕೆ ಹೋದರು.

೨೭. ಪತಿವ್ರತಾಶಿರೋಮಣಿಯೂ ಬಲಖಾನಿಯ ಪತ್ನಿಯೂ ಆದ ಗಜಮುಕ್ತಾದೇವಿಯು ಈ ಕೃಷ್ಣಾಂಶದಂಪತಿಗಳನ್ನು ಸಂತೋಷದಿಂದ ಗುಟ್ಟಾಗಿ ತನ್ನ ಮನೆಯಲ್ಲಿಟ್ಟುಕೊಂಡು ಕಾಪಾಡುತ್ತಿದ್ದಳು.

೨೮ ಇತ್ತ ಚಂಡಾಲರು ಜಿಂಕೆಯ ಕಣ್ಣುಗಳನ್ನು ತೆಗೆದುಕೊಂಡು ಬಂದು 'ಇದೇ ಅವರ ಕಣ್ಣುಗಳು' ಎಂದು ಆಹ್ಲಾದನಿಗೆ ತೋರಿಸಿದರು. ಆ ವೇಳೆಗೆ ದೇವಸಿಂಹನು ಅಲ್ಲಿಗೆ ಬಂದು ಆಹ್ಲಾದನನ್ನು ಕುರಿತು "ಎಲಾ ಪಾಪಿ ! ದುರಾಚಾರ ನಿನಗೆ ಧಿಕ್ಕಾರವಿರಲಿ, ನಿನ್ನಿಂದ ನನ್ನ ಆಪ್ತನು ನಿಷ್ಕಾರಣವಾಗಿ ತೊಂದರೆಗೆ ಒಳಗಾದನು."

ಜೀವಿತಸ್ತ್ವತ್ಸುತೋ ಭೂಮೌ ತದನ್ವೇಷಣಹೇತವೇ ।
ಯಾಸ್ಯಾಮಿ ವಿವಿಧಾನ್ರಾಷ್ಟ್ರಾನ್ ಸತ್ಯಂಸತ್ಯಂ ಬ್ರವೀಮ್ಯಹಂ ॥ ೨೯ ॥

ಇತ್ಯುಕ್ತ್ವಾ ಪ್ರಯಯೌ ವೀರಃ ಶಿರೀಷಾಖ್ಯಪುರಂ ಶುಭಂ ।
ಗಜಮುಕ್ತಾಮನುಜ್ಞಾಪ್ಯ ದಂಪತೀ ಪ್ರಾಪ್ಯ ನಿರ್ಭಯಃ ।
ಮಯೂರನಗರಂ ರಮ್ಯಂ ನಿಶಿ ಘೋರಂ ಸಮಾಯಯೌ ॥ ೩೦ ॥

ಮಕರಂದಸ್ತು ಬಲವಾನ್ ಜ್ಞಾತ್ವಾ ತತ್ಸರ್ವಕಾರಣಂ ।
ಸ್ವಸುಃ ಪತಿಂ ಚ ಭಗಿನೀಂ ಸ್ವಾಂತೇ ಪ್ರೇಮ್ಣಾ ನ್ಯವಾಸಯತ್ ॥ ೩೧ ॥

ಧರ್ಮಮಾರಾಧಯಾಮಾಸ ಯಜ್ಞೈರ್ನಾನಾವಿಧೈಃ ಸ್ತವೈಃ ।
ಪ್ರಸನ್ನೋ ಧರ್ಮರಾಜಶ್ಚ ಮಕರಂದಮುವಾಚ ಹ ॥ ೩೨ ॥

---

೨೯. "ನಿನ್ನ ಮಗನಾದ ಇಂದುಲನು ಸತ್ತಿಲ್ಲ. ಜೀವಿತನಾಗಿ ಎಲ್ಲೋ ಇದ್ದಾನೆ. ಅವನನ್ನು ಹುಡುಕುವುದಕ್ಕಾಗಿ ನಾನು ಅನೇಕ ರಾಷ್ಟ್ರಗಳನ್ನು ಸಂಚರಿಸಿ ಶೋಧನಮಾಡುತ್ತೇನೆ. ಇದು ಸತ್ಯವೆಂದು ತಿಳಿ" ಎಂದು ಹೇಳಿ ಅವನ ಬಳಿಯಿಂದ ಹೊರಟನು.

೩೦ ವೀರನಾದ ದೇವಸಿಂಹನು ಬಳಿಕ, ಶುಭಕರವಾದ ಶಿರೀಷನಗರಕ್ಕೆ ಬಂದು, ಬಲಖಾನಿಯ ಪತ್ನಿಯಾದ ಗಜಮುಕ್ತಾದೇವಿಯ ಅನುಜ್ಞೆಯನ್ನು ಪಡೆದು ದಂಪತಿಗಳಾದ ಕೃಷ್ಣಾಂಶ ಪುಷ್ಪವತಿಯರನ್ನು ಕರೆದುಕೊಂಡು ಗಾಢಾಂಧಕಾರದ ವೇಳೆಯಲ್ಲಿ ನಿರ್ಭಯದಿಂದ ಹೊರಟು, ರಮ್ಯವಾದ ಮಯೂರನಗರಕ್ಕೆ ಬಂದು ಸೇರಿದರು.

೩೧. ಪುಷ್ಪವತಿಯ ಅಣ್ಣನಾದ ಮಕರಂದನು ಅನಿರೀಕ್ಷಿತವಾಗಿ ತನ್ನಲ್ಲಿಗೆ ಬಂದ ಅವರನ್ನು ಸತ್ಕರಿಸಿ, ಅವರು ಬಂದಿರುವ ಕಾರಣವನ್ನೆಲ್ಲಾ ತಿಳಿದು, ಬಲಶಾಲಿಯಾದ ಕೃಷ್ಣಾಂಶಭಾವನನ್ನೂ ತನ್ನ ತಂಗಿಯನ್ನೂ ಸಂತೋಷದಿಂದ ತನ್ನ ಮನೆಯಲ್ಲಿರಿಸಿಕೊಂಡು ಪ್ರೀತಿಯಿಂದ ಉಪಚರಿಸಿದನು.

೩೨. ಬಳಿಕ ಮಕರಂದನು ಇಂದುಲನ ನಿಜಾಂಶವನ್ನು ತಿಳಿವ ಪ್ರಯತ್ನಕ್ಕಾಗಿ ಅನೇಕ ಯಜ್ಞಗಳಿಂದಲೂ ನಾನಾ ಪ್ರಕಾರವಾದ ಸ್ತೋತ್ರಗಳಿಂದಲೂ ಧರ್ಮಪುರುಷನನ್ನು ಆರಾಧಿಸಿದನು. ಇದರಿಂದ ಸಂತುಷ್ಟನಾದ ಧರ್ಮರಾಜನು ಮಕರಂದನನ್ನು ಕುರಿತು ಹೀಗೆಂದನು.

ಅಭಿನಂದನಭೂಪಸ್ಯ ಸುತಾ ಚಿತ್ರಪ್ರಪೂಜಿನೀ ।
ನಾಟ್ಯಾತ್ಮಜಾ ಕೇಸರಿಣೀ ತತ್ಸಖೀ ದಂಭಕೋವಿದಾ ॥ ೩೩ ॥

ಕೇಸರಿಣ್ಯಾ ಗುರುರ್ಜ್ಞೇಯಃ ಕುತುಕೋ ಯೋಗರೂಪಧೃಕ್ ।
ತೇನ ಪ್ರಸಾರಿತಾ ಮಾಯಾ ಶತಯೋಜನಮಂತರಾ ॥ ೩೪ ॥

ಶತ್ರುಭಿರ್ದುರ್ಗಮಾ ಭೂಮಿಃ ಶತ್ರುಪಾಷಾಣಕಾರಿಣೀ ।
ಚಿತ್ರಗುಪ್ತಪ್ರಭಾವೇಣ ನಿರ್ಭಯೋ ಭೂಪತಿಃ ಸ್ವಯಂ ॥ ೩೫ ॥

ಚಿತ್ರರೇಖಾ ಭೂಪಸುತಾ ಜಯಂತಸ್ತು ತಯಾ ಹೃತಃ ।
ನರರೂಪಧರೋ ರಾತ್ರೌ ಶುಕರೂಪಧರೋ ದಿನೇ ।
ಇಂದುಲಶ್ಚ ಸ್ಥಿತೋ ದುಃಖೀ ಚಿತ್ರಮಾಯಾವಿಮೋಹಿತಃ ॥ ೩೬ ॥

---

೩೩. "ಅಭಿನಂದನ ರಾಜನಿಗೆ ಚಿತ್ರಗುಪ್ತರನ್ನು ಆರಾಧಿಸುವ ಒಬ್ಬಳು ಮಗಳು ಇರುವಳು. ನಾಟ್ಯಾಚಾರ್ಯನ ಮಗಳಾದ ಕೇಸರಿಣಿ ಎಂಬ ಮಹಾ ಜಂಬಗಾತಿಯು ಆವಳಿಗೆ ಪ್ರಿಯಸಖಿಯಾಗಿರುವಳು"

೩೪. "ಈ ಕೇಸರಿಣಿಗೆ ಯೋಗಮಾಯಾರೂಪವನ್ನು ಧರಿಸಬಲ್ಲ ಕುತುಕಾ ಎಂಬ ಗುರುವಿರುವನು. ಆ ಕುತುಕನಿಂದ ಸುತ್ತಲೂ ನೂರು ಯೋಜನದವರೆಗೂ ಮಾಯೆಯ ಪ್ರಸಾರವಾಗಿದೆ"

೩೫. "ಆ ಸ್ಥಳವು ಶತ್ರುವಿನ ಪ್ರವೇಶಕ್ಕೆ ಅಸಾಧ್ಯವಾಗಿರುವುದು. ಅಲ್ಲಿ ಶತ್ರುಗಳು ಪ್ರವೇಶಿಸಿದರೆ ಶಿಲಾರೂಪವನ್ನು ಹೊಂದುವರು. ಈ ಬಗೆಯಾದ ಚಿತ್ರಗುಪ್ತರ ಮಹಿಮೆಯಿಂದ ಅಭಿನಂದನರಾಜನು ಯಾರ ಹೆದರಿಕೆಯೂ ಇಲ್ಲದೆ ಸುಖವಾಗಿ ರಾಜ್ಯಭಾರ ಮಾಡುತ್ತಿರುವನು."

೩೬. "ಆ ರಾಜಪುತ್ರಿಯ ಹೆಸರು ಚಿತ್ರರೇಖೆ. ಇಂದುಲನನ್ನು ಅವಳೇ ಅಪಹರಿಸಿರುವಳು. ನಿತ್ಯವೂ ರಾತ್ರಿಯವೇಳೆ ಆ ಇಂದುಲನು ಚಿತ್ರರೇಖೆಯ ಮಾಯೆಯಿಂದ ಮನುಷ್ಯರೂಪವನ್ನು ಧರಿಸುವನು. ಬೆಳಗಾಗುತ್ತಲೆ ಗಿಳಿಯ ರೂಪವನ್ನು ಧರಿಸಿ ದುಃಖಗೊಂಡು ಕಾಲಕಳೆಯುತ್ತಿರುವನು."

ಕೃಷ್ಣಾಂಶಶ್ಚ ಭವಾನ್ದೇವಃ ಸಹಿತಃ ಸೂರ್ಯವರ್ಮಣಾ ।
ಮಯಾ ದತ್ತಾನಿ ಯಂತ್ರಾಣಿ ಗೃಹೀತ್ವಾ ತೇ ಮುದಾ ಯುತಾಃ !
ಚಿತ್ರರೇಖಾಂ ಸಮಾಗತ್ಯ ನೃತ್ಯಾದೀಂಸ್ತೈಃ ಸಮಂ ಕುರು ॥ ೩೭ ॥

ಮೋಹಯಿತ್ವಾ ಚ ತಾಂ ದೇವೀಂ ಪಠಿತ್ವಾ ತನ್ಮತಂ ಶುಭಂ ।
ಪುನರಾಗಚ್ಛ ವೈ ಶೀಘ್ರಂ ಸೈನ್ಯಯೋಗಂ ಪುನಃ ಕುರು ॥ ೩೮ ॥

ಇತ್ಯುಕ್ತ್ವಾಂತರ್ದಧೇ ದೇವಃ ಸ ರಾಜಾ ವಿಸ್ಮಯಾನ್ವಿತಃ ।
ಕೃಷ್ಣಾಂಶಂ ವರ್ಣಯಾಮಾಸ ಯಥಾ ಧರ್ಮೇಣ ಭಾಷಿತಂ ॥ ೩೯ ॥

ಫಾಲ್ಗುನೇ ಮಾಸಿ ಸಂಪ್ರಾಪ್ತೇ ತ್ರಯಸ್ತೇ ಯೋಗಿರೂಪಿಣಃ ।
ಯಯುರಿನ್ನಗಟಂ ರಮ್ಯಂ ನೃತ್ಯಗೀತವಿಶಾರದಾಃ ॥ ೪೦ ॥

---

೩೭. "ನಾನು ಕೊಡುವ ಈ ಯಂತ್ರಗಳನ್ನು ತೆಗೆದುಕೊಂಡು ನೀನು ಕೃಷ್ಣಾಂಶ ದೇವಸಿಂಹ ಸೂರ್ಯವರ್ಮ ಇವರುಗಳೊಡನೆ ಚಿತ್ರರೇಖೆಯ ಬಳಿಗೆ ಹೋಗು."

೩೮. "ಅಲ್ಲಿ ಅವಳೊಡನೆ ಸಂತೋಷದಿಂದ ನರ್ತನ, ಗಾನ ಮುಂತಾದವುಗಳನ್ನು ಮಾಡು. ಅವಳೊಡನೆ ಇಷ್ಟಾಲಾಪಗಳನ್ನಾಡಿ ಅವಳನ್ನು ಮೋಹಗೊಳಿಸಿ ಜಾಗ್ರತೆ ಹಿಂದಿರುಗಿ ಬಂದು ಸೈನ್ಯ ಸಿದ್ಧತೆಯನ್ನು ಮಾಡು" ಎಂದು ಹೇಳಿದನು.

೩೯. ಧರ್ಮಪುರುಷನು ಮಕರಂದನಿಗೆ ಹೀಗೆಂದು ಹೇಳಿ, ಕೂಡಲೆ ಅಲ್ಲೇ ಅದೃಶ್ಯನಾದನು. ಇದನ್ನೆಲ್ಲಾ ಕೇಳಿ ಆಶ್ಚರ್ಯಗೊಂಡ ಮಕರಂದನು ಧರ್ಮ ಪುರುಷನು ತನಗೆ ತಿಳಿಸಿದ ವಿಚಾರವನ್ನು ಕೃಷ್ಣಾಂಶನಿಗೆ ಹೇಳಿದನು.

೪೦. ಫಾಲ್ಗುಣಮಾಸದಲ್ಲಿ ಮಕರಂದ, ದೇವಸಿಂಹ, ಕೃಷ್ಣಾಂಶ ಈ ಮೂವರೂ ಯೋಗಿಗಳ ವೇಷವನ್ನು ಧರಿಸಿ, ಮನೋಹರವಾದ ಇನ್ನಗಡವೆಂಬ ಊರಿಗೆ ಪ್ರಯಾಣಮಾಡಿದರು.

ಮೃದಂಗಾಂಕಸ್ತದಾ ದೇವೋ ಮಕರಂದೋ ವಿಪಂಚಿವಾನ್ ।
ನೃತ್ಯಗಾನಕರೋ ವೀರಃ ಕೃಷ್ಣಾಂಶಃ ಸರ್ವಮೋಹನಃ　　॥ ೪೧ ॥

ಮೋಹಯಿತ್ವಾ ಚ ನಗರಂ ತಥಾ ಗಜಪತಿಂ ನೃಪಂ ।
ಸಕುಲಂ ಚ ಸ ಸೈನ್ಯಂ ಚ ತುಷ್ಟೋ ರಾಜಾಽಬ್ರವೀದಿದಂ　　॥ ೪೨ ॥

ವಾಂಛಿತಂ ಬ್ರೂಹಿ ಮೇ ಯೋಗಿನ್ ಸ ಶ್ರುತ್ವಾ ಪ್ರಾಹ ನಮ್ರಧೀಃ ।
ದೇಹಿ ಮೇ ಸೂರ್ಯವರ್ಮಾಣಂ ಸ್ವಸುತಂ ಕಾರ್ಯಹೇತವೇ　　॥ ೪೩ ॥

ಕೃತ್ವಾ ಕಾರ್ಯಮಹಂ ಶೀಘ್ರಂ ಪುನರ್ದಾಸ್ಯಾಮಿ ತೇ ಸುತಂ ।
ವಿಧಿನಾ ನಿರ್ಮಿತೋ ಧರ್ಮೋ ರಾಜಭಿರ್ವಿಶ್ವರಕ್ಷಣಂ　　॥ ೪೪ ॥

---

೪೧. ನೃತ್ಯಗೀತವಿಶಾರದರಾದ ಇವರಲ್ಲಿ ದೇವಸಿಂಹನು ಮೃದಂಗದವನಾದನು. ಮಕರಂದನು ವೈಣಿಕನಾದನು, ವೀರನಾದ ಕೃಷ್ಣಾಂಶನು ಇವರ ಹಿಮ್ಮೇಳವುಳ್ಳ ನರ್ತಕನಾಗಿ ತನ್ನ ನೃತ್ಯಗಾನಗಳಿಂದ ನಗರವನ್ನೇ ಮರುಳುಗೊಳಿಸಿ ಬಳಿಕ ಆ ಗಜಪತಿರಾಜನ ಸಮೀಪವನ್ನು ಸೇರಿ ಬಂಧು, ಪರಿವಾರ ಸೇನಾಜನರೊಡನೆ ಯುಕ್ತನಾಗಿದ್ದ ಆ ರಾಜನನ್ನು ಸಂತೋಷಗೊಳಿಸಿದನು.

೪೨. ಗಜಪತಿರಾಜನು ಯೋಗಿವೇಷದ ಕೃಷ್ಣಾಂಶನ ನರ್ತನದಿಂದ ಸಂತೋಷಗೊಂಡು ವಿನಯದಿಂದ "ಎಲೈ ಯೋಗಿಯೇ! ನಿನಗೆ ಬೇಕಾದುದನ್ನು ಕೇಳು; ಕೊಡುತ್ತೇನೆ" ಎಂದು ಹೇಳಿದನು.

೪೩. ಆಗ ಕೃಷ್ಣಾಂಶನು "ಅಯ್ಯಾ ಪ್ರಭುವೇ! ರಹಸ್ಯವಾದ ಒಂದು ಕಾರ್ಯಸಾಧನೆಗೋಸ್ಕರ ನಿನ್ನ ಮಗನಾದ ಸೂರ್ಯವರ್ಮನನ್ನು ನನ್ನ ಜೊತೆಯಲ್ಲಿ ಕಳುಹಿಸಿಕೊಡು".

೪೪. "ಕಾರ್ಯ ನೆರವೇರಿದ ಮೇಲೆ ನಿನ್ನ ಮಗನನ್ನು ಜಾಗ್ರತೆಯಾಗಿ ನಾನೇ ಕರೆದುತಂದು ನಿನ್ನ ಬಳಿಗೆ ಬಿಡುವೆನು. ಲೋಕರಕ್ಷಣೆಮಾಡುವುದೇ ವಿಧಿ ನಿಯಾಮಕವಾದ ರಾಜಧರ್ಮವಲ್ಲವೆ" ಎಂದು ಹೇಳಿದನು.

ಇತಿ ಶ್ರುತ್ವಾ ಗಜಪತಿಃ ದತ್ವಾ ತೇಭ್ಯಃ ಸ್ವಕಂ ಸುತಂ ।
ಸ್ವರಾಜ್ಞೀಮಾಯಯೌ ರಾಜಾ ಗತಾಸ್ತೇ ಕಾರ್ಯತತ್ಪರಾಃ ॥ ೪೫ ॥

ಪಕ್ಷಮಾತ್ರೇಣ ಬಾಹ್ಲೀಕಂ ನಗರಂ ಪ್ರಯಯುರ್ಮುದಾ ।
ಧರ್ಮದತ್ತಾನಿ ಯಂತ್ರಾಣಿ ಗೃಹೀತ್ವಾ ಶತ್ರುಮಂದಿರಂ ॥ ೪೬ ॥

ಆಯಯುರ್ಲಾಸ್ಯತತ್ವಜ್ಞಾಃ ನೃಪಮೋಹನತತ್ಪರಾಃ ।
ಸರ್ವೇ ಚ ನಾಗರಾಃ ಪ್ರಾಪ್ತಾಸ್ತತ್ರ ಕ್ಷತ್ರಗಣಾ ಮುದಾ ॥ ೪೭ ॥

ಮೋಹಿತಾಸ್ತೈಶ್ಚ ತೇ ಸರ್ವೇ ಗೀತನೃತ್ಯವಿಶಾರದೈಃ ।
ಮಹದ್ಧನಂ ದದೌ ತೇಭ್ಯಃ ತೋಮರಾನ್ವಯಸಂಭವಃ ॥ ೪೮ ॥

---

೪೫. ಈರೀತಿ ಹೇಳಿದ ಕೃಷ್ಣಾಂಶನ ಮಾತನ್ನು ಕೇಳಿ ಗಜಪತಿರಾಜನು ತನ್ನ ಮಗನನ್ನು ಆತನ ವಶಕ್ಕೆ ಒಪ್ಪಿಸಿ, ತನ್ನ ರಾಣಿಯ ಬಳಿಗೆ ಬಂದನು. ಕಾರ್ಯ ನೆರವೇರಿಸುವುದರಲ್ಲಿ ತವಕವುಳ್ಳವರಾದ ಕೃಷ್ಣಾಂಶ ಮೊದಲಾದ ಆ ಮೂವರು ಯೋಗಿಗಳೂ ಸೂರ್ಯವರ್ಮನನ್ನು ಜೊತೆಯಲ್ಲಿ ಕರೆದುಕೊಂಡು ಹೊರಟರು.

೪೬. ಅವರೆಲ್ಲರೂ ಹದಿನೈದು ದಿವಸಗಳು ಪ್ರಯಾಣಮಾಡಿ, ಬಾಹ್ಲೀಕ ನಗರದ ಸಮೀಪವನ್ನು ಸೇರಿದರು. ಅಲ್ಲಿ ಸ್ವಲ್ಪ ನಿಂತು, ಧರ್ಮಪುರುಷನು ತಮಗೆ ಕೊಟ್ಟಿದ್ದ ಯಂತ್ರಗಳನ್ನು ಸಂತೋಷದಿಂದ ಧರಿಸಿಕೊಂಡು ಶತ್ರುಮಂದಿರವನ್ನು ಪ್ರವೇಶಿಸಿದರು.

೪೭. ಗಾನನಾಟ್ಯವಿಶಾರದರಾದ ಈ ನಾಲ್ಕು ಮಂದಿಯೂ ಅಭಿನಂದನ ರಾಜನನ್ನು ತಮ್ಮ ವಿದ್ಯೆಗಳಿಂದ ಸಂತೋಷಪಡಿಸಲು ಉದ್ಯುಕ್ತರಾದರು. ಆ ಪಟ್ಟಣ ದಲ್ಲಿದ್ದ ಇತರ ಕ್ಷತ್ರಿಯವೃಂದವೂ ಮತ್ತು ಪ್ರಮುಖರಾದ ಎಲ್ಲ ಜನಗಳೂ ಅದನ್ನು ನೋಡುವುದಕ್ಕೆ ಸಂತೋಷದಿಂದ ಅಲ್ಲಿಗೆ ಬಂದರು.

೪೮. ಈ ನಾಲ್ಕು ಮಂದಿಯೂ ತಮ್ಮ ಅದ್ಭುತವಾದ ಗಾನ, ನೃತ್ಯ ಕಲೆಗಳಿಂದ ಅವರೆಲ್ಲರನ್ನೂ ಮೆಚ್ಚಿಸಿದರು. ಆ ಕ್ಷತ್ರಿಯರು ಈ ಕಲಾಭಿಜ್ಞರಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟರು

ತಾನಾದಾಯ ಪುನರ್ಭೂಪಃ ಸ್ವಗೇಹಮಭಿನಂದನಃ ।
ಆಯಯೌ ಗೇಹನೃತ್ಯಾರ್ಥೀ ಕಾರಯಾಮಾಸ ವೈ ಪುನಃ ॥ ೪೯ ॥

ಮಕರಂದಸ್ತದಾ ವೀಣಾಂ ಮೃದಂಗಂ ಭೀಷ್ಮಜೋ ಬಲೀ ।
ಮಂಜೀರಂ ಸೂರ್ಯವರ್ಮಾ ಚ ಕೃಷ್ಣಾಂಶೋ ಗಾನನೃತ್ಯಕಂ ॥ ೫೦ ॥

ಗೃಹೀತ್ವಾ ಮೋದಯಾಮಾಸುರ್ನಾರೀವೃಂದಂ ಮಹೋತ್ತಮಂ ।
ಚಿತ್ರರೇಖಾ ಸ್ವಯಂ ದೃಷ್ಟ್ವಾ ತೇಷಾಂ ಮೋಹನಹೇತವೇ ॥ ೫೧ ॥

ಮಾಯಾಂ ನಿರ್ಮಾಪಯಾಮಾಸ ನಿಷ್ಫಲಾ ಸಾSಭವತ್ಕ್ಷಣಾತ್ ।
ಮೋಹಿತಾ ತೈಶ್ಚ ಸಾ ದೇವೀ ತಾನುವಾಚ ಮುದಾನ್ವಿತಾ ॥ ೫೨ ॥

---

೪೯. ಅಭಿನಂದನ ಮಹಾರಾಜನು ಈ ನಾಲ್ಕು ಮಂದಿಯನ್ನೂ ಅರಮನೆಯೊಳಕ್ಕೆ ಕರೆಯಿಸಿಕೊಂಡು ಅಂತಃಪುರದವರ ಸಂತೋಷಾರ್ಥವಾಗಿ ಪುನಃ ಗಾನ ನರ್ತನಾದಿಗಳನ್ನು ಮಾಡಿಸಿದನು.

೫೦. ಆಗ ಮಕರಂದನು ವೀಣಾವಾದನ ಮಾಡುತ್ತಿದ್ದನು. ಬಲಶಾಲಿಯೂ ಭೀಷ್ಮಕುಮಾರನೂ ಆದ ದೇವಸಿಂಹನು ಮೃದಂಗವನ್ನೂ, ಸೂರ್ಯವರ್ಮನು ಮಂಜೀರವೆಂಬ ವಾದ್ಯವನ್ನೂ ಬಾರಿಸುತ್ತಿದ್ದರು. ಕೃಷ್ಣಾಂಶನು ಗಾನಮಾಡುತ್ತಾ ಅದಕ್ಕನುಸಾರವಾಗಿ ನರ್ತನಮಾಡುತ್ತಾ ಇದ್ದನು.

೫೧. ಈರೀತಿ ನಾಲ್ಕುಜನರೂ ತಮ್ಮ ವಾದ್ಯವಾದನದಿಂದಲೂ, ಗಾನ ನರ್ತನ ಕಲೆಗಳಿಂದಲೂ, ರಾಜಾಂತಃಪುರದ ಶ್ರೇಷ್ಠವಾದ ನಾರೀವೃಂದವನ್ನೆಲ್ಲಾ ಮೋಹಗೊಳಿಸಿದರು.

೫೨. ರಾಜಕುಮಾರಿಯಾದ ಚಿತ್ರರೇಖೆಯು ಇದನ್ನು ನೋಡಿ ಅವರನ್ನು ಮೂರ್ಛೆಗೊಳಿಸಬೇಕೆಂದು ತಾನು ಕಲಿತಿದ್ದ ಮಾಯೆಯನ್ನು ಪ್ರಯೋಗಿಸಿದಳು. ಆದರೆ ಆ ಮಾಯೆಯು ಕೂಡಲೆ ನಿಷ್ಫಲವಾದುದಲ್ಲದೆ, ಅವರುಗಳು ಧರಿಸಿದ ಯಂತ್ರದ ಮಹಿಮೆಯಿಂದ ಆಕೆ ತಾನೇ ಮೈಮರೆತು ಸಂತೋಷದಿಂದ ಅವರನ್ನು ಕುರಿತು "ನಿಮಗೆ ಬೇಕಾದ್ದನ್ನು ಕೇಳಿಕೊಳ್ಳಿ" ಎಂದು ಹೇಳಿದಳು.

ವಾಂಛಿತಂ ಬ್ರೂಹಿ ಮೇ ವೀರ ಕೃಷ್ಣಾಂಶಶ್ಚಾಹ ತಾಂ ವಧೂಂ ।
ಶುಕಂ ದೇಹಿ ಚ ಮೇ ದೇವಿ ನೋ ಚೇಚ್ಛಾಪಂ ದದಾಮ್ಯಹಂ ॥ ೫೩ ॥

ಇತಿ ಶ್ರುತ್ವಾ ಚಿತ್ರರೇಖಾ ಶೋಕವ್ಯಾಕುಲಚೇತನಾ ।
ಕೃಷ್ಣಾಂಶಂ ಯೋಗಿನಂ ಪ್ರಾಹ ಸತ್ಯಂ ಕಥಯ ಕೋ ಭವಾನ್ ॥ ೫೪ ॥

ಇಂದ್ರಾದ್ಯಾ ದೇವತಾಸ್ಸರ್ವೇ ಮಯಾ ನಿರ್ಮಿತಯಾ ಯಯಾ ।
ಮೋಹಿತಾಃ ಕ್ಷಣಮಾತ್ರೇಣ ನ ಭವಾನ್ಮೋಹಿತೋ ಮಯಾ ॥ ೫೫ ॥

ದೇವೋ ನಾರಾಯಣೋ ವಾಪಿ ಧರ್ಮೋ ವಾಪಿ ಶಿವಃ ಸ್ವಯಂ ।
ಇತ್ಯುಕ್ತಃ ಸ ತು ಕೃಷ್ಣಾಂಶೋ ವಚನಂ ಪ್ರಾಹ ನಿರ್ಭಯಃ ॥ ೫೬ ॥

ಉದಯೋ ನಾಮ ಮೇ ರಾಜ್ಞಿ ದೇವಸಿಂಹೋಽಯಮುತ್ತಮಃ ।
ಮಚ್ಛ್ಯಾಲೋ ಮಕರಂದೋಽಯಂ ಸೂರ್ಯವರ್ಮಾ ತಥಾವಿಧಃ ॥೫೭॥

---

೫೩. ಆಗ ಕೃಷ್ಣಾಂಶನು "ದೇವಿ! ನೀನು ಸಂತುಷ್ಟೆಯಾಗಿದ್ದರೆ ನಿನ್ನ ವಾಗ್ದಾನದಂತೆ ನಿನ್ನಲ್ಲಿರುವ ಆ ಗಿಳಿಯನ್ನು ನನಗೆ ಕೊಡು, ಇಲ್ಲದೆ ಇದ್ದರೆ ವಚನ ಭ್ರಷ್ಟೆಯಾದ ನಿನಗೆ ಶಾಪವನ್ನು ಕೊಡುವೆನು" ಎಂದನು.

೫೪. ಈ ಮಾತನ್ನು ಕೇಳಿ ಚಿತ್ರರೇಖೆಯು ದುಃಖದಿಂದ ಕಾತರಹೃದಯಳಾಗಿ ಯೋಗಿವೇಷಧಾರಿಯಾದ ಕೃಷ್ಣಾಂಶನನ್ನು ಕುರಿತು ಈ ಪ್ರಕಾರ ನುಡಿದಳು.

೫೫. "ಅಯ್ಯಾ! ನಿಜವಾಗಿಯೂ ನೀನು ಯಾರು? ಹೇಳು. ಎಲೈ ವೀರನೆ! ಇಂದ್ರಾದಿ ಸಕಲ ದೇವತೆಗಳೂ ಸಹ ನನ್ನ ಮಾಯೆಯಿಂದ ಕ್ಷಣಮಾತ್ರದಲ್ಲಿ ಮೂರ್ಛೆಗೊಳ್ಳುತ್ತಿದ್ದರು. ನೀನು ಮಾತ್ರ ಹಾಗೆ ಮೂರ್ಛಿತನಾಗಲಿಲ್ಲ."

೫೬. "ನೀನು ಸಾಕ್ಷಾತ್ ನಾರಾಯಣನೋ, ಧರ್ಮರಾಜನೋ, ಅಥವಾ ಪರಶಿವನೋ ಅಂತು ಯಾರೋ ಮಹಾತ್ಮನಾಗಿರಬೇಕು ಎಂದಳು. ಆಗ ಕೃಷ್ಣಾಂಶನು ಸ್ವಲ್ಪವೂ ಹೆದರದೆ ಚಿತ್ರರೇಖೆಯನ್ನು ಕುರಿತು ಇಂತೆಂದನು.

೫೭. "ಎಲೌ ರಾಜಪುತ್ರಿ! ನನ್ನನ್ನು ಉದಯ ಎನ್ನುವರು. ನನ್ನ ಪಕ್ಕದಲ್ಲಿರುವ ಇವನು ಶ್ರೇಷ್ಠನಾದ ದೇವಸಿಂಹ. ಇನ್ನೊಬ್ಬನು ನನ್ನ ಭಾವಮೈದುನನಾದ ಮಕರಂದ, ಮತ್ತೊಬ್ಬನನೂ ಹಾಗೆಯೇ ನಮ್ಮ ಆಪ್ತನಾದ ಸೂರ್ಯವರ್ಮ.

ಇಂದುಲಸ್ಯ ವಿಯೋಗೇನ ವಯಂ ಯೋಗಿತ್ವಮಾಗತಾಃ ।
ಮದ್ಗುರುಶ್ಚ ತಥೋನ್ಮಾದೀ ಸಂಕುಲಸ್ತದ್ವಿಯೋಗತಃ ॥ ೫೮ ॥

ಶುಕಂ ದೇಹಿ ಮಹಾಮಾಯೇ ಇಂದುಲಂ ದೇಹಿ ವಾ ಯದಿ ।
ಇತ್ಯುಕ್ತ್ವಾಶು ರುರೋದೋಚ್ಚೈರ್ಹಾ ಇಂದುಲ ಮಹಾಬಲ ॥ ೫೯ ॥

ದರ್ಶನಂ ದೇಹಿ ಮೇ ಶೀಘ್ರಂ ನೋಚೇತ್ಪ್ರಾಣಾಂಸ್ತ್ಯಜಾಮ್ಯಹಂ ।
ಇತ್ಯೇವಂ ವಾದಿನಂ ವೀರಂ ಚಿತ್ರರೇಖಾ ಮಹೋತ್ತಮಾ ॥ ೬೦ ॥

ಕೃತ್ವಾ ಲಜ್ಜಾಂ ಪುನಃ ಪ್ರಾಹ ಮಾಂ ಚ ಪುತ್ರಂ ಗೃಹಾಣ ಭೋಃ ।
ಕೃತ್ವಾ ನರಮಯಂ ರೂಪಂ ಸ್ವಕಾಂತಂ ಸರ್ವಸುಂದರಂ ॥ ೬೧ ॥

---

೫೮. "ನಾವೆಲ್ಲರೂ ಇಂದುಲಕುಮಾರನ ವಿಯೋಗದಿಂದ ಖೇದಗೊಂಡು ಯೋಗಿಗಳ ವೇಷವನ್ನು ಧರಿಸಿ ಬಂದಿರುವೆವು. ನಮ್ಮ ಅಣ್ಣ (ಗುರು) ಆದ ಆಹ್ಲಾದನೂ ಕೂಡ ಇಂದುಲನ ವಿಯೋಗದಿಂದ ಹುಚ್ಚನಂತೆ ಕಳವಳ ಪಡುತ್ತಿರುವನು."

೫೯. "ಎಲೌ ಮಹಾಮಾಯಾಸ್ವರೂಪಿಣಿಯೇ! ನಮಗೆ ಈ ಗಿಳಿಯನ್ನು ಕೊಡು. ಅಥವಾ ಇಂದುಲನನ್ನಾದರೂ ನಮ್ಮ ವಶಕ್ಕೆ ಸಮರ್ಪಿಸು." ಎಂದು ಹೇಳಿ ಥಟ್ಟನೆ "ಎಲೈ ಮಹಾಬಲಶಾಲಿಯಾದ ಇಂದುಲನೇ! ಕೂಡಲೆ ನಮಗೆ ದರ್ಶನ ಕೊಡು."

೬೦. ಇಲ್ಲದಿದ್ದರೆ ನಾನು ಪ್ರಾಣತ್ಯಾಗಮಾಡುವೆನು" ಎಂದು ಗಟ್ಟಿಯಾಗಿ ರೋದನಮಾಡಿದನು ಹೀಗೆ ಹೇಳುತ್ತಿರುವ ವೀರನಾದ ಕೃಷ್ಣಾಂಶನನ್ನು ನೋಡಿ, ಉತ್ತಮಸ್ತ್ರೀಯಾದ ಚಿತ್ರರೇಖೆಯು ಲಜ್ಜೆಯಿಂದ "ನನ್ನನ್ನೂ ನಿಮ್ಮ ಮಗನನ್ನೂ ಇಬ್ಬರನ್ನೂ ಸ್ವೀಕರಿಸು" ಎಂದಳು.

೬೧. ಕೂಡಲೆ ಗಿಳಿಯಾಗಿ ಮಾಡಿದ್ದ ತನ್ನ ರಮಣನನ್ನು ಸರ್ವಸುಂದರನಾದ ಮನುಷ್ಯಾಕೃತಿಹೊಂದುವಂತೆ ಮಾಡಿ ದಂಪತಿಗಳಿಬ್ಬರೂ ಆ ಕೃಷ್ಣಾಂಶನ ಕಾಲಿಗೆ ನಮಸ್ಕರಿಸಿ ಗಟ್ಟಿಯಾಗಿ ಅಳತೊಡಗಿದರು.

ಪತಿತ್ವಾ ತಚ್ಚರಣಯೋಃ ರುರೋದೋಚ್ಚೈಃ ಶ್ಚ ದಂಪತೀ ।
ತಥಾವಿಧೌ ಚ ತೌ ದೃಷ್ಟ್ವಾ ಕೃಷ್ಣಾಂಶೋ ಹರ್ಷಸಂಯುತಃ ॥ ೬೨ ॥

ಇಂದುಲೇನೈವ ಲಿಖಿತಂ ಗೃಹೀತ್ವಾ ಪತ್ರಮುತ್ತಮಂ ।
ಧರ್ಮಯಂತ್ರಪ್ರಭಾವೇಣ ಮಯೂರನಗರಂ ಯಯೌ ॥ ೬೩ ॥

ಸೂರ್ಯವರ್ಮಾ ಗತೋ ಗೇಹಂ ಮಕರಂದೇನ ಮಾನಿತಃ ।
ದೇವಸಿಂಹಸ್ತು ಬಲವಾನ್ ಗೃಹೀತ್ವಾ ಪತ್ರಮುತ್ತಮಂ ॥ ೬೪ ॥

ಯಯೌ ಮನೋರಥಾರೂಢೋ ಯತ್ರಾಹ್ಲಾದಃ ಶುಚಾನ್ವಿತಃ ।
ಕೋ ಭವಾನಿತಿ ತಂ ಪ್ರಾಹ ಮಹೋನ್ಮಾದೀವ ದೃಶ್ಯತೇ ॥ ೬೫ ॥

ದೇವಸಿಂಹಂ ಚ ಮಾಂ ವಿದ್ಧಿ ತ್ವತ್ಪುತ್ರಾನ್ವೇಷಣೇ ರತಂ ।
ಪತ್ರಂ ಗೃಹಾಣ ಭೋ ವೀರ ಲಿಖಿತಂ ತ್ವತ್ಸುತೇನ ವೈ ॥ ೬೬ ॥

---

೬೨. ಹೀಗೆ ರೋದನಮಾಡುತ್ತಿರುವ ಆ ದಂಪತಿಗಳನ್ನು ನೋಡಿ ಕೃಷ್ಣಾಂಶನು, ಇಂದುಲನು ಸಿಕ್ಕಿದುದಕ್ಕೆ ಮನದಲ್ಲಿ ಸಂತೋಷಹೊಂದಿ ಅವರನ್ನು ಸಂತೈಸಿದನು.

೬೩. ಬಳಿಕ ಇಂದುಲನೇ ಸ್ವತಃ ಬರೆದುಕೊಟ್ಟ ಉತ್ತಮವಾದ ಲೇಖನವನ್ನು ತೆಗೆದುಕೊಂಡು, ಧರ್ಮಪುರುಷನು ಕೊಟ್ಟಿದ್ದ ಯಂತ್ರದ ಮಹಿಮೆಯಿಂದ ಅವರೆಲ್ಲರೂ ಪುನಃ ಮಯೂರನಗರಕ್ಕೆ ಬಂದು ಸೇರಿದರು.

೬೪. ಸೂರ್ಯವರ್ಮನು ಅಲ್ಲಿ ಮಕರಂದನಿಂದ ಸತ್ಕೃತನಾಗಿ ತನ್ನ ಊರಿಗೆ ಹಿಂದಿರುಗಿಹೋದನು. ಬಳಿಕ ಬಲಶಾಲಿಯಾದ ದೇವಸಿಂಹನು ಇಂದುಲನೇ ಸಾಕ್ಷಾತ್ತಾಗಿ ಬರೆದ ಆ ಲೇಖನವನ್ನು ತೆಗೆದುಕೊಂಡು ಮನೋರಥಾಶ್ವವನ್ನೇರಿ ಪುತ್ರಶೋಕದಿಂದ ಕೂಡಿರುವ ಆಹ್ಲಾದನಿದ್ದೆಡೆಗೆ ಬಂದನು.

೬೫. ಆಗ ಆಹ್ಲಾದನು ಹುಚ್ಚನಂತೆ ವಿಲಪಿಸುತ್ತಾ ತನ್ನ ಬಳಿಗೆ ಬಂದ ದೇವಸಿಂಹನನ್ನು ಗುರ್ತಿಸಲಾರದೆ " ನೀನಾರು " ಎಂದು ಕೇಳಿದನು.

೬೬. ಆಗ ಆತನು " ನನ್ನನ್ನು ದೇವಸಿಂಹನೆಂದು ತಿಳಿ. ನಿನ್ನ ಮಗನನ್ನು ಹುಡುಕುವ ಕೆಲಸದಲ್ಲಿ ಇದುವರೆಗೂ ಉದ್ಯುಕ್ತನಾಗಿದ್ದೆನು. ಎಲೈ ವೀರನೆ! ನಿನ್ನ ಮಗನೇ ಸಾಕ್ಷಾತ್ತಾಗಿ ಬರೆದಿರುವ ಈ ಕಾಗದವನ್ನು ತೆಗೆದುಕೊ " ಎಂದು ಹೇಳಿದನು.

ಇತಿ ಶ್ರುತ್ವಾ ಸ ಆಹ್ಲಾದಶ್ಚಾಹ್ಲಾದಂ ಪರಮಾಪ್ತವಾನ್ ।
ಜ್ಞಾತ್ವಾ ತತ್ಕಾರಣಂ ಸರ್ವಂ ಯಥಾವಿಧಿ ಸುತೋ ಹೃತಃ ॥ ೬೭ ॥

ಮಹೀಪತಿಂ ಸಮಾಹೂಯ ವಚನಂ ಪ್ರಾಹ ನಮ್ರಧೀಃ ।
ಸತ್ಯಂ ಕಥಯ ಮೇ ಭೂಪ ಕೃಷ್ಣಾಂಶೇನ ಹತಸ್ಸುತಃ ॥ ೬೮ ॥

ಸಹೋವಾಚ ಶ್ರುತಂ ವೀರ ಕೃಷ್ಣಾಂಶೇನ ಯಥಾ ಹತಃ ।
ಇತ್ಯುಕ್ತ್ವಾ ಸ ವಿಹಸ್ಯಾಶು ಕಾರ್ಯಸಿದ್ಧಿಮುಪಾಗತಃ ॥ ೬೯ ॥

ಆಹ್ಲಾದಃ ಕ್ರೋಧತಾಮ್ರಾಕ್ಷಃ ಕೇಶಾನಾಕೃಷ್ಯ ತಂ ಮುದಾ ।
ವೇತಸ್ಯೈಸ್ತಾಡಯಾಮಾಸ ಸ್ವಹಸ್ತೇನ ಪುನಃಪುನಃ ॥ ೭೦ ॥

---

೬೭. ಈ ಮಾತನ್ನು ಕೇಳಿ ಆಹ್ಲಾದನು ತುಂಬಾ ಸಂತೋಷಪಟ್ಟುದಲ್ಲದೆ ತನ್ನ ಮಗನು ಅಪಹೃತನಾದ ವೃತ್ತಾಂತವೆಲ್ಲವನ್ನೂ ಸಕಾರಣವಾಗಿ ಅವನಿಂದ ತಿಳಿದುಕೊಂಡನು.

೬೮. ಅನಂತರ ಆಹ್ಲಾದನು ಧೂರ್ತನಾದ ಮಹೀಪತಿರಾಜನನ್ನು ಬರಮಾಡಿ, ವಿನಯದಿಂದ ಅವನನ್ನು ಕುರಿತು "ಅಯ್ಯಾ ರಾಜನೇ! ಕೃಷ್ಣಾಂಶನು ನಿಜವಾಗಿಯೂ ನನ್ನ ಮಗನನ್ನು ಕೊಂದನೇ? ನೀನು ಕಂಡೆಯಾ? ಸತ್ಯವಾಗಿ ಹೇಳು" ಎಂದು ಕೇಳಿದನು.

೬೯. ಇದನ್ನು ಕೇಳಿ ಮಹೀಪತಿರಾಜನು "ಅಯ್ಯಾ ವೀರನೇ! ಕೃಷ್ಣಾಂಶನು ನಿನ್ನ ಮಗನನ್ನು ಕೊಂದನೆಂದು ಯಾರೋ ನನಗೆ ಹೇಳಿದರು. ಅಷ್ಟೆ" ಎಂದು ಹೇಳಿ ಕೃಷ್ಣಾಂಶನ ಮೇಲೆ ಸೇಡುತೀರಿಸಿಕೊಳ್ಳಬೇಕಾಗಿದ್ದ ತನ್ನ ಕಾರ್ಯವು ಸಿದ್ಧಿ ಹೊಂದಿದುದಕ್ಕಾಗಿ ಸ್ವಲ್ಪ ನಕ್ಕನು.

೭೦. ಅನಂತರ ಆಹ್ಲಾದನು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಮಹೀಪತಿರಾಜನ ಜುಟ್ಟು ಹಿಡಿದು ಎಳೆದುದಲ್ಲದೆ, ಸ್ವಲ್ಪವೂ ಕನಿಕರ ತೋರಿಸದೆ ತನ್ನ ಕೈಯಾರ ಅನೇಕಸಾರಿ ಬೆತ್ತದಿಂದ ಹೊಡೆದನು.

ಶ್ರುತ್ವಾ ಪರಿಮಲೋ ರಾಜಾ ಸಪತ್ನೀಕಃ ಸಮಾಗತಃ ।
ಬಹುಧಾ ಮೋದಯಾಮಾಸ ರಾಮಾಂಶಂ ಬಹುರೂಪಿಣಂ ॥ ೭೧ ॥

ಅರೇ ಧೂರ್ತ ಮಹಾಪಾಪಿನ್ ಮದ್ಬಂಧುರ್ಘಾತಿತಸ್ತ್ವಯಾ ।
ಗತೋ ಯತ್ರ ಮಮ ಪ್ರಾಣ ಸ್ಸಕುಲಂ ತ್ವಾಂ ನಯಾಮ್ಯಹಂ ॥ ೭೨ ॥

ತದಾ ಮಹೀಪತಿರ್ದುಃಖೀ ನಿಃಶ್ವಾಸೋ ಮೌನಮಾಸ್ಥಿತಃ ।
ತದಘಂ ಹೃದಿ ಸಂಸ್ಥಾಪ್ಯ ಮಹಾಪೀಡಾಮವಾಪ್ತವಾನ್ ॥ ೭೩ ॥

ಏತಸ್ಮಿನ್ನಂತರೇ ವೀರೋ ಬಲಖಾನಿಃ ಸಮಾಗತಃ ।
ವಿಮುಚ್ಯ ಮಾತುಲಂ ಧೂರ್ತಂ ಜ್ಯೇಷ್ಠಬಂಧುಮಸಾಂತ್ವಯತ್ ॥ ೭೪ ॥

---

೭೧. ಈರೀತಿ ನಡೆದುದನ್ನು ಕೇಳಿ ಪರಿಮಳರಾಜನು ಪತ್ನಿಯೊಡನೆ ಅಲ್ಲಿಗೆ ಬಂದು, ರಾಮಾಂಶನಾದ ಆಹ್ಲಾದನನ್ನು ನಿವಾರಿಸಿ ಅನೇಕ ಬಗೆಯಿಂದ ಸಮಾಧಾನ ಪಡಿಸಿದನು.

೭೨. ಆದರೂ ಆ ಆಹ್ಲಾದನು ಮಹೀಪತಿರಾಜನನ್ನು ಕುರಿತು " ಎಲೈ ಮಹಾಪಾಪಿಯಾದ ಮೋಸಗಾರ ವಂಚಕನೇ ! ನಿನ್ನ ದೆಸೆಯಿಂದ ನನ್ನ ಸಹೋದರನು ಅನ್ಯಾಯವಾಗಿ ವಧೆಗೊಳಗಾದನು. ನನ್ನ ಪ್ರಾಣಸದೃಶನಾಗಿದ್ದ ಅವನು ಹೋದ ಸ್ಥಳಕ್ಕೆ ನಿನ್ನನ್ನು ನಿನ್ನ ವಂಶದವರೆಲ್ಲರೊಡನೆ, ಕಳುಹಿಸುವೆನು (ನಿರ್ವಂಶ ಮಾಡುವೆನು) ಎಂದು ಗರ್ಜಿಸಿದನು.

೭೩. ಆಗ ಮಹೀಪತಿರಾಜನು ದುಃಖದಿಂದ ಉಸಿರಾಡದೆ ಮೌನವಾಗಿಯೇ ಇದ್ದನು. ಅಲ್ಲದೆ ತನ್ನ ಅಪರಾಧವನ್ನು ಮನಸ್ಸಿನಲ್ಲೇ ಯೋಚಿಸುತ್ತಾ ತುಂಬಾ ಖಿನ್ನನಾದನು.

೭೪. ಈ ವೇಳೆಗೆ ವೀರನಾದ ಬಲಖಾನಿಯು ಅಲ್ಲಿಗೆ ಬಂದು ಮೋಸಗಾರನೂ ತನ್ನ ಸೋದರಮಾವನೂ ಆದ ಮಹೀಪತಿರಾಜನನ್ನು ಬಿಡಿಸಿ, ತನ್ನ ಹಿರಿಯ ಅಣ್ಣನಾದ ಆಹ್ಲಾದನನ್ನು ಸಮಾಧಾನಪಡಿಸಿದನು.

ಸ ಚಕಾರ ವಿವಾಹಾರ್ಥಮುದ್ಯೋಗಂ ಭ್ರಾತೃಜಸ್ಯ ವೈ ।
ನೇತ್ರಸಿಂಹೋ ನೃಪಃ ಪ್ರಾಪ್ತೋ ಲಕ್ಷಸೈನ್ಯಸಮನ್ವಿತಃ　　　॥ ೭೫ ॥

ತಾರಕಶ್ಚ ತವಾಯಾತ ಸ್ಸಾರ್ಧಂ ಶೂರಸಹಸ್ರಕೈಃ ।
ವೀರಸೇನಃ ಸ್ವಯಂ ಪ್ರಾಪ್ತಃ ಶೂರೈಃ ಸಾರ್ಧಂ ನವಾಯುತೈಃ　॥ ೭೬ ॥

ಕಾಲನಶ್ಚ ತತಃ ಪ್ರಾಪ್ತೋ ಲಕ್ಷಸೈನ್ಯಸಮನ್ವಿತಃ ।
ಸೂರ್ಯವರ್ಮಾ ತಥಾ ಪ್ರಾಪ್ತೋ ಲಕ್ಷಸೈನ್ಯಸಮನ್ವಿತಃ　　　॥ ೭೭ ॥

ಬ್ರಹ್ಮಾನಂದಃ ಸ್ವಯಂ ಪ್ರಾಪ್ತಃ ತ್ರಿಲಕ್ಷಬಲಸಂಯುತಃ ।
ಆಹ್ಲಾದಶ್ಚ ಶುಚಾವಿಷ್ಟೋ ಲಕ್ಷಸೈನ್ಯಸಮನ್ವಿತಃ　　　　॥ ೭೮ ॥

ಹಾ ಬಂಧೋ ಕ್ವಗತಸ್ತ್ವಂ ವೈ ಮಾಂ ತ್ಯಕ್ತ್ವಾ ಪುರುಷಾಧಮಂ ।
ಇತ್ಯುಕ್ತ್ವಾ ಪ್ರಯಯೌ ವೀರಃ ಶೋಕವ್ಯಾಕುಲಚೇತನಃ　　　॥ ೭೯ ॥

---

೭೫　ಆಮೇಲೆ ತನ್ನ ಅಣ್ಣನ ಮಗನಾದ ಇಂದುಲನ ಮದುವೆಗೆ ಹೊರಡಲು ಸಿದ್ಧತೆ ಮಾಡಿದನು.　ಇಷ್ಟರೊಳಗೆ ನೇತ್ರಸಿಂಹನು ತನ್ನ ಒಂದುಲಕ್ಷ ಸೇನೆಯೊಡನೆ ಅಲ್ಲಿಗೆ ಬಂದನು.

೭೬.　ತಾರಕನು ತನ್ನ ಒಂದುವರೆಸಾವಿರ ಶೂರರೊಡನೆ ಅಲ್ಲಿಗೆ ಬಂದನು. ವೀರಸೇನನು ತನ್ನ ತೊಂಭತ್ತುಸಾವಿರ ಸೇನೆಯೊಡನೆ ಅಲ್ಲಿಗೆ ಬಂದನು.

೭೭.　ಕಾಲನನೂ ಸಹ ತನ್ನ ಒಂದುಲಕ್ಷ ಸೇನೆಯೊಡನೆ ಬಂದು ಸೇರಿದನು ಹೀಗೆಯೇ ಸೂರ್ಯವರ್ಮನು ತನ್ನ ಒಂದುಲಕ್ಷ ಸೇನೆಯೊಡನೆ ಬಂದು ಸೇರಿದನು.

೭೮.　ಬ್ರಹ್ಮಾನಂದನು ತನ್ನ ಮೂರುಲಕ್ಷ ಸೇನೆಯೊಡನೆ ಬಂದನು. ಆಹ್ಲಾದನು ದುಃಖದಿಂದ ಕೂಡಿದ್ದರೂ ತನ್ನ ಒಂದುಲಕ್ಷ ಸೇನೆಯೊಡನೆ ಸಿದ್ಧನಾದನು.

೭೯.　ಅಯ್ಯಾ ಬಂಧುವೇ ! ಪುರುಷಾಧಮನಾದ ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೋಗಿರುವೆ ? ಎಂಬುದಾಗಿ ದೀನನಾಗಿ ಚಿಂತಿಸುತ್ತಾ ಆಹ್ಲಾದನು ಪ್ರಯಾಣ ಹೊರಟನು.

ಬಲಖಾನಿಸ್ತು ಬಲವಾನ್ ಲಕ್ಷಸೈನ್ಯೇನ ಸಂಯುತಃ ।
ದೇವಸಿಂಹೇನ ಸಹಿತೋ ಬಾಹ್ಲೀಕಂ ಪ್ರತಿ ಸೋಗಮತ್ ॥ ೮೦ ॥

ಅಹೋರಾತ್ರಪ್ರಮಾಣೇನ ಮಾಸೈಕಃ ಪಥಿ ವೈ ಗತಃ ।
ಜ್ಯೇಷ್ಠಕೃಷ್ಣಸ್ಯ ಪಂಚಮ್ಯಾಂ ವಾಹ್ಲೀಕಗ್ರಾಮಮಾಪ್ತವಾನ್ ।
ವ್ಯೂಹಃ ಸ್ವಕೀಯಸೈನ್ಯಾನಾಂ ರಚಿತೋ ಬಲಖಾನಿನಾ ॥ ೮೧ ॥

ಏಕೋ ರಥಃ ಸ್ಥಿತೋ ಯುದ್ಧೇ ತತ್ಪಶ್ಚಾತ್ಸಂಸ್ಥಿತಾ ಗಜಾಃ ।
ಪಂಚಾಶಚ್ಚ ಕ್ರಮಾತ್ತೇಷಾಂ ವಾಜಿನಶ್ಚ ಶತಂಶತಂ ॥ ೮೨ ॥

ತೇಷಾಂ ಪಶ್ಚಾತ್ಕ್ರಮಾದ್‌ಜ್ಞೇಯಾಃ ಪತ್ತಯೋ ದಶ ಸಂಸ್ಥಿತಾಃ ।
ಏಕಾ ಸೇನಾ ಚ ಸಾ ಜ್ಞೇಯಾ ತತ್ಪ್ರಮಾಣಂ ಬ್ರವೀಮ್ಯಹಂ ॥ ೮೩ ॥

ಏಕೋ ರಥೋ ಗಜಾಸ್ಸರ್ವೇ ಶತಾರ್ಧಂ ತು ಹಯಾಸ್ತು ಯೇ ।
ಸೇನಾಯಾಂ ಪಂಚಸಾಹಸ್ರಾಃ ಶತಘ್ನ್ಯಸ್ತು ತಥಾ ಸ್ಮೃತಾಃ ॥ ೮೪ ॥

---

೮೦ ಬಲಖಾನಿಯೂ ಸಹ ತನ್ನ ಲಕ್ಷ ಸೇನೆಯೊಡನೆ ದೇವಸಿಂಹನ ಜತೆಯಲ್ಲಿ ಬಾಹ್ಲೀಕನಗರಕ್ಕೆ ಹೊರಟನು.

೮೧. ಹಗಲು ರಾತ್ರೆ ಎಡೆಬಿಡದೆ ಪ್ರಯಾಣಮಾಡುತ್ತಿದ್ದರೂ ಮಾರ್ಗ ಪ್ರಯಾಣವೇ ಒಂದು ತಿಂಗಳು ಹಿಡಿಯಿತು. ಜ್ಯೇಷ್ಠಮಾಸದಲ್ಲಿ ಕೃಷ್ಣಪಕ್ಷದ ಪಂಚಮಿಯದಿನ ಬಲಖಾನಿಯು ಬಾಹ್ಲೀಕನಗರವನ್ನು ಸೇರಿದನು. ಚತುರನಾದ ಬಲಖಾನಿಯು ಅಲ್ಲಿ ತನ್ನ ಸೇನೆಯನ್ನು ನಾನಾ ವ್ಯೂಹಗಳನ್ನಾಗಿ ಈ ಕ್ರಮದಿಂದ ನಿಲ್ಲಿಸಿದನು.

೮೨. ಮುಂದೆ ಒಂದು ರಥ, ಅದರ ಹಿಂದೆ ಸಾಲಾಗಿ ಐವತ್ತು ಆನೆಗಳು ಕ್ರಮವಾಗಿ ಅದರ ಹಿಂದೆ ನೂರುನೂರು ಕುದುರೆಗಳು.

೮೩. ಅದರ ಹಿಂದೆ ಕ್ರಮವಾಗಿ ಹತ್ತುಹತ್ತು ಕಾಲಾಳುಗಳು ಈರೀತಿ ಒಂದು ವ್ಯೂಹವು ಏರ್ಪಟ್ಟಿತು. ಇನ್ನೊಂದು ವ್ಯೂಹದ ಕ್ರಮವು ಈ ಮುಂದೆ ಹೇಳುವ ಪ್ರಕಾರವಾಗಿದ್ದಿತು.

೮೪. ಮೊದಲು ಒಂದು ರಥ, ಅದರ ಹಿಂದೆ ಎಲ್ಲಾ ಆನೆಗಳು, ಅದರ ಹಿಂದೆ ಐವತ್ತು ಕುದುರೆಗಳು, ಅದರ ಹಿಂದೆ ಐದುಸಾವಿರ ಫಿರಂಗಿಗಳು.

ಪಂಚಾಶ್ಯಯುತಾನಿ ಸೇನಾಯಾಂ ಸರ್ವೇ ಪದಚರಾಃ ಸ್ಮೃತಾಃ ।
ಏವಂ ವಿಧಾಶ್ಚ ತಾಃ ಸೇನಾ ಬಲಖಾನೇಶ್ಚ ಷೋಡಶ　　　॥ ೮೫ ॥

ಗಜಾಸ್ತು ದಶಸಾಹಸ್ರಾಃ ಮದಮತ್ತಾಃ ಪೃಥಗ್ಘಯಃ ।
ಯುದ್ಧೇಽಸ್ಮಿನ್ನಗಣಿತಂ ಹ್ಯೇವಂ ಶೂರಾಃ ಶತ್ರುಪ್ರಹಾರಿಣಃ　　　॥ ೮೬ ॥

ಅಭಿನಂದನಭೂಪಸ್ಯ ಮ್ಲೇಚ್ಛಾಃ ಪೈಶಾಚಧರ್ಮಿಣಃ ।
ತ್ರಿಲಕ್ಷಾಶ್ಚ ಹಯಾರೂಢಾ ಏಕಲಕ್ಷಾಃ ಶತಘ್ನಿಪಾಃ　　　॥ ೮೭ ॥

ಏಕಲಕ್ಷಃ ಪದಚರಾ ಭುಶುಂಡೀಪರಿಘಾಯುಧಾಃ ।
ತೋಮರಾನ್ವಯಸಂಯುಕ್ತಾಃ ಕ್ಷತ್ರಿಯಾಃ ಪ್ರಯುತಾನಿ ವೈ ।
ಗಜಸ್ಥಾಸ್ತತ್ರ ಸಂಪ್ರಾಪ್ತಾ ಯತ್ರಾಹ್ಲಾದಮಹಾಚಮೂಃ　　　॥ ೮೮ ॥

ತಯೋಶ್ಚಾಸೀನ್ಮಹದ್ಯುದ್ಧಂ ತುಮುಲಂ ಲೋಮಹರ್ಷಣಂ ।
ಮದಮತ್ತಾಶ್ಚ ತೇ ಸರ್ವೇ ನಿರ್ಭಯಾ ರಣಮಾಯಯುಃ　　　॥ ೮೯ ॥

---

೮೫. ಅದರಜತೆ ಐವತ್ತುಸಾವಿರ ಪದಾತಿಗಳು, ಈರೀತಿಯಾದ ಬಲಖಾನಿಯು ಸೈನ್ಯವ್ಯೂಹಗಳು ಹದಿನಾರು ಪಂಗಡವಾಗಿದ್ದವು.

೮೬-೮೮. ಅಭಿನಂದನರಾಜನ ಕಡೆ ಪ್ರತ್ಯೇಕವಾಗಿ ಹತ್ತುಸಾವಿರ ಕೊಬ್ಬಿದ ಆನೆಗಳು ಇದ್ದುವು. ಶತ್ರುಧ್ವಂಸಕರೂ, ಪಿಶಾಚದಂತೆ ಕ್ರೂರಕರ್ಮಿಗಳೂ ಆದ ಶೂರರು ಲೆಕ್ಕಿಸಲಾಗದಷ್ಟು ಇದ್ದರು. ಆ ರಾಜನ ಕಡೆಯ ಮ್ಲೇಚ್ಛಸೈನಿಕರು, ಮೂರು ಲಕ್ಷ ಅಶ್ವಾರೋಹಿಗಳು, ಒಂದುಲಕ್ಷ ಫಿರಂಗಿಯ ಯೋಧರು, ಒಂದುಲಕ್ಷ ಪದಾತಿಗಳು ಮತ್ತು ಭುಶುಂಡಿ, ಪರಿಘಾಯುಧ ಇವುಗಳನ್ನು ಧರಿಸಿ ಆನೆಯನ್ನು ಏರಿದ ತೋಮರವಂಶಸಂಭೂತರು ಒಂದುಲಕ್ಷ ಮಂದಿ, ಸಹ ಆಹ್ಲಾದನ ಸೇನೆಯನ್ನು ಎದುರಿಸಿ ನಿಂತರು.

೮೯. ಈ ಆಹ್ಲಾದನ ಸೈನ್ಯಕ್ಕೂ ಅಭಿನಂದನ ರಾಜನ ಸೈನ್ಯಕ್ಕೂ ಪರಸ್ಪರ ಯುದ್ಧಾರಂಭವಾಗಿ ನೋಡಿದವರಿಗೆ ರೋಮಾಂಚವೇಳುವಷ್ಟು ಭಯಂಕರವಾದ ತುಮುಲಯುದ್ಧವು ನಡೆಯಿತು. ಕೊಬ್ಬಿದ ಆ ಸೈನಿಕರೆಲ್ಲ ನಿರ್ಭಯದಿಂದ ಯುದ್ಧಕ್ಕೆ ನುಗ್ಗುತ್ತಿದ್ದರು

ಸಪ್ತಾಹೋರಾತ್ರಮಭವದ್ಯುದ್ಧಂ ಸಮರಶಾಲಿನಾಂ ।
ಬಾಹ್ಲೀಕಸ್ಯಾರ್ಧಸೇನಾ ಚ ಕ್ಷಯಂ ನೀತಾ ಚ ತೈರ್ನೃಪೈಃ ॥ ೯೦ ॥

ಏಕಲಕ್ಷಂ ಹತಾಸ್ಸರ್ವೇ ಬಲಖಾನೇಶ್ಚ ಸೈನ್ಯಪೈಃ ।
ಹಾಹಾಭೂತೇ ಶತ್ರುಸೈನ್ಯೇ ಭಯಭೀತೇ ದಿಶೇ ಗತೇ ।
ಹರ್ಷಿತಾ ಬಲಖಾನ್ಯಾದ್ಯಾ ಜಯ ದುರ್ಗೇ ವಚೋಽಬ್ರುವನ್ ॥ ೯೧ ॥

ದೃಷ್ಟ್ವಾ ಸೈನ್ಯವಿನಾಶಂ ಚ ರಾಜ್ಞಃ ಸಪ್ತಕುಮಾರಕಾಃ ।
ಕೌರವಾಂಶಾಶ್ಚ ತೇ ಜಗ್ಮುರ್ಯತ್ರ ಜಾತೋ ಮಹಾರಣಃ ॥ ೯೨ ॥

ಮಹಾನಂದಶ್ಚ ನಂದಶ್ಚ ಪರಾನಂದೋಪನಂದಕೌ ।
ಸುನಂದಶ್ಚ ಸುರಾನಂದಃ ಪ್ರನಂದಃ ಕ್ರಮತೋ ಭವಾಃ ॥ ೯೩ ॥

ಗಜಸ್ಥಾಸ್ತೇ ಮಹಾವೀರಾಸ್ತೋಮರಾನ್ವಯಸಂಭವಾಃ ।
ಸೇನಾಂ ಜಘ್ನುಃ ಶರೈಸ್ತೀಕ್ಷ್ಣೈರ್ಬಲಖಾನೇರ್ಮಹಾತ್ಮನಃ ॥ ೯೪ ॥

---

೯೦. ಯುದ್ಧೋತ್ಸಾಹವುಳ್ಳ ಈ ಎರಡು ಸೈನ್ಯಗಳಿಗೆ ಏಳುದಿನ ಅಹೋರಾತ್ರಿ ಎಡೆಬಿಡದೆ ಯುದ್ಧ ನಡೆಯುತ್ತಿದ್ದಿತು. ಆಹ್ಲಾದನ ಪಕ್ಷದ ರಾಜರು ಬಾಹ್ಲೀಕ ರಾಜನಾದ ಅಭಿನಂದನನ ಸೇನೆಯಲ್ಲಿ ಅರ್ಧದಷ್ಟು ಸೈನ್ಯವನ್ನು ನಾಶಮಾಡಿದರು.

೯೧. ಬಲಖಾನಿಯ ಸೇನೆಯವರು ಪ್ರತಿಪಕ್ಷದ ಒಂದುಲಕ್ಷ ಕುದುರೆಗಳನ್ನು ನಾಶಪಡಿಸಿದರು. ಆಗ ಶತ್ರುಸೈನ್ಯವು ಭಯದಿಂದ ಹಾಹಾಕಾರಮಾಡುತ್ತ ದಿಕ್ಕು ದಿಕ್ಕಿಗೆ ಚೆದರಿ ಓಡಿದರು. ಇದನ್ನು ನೋಡಿ, ಬಲಖಾನಿ ಮುಂತಾದವರು ಹರ್ಷಗೊಂಡು ದುರ್ಗಿಗೆ ಜಯವಾಗಲಿ ಎಂದು ಘೋಷಿಸುತ್ತಿದ್ದರು.

೯೨-೯೩. ಈರೀತಿ ತಮ್ಮ ಸೇನೆ ನಷ್ಟವಾದುದನ್ನು ನೋಡಿ, ಕೌರವಾಂಶ ಸಂಭೂತರೂ ಅಭಿನಂದನ ರಾಜಕುಮಾರೂ ಆದ ಮಹಾನಂದ, ನಂದ, ಪರಾನಂದ, ಉಪನಂದ, ಸುನಂದ, ಸುರಾನಂದ, ಪ್ರನಂದರೆಂಬ ಏಳು ಮಂದಿ ಪ್ರಸಿದ್ಧ ಯುವಕರು ಯುದ್ಧಭೂಮಿಗೆ ಬಂದರು.

೯೪. ತೋಮರಾನ್ವಯಸಂಭೂತ ಮಹಾವೀರರೆಂಬ ತಮ್ಮ ಖ್ಯಾತಿಯನ್ನು ಳಿಸಿಕೊಳ್ಳಲು ತಮ್ಮ ತಮ್ಮ ಆನೆಗಳನ್ನೇರಿ ಬಂದು ತೀಕ್ಷ್ಣವಾದ ಬಾಣಗಳಿಂದ ಬಲಖಾನಿಯ ಸೇನೆಯನ್ನು ಘಾತಿಸತೊಡಗಿದರು.

ಭಯಭೀತಾಶ್ಚ ತೇ ಸರ್ವೇ ಬಲಖಾನಿಮುಪಾಯಯುಃ ।
ದೃಷ್ಟ್ವಾ ಸೈನ್ಯಂ ಪರಾಭೂತಂ ಬಲಖಾನಿಸ್ತದಾ ರುಷಾ ॥ ೯೫ ॥

ಅಭ್ಯಧಾವತ ವೇಗೇನ ಕಪೋತಸ್ಥೋ ಮಹಾಬಲಃ ।
ನಂದಂ ಪ್ರತಿ ತಥಾ ದೇವಃ ಪರಾನಂದಂ ಚ ತಾಲನಃ ॥ ೯೬ ॥

ಉಪನಂದಂ ಸೂರ್ಯವರ್ಮಾ ಸುನಂದಂ ಪ್ರತಿ ತಾರಕಃ ।
ನೇತ್ರಸಿಂಹಃ ಸುರಾನಂದಂ ಪ್ರನಂದಂ ಪ್ರತಿ ಯಾದವಃ ॥ ೯೭ ॥

ಯುಧ್ಯಮಾನಾಸ್ತು ತೇ ಸರ್ವೇ ಪರಸ್ಪರವಧೈಷಿಣಃ ।
ದಿನಾರ್ಧಮಭವದ್ಯುದ್ಧಂ ಬಹುವೀರಪ್ರಣಾಶನಂ ॥ ೯೮ ॥

ಪರಾಜಿತಾಸ್ತು ತೇ ಪುತ್ರಾಃ ಬಾಹ್ಲೀಕಸ್ಯ ಮಹಾಬಲಾಃ ।
ತ್ಯಕ್ತ್ವಾ ಯುದ್ಧಂ ಯಯುರ್ಗೇಹಂ ಭೀರುಕಾ ಬಲಖಾನಿನಾ ॥ ೯೯ ॥

---

೯೫. ಇದನ್ನು ನೋಡಿ ಬಲಖಾನಿಯ ಕಡೆಯ ಸೈನಿಕರು ಹೆದರಿಕೊಂಡು ತಮ್ಮೊಡೆಯನ ಸಮೀಪಕ್ಕ ಬಂದರು. ಹೀಗೆ ತನ್ನ ಸೈನ್ಯವು ಸೋತು ಬಂದುದನ್ನು ನೋಡಿ ಬಲಖಾನಿಗೆ ರೇಗಿಹೋಯಿತು.

೯೬. ಆಗ ಮಹಾಬಲಶಾಲಿಯಾದ ಅವನು ಕಪೋತವೆಂಬ ತನ್ನ ಅಶ್ವವನ್ನೇರಿ, ಶತ್ರುಗಳಿಗೆ ಅಭಿಮುಖವಾಗಿ ಬಹು ರಭಸದಿಂದ ನುಗ್ಗಿದನು.

೯೭-೯೮. ದೇವಸಿಂಹನು ನಂದನನ್ನೂ, ತಾಲನನು ಪರಾನಂದನನ್ನೂ, ಸೂರ್ಯವರ್ಮನು ಉಪನಂದನನ್ನೂ, ತಾರಕನು ಸುನಂದನನ್ನೂ, ನೇತ್ರಸಿಂಹನು ಸುರಾನಂದನನ್ನೂ, ಯಾದವನು ಪ್ರನಂದನನ್ನೂ, ಸಹ ಎದುರಿಸಿ ಎದುರಾಳಿಯನ್ನು ಕೊಂದೇಬಿಡಬೇಕೆಂಬ ಆಶೆಯಿಂದ ಎಲ್ಲರೂ ಯುದ್ಧಮಾಡುತ್ತಿದ್ದರು. ಹೀಗೆ ಒಂದು ದಿನ ಹಗಲೆಲ್ಲಾ ನಡೆದ ಯುದ್ಧದಲ್ಲಿ ಅನೇಕ ವೀರರು ಹತರಾದರು.

೯೯. ಬಲಶಾಲಿಗಳಾದ ಬಾಹ್ಲೀಕರಾಜಪುತ್ರರು ಏಳುಮಂದಿಯೂ ಸೋತು, ಬಲಖಾನಿಗೆ ಹೆದರಿ ಯುದ್ಧವಿಮುಖರಾಗಿ ಪಲಾಯನ ಮಾಡಿದರು.

ದೃಷ್ಟ್ವಾ ತೇಷಾಂ ಬಲಂ ಘೋರಮಭಿನಂದನಭೂಮಿಪಃ ।
ಕುತುಕಂ ಚ ಸಮಾಹೂಯ ನಾಟ್ಯಾಂ ಕೇಸರಿಣೀಂ ತಥಾ ।
ಕಥಿತಂ ಕಾರಣಂ ರಾಜ್ಞಾ ಯಥಾ ಜಾತಃ ಪರಾಜಯಃ ॥ ೧೦೦ ॥

ಇತಿ ಶ್ರುತ್ವಾ ತು ಕುತುಕಸ್ತಮಾಶ್ವಾಸ್ಯ ಮಹೀಪತಿಂ ।
ಸ ಧ್ಯಾತ್ವಾ ಶಾಂಬರೀಂ ಮಾಯಾಂ ಮಹಾದೇವೇನ ನಿರ್ಮಿತಾಂ ॥ ೧೦೧ ॥
ತತ್ಸೈನ್ಯಂ ಮೋಹಯಾಮಾಸ ಶಿಲಾಭೂತಮಚೇತನಂ ।

ತದಾ ಕೇಸರಿಣೀ ನಾಟ್ಯಾ ಅಷ್ಟೌ ಬದ್ಧ್ವಾ ಮಹಾಬಲಾನ್ ।
ರಾಜ್ಞಃ ಪಾರ್ಶ್ವಮುಪಾಗಮ್ಯ ದತ್ವಾ ತಾನ್ ಗೇಹಮಾಯಯೌ ॥ ೧೦೨ ॥

ಬಾಹ್ಲೀಕಶ್ಚ ಪ್ರಸನ್ನಾತ್ಮಾ ಬದ್ಧ್ವಾ ತಾನ್ನಿಗಡೈರ್ದೃಢೈಃ ।
ಲುಂಠಿತ್ವಾ ದ್ರವಿಣಂ ತೇಷಾಂ ಕೋಶಮಧ್ಯೇ ಸಮಾಕ್ಷಿಪತ್ ॥ ೧೦೩ ॥

---

೧೦೦. ಆಗ ಅಭಿನಂದನರಾಜನು ಬಲಖಾನಿಯ ಸೇನೆಯು ಬಹು ಅಗಾಧವಾದುದು ಎಂದು ತಿಳಿದು, ಯೋಗಿಯಾದ ಕುತುಕನನ್ನೂ ನರ್ತಕಿಯಾದ ಕೇಸರಿಣಿಯನ್ನೂ ಕರೆಯಿಸಿ ತನಗೆ ಸೋಲಾದುದನ್ನು ವಿವರವಾಗಿ ತಿಳಿಸಿದನು.

೧೦೧. ಆಗ ಕುತುಕನು ಇದನ್ನು ಕೇಳಿ ರಾಜನನ್ನು ಸಮಾಧಾನಪಡಿಸಿ, ಕೂಡಲೆ ದೇವಿಯನ್ನು ಧ್ಯಾನಮಾಡಿ, ಪರಮೇಶ್ವರನಿಂದ ನಿರ್ಮಿತವಾದ ಶಾಂಬರಿ ಎಂಬ ಮಾಯೆಯನ್ನು ಹರಹಿ, ಬಲಖಾನಿಯ ಸೇನೆಯೆಲ್ಲಾ ಮೂರ್ಛೆಯಿಂದ ನಿಶ್ಚೇತನವಾಗುವಂತೆ ಮಾಡಿದನು.

೧೦೨. ಇದೇ ಸಮಯನೋಡಿ ನಟಿಯಾದ ಕೇಸರಣಿಯು ಬಲಶಾಲಿಗಳಾದ ಆ ಬಲಖಾನಿ ಮೊದಲಾದ ಎಂಟು ಜನರನ್ನೂ ಬಂಧಿಸಿ, ರಾಜನ ಸಮೀಪಕ್ಕೆ ಕರೆದುಕೊಂಡು ಬಂದು, ಅವರನ್ನೆಲ್ಲಾ ಅವನ ವಶಪಡಿಸಿ, ತನ್ನ ಸ್ಥಾನಕ್ಕೆ ಹೋದಳು

೧೦೩. ಆಗ ಬಾಹ್ಲೀಕರಾಜನು ಸಂತೋಷಗೊಂಡು ಅವರನ್ನೆಲ್ಲಾ ಧೃಢವಾದ ಸಂಕೋಲೆಗಳಿಂದ ಬಿಗಿಸಿದುದಲ್ಲದೆ, ಅವರ ಶಿಬಿರದಲ್ಲಿದ್ದ ಭಂಡಾರದ ದ್ರವ್ಯವನ್ನೆಲ್ಲಾ ಲೂಟಿಮಾಡಿ, ತನ್ನ ಬೊಕ್ಕಸಕ್ಕೆ ಸೇರಿಸಿಕೊಂಡನು.

ದೇವ್ಯಾಶ್ಚ ವರದಾನೇನ ದೇವಸಿಂಹೋ ಭಯಾತುರಃ ।
ಮಹಾವತೀಂ ಸಮಾಗಮ್ಯ ಸ್ವರ್ಣವತ್ಯೈ ನ್ಯವೇದಯತ್ ॥ ೧೦೪ ॥

ಜ್ಞಾತ್ವಾ ಸ್ವರ್ಣವತೀ ದೇವೀ ಸರ್ವವಿದ್ಯಾವಿಶಾರದಾ ।
ಶ್ಯೇನೀಂ ಮೂರ್ತಿಂ ಸಮಾಸ್ಥಾಯ ಯಯೌ ಪುಷ್ಪವತೀಂ ಪ್ರತಿ॥ ೧೦೫ ॥

ದೃಷ್ಟ್ವಾ ತು ದಂಪತೀ ತತ್ರ ಮಕರಂದಂ ಗೃಹೇ ಸ್ಥಿತೌ ।
ರುದಿತ್ವಾ ಕಥಯಾಮಾಸ ಯಥಾ ಪ್ರಾಪ್ತಃ ಪರಾಜಯಃ ॥ ೧೦೬ ॥

ಕೃಷ್ಣಾಂಶಸ್ತು ತದಾ ದುಃಖೀ ಮಕರಂದಂ ವಚೋಽಬ್ರವೀತ್ ।
ಗಚ್ಛ ವೀರ ಮಯಾ ಸಾರ್ಧಂ ಮದ್ಗುರುರ್ಬಂಧನಂ ಗತಃ ॥ ೧೦೭ ॥

---

೧೦೪. ದೇವಿಯ ವರದ ಮಹಿಮೆಯಿಂದ ದೇವಸಿಂಹನೊಬ್ಬನು ಮಾತ್ರ ಮೂರ್ಛೆಗೊಳ್ಳದೆ ಭೀತನಾಗಿ, ಮಹಾವತೀನಗರಕ್ಕೆ ಹಿಂತಿರುಗಿ ಬಂದು, ನಡೆದ ಸಮಾಚಾರವನ್ನೆಲ್ಲಾ ಸ್ವರ್ಣವತೀದೇವಿಗೆ ತಿಳಿಸಿದನು.

೧೦೫. ಸಕಲ ವಿದ್ಯಾಪ್ರವೀಣೆಯಾದ ಸ್ವರ್ಣವತೀದೇವಿಯು ಇದರ ರಹಸ್ಯ ವನ್ನೆಲ್ಲಾ ತಿಳಿದು, ತಾನು ಒಂದು ಗೃಧ್ರಾಕಾರವನ್ನು ಧರಿಸಿ ಬಾಹ್ಲೀಕ ದೇಶಕ್ಕೆ ಸಾಗಿ ಪುಷ್ಪವತಿಯಿದ್ದೆಡೆಗೆ ಬಂದಳು.

೧೦೬. ಅಲ್ಲಿ ಮಯೂರವರ್ಮನ ಅರಮನೆಯಲ್ಲಿ ಮಕರಂದನನ್ನೂ, ದಂಪತಿ ಗಳಾದ ಪುಷ್ಪವತಿ ಕೃಷ್ಣಾಂಶರನ್ನೂ ನೋಡಿ, ರೋದನಮಾಡುತ್ತ ತಮಗೆ ಉಂಟಾ ಗಿರುವ ಪರಾಜಯದ ವಿಚಾರವನ್ನು ಅವರಿಗೆ ತಿಳಿಸಿದಳು.

೧೦೭. ಕೃಷ್ಣಾಂಶನು ಈ ವಿಚಾರವನ್ನು ಕೇಳಿ ಬಹು ದುಃಖಗೊಂಡು ಮಕರಂದನನ್ನು ಪ್ರಾರ್ಥಿಸುವನಾಗಿ "ಅಯ್ಯಾ ವೀರನೇ! ನಮ್ಮ ಅಣ್ಣನು ಬಂಧನಕ್ಕೆ ಸಿಕ್ಕಿಬಿದ್ದಿದ್ದಾನೆ. ಆದುದರಿಂದ ನೀನು ಈಕ್ಷಣ ನನ್ನ ಸಂಗಡ ಹೊರಟು ಬರಬೇಕು."

ಕುಲಕ್ಷಯೇ ಮಹತ್ಪಾಪಂ ಸುಪ್ರೋಕ್ತಂ ಪೂರ್ವಸೂರಿಭಿಃ ।
ನಿಮಗ್ನಾನ್ ದುಃಖಜಲಧೌ ಸಮುದ್ಧರ ಮಮ ಪ್ರಿಯ ॥ ೧೦೮ ॥

ಇತಿ ಶ್ರುತ್ವಾ ತು ತಚ್ಛ್ಯಾಲಃ ಶೂರಾಯುತಸಮನ್ವಿತಃ ।
ಸಂನ್ಯಸ್ತವೇಷಮಾಸ್ಥಾಯ ಖಡ್ಗಚರ್ಮಸಮನ್ವಿತಃ ।
ಕೃಷ್ಣಾಂಶೇನ ಹಯಾರೂಢೋ ಬಾಹ್ಲೀಕಂ ತ್ವರಿತೋ ಯಯೌ॥ ೧೦೯ ॥

ತದಾ ಸ್ವರ್ಣವತೀ ದೇವೀ ಪುಷ್ಪವತ್ಯಾ ಸಮನ್ವಿತಾ ।
ಶ್ಯೇನೀರೂಪಮುಪಾಸ್ಥಾಯ ಯಯೌ ಯತ್ರ ಮಹಾರಣಃ ॥ ೧೧೦ ॥

ಸ ಭಿತ್ವಾ ಶಾಂಬರೀಂ ಮಾಯಾಂ ಬೋಧಯಿತ್ವಾ ಸ್ವಸೈನಿಕಾನ್ ।
ರುರೋಧ ನಗರೀಂ ತಸ್ಯ ಬಾಹ್ಲೀಕಸ್ಯ ಮಹಾತ್ಮನಃ ॥ ೧೧೧ ॥

---

೧೦೮. "ವಂಶವು ಕ್ಷಯವಾಗುವ ಸಂದರ್ಭದಲ್ಲಿ ನೋಡುತ್ತ ಸುಮ್ಮನಿರುವುದು ಮಹಾಪಾಪವೆಂದು ಪೂರ್ವಿಕರು ಹೇಳುವರು. ಈಗ ದುಃಖ ಸಮುದ್ರದಲ್ಲಿ ಮುಳುಗಿರುವ ನಮ್ಮ ಬಂಧುಗಳನ್ನು ಉದ್ಧಾರಮಾಡಿ ನನ್ನ ಮನಸ್ಸನ್ನು ಸಂತೋಷಪಡಿಸು" ಎಂದು ಹೇಳಿದನು.

೧೦೯. ಕೃಷ್ಣಾಂಶನು ಹೀಗೆಂದುದನ್ನು ಕೇಳಿ, ಅವನ ಭಾವಮೈದುನನಾದ ಮಕರಂದನು ಸನ್ಯಾಸಿಯ ವೇಷವನ್ನು ಧರಿಸಿ, ಕತ್ತಿ ಗುರಾಣಿಗಳೊಡನೆ ಕುದುರೆಯನ್ನೇರಿ ಹೊರಟನು.

೧೧೦. ತನ್ನ ಜತೆ ಹತ್ತುಸಾವಿರ ಶೂರರನ್ನೂ ಕೃಷ್ಣಾಂಶನನ್ನೂ ಕರೆದುಕೊಂಡು ಜಾಗ್ರತೆಯಾಗಿ ಬಾಹ್ಲೀಕನಗರಕ್ಕೆ ಬಂದು ಸೇರಿದನು. ಸ್ವರ್ಣವತೀ ದೇವಿಯು ಪುಷ್ಪವತಿಯೊಡನೆ ಹೆಣ್ಣುಗೃಧ್ರದ (ಶ್ಯೇನೀ) ರೂಪವನ್ನು ಧರಿಸಿ ಮಹಾಯುದ್ಧವಾಗುತ್ತಿದ್ದ ಸ್ಥಳಕ್ಕೆ ಬಂದಳು.

೧೧೧. ಆಗ ಮಕರಂದನು ಅಲ್ಲಿ ಬಂದು, ಮಾಯೆಯಿಂದ ಹೀಗಾಗಿದೆಯೆಂದು ನಿಶ್ಚಯಿಸಿ, ಶಾಂಬರಿಮಾಯೆಯನ್ನು ನಿಗ್ರಹಿಸಿ ತಮ್ಮ ಸೈನ್ಯವನ್ನೆಲ್ಲಾ ಎಚ್ಚರಗೊಳಿಸಿ ಬಾಹ್ಲಿಕರಾಜನ ಪಟ್ಟಣವನ್ನು ಮುತ್ತಿದನು.

ದೃಷ್ಟ್ವಾ ಶಾತ್ರುಸಂಯುಕ್ತಾನ್ ಕುತುಕಸ್ತು ತಯಾ ಸಹ ।
ಪುನಶ್ಚ ಶಾಂಬರೀಂ ಮಾಯಾಂ ಪ್ರೇಷಯಾಮಾಸ ತಾನ್ಪ್ರತಿ ॥ ೧೧೨ ॥

ಛಿತ್ವಾ ಸಾ ಸಕಲಾಂ ಮಾಯಾಂ ಬದ್ಧ್ವಾ ತೌ ದೈತ್ಯಸನ್ನಿಭೌ ।
ನಗರಂ ದಾಹಯಾಮಾಸ ತಸ್ಯ ಭೂಪಸ್ಯ ಮಾಯಯಾ ॥ ೧೧೩ ॥

ನ ದಾಹೋ ದಾಹಮಾಪನ್ನೋ ನ ಭಸ್ಮೀ ಭಸ್ಮವಾನ್ ಖಲು ।
ಸ್ವರ್ಣವತ್ಯಾ ಕೃತಂ ಚಿತ್ರಂ ಸ್ವಯಂ ದೇವ್ಯಾ ಚ ಮಾಯಯಾ ॥ ೧೧೪ ॥

ತದಾ ಪುಷ್ಪವತೀ ದೇವೀ ಹತ್ವಾ ಕೇಸರಿಣೀಂ ರುಷಾ ।
ತನ್ಮಾಂಸೈಸ್ತರ್ಪಯಾಮಾಸ ಗೃಧ್ರಗೋಮಾಯುವಾಯಸಾನ್ ॥ ೧೧೫ ॥

ಕುತುಕಂ ಚ ತಥಾಭೂತಂ ಹತ್ವಾ ಸ್ವರ್ಣವತೀ ಸ್ವಯಂ ।
ಕಾರಾಗಾರೇ ಲೋಹಮಯೇ ಸ್ಥಿತಾನ್ವೀರಾನಮೋಚಯತ್ ॥ ೧೧೬ ॥

---

೧೧೨. ಹೀಗೆ ಮಕರಂದನೇ ಮುಂತಾದವರು ಶತ್ರುಗಳಿಗೆ ಬೆಂಬಲವಾಗಿ ಪುನಃ ಬಂದುದನ್ನು ನೋಡಿ, ಯೋಗಿಯಾದ ಕುತುಕನು ನಟಿಯಾದ ಕೇಸರಿಣಿಯ ಜೊತೆಗೂಡಿ ಪುನಃ ಶಾಂಬರೀಮಾಯೆಯನ್ನು ಅವರ ಮೇಲೂ ಪ್ರಯೋಗಿಸಿದನು.

೧೧೩. ಆಗ ಸ್ವರ್ಣವತೀ ದೇವಿಯು ತನ್ನ ವಿದ್ಯಾಪ್ರಭಾವದಿಂದ ಶಾಂಬರೀ ಮಾಯೆಯನ್ನು ಪೂರ್ಣವಾಗಿ ಪರಿಹರಿಸಿ, ರಾಕ್ಷಸಸ್ವರೂಪರಾದ ಆ ಕುತುಕ ಕೇಸರಿಣಿಯರನ್ನು ಬಂಧಿಸಿದಳು. ಮತ್ತು ತನ್ನ ಮಾಯಾಬಲದಿಂದ ಅಭಿನಂದನರಾಜನ ನಗರವೇ ಸುಟ್ಟುಹೋಗುವಂತೆ ಮಾಡಿದಳು.

೧೧೪. ಆ ನಗರವು ಸುಡುತ್ತಿದ್ದರೂ ಜ್ವಾಲೆಗಳು ಉಂಟಾಗಲಿಲ್ಲ, ಉರಿದಕಡೆ ಭಸ್ಮವೂ ಆಗಲಿಲ್ಲ. ಹೀಗೆ ಆ ಸ್ವರ್ಣವತಿಯ ಮಾಯೆಯಿಂದ ವಿಚಿತ್ರವಾದ ಅದೊಂದು ರೀತಿಯಲ್ಲಿ ದಗ್ಧವಾಗುತ್ತಿತ್ತು.

೧೧೫. ಆಗ ಪುಷ್ಪವತೀದೇವಿಯು ಉಗ್ರಕೋಪದಿಂದ ನಟಿಯಾದ ಕೇಸರಿಣಿಯನ್ನು ಕೊಂದು, ಆ ಮಾಂಸದಿಂದ ಹದ್ದು ನಾಯಿಗಳಿಗೆ ತೃಪ್ತಿಯಾಗುವಂತೆ ಮಾಡಿದಳು.

೧೧೬. ಬಳಿಕ ಸ್ವರ್ಣವತೀ ದೇವಿಯು ಆ ಕುತುಕನನ್ನು ಕೊಂದು, ಅವನ ಮಾಂಸವನ್ನು ಹದ್ದು ನರಿ ಕಾಗೆಗಳಿಗೆ ತೃಪ್ತಿಯುಂಟಾಗುವಂತೆ ಎಸೆದುದಲ್ಲದೆ ಲೋಹದ ಸೆರೆಮನೆಯಲ್ಲಿ ಬಂಧಿತರಾಗಿದ್ದ ತನ್ನ ಕಡೆಯ ವೀರರನ್ನೆಲ್ಲಾ ಬಿಡಿಸಿದಳು.

ಪುನರಾಗಮ್ಯ ಸಾ ದೇವೀ ತಯಾ ಸಾರ್ಧಂ ಶುಭಾನನಾ ।
ಮಕರಂದಃ ಸ್ಥಿತೋ ಯತ್ರ ಕೃಷ್ಣಾಂಶೇನ ಸಮನ್ವಿತಃ ॥ ೧೧೭ ॥

ತೇ ಸರ್ವೇ ವಿಸ್ಮಿತಾಶ್ಚಾಸನ್ ಜ್ಞಾತ್ವಾ ದೇವ್ಯಾ ವಿಮೋಹಿತಾಃ ।
ಕ್ರೋಧವಂತೋ ಮಹಾವೀರಾ ಯುದ್ಧಾಯ ಸಮುಪಾಯಯುಃ ॥೧೧೮॥

ಪುನಶ್ಚಾಸೀತ್ತಯೋರ್ಯುದ್ಧಂ ಸೇನಯೋರುಭಯೋರ್ಮೃಧೇ ।
ಬಲಖಾನಿಂ ಮಹಾನಂದೋ ನಂದಶ್ಚಾಹ್ಲಾದಮಾಯಯೌ ॥ ೧೧೯ ॥

ಪರಾನಂದಸ್ತಥಾ ದೇವಂ ತಾರಕಂ ಚೋಪನಂದನಃ ।
ಸುನಂದೋ ನೇತ್ರಸಿಂಹಂ ಚ ಸುರಾನಂದಶ್ಚ ತಾಲನಂ ॥ ೧೨೦ ॥

ಪ್ರನಂದೋ ವೀರಸೇನಂ ಚ ಬ್ರಹ್ಮಾನಂದಂ ಸ ಭೂಪತಿಃ ।
ಗಜಸ್ಥಿತಾಶ್ಚ ತೇ ಸರ್ವೇ ಧನುರ್ಯುದ್ಧಪರಾಯಣಾಃ ।
ಅಹೋರಾತ್ರಮಭೂದ್ಯುದ್ಧಂ ತೇಷಾಂ ಚ ತುಮುಲಂ ಕ್ರಮಾತ್ ॥೧೨೧॥

---

೧೧೭. ಇಷ್ಟು ಮಾಡಿದಮೇಲೆ ಆ ಸ್ವರ್ಣವತಿಯು ಪುಷ್ಪವತಿಯೊಡನೆ ಹೊರಟು ಕೃಷ್ಣಾಂಶ ಮತ್ತು ಮಕರಂದ ಇವರು ಇದ್ದ ಕಡೆಗೆ ಬಂದು ಸೇರಿದಳು.

೧೧೮. (ಕೃಷ್ಣಾಂಶನು ಬರುವುದಕ್ಕೆ ಮುಂಚೆ ನಡೆದ ಯುದ್ಧವನ್ನು ಇಲ್ಲಿ ವಿವರವಾಗಿ ತಿಳಿಸುತ್ತಾರೆ.) ಇತ್ತ ದೇವಿಯ ಮಾಯೆಯಿಂದ ಈರೀತಿ ಮುಗ್ಧರಾದುದಕ್ಕೆ ಅವರೆಲ್ಲರೂ ಆಶ್ಚರ್ಯಪಟ್ಟರು. ಅನಂತರ ಮಹಾವೀರರಾದ ಇವರೆಲ್ಲರೂ ಕೋಪಾವೇಶದಿಂದ ಯುದ್ಧಕ್ಕೆ ಸಿದ್ಧರಾದರು.

೧೧೯-೧೨೧. ಎರಡುಕಡೆಯ ಸೈನಿಕರಿಗೂ ಘೋರವಾದ ಯುದ್ಧವು ಆರಂಭವಾಯಿತು. ಮಹಾನಂದನು ಬಲಖಾನಿಯನ್ನೂ, ನಂದನು ಆಹ್ಲಾದನನ್ನೂ, ಪರಾನಂದನು ದೇವಸಿಂಹನನ್ನೂ, ಉಪನಂದನು ತಾರಕನನ್ನೂ, ಸುನಂದನು ನೇತ್ರಸಿಂಹನನ್ನೂ, ಸುರಾನಂದನು ತಾಲನನನ್ನೂ, ಪ್ರನಂದನು ವೀರಸೇನನನ್ನೂ ಅಭಿನಂದನರಾಜನು ಆನೆಯ ಮೇಲೆ ಕೂತು ಬ್ರಹ್ಮಾನಂದನನ್ನೂ ಸಹ ಎದುರಿಸಿ, ಇವರೆಲ್ಲರೂ ಧನುರ್ಯುದ್ಧಮಾಡಹತ್ತಿದರು. ಹೀಗೆ ಎರಡು ಪಕ್ಷದವರಿಗೂ ಹಗಲು ರಾತ್ರಿ ಎಡೆಬಿಡದೆ ಘೋರವಾದ ದ್ವಂದ್ವಯುದ್ಧವಾಯಿತು.

ಏತಸ್ಮಿನ್ನಂತರೇ ರಾತ್ರೌ ಚಿತ್ರರೇಖಾ ಸಮಾಗತಾ ।
ಸ್ವಕೀಯಾನ್ವ್ಯಾಕುಲೀಭೂತಾನ್ ತಾದೃಶಾಂಶ್ಚ ವಿಲೋಕ್ಯ ವೈ ॥೧೨೨॥

ಚಿತ್ರಗುಪ್ತಂ ತದಾ ಧ್ಯಾತ್ವಾ ಚಿತ್ರಮಾಯಾಮಚೀಕರತ್ ।
ತದಾ ತದ್ಬಾಂಧವಾಶ್ಚಾಸನ್ ಬಹುಧಾ ಚಾಭಿನಂದನಾಃ ॥ ೧೨೩ ॥

ತಾನ್ ದೃಷ್ಟ್ವಾ ವಿಸ್ಮಿತಾಃ ಸರ್ವೇ ಭಯಭೀತಾಶ್ಚ ದುದ್ರುವುಃ ।
ತ್ಯಕ್ತ್ವಾ ಯುದ್ಧಮಯೀಂ ಭೂಮಿಂ ಶೋಕವ್ಯಾಕುಲಚೇತನಾಃ ॥೧೨೪॥

ಪಂಚಯೋಜನಮಾಗತ್ಯ ತತೋ ವಾಸಮಕಾರಯನ್ ।
ಸಂಧ್ಯಾಕಾಲೇ ತಮೋಭೂತೇ ನಿರುತ್ಸಾಹಾ ಮಹಾಬಲಾಃ ॥ ೧೨೫ ॥

ಹಾ ಕೃಷ್ಣಾಂಶ ಮಹಾಬಾಹೋ ಶರಣಾಗತವತ್ಸಲ ।
ಇಂದುಲಸ್ತೇ ಕುಮಾರೋಽಯಂ ಸಂಹೃತಶ್ಚಿತ್ರರೇಖಯಾ ॥ ೧೨೬ ॥

---

೧೨೨. ಇಷ್ಟರಲ್ಲಿ ಆ ರಾತ್ರಿ ಚಿತ್ರರೇಖೆಯು ಅಲ್ಲಿಗೆ ಬಂದು, ತನ್ನ ಕಡೆಯವರೆಲ್ಲಾ ಚಿಂತಾಕ್ರಾಂತರಾಗಿ ದೈನ್ಯಸ್ಥಿತಿಹೊಂದಿರುವುದನ್ನು ನೋಡಿದಳು.

೧೨೩. ಆಕೆಯು ಕೂಡಲೆ ಚಿತ್ರಗುಪ್ತನನ್ನು ಮನಸ್ಸಿನಲ್ಲಿ ಧ್ಯಾನಿಸಿ, ಚಿತ್ರಮಾಯೆಯನ್ನು ಬೀರಲಾಗಿ ಆ ಮಾಯಾಮಹಿಮೆಯಿಂದ ಅವಳ ಬಂಧುಗಳೆಲ್ಲರೂ ಬಹುಮಂದಿ ಅಭಿನಂದನರಹಾಗೆ ಕಾಣಿಸತೊಡಗಿದರು.

೧೨೪. ಈರೀತಿ ಅನೇಕ ಅಭಿನಂದನರು ಕಾಣುತ್ತಿರುವುದನ್ನು ನೋಡಿ ಬಲಖಾನಿಯ ಸೈನಿಕರು ಹೆದರಿ, ಯುದ್ಧಭೂಮಿಯನ್ನು ಬಿಟ್ಟು ಹೊರಡಲುದ್ಯುಕ್ತರಾಗಿ ದುಃಖದಿಂದ ವ್ಯಗ್ರವಾದ ಮನಸ್ಸುಳ್ಳವರಾಗಿ ಓಡಿದರು.

೧೨೫ ಆರೀತಿ ಐದು ಯೋಜನದವರೆಗೆ ಓಡಿಹೋಗಿ, ಅಲ್ಲಿ ಇಳಿದುಕೊಂಡು ವಿಶ್ರಮಿಸಿಕೊಂಡರು. ಬಳಿಕ ಅಂಧಕಾರಮಯವಾಗಿರುವ ಸಂಧ್ಯಾಕಾಲದಲ್ಲಿ ಬಲಶಾಲಿಗಳಾದ ಆಹ್ಲಾದನೇ ಮೊದಲಾದವರೆಲ್ಲರೂ ಉತ್ಸಾಹರಹಿತರಾಗಿ ಯೋಚಿಸುತ್ತಿದ್ದರು.

೧೨೬. "ಹಾ ಕೃಷ್ಣಾಂಶಾ! ಮಹಾಬಾಹೋ, ಶರಣಾಗತವತ್ಸಲಾ! ನಿನ್ನ ಮಗನಾದ ಇಂದುಲನನ್ನು ಚಿತ್ರರೇಖೆಯು ಸಂಹರಿಸಿರಬೇಕು. ಅವಳ ಮಾಯೆಯಿಂದ ನಾವು ಮೋಹಗೊಂಡಿದ್ದೇವೆ."

ತಯಾ ವಿನೋಹಿತಾ ವೀರಾ ವಯಂ ತೇ ಶರಣಂ ಗತಾಃ ।
ಇತ್ಯುಕ್ತ್ವಾ ರೋದನಂ ಚಕ್ರುಃ ಕ್ವಗತೋಽಸಿ ಮಹಾಮತೇ ॥ ೧೨೭ ॥

ತದಾ ಕೋಲಾಹಲಶ್ಚಾಸೀದ್ರುದತಾಂ ಬಲಶಾಲಿನಾಂ ।
ಆಹ್ಲಾದಂ ಗರ್ಹಯಿತ್ವಾ ತೇ ಮೂರ್ಛಿತಾ ಭುವಿ ವಿಹ್ವಲಾಃ ॥ ೧೨೮ ॥

ಆಹ್ಲಾದಸ್ತು ತಥಾ ಶ್ರುತ್ವಾ ವಜ್ರಪಾತಾಹತಃ ಸ್ವಯಂ ।
ಉನ್ಮಾದಿವತ್ತದಾ ಭೂತ್ವಾ ತಾಡಯಾಮಾಸ ವಕ್ಷಸಿ ॥ ೧೨೯ ॥

ಏತಸ್ಮಿನ್ನಂತರೇ ಯೋಗೀ ಕೃಷ್ಣಾಂಶೋ ಭಗವತ್ಕಲಾ ।
ಚಂದ್ರೋದಯೇ ಸ್ವಯಂ ಪ್ರಾಪ್ತಶ್ಚಾಷ್ಟಮ್ಯಾಂ ಭೃಗುವಾಸರೇ ॥ ೧೩೦ ॥

ಶೂರಶ್ಚ ದಶಸಾಹಸ್ರೈರ್ಮಕರಂದೇನ ಸಂಯುತಃ ।
ತತ್ಸೇನಾಂ ಬೋಧಯಾಮಾಸ ಪಾಲಿತಾಂ ಬಲಖಾನಿನಾ ॥ ೧೩೧ ॥

---

೧೨೭. "ಹೀಗಾಗಿರುವ ನಮಗೆ ವೀರನಾದ ನೀನೇ ರಕ್ಷಕನು. ನಿನ್ನನ್ನು ಮರೆ ಹೋಗುವೆವು. ಅಯ್ಯೋ ಮಹಾಬುದ್ಧಿಶಾಲಿಯಾದ ಕೃಷ್ಣಾಂಶನೇ ! ಇಂಥ ಸಮಯದಲ್ಲಿ ನೀನು ಎಲ್ಲಿಗೆ ಹೋದೆ ? " ಎಂದು ವಿಲಾಪಮಾಡತೊಡಗಿದರು.

೧೨೮. ಬಲಶಾಲಿಗಳಾದ ಅವರೆಲ್ಲರ ರೋದನಧ್ವನಿಗಳು ಸೇರಿ ಮಹಾಶಬ್ದವುಂಟಾಯಿತು. ಅವರೆಲ್ಲರೂ ಆಹ್ಲಾದನನ್ನು ನಿಂದಿಸುತ್ತಾ ಧೈರ್ಯಗುಂದಿ ಮೂರ್ಛಿತನಾಗಿ ನೆಲದ ಮೇಲೆ ಬಿದ್ದರು.

೧೨೯. ಅವರೆಲ್ಲ ಹೀಗೆ ನಿಂದಿಸಿದ್ದನ್ನು ಕೇಳಿ, ಆಹ್ಲಾದನು ಸಿಡಿಲು ಬಡಿದವನಂತಾದನು. ಸ್ವಲ್ಪ ಹೊತ್ತಿನಮೇಲೆ ಹುಚ್ಚುಹಿಡಿದವನಂತೆ ಅವನೂ ಎದೆಯನ್ನು ಬಡಿದುಕೊಳ್ಳುತ್ತಾ ರೋದಿಸಿದನು.

೧೩೦. ಆ ದಿನ ಅಷ್ಟಮೀ ಶುಕ್ರವಾರ; ರಾತ್ರಿ ಕಲಾನಿಧಿಯಾದ ಚಂದ್ರನು ಉದಯಿಸುವವೇಳೆಗೆ ಎಂದರೆ ಅರ್ಧರಾತ್ರಿಯ ಸಮಯಕ್ಕೆ ಯೋಗಿಯವೇಷದ ಮಕರಂದನ ಸಹಿತನಾಗಿ ಕೃಷ್ಣಾಂಶನು ಹತ್ತುಸಾವಿರ ಯೋಧರಸಮೇತ ಅಲ್ಲಿಗೆ ಬಂದನು.

೧೩೧. ಹೀಗೆ ಬಂದಕೂಡಲೆ ಬಲಖಾನಿಯ ಪಕ್ಷದ ಸೇನೆಯನ್ನೆಲ್ಲಾ ಮೂರ್ಛೆಯಿಂದ ಎಚ್ಚರಗೊಳಿಸಿದನು.

ಜಿತ್ವಾ ತಾನ್ಸರ್ವಭೂಪಾಲಾನ್ ಗೃಹೀತ್ವಾ ವಿಪುಲಂ ಧನಂ ।
ಪಂಚಶಬ್ದಸ್ಥಿತಂ ಬಂಧುಂ ಪ್ರತ್ಯಾಗತ್ಯ ಜಗರ್ಜ ವೈ ॥ ೧೩೨ ॥

ತಸ್ಯ ಶಬ್ದೇನ ಶೇಷಾಂಶೋ ಬೋಧಿತೋ ಬಲಶಾಲಿನಾ ।
ಶಕುನಂ ಶುಭಮಾಲೋಕ್ಯ ಭುಜಾವುತ್ಥಾಪ್ಯ ವೀರ್ಯವಾನ್ ।
ಸ್ವಾಂಕೇ ನಿವೇಶಯಾಮಾಸ ಕೃಷ್ಣಾಂಶಂ ಯೋಗಿರೂಪಿಣಂ ॥ ೧೩೩ ॥

ಸ್ನಾಪಯಿತ್ವಾಽಶ್ರುಧಾರಾಭಿಃ ಕೃಷ್ಣಾಂಶಂ ಪ್ರೇಮವಿಹ್ವಲಃ ।
ದತ್ವಾ ದ್ವಿಜಾತಿಮುಖ್ಯೇಭ್ಯೋ ವರ್ಣಯಾಮಾಸ ಕಾರಣಂ ॥ ೧೩೪ ॥

ಕೃಷ್ಣಾಂಶೋಽಪಿ ಪ್ರಸನ್ನಾತ್ಮಾ ಸ್ವಕೀಯಾಂ ಸಕಲಾಂ ಕಥಾಂ ।
ವರ್ಣಯಿತ್ವಾ ಯಥಾಭೂತಾಂ ಪುನರ್ಬಾಹ್ಲೀಕಮಾಯಯೌ ॥ ೧೩೫ ॥

---

೧೩೨. ಬಳಿಕ ಎದುರುಪಕ್ಷದ ರಾಜರನ್ನೆಲ್ಲಾ ಗೆದ್ದು ತುಂಬಾ ದ್ರವ್ಯವನ್ನು ವಶಪಡಿಸಿಕೊಂಡುದಲ್ಲದೆ ಪಂಚಶಬ್ದವೆಂಬ ಆನೆಯಮೇಲೆ ಕೂತಿದ್ದ ತನ್ನ ಸಹೋದರನ ಸಮೀಪಕ್ಕೆ ಬಂದು, ತನ್ನ ಧ್ವನಿ ತೋರಿಸುವುದಕ್ಕಾಗಿ ಸಿಂಹನಾದಮಾಡಿದನು.

೧೩೩. ಆದಿಶೇಷಾಂಶನೂ ವೀರನೂ ಆದ ಆಹ್ಲಾದನು ಆ ಶಬ್ದವನ್ನು ಕೇಳಿ ಆದರ ಜತೆಗೆ ಕೆಲವು ಶುಭಶಕುನಗಳನ್ನೂ ನೋಡಿ ತನ್ನ ತೋಳುಗಳನ್ನು ಒದರುತ್ತಾ ಎದ್ದು, ಯೋಗಿಯ ವೇಷದಲ್ಲಿರುವ ಕೃಷ್ಣಾಂಶನನ್ನು ಬರಸೆಳೆದು ತನ್ನ ತೊಡೆಯ ಮೇಲೆ ಕೂರಿಸಿಕೊಂಡನು.

೧೩೪. ಅನಂತರ ಅವನ ಮೇಲಿನ ಪ್ರೀತಿಯಿಂದ ಕಾತರನಾಗಿ ತನ್ನ ಆನಂದ ಬಾಷ್ಪಗಳನ್ನು ಅವನ ಮೇಲೆ ಸುರಿಸಿದನು. ಮತ್ತು ಈ ಸಂತೋಷಕ್ಕಾಗಿ ಬ್ರಾಹ್ಮಣ ಶ್ರೇಷ್ಠರಿಗೆ ಸಮೃದ್ಧಿಯಾಗಿ ದಾನಧರ್ಮಾದಿಗಳನ್ನು ಮಾಡಿದನು. ಅಲ್ಲದೆ ತಾನು ಅವನ ವಿಚಾರದಲ್ಲಿ ಹೀಗೆ ವರ್ತಿಸಬೇಕಾಗಿ ಬಂದುದಕ್ಕೆ ಕಾರಣವನ್ನು ವಿವರಿಸಿದನು.

೧೩೫. ಆಗ ಕೃಷ್ಣಾಂಶನೂ ಕೂಡ ಸಂತೋಷಪಟ್ಟು ಈ ಮಧ್ಯೆ ತಾನು ನಡೆಯಿಸಿದ ವಿಷಯವನ್ನೆಲ್ಲಾ ಆಮೂಲಾಗ್ರವಾಗಿ ತಿಳಿಸಿದನು. ಬಳಿಕ ಅವರೊಡನೆ ಪುನಃ ಬಾಹ್ಲೀಕನಗರಕ್ಕೆ ಬಂದನು.

ಚಿತ್ರವಿದ್ಯಾಂ ಸ್ವಯಂ ಕೃತ್ವಾ ಪಾಠಿತಾಂ ಚಿತ್ರರೇಖಯಾ ।
ಬದ್ಧ್ವಾಽಭಿನಂದನಂ ಭೂಪಂ ಸಸುತಂ ಚ ಸಮಂತ್ರಿಣಂ ।
ವಿವಾಹಂ ಕಾರಯಾಮಾಸ ಜಯಂತಸ್ಯ ತಯಾ ಸಹ ॥ ೧೩೬ ॥

ಬಾಹ್ಲೀಕಸ್ತು ಪ್ರಸನ್ನಾತ್ಮಾ ದತ್ವಾ ಚ ವಿಪುಲಂ ಧನಂ ।
ಸ್ವಸುತಾಂ ಚಿತ್ರರೇಖಾಂ ಚ ಜಯಂತಾಯ ಮುದಾ ದದೌ ॥ ೧೩೭ ॥

ಶತಂ ಗಜಾನ್ ಹಯಾಂಸ್ತತ್ರ ಸಹಸ್ರಾಣಿ ಧನೈರ್ಯುತಾನ್ ।
ಶತಂ ದಾಸಾಂಸ್ತಥಾ ದಾಸೀರ್ಜಯಂತಾಯ ಸ್ವಯಂ ದದೌ ॥ ೧೩೮ ॥

ಪ್ರಸ್ಥಾನಂ ಕಾರಯಾಮಾಸ ಬಲಖಾನೇರ್ಮಹಾತ್ಮನಃ ।
ಶ್ರಾವಣೇ ಮಾಸಿ ಸಂಪ್ರಾಪ್ತಾಸ್ತೇ ಸರ್ವೇ ಚ ಮಹಾವತೀಂ ॥ ೧೩೯ ॥

---

೧೩೬. ಕೃಷ್ಣಾಂಶನು ಚಿತ್ರರೇಖೆಯಿಂದ ತಾನು ಕಲಿತಿದ್ದ, ಚಿತ್ರಮಾಯಾ ವಿದ್ಯೆಯನ್ನು ಅಲ್ಲಿ ಪ್ರಯೋಗಿಸಿ, ಮಂತ್ರಿ, ಪುತ್ರ ಇವರ ಸಮೇತನಾದ ಅಭಿನಂದನ ರಾಜನನ್ನು ಬಂಧಿಸಿ, ಇಂದುಲಕುಮಾರನಿಗೆ ಚಿತ್ರರೇಖೆಯೊಡನೆ ವಿವಾಹವನ್ನು ನಿಶ್ಚಯಿಸಿದನು.

೧೩೭. ಅಭಿನಂದನನು ಬಿಡುಗಡೆಹೊಂದಿ ಇದನ್ನು ನೋಡಿ ಹರ್ಷಗೊಂಡು ಅವರಿಗೆ ತುಂಬಾ ದ್ರವ್ಯವನ್ನು ಕೊಟ್ಟು ಚಿತ್ರರೇಖೆಯ ವಿವಾಹವನ್ನು ವೈಭವದಿಂದ ನೆರವೇರಿಸಿದನು.

೧೩೮. ಬಳಿಕ ನೂರು ಆನೆಗಳನ್ನೂ, ದ್ರವ್ಯಗಳನ್ನು ತುಂಬಿದ ಚೀಲಸಮೇತವಾದ ಸಾವಿರ ಕುದುರೆಗಳನ್ನೂ ನೂರಾರುಮಂದಿ ದಾಸದಾಸಿಯರನ್ನೂ ಅಳಿಯನಾದ ಇಂದುಲನಿಗೆ ಬಹುಮಾನವಾಗಿ ಕೊಟ್ಟನು.

೧೩೯. ಅನಂತರ ಮಹಾಪುರುಷನಾದ ಬಲಖಾನಿಯನ್ನು ಅಲ್ಲಿಂದ ಸುಖವಾಗಿ ಸಾಗಕಳುಹಿಸಿ ಕೊಟ್ಟನು. ಹೀಗೆ ಪ್ರಯಾಣಮಾಡಿದ ಆವರೆಲ್ಲರೂ ಶ್ರಾವಣಮಾಸ ಹುಟ್ಟುತ್ತಲೆ ಮಹಾವತೀನಗರಕ್ಕೆ ಬಂದು ಸೇರಿದನು.

**ಸ್ವಂಸ್ವಂ ಗೇಹಂ ಯಯುಸ್ಸರ್ವೇ ಭೂಪಾಶ್ಚಾಹ್ಲಾದಮಾನಿತಾಃ ।**
**ಇತಿ ತೇ ಕಥಿತಂ ವಿಪ್ರ ಚರಿತ್ರಂ ಕಲಿನಾಶನಂ ।**
**ಶೃಣ್ವತಾಂ ಸರ್ವಪಾಪಘ್ನಂ ಕಥಯಿಷ್ಯಾಮಿ ವೈ ಪುನಃ　　॥ ೧೪೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ತ್ರಯೋವಿಂಶೋಽಧ್ಯಾಯಃ**



---

೧೪೦. ಬಳಿಕ ಆಹ್ಲಾದನು ಎಲ್ಲರನ್ನೂ ಯಥಾಯೋಗ್ಯವಾಗಿ ಮನ್ನಿಸಿದನು. ಅವರುಗಳೆಲ್ಲಾ ತಮ್ಮ ತಮ್ಮ ನಿವಾಸಕ್ಕೆ ಹೋದರು. ಅಯ್ಯಾ ಶೌನಕನೇ! ಕಲಿಯುಗದಲ್ಲಿ ಪಾಪಧ್ವಂಸಕರವಾದ ಕೃಷ್ಣಾಂಶನ ಕಥೆಯನ್ನು ನಾನು ಈರೀತಿ ನಿನಗೆ ತಿಳಿಸಿದೆನು. ಇದನ್ನು ಕೇಳಿದವರ ಸಕಲಪಾಪಗಳೂ ನಾಶವಾಗುವುವು. ಪುನಃ ಇದನ್ನೇ ಮುಂದುವರಿಸುವೆವು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಚತುರ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

ಕೃಷ್ಣಾಂಶೇ ಚ ಗೃಹಂ ಪ್ರಾಪ್ತೇ ಚೇಂದುಲೇ ಚ ವಿವಾಹಿತೇ ।
ಮಹೀಪತಿಃ ಸದಾ ದುಃಖೀ ದೇಹಲೀಂ ಪ್ರತಿ ಚಾಽಗಮತ್ ॥ ೧ ॥

ವೃತ್ತಾಂತಂ ಚ ನೃಪಸ್ಯಾಗ್ರೇ ಕಥಯಿತ್ವಾ ಸ ತಾರಕಃ ।
ಪರಂ ವಿಸ್ಮಯಮಾಪನ್ನಃ ಕೃಷ್ಣಾಂಶಚರಿತಂ ಪ್ರತಿ ॥ ೨ ॥

ಏತಸ್ಮಿನ್ನಂತರೇ ಮಂತ್ರೀ ಚಂದ್ರಭಟ್ಟ ಉದಾರಧೀಃ ।
ಭೂಮಿರಾಜಂ ವಚಃ ಪ್ರಾಹ ಶೃಣು ಪಾರ್ಥಿವಸತ್ತಮ ॥ ೩ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಕೃಷ್ಣಾಂಶನು ಮೃತನಾದನೆಂದು ತಾನು ಭಾವಿಸಿರಲು ಅವನು ಜೀವಂತನಾಗಿ ಊರಿಗೆ ಬಂದುದನ್ನೂ, ಇಂದುಲನಿಗೆ ವಿವಾಹಮಹೋತ್ಸವವು ನೆರವೇರಿದ್ದನ್ನೂ ಕೇಳಿ ಮಹೀಪತಿರಾಜನು ಮಹಾ ಅಸೂಯೆಯಿಂದ ಸದಾ ಒಳಗೇ ದುಃಖಿಸುತ್ತಾ ದೆಹಲಿಗೆ ಹೋದನು.

೨. ದೆಹಲಿಗೆ ಬಂದ ಆ ಮಹೀಪತಿಯು ಈ ವಿಷಯವನ್ನೆಲ್ಲಾ ರಾಜನ ಮುಂದೆ ಬಿನ್ನವಿಸಲು ಪೃಥ್ವೀರಾಜನ ಕುಮಾರನಾದ ತಾರಕನು ಕೃಷ್ಣಾಂಶನ ಅದ್ಭುತ ವ್ಯಾಪಾರವನ್ನು ಕೇಳಿ ಅತ್ಯಾಶ್ಚರ್ಯಗೊಂಡನು.

೩. ಈ ಸಂದರ್ಭದಲ್ಲಿ ವಿಶಾಲಮನಸ್ಕನಾದ ಚಂದ್ರಭಟ್ಟನೆಂಬ ಮಂತ್ರಿಯು ಪೃಥ್ವೀರಾಜನ ಬಳಿಗೆ ಬಂದು " ರಾಜಶ್ರೇಷ್ಠನೇ ! ಕೇಳು, ನಾನು ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳನ್ನೆಸಗುವ ವೈಷ್ಣವಿಯನ್ನು ಆರಾಧಿಸಿದವನು."

ಮಯಾ ಚಾರಾಧಿತಾ ದೇವೀ ವೈಷ್ಣವೀ ವಿಶ್ವಕಾರಿಣೀ ।
ತ್ರಿವರ್ಷಾಂತೇ ಚ ತುಷ್ಟಾಽಭೂದ್ವರದಾ ಭಯಹಾರಿಣೀ ॥ ೪ ॥

ತಯಾ ದತ್ತಂ ಶುಭಂ ಜ್ಞಾನಂ ಕುಮತಿಧ್ವಂಸಕಾರಕಂ ।
ತತೋಽಹಂ ಜ್ಞಾನವಾನ್‌ಭೂತ್ವಾ ಕೃಷ್ಣಾಂಶಂ ಪ್ರತಿ ಭೂಪತೇ ।
ಚರಿತ್ರಂ ವರ್ಣಯಾಮಾಸ ತಸ್ಯ ಕಲ್ಮಷನಾಶನಂ ॥ ೫ ॥

ಇತ್ಯುಕ್ತ್ವಾ ಸ ಚ ಶುದ್ಧಾತ್ಮಾ ಗ್ರಂಥಂ ಭಾಷಾಮಯಂ ಶುಭಂ ।
ಮಾಹಾತ್ಮ್ಯಂ ದೇವಿಭಕ್ತಾನಾಂ ಶ್ರಾವಯಾಮಾಸ ವೈ ಸಭಾಂ ॥ ೬ ॥

ತಚ್ಛ್ರುತ್ವಾ ಭೂಮಿರಾಜಸ್ತು ವಿಸ್ಮಿತಶ್ಚಾಽಭವತ್ಕ್ಷಣಾತ್ ।
ಮಹೀಪತಿಸ್ತದಾ ಪ್ರಾಹ ದಿವ್ಯಾಶ್ವಬಲದರ್ಪಿತಃ ।
ಉದಯೋ ನಾಮ ಬಲವಾನ್‌ಯಸ್ಯೈವಂ ವರ್ಣಿತಾ ಕಥಾ ॥ ೭ ॥

---

೪. "ಮೂರುವರ್ಷಕಾಲ ನಿರಂತರವಾಗಿ ಉಪಾಸನಮಾಡಲಾಗಿ ಭಯ ಪರಿಹಾರಕಳೂ, ವರಪ್ರದೆಯೂ, ಆದ ಆ ದೇವಿಯು ನನ್ನ ಪೂಜೆಗೆ ಮೆಚ್ಚಿದಳು. ಅವಳು ನನ್ನಲ್ಲಿ ಅನುಗ್ರಹಮಾಡಿ ದುರ್ಬುದ್ಧಿನಾಶಕವಾದ ದಿವ್ಯಜ್ಞಾನವನ್ನು ನನಗೆ ಉಪದೇಶಮಾಡಿದಳು.

೫. "ಆ ಬಳಿಕ ನಾನು ಜ್ಞಾನಿಯಾಗಿ ಪಾಪನಾಶಕರವಾದ ಈ ಚರಿತ್ರೆಯನ್ನು ಕೃಷ್ಣಾಂಶನಿಗೆ ತಿಳಿಸಿದೆನು" ಎಂದು ಹೇಳಿದನು.

೬. ಅಮಾತ್ಯ ಚಂದ್ರಭಟ್ಟನು ನಿರ್ಮಲಚಿತ್ತದಿಂದ ದೇವಿಯ ಭಕ್ತರ ಮಹಾತ್ಮೆಯನ್ನು ತಿಳಿಸುವ ಪ್ರಾಕೃತಭಾಷಾತ್ಮಕವಾದ ಶುಭಗ್ರಂಥವನ್ನು ಆ ಸಭಾಮಧ್ಯೆ ಎಲ್ಲರಿಗೂ ಕೇಳಿಸುವಂತೆ ಹೇಳಿದನು.

೭. ಪೃಥ್ವೀರಾಜನು ಈ ಗ್ರಂಥವನ್ನು ಕೇಳಿ ಆಶ್ಚರ್ಯಪಟ್ಟನು. ಆಗ ಮಹೀಪತಿರಾಜನು ತನಗೆ ಸಹಜವಾದ ಅಸೂಯೆಯಿಂದ ಕೂಡಿ "ದಿವ್ಯವಾದ ಆ ಕುದುರೆಯ ಬಲದಿಂದ ಬಲಶಾಲಿಯಾದ ಈ ಉದಯ (ಕೃಷ್ಣಾಂಶ) ನು ಹೆಮ್ಮೆ ಪಡುತ್ತಿರುವನು. ಈ ಕಥೆಯೆಲ್ಲವೂ ಅವನ ಮಹಿಮಾವರ್ಣನೆಯೇ'' ಎಂದುಕೊಂಡು.

ಚತ್ವಾರೋ ವಾಜಿನೋ ದಿವ್ಯಾಃ ಜಲಸ್ಥಲಖಗಾಶ್ಚ ತೇ ।
ಶೀಘ್ರಂ ತಾಂಶ್ಚ ಸಮಾಹೃತ್ಯ ಸ್ವಯಂ ಭೂಪ ಬಲೀ ಭವ ॥ ೮ ॥

ಇತಿ ಶ್ರುತ್ವಾ ಸ ನೃಪತಿಃ ಶ್ರುತವಾಕ್ಯವಿಶಾರದಂ ।
ಆಹೂಯ ಕುಂದನಮಲಂ ಪ್ರೇಷಯಾಮಾಸ ಸತ್ವರಂ ॥ ೯ ॥

ಮಹಾವತೀಂ ಸಮಾಗತ್ಯ ಸ ದೂತೋ ಭೂಪತಿಂ ಪ್ರತಿ ।
ಉವಾಚ ವಚನಂ ಪ್ರೇಮ್ಣಾ ಮಹೀರಾಜಸ್ಯ ಭೂಪತೇಃ ॥ ೧೦ ॥

ವಾಜಿನಸ್ತೇ ಹಿ ಚತ್ವಾರೋ ದಿವ್ಯರೂಪಾಃ ಶುಭಪ್ರದಾಃ ।
ದರ್ಶನಾರ್ಥೇ ತವ ವಧೂರ್ವೇಲಾ ನಾಮ ಮಮಾತ್ಮಜಾ ॥ ೧೧ ॥

ತಯಾಽಽಪೂತಾನ್ ಹಯಾನ್ ಭೂಪ ದೇಹಿ ಮೇ ವಿಸ್ಮಯಂ ತ್ಯಜ ।
ನೋ ಚೇದ್ವೇಲಾಗ್ನಿನಾ ಸರ್ವೇ ಕ್ಷಯಂ ಯಾಸ್ಯಂತಿ ಸೈನ್ಯಪಾಃ ॥ ೧೨ ॥

---

೮. " ಅಯ್ಯಾ ಪೃಥ್ವಿರಾಜನೇ ! ಕೃಷ್ಣಾಂಶ ಮೊದಲಾದವರ ಹತ್ತಿರ ಭೂಮಾರ್ಗ, ಜಲಮಾರ್ಗ, ಆಕಾಶಮಾರ್ಗಗಳಲ್ಲಿ ಸಂಚರಿಸಬಲ್ಲ ದಿವ್ಯವಾದ ನಾಲ್ಕು ಕುದುರೆಗಳು ಇರುವುವು. ಆ ಕುದುರೆಗಳ ಬಲದಿಂದ ಇವರು ಮಹಾಪರಾಕ್ರಮಿಗಳೆನಿಸಿದ್ದಾರೆ. ನೀನು ಅವುಗಳನ್ನು ಹೇಗಾದರೂ ಮಾಡಿ ಜಾಗ್ರತೆ ಅಪಹರಿಸಿದರೆ ನೀನೇ ಅವರಿಗಿಂತ ಶೂರನೆನಿಸುವೆ " ಎಂದು ಪೃಥ್ವೀರಾಜನಿಗೆ ಬೋಧಿಸಿದನು.

೯. ಹೇಳಿದವರ ಮಾತನ್ನೆಲ್ಲಾ ನಿಜವೆಂದು ನಂಬುವುದರಲ್ಲಿ ಅಗ್ರೇಸರನಾದ ಪೃಥ್ವೀರಾಜನು, ಮಹೀಪತಿರಾಜನ ಮಾತುಗಳನ್ನು ನಂಬಿ, ಕುಂದನಮಲ್ಲ ಎಂಬ ಹೆಸರಿನ ದೂತನನ್ನು ಕರೆದು ಜಾಗ್ರತೆಯಾಗಿ ಮಹಾವತೀನಗರಕ್ಕೆ ಕಳುಹಿಸಿದನು.

೧೦-೧೧. ಆ ದೂತನು ರಾಜಾಜ್ಞೆಯಂತೆ ಮಹಾವತಿಯನ್ನು ಸೇರಿ ಪರಿಮಳ ರಾಜನನ್ನು ಕಂಡು ಪೃಥ್ವೀರಾಜನು ಪ್ರೀತಿಯಿಂದ ಹೇಳಿ ಕಳುಹಿಸಿದ ಮಾತನ್ನು ಹೇಳುವವನಾಗಿ " ನಿಮ್ಮಲ್ಲಿರುವ ಮಂಗಳಕರಗಳಾದ ನಾಲ್ಕು ದಿವ್ಯಾಶ್ವಗಳನ್ನು ನನ್ನ ಮಗಳಾದ ವೇಲೆಯು ನೋಡಬೇಕೆಂದು ಆಶಿಸುವಳು."

೧೨. " ತಾವು ಅನ್ಯಥಾ ಭಾವಿಸದೆ ಅವಳು ನೋಡಲು ಆಶೆಪಟ್ಟಿರುವ ಕುದುರೆಗಳನ್ನು ಇಲ್ಲಿಗೆ ಕಳುಹಿಸಿಕೊಡಿ, ಇದಕ್ಕಾಗಿ ತಾವು ಏನೂ ವಿಸ್ಮಯಪಡಬೇಡಿ. ನೀವು ಹೀಗೆಮಾಡದೆ ಹೋದರೆ ವೇಲಾದೇವಿಯ ಕೋಪಾಗ್ನಿಯಿಂದ ನಿಮ್ಮ ಸೈನಿಕರೆಲ್ಲರೂ ನಾಶಹೊಂದುವರು " ಎಂದು ಹೇಳಿದನು.

ಇತಿ ಶ್ರುತ್ವಾ ವಚೋ ಘೋರಂ ಸ ಭೂಪೋ ಭಯಕಾತರಃ ।
ಆಹ್ಲಾದಾದೀನ್ ಸಮಾಹೂಯ ವಚನಂ ಪ್ರಾಹ ನಮ್ರಧೀಃ ।
ಹಯಾನ್‌ಸ್ವಾನ್‌ಸ್ವಾನ್ಮುದಾ ದೇಹಿ ಮದೀಯಂ ವಚನಂ ಕುರು ॥ ೧೩ ॥

ಇತಿ ಶ್ರುತ್ವಾ ಸ ಆಹ್ಲಾದೋ ಧ್ಯಾತ್ವಾ ಸರ್ವಮಯೀಂ ಶಿವಾಂ ।
ಉವಾಚ ಮಧುರಂ ವಾಕ್ಯಂ ಶೃಣು ಭೂಪ ಶಿವಪ್ರಿಯ ॥ ೧೪ ॥

ಯತ್ರ ನಃ ಸಂಸ್ಥಿತಾಃ ಪ್ರಾಣಾಸ್ತತ್ರ ತೇ ವಾಜಿನಃ ಸ್ಥಿತಾಃ ।
ನ ದಾಸ್ಯಾಮೋ ವಯಂ ರಾಜನ್ ಸತ್ಯಂಸತ್ಯಂ ನ ಚಾನ್ಯಥಾ ॥ ೧೫ ॥

ಇತಿ ಶ್ರುತ್ವಾ ವಚಸ್ತಸ್ಯ ರಾಜಾ ಪರಿಮಲೋ ಬಲೀ ॥ ೧೬ ॥

---

೧೩. ಈರೀತಿ ದೂತನು ಹೇಳಿದ ಭಯಂಕರವಾದ ಮಾತನ್ನು ಕೇಳಿ, ಪರಿಮಳರಾಜನು ಹೆದರಿ, ಆಹ್ಲಾದ ಮುಂತಾದವರನ್ನು ಬರಮಾಡಿಕೊಂಡು ಮೃದು ನುಡಿಗಳಿಂದ ಅವರನ್ನು ಕುರಿತು "ನೀವೆಲ್ಲರೂ ನಿಮ್ಮ ಕುದುರೆಗಳನ್ನು ಸಂತೋಷ ದಿಂದ ಪೃಥ್ವೀರಾಜನಿಗೆ ಕೊಟ್ಟುಕಳುಹಿಸಿ. ನನ್ನ ಮಾತನ್ನು ಇಷ್ಟು ನಡೆಯಿಸಿ" ಎಂದು ಹೇಳಿದನು.

೧೪. ತಂದೆಯು ಹೇಳಿದ ಮಾತನ್ನು ಕೇಳಿ ಆಹ್ಲಾದನು ಸರ್ವವ್ಯಾಪಿನಿಯಾದ ಜಗದಂಬಿಕೆಯನ್ನು ಸ್ವಲ್ಪಹೊತ್ತು ಧ್ಯಾನಿಸಿ, ಅನಂತರ ಪರಿಮಳರಾಜನನ್ನು ಕುರಿತು ಮಧುರವಾದ ಮಾತಿನಿಂದ ಹೀಗೆ ಹೇಳತೊಡಗಿದನು.

೧೫. "ಶಿವಪ್ರಿಯನಾದ ರಾಜನೇ! ನೀನು ಕಳುಹಿಸಹೇಳುವ ಕುದುರೆಗಳು ನಮ್ಮ ಪ್ರಾಣಸಮಾನಗಳು. ಆದ್ದರಿಂದ ನಾವು ಆ ಕುದುರೆಗಳನ್ನು ಸತ್ಯವಾಗಿಯೂ ಕೊಡುವುದಿಲ್ಲ. ಇದಕ್ಕಾಗಿ ತಾವು ಅನ್ಯಥಾ ಭಾವಿಸಬಾರದು." ಎಂದು ಹೇಳಿದನು.

೧೬. ಆಹ್ಲಾದನು ಈರೀತಿ ಹೇಳಿದುದನ್ನು ನೋಡಿ ಬಲಶಾಲಿಯಾದ ಪರಿಮಳರಾಜನು ವೀರರೆಲ್ಲರಿಗೂ ಕೇಳಿಸುವಂತೆ ಅವರ ಸಮ್ಮುಖದಲ್ಲಿ ಭಯಂಕರ ವಾದ ಪ್ರತಿಜ್ಞಾವಚನವನ್ನು ಈರೀತಿ ಹೇಳಿದನು.

ಶಪಥಂ ಕೃತವಾನ್ ಘೋರಂ ಶೃಣ್ವತಾಂ ಬಲಶಾಲಿನಾಂ ।
ಭೋಜನಂ ಬ್ರಹ್ಮಮಾಂಸಸ್ಯ ಪಾನೀಯಂ ಗೋಽಸೃಜೋಪಮಂ ॥ ೧೭ ॥

ಶಯ್ಯಾ ಸ್ವಮಾತೃಸದೃಶೀ ಬ್ರಹ್ಮಹತ್ಯೋಪಮಾ ಸಭಾ ।
ಮಮ ರಾಷ್ಟ್ರೇ ಚ ಯುಷ್ಮಾಭಿರ್ವಾಸಃ ಪಾಪಮಯೋ ಮಹಾನ್॥೧೮॥

ಇತಿ ಶ್ರುತ್ವಾ ತು ಶಪಥಂ ದೇವಕೀ ಶೋಕತತ್ಪರಾ ।
ಚಕಾರ ರೋದನಂ ಗಾಢಂ ಸಗೇಹಜನವಿಗ್ರಹಾ ॥ ೧೯ ॥

ಪಂಚವಿಂಶಾಬ್ದಕೇ ಪ್ರಾಪ್ತೇ ಕೃಷ್ಣಾಂಶೇ ಯೋಗತತ್ಪರೇ ।
ಭಾದ್ರಶುಕ್ಲಚತುರ್ದಶ್ಯಾಂ ತದ್ಗೇಹಾದ್ಧರ್ಮತತ್ಪರಾಃ ॥ ೨೦ ॥

ನಿರ್ಯಯುಃ ಕಾನ್ಯಕುಬ್ಜಂ ತೇ ಜಯಚಂದ್ರೇಣ ಪಾಲಿತಂ ।
ಸ್ವರ್ಣವತ್ಯಾ ಪುಷ್ಪವತ್ಯಾ ಸಹಿತಾಶ್ಚಿತ್ರರೇಖಯಾ ॥ ೨೧ ॥

---

೧೭-೧೮. "ನೀವು ಆ ಕುದುರೆಗಳನ್ನು ಕೊಡದೆ ಹೋದಪಕ್ಷದಲ್ಲಿ ಬ್ರಾಹ್ಮಣರ ಮಾಂಸವನ್ನು ಭಕ್ಷಣೆಮಾಡಿದಂತೆಯೂ, ಗೋವಿನರಕ್ತವನ್ನು ಪಾನಮಾಡಿದಂತೆಯೂ, ಮಾತೃಗಮನ ಮಾಡಿದಂತೆಯೂ, ಬ್ರಹ್ಮಹತ್ಯೆ ಮಾಡಿದಂತೆಯೂ, ಪಾಪಭಾಗಿಗಳಾಗುವಿರಿ. ಮತ್ತು ನನ್ನ ರಾಜ್ಯದಲ್ಲಿ ನೀವು ಇರುವುದು ಮಹಾಪಾಪವೆಂದು ಭಾವಿಸುವೆನು" ಎಂದು ಹೇಳಿದನು.

೧೯. ಪರಿಮಳರಾಜನ ಘೋರವಾದ ಈ ಶಪಥವಾಕ್ಯಗಳನ್ನು ಕೇಳಿ, ದೇವಕಿಯು ಶೋಕದಿಂದ ನೊಂದು ಮನೆಯಲ್ಲಿರುವವರೆಲ್ಲರೊಡನೆ ರೇಗಾಡುತ್ತಾ ಗಟ್ಟಿಯಾಗಿ ರೋದಿಸಿದಳು.

೨೦. ಯೋಗಜ್ಞನಾದ ಕೃಷ್ಣಾಂಶನಿಗೆ ಇಪ್ಪತ್ತೈದುವರ್ಷ ತುಂಬಿತು. ಭಾದ್ರಪದ ಶುಕ್ಲ ದಶಮಿಯದಿವಸ ಧರ್ಮಶ್ರದ್ಧೆಯುಳ್ಳ ಆಹ್ಲಾದನೇ ಮೊದಲಾದವರೆಲ್ಲರೂ ಪರಿಮಳರಾಜನ ಮನೆಯಿಂದ ಹೊರಡಲು ನಿಶ್ಚಯಿಸಿದರು.

೨೧. ಅವರು ಅಲ್ಲಿಂದ ಜಯಚಂದ್ರನ ರಾಜಧಾನಿಯಾದ ಕನ್ಯಾಕುಬ್ಜಕ್ಕೆ ಹೋಗಬೇಕೆಂದು ನಿರ್ಣಯಿಸಿಕೊಂಡರು. ತಮ್ಮ ಜೊತೆಯಲ್ಲಿ ಸ್ವರ್ಣವತಿ, ಪುಷ್ಪವತಿ, ಚಿತ್ರರೇಖೆ ಇವರೆಲ್ಲರನ್ನೂ ಕರೆದುಕೊಂಡು ಹೊರಡಲನುವಾದರು.

ಇಂದುಲಃ ಪ್ರಯಯೌ ಶೀಘ್ರಮಯುತಾಶ್ವಬಲೈ ಸ್ಸಹ ।
ಕರಾಲಂ ಹಯಮಾರುಹ್ಯ ಪಂಚಶಬ್ದಂ ಚ ತತ್ಪಿತಾ ॥ ೨೨ ॥

ಕೃಷ್ಣಾಂಶೋ ಬಿಂದುಲಾರೂಢೋ ದೇವಕೀಮನುಸಂಯಯೌ ।
ತ್ಯಕ್ತ್ವಾ ತೇ ಭೂಪತೇರ್ಗ್ರಾಮಂ ಸರ್ವಸಂಪತ್ಸಮನ್ವಿತಂ ।
ಪಥಿ ತ್ರ್ಯಹಮುಷಿತ್ವಾ ತೇ ಜಯಚಂದ್ರಮುಪಾಯಯುಃ ॥ ೨೩ ॥

ನತ್ವಾ ತಂ ಭೂಪತಿಂ ಪ್ರೇಮ್ಣಾ ಗದಿತ್ವಾ ಸರ್ವಕಾರಣಂ ।
ಉಷಿತ್ವಾ ಶೀತಲಾಸ್ಥಾನೇ ಪೂಜಯಾಮಾಸುರಂಬಿಕಾಂ ॥ ೨೪ ॥

ಜಯಚಂದ್ರಸ್ತು ಭೂಪಾಲೋ ದೇವಸಿಂಹೇನ ವರ್ಣಿತಃ ।
ತೇಭ್ಯಶ್ಚ ನ ದದೌ ವೃತ್ತಿಂ ಭೂಮಾಪರಿಮಲಾಜ್ಞಯಾ ॥ ೨೫ ॥

---

೨೨. ಹತ್ತುಸಾವಿರ ಸೇನಾಸಮೇತನಾಗಿ ಇಂದುಲನು ಕರಾಲವೆಂಬ ಕುದುರೆಯನ್ನು ಏರಿಕೊಂಡು ಹೋದನು. ಇವನ ತಂದೆಯಾದ ಆಹ್ಲಾದನು ಪಂಚ ಶಬ್ದವೆಂಬ ಆನೆಯನ್ನು ಏರಿದ್ದನು.

೨೩. ಕೃಷ್ಣಾಂಶನು ಬಿಂದುಲವೆಂಬ ತನ್ನ ಕುದುರೆಯನ್ನೇರಿ ತಾಯಿಯಾದ ದೇವಕಿಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟನು. ಆಹ್ಲಾದ ಮೊದಲಾದವ ರೆಲ್ಲರೂ ಸಕಲೈಶ್ವರ್ಯಸಮೃದ್ಧವಾದ ಪರಿಮಲರಾಜನ ಮಹಾವತೀನಗರವನ್ನು ಈರೀತಿ ತೊರೆದು ಹೊರಟು, ಮೂರುದಿನಗಳು ದಾರಿನಡೆದು, ಕೊನೆಗೆ ಜಯಚಂದ್ರನ ರಾಜಧಾನಿಗೆ ಬಂದು ಸೇರಿದರು.

೨೪. ಅವರೆಲ್ಲರೂ ಅರಮನೆಗೆ ಬಂದು ರಾಜನಾದ ಜಯಚಂದ್ರನಿಗೆ ಪ್ರೀತಿ ಯಿಂದ ನಮಸ್ಕರಿಸಿ ಪರಿಮಳರಾಜನು ಹೇಳಿದ ಮಾತನ್ನೂ ಇತರ ವೃತ್ತಾಂತವನ್ನೆಲ್ಲಾ ತಿಳಿಸಿದರು. ಆಮೇಲೆ ಶೀತಲವೆಂಬ ಸ್ಥಳಕ್ಕೆ ಹೋಗಿ ಜಗದಂಬೆಯನ್ನು ಆರಾಧಿ ಸಿದರು.

೨೫. ರಾಜನ ಸಮಯವರಿತು ದೇವಸಿಂಹನು ನಡೆದ ಎಲ್ಲ ವಿಷಯವನ್ನು ತಿಳಿಸಿದರೂ ಕೂಡ ಜಯಚಂದ್ರ ಮಹಾರಾಜನು ಪರಿಮಳರಾಜನ ಎಚ್ಚರಿಕೆಯಿಂದ ಅವರಿಗೆ ತನ್ನ ರಾಜ್ಯದ ಗಡಿಯಲ್ಲಿರುವುದಕ್ಕೆ ಕೂಡ ಸಮ್ಮತಿ ಕೊಡಲಿಲ್ಲ.

ಕುಂಠಿತೋ ದೇವಸಿಂಹಸ್ತು ಗತ್ವಾ ಕೃಷ್ಣಾಂಶಮುತ್ತಮಂ ।
ಉದಿತ್ವಾ ಕಾರಣಂ ಸರ್ವಂ ಸ ಶ್ರುತ್ವಾ ರೋಷಮಾದಧೌ ॥ ೨೬ ॥

ತ್ವರಿತಂ ಬಿಂದುಲಾರೂಢೋ ಹಯಪಂಚಶತಾವೃತಃ ।
ಲುಂಠಯಾಮಾಸ ನಗರಂ ಪಾಲಿತಂ ಲಕ್ಷಣೇನ ತತ್ ॥ ೨೭ ॥

ದೃಷ್ಟ್ವಾ ತಂ ಲಕ್ಷಣೋ ವೀರೋ ಹಸ್ತಿನಃ ಪೃಷ್ಠಮಾಸ್ಥಿತಃ ।
ಶರೇಣ ತಾಡಯಾಮಾಸ ಕೃಷ್ಣಾಂಶಹೃದಯಂ ದೃಢಂ ॥ ೨೮ ॥

ನಿಷ್ಫಲತ್ವಂ ಗತೋ ಬಾಣೋ ವಿಷ್ಣುಮಂತ್ರೇಣ ಪ್ರೇರಿತಃ ।
ವಿಸ್ಮಿತಃ ಸ ತು ಭೂಪಾಲೋ ವಾಹನಾದ್ಭೂಮಿಮಾಗತಃ ॥ ೨೯ ॥

ನತ್ವಾ ತಚ್ಚರಣೌ ದಿವ್ಯೌ ಕುಲಿಶಾದಿಭಿರನ್ವಿತೌ ।
ತುಷ್ಟಾವ ದಂಡವದ್ಭೂತ್ವಾ ಲಕ್ಷಣೋ ಗದ್ಗದಂ ಗಿರಾ ॥ ೩೦ ॥

---

೨೬. ಇದರಿಂದ ದೇವಸಿಂಹನು ಮನನೊಂದು ಕೃಷ್ಣಾಂಶನ ಬಳಿಗೆ ಬಂದು ಈ ವಿಷಯವನ್ನು ತಿಳಿಸಿದನು. ಕೃಷ್ಣಾಂಶನು ಇದನ್ನು ಕೇಳಿ ಕುಪಿತನಾದನು.

೨೭. ಕೂಡಲೇ ಕೃಷ್ಣಾಂಶನು ಬಿಂದುಲವೆಂಬ ತನ್ನ ಅಶ್ವವನ್ನು ಏರಿ ಐನೂರು ಮಂದಿ ರಾವುತರೊಡನೆ ಹೊರಟು ಜಯಚಂದ್ರನಿಂದ ರಕ್ಷಿತವಾಗಿದ್ದ ಕನ್ಯಾಕುಬ್ಜವನ್ನು ಲೂಟಿಮಾಡಿದನು.

೨೮. ವೀರನಾದ ರಾಜಕುಮಾರ ಲಕ್ಷಣನು ಇದನ್ನು ನೋಡಿ ತನ್ನ ಆನೆಯ ಮೇಲೆ ಕುಳಿತು ಬಾಣವನ್ನು ಪ್ರಯೋಗಿಸಿ ಕೃಷ್ಣಾಂಶನ ಹೃದಯಕ್ಕೆ ನಾಟಿ ತುಂಬಾ ನೋವಾಗುವಂತೆ ಹೊಡೆದನು.

೨೯. ಲಕ್ಷಣನು ವಿಷ್ಣುಮಂತ್ರದಿಂದ ಅಭಿಮಂತ್ರಿಸಿ ಪ್ರಯೋಗಿಸಿದ ವೈಷ್ಣವಾಸ್ತ್ರವು, ವಿಷ್ಣುಸ್ವರೂಪನಾದ ಕೃಷ್ಣಾಂಶನ ಎದೆಗೆ ನಾಟದೆ ನಿಷ್ಫಲವಾಯಿತು. ಆಗ ರಾಜಕುಮಾರ ಲಕ್ಷಣನು ಚಕಿತನಾಗಿ ಆನೆಯಿಂದ ಇಳಿದನು.

೩೦. ಅವನು ನೆಲದ ಮೇಲೆ ನಿಂತು ವಜ್ರಾಯುಧ ಮುಂತಾದ ದಿವ್ಯ ಚಿಹ್ನೆಗಳುಳ್ಳ ಕೃಷ್ಣಾಂಶನ ಪಾದಗಳಿಗೆ ದಂಡವತ್ಪ್ರಣಾಮಮಾಡಿ ಗದ್ಗದ ಸ್ವರದಿಂದ ಕೃಷ್ಣಾಂಶನನ್ನು ಸ್ತುತಿಸತೊಡಗಿದನು.

॥ ಲಕ್ಷಣ ಉವಾಚ ॥
ವೈಷ್ಣವಂ ವಿದ್ಧಿ ಮಾಂ ಸ್ವಾಮಿನ್ ವಿಷ್ಣುಪೂಜನತತ್ಪರಂ ।
ಜಾನೇಽಹಂ ತ್ವಾಂ ಮಹಾಬಾಹೋ ಕೃಷ್ಣಶಕ್ತ್ಯವತಾರಕಂ ॥ ೩೧ ॥

ತ್ವದೃತೇ ಕೋಹಿ ಮೇ ಬಾಣಂ ನಿಷ್ಫಲಂ ಕುರುತೇ ಭುವಿ ।
ಕ್ಷಮಸ್ವ ಮಮ ದೌರಾತ್ಮ್ಯಂ ನಾಥ ತೇ ಮಾಯಯಾ ಕೃತಂ ॥ ೩೨ ॥

ಇತ್ಯುಕ್ತ್ವಾ ತೇನ ಸಹಿತೋ ಜಯಚಂದ್ರಂ ಮಹೀಪತಿಂ ।
ಗತ್ವಾ ತಂ ಕಥಯಾಮಾಸ ಯಥಾ ಪ್ರಾಪ್ತಃ ಪರಾಜಯಂ ॥ ೩೩ ॥

ನೃಪಸ್ತಯೋಃ ಪರೀಕ್ಷಾರ್ಥಂ ಯೌ ತು ಛಾಯಾವಿಮೋಹಿತೌ ।
ಗಜೌ ಕುವಲಯಾಪೀಡೌ ತ್ಯಕ್ತವಾಞ್ಛೀತಲಾಸ್ಥಲೇ ॥ ೩೪ ॥

---

೩೧. ಲಕ್ಷಣನು ಹೇಳುತ್ತಾನೆ—"ಸ್ವಾಮಿ ನಾನು ವಿಷ್ಣುಭಕ್ತ. ಯಾವಾಗಲೂ ವಿಷ್ಣುಪೂಜಾಸಕ್ತನು. ಓ ಮಹಾಬಾಹುವೇ! ನೀನು ಕೃಷ್ಣಪರಮಾತ್ಮನ ಶಕ್ತಿಯ ಅವತಾರಪುರುಷನೆಂಬುದು ನನಗೆ ಗೊತ್ತಾಯಿತು."

೩೨. "ನಿನ್ನನ್ನು ಬಿಟ್ಟು ಈ ಭೂಮಂಡಲದಲ್ಲಿ ನನ್ನ ಬಾಣವನ್ನು ವಿಫಲ ಮಾಡುವ ವೀರರು ಯಾರೂ ಇಲ್ಲ. ಆದುದರಿಂದ ಅಜ್ಞಾನವಶದಿಂದ ನಾನು ನಿನ್ನಲ್ಲಿ ತೋರಿಸಿದ ದುರುಳತನವನ್ನು ಕ್ಷಮಿಸಿ ಕಾಪಾಡು" ಎಂದು ಪ್ರಾರ್ಥಿಸಿದನು.

೩೩. ಲಕ್ಷಣನು ಈರೀತಿ ಕೃಷ್ಣಾಂಶನನ್ನು ಸ್ತೋತ್ರಮಾಡಿ ಅವನನ್ನು ತನ್ನೊಡನೆ ಕರೆದುಕೊಂಡು ದೊಡ್ಡಪ್ಪನಾದ ಜಯಚಂದ್ರನ ಬಳಿಗೆ ಬಂದು ತನಗೆ ಒದಗಿದ ಪರಾಜಯವನ್ನೂ ಕೃಷ್ಣಾಂಶನ ಮಹಿಮೆಯನ್ನೂ ಸಹ ತಿಳಿಸಿದನು.

೩೪. ಆಗ ಜಯಚಂದ್ರನು ಇವರುಗಳ ಮಹಿಮೆಯನ್ನು ಪರೀಕ್ಷಿಸುವುದಕ್ಕೋಸ್ಕರ ಒಂದು ಯುಕ್ತಿಮಾಡಿದನು. ಶತ್ರುಗಳ ನೆರಳನ್ನು ಕಂಡೊಡನೆಯೇ ಉದ್ರೇಕಗೊಳ್ಳುವ ಕುವಲಯ ಆಪೀಡ ಎಂಬ ಎರಡು ಯುದ್ಧದ ಆನೆಗಳನ್ನು ಕೃಷ್ಣಾಂಶಾದಿಗಳು ಇಳಿದಿದ್ದ ಶೀತಲವೆಂಬ ಸ್ಥಳದಲ್ಲಿ ಬಿಟ್ಟನು.

ತದಾಽಽಹ್ಲಾದೋದಯೌ ವೀರೌ ಗೃಹೀತ್ವಾ ತೌ ಸ್ವಲೀಲಯಾ ।
ಚಕೃಷತುರ್ಬಲಾತ್ ಪುಚ್ಛೇ ಕ್ರೋಶಮಾತ್ರಂ ಪುನಃಪುನಃ ॥ ೩೫ ॥

ಮೃತೌ ಕುವಲಯಾಪೀಡೌ ದೃಷ್ಟ್ವಾ ರಾಜಾ ಭಯಾತುರಃ ।
ದದೌ ರಾಜಗೃಹಂ ಗ್ರಾಮಂ ತಯೋರರ್ಥೇ ಪ್ರಸನ್ನಧೀಃ ॥ ೩೬ ॥

ಇಷಶುಕ್ಲೇ ತು ಸಂಪ್ರಾಪ್ತೇ ಲಕ್ಷಣೋ ನಾಮ ವೈ ಬಲೀ ।
ನೃಪಾಜ್ಞಯಾ ಯಯೌ ಶೀಘ್ರಂ ತೈಶ್ಚ ದಿಗ್ವಿಜಯಂ ಪ್ರತಿ ॥ ೩೭ ॥

ಸಪ್ತಲಕ್ಷಬಲೈಃ ಸಾರ್ಧಂ ತಾಲನಾದ್ಯೈಶ್ಚ ಸಂಯುತಃ ।
ವಾರಾಣಸೀಂ ಪುರೀಂ ಪ್ರಾಪ್ಯ ರುರೋಧ ನಗರೀಂ ತದಾ ॥ ೩೮ ॥

ರುದ್ರವರ್ಮಾ ಚ ಭೂಪಾಲೋ ಗೌಡವಂಶಯಶಸ್ಕರಃ ।
ಪಂಚಾಯುತೈಃ ಸ್ವಸೈನ್ಯೈಶ್ಚ ಸಾರ್ಧಂ ಯುದ್ಧಾರ್ಥಮಾಪ್ತವಾನ್ ॥ ೩೯ ॥

---

೩೫. ವೀರರಾದ ಆಹ್ಲಾದ ಕೃಷ್ಣಾಂಶ ಇವರುಗಳು ತಮ್ಮ ಪರಾಕ್ರಮದಿಂದ ಅವುಗಳ ಬಾಲವನ್ನು ಹಿಡಿದು ಲೀಲಾಜಾಲವಾಗಿ ದರದರನೆ ಒಂದು ಹರದಾರಿಯ ವರೆಗೆ ಎಳೆದುಕೊಂಡು ಹೋದರು.

೩೬. ಇದರಿಂದ ಆ ಎರಡು ಆನೆಗಳೂ ಹತವಾಗಿ ಹೋದುವು. ಈ ಅದ್ಭುತ ಕೃತ್ಯವನ್ನು ನೋಡಿ ಜಯಚಂದ್ರನು ಹೆದರಿ, ಅವರ ವಾಸಕ್ಕೆ ಒಂದು ಅರಮನೆಯನ್ನೂ ಮತ್ತು ಒಂದು ಗ್ರಾಮವನ್ನೂ ಸಹ ಸಂತೋಷದಿಂದ ಕೊಟ್ಟನು.

೩೭. ಆಶ್ವಯುಜಮಾಸ ಆರಂಭವಾಗುತ್ತಲೆ ಬಲಶಾಲಿಯಾದ ಲಕ್ಷಣ ಕುಮಾರನು, ದಿಗ್ವಿಜಯ ಹೊರಡುವುದಕ್ಕೆ ರಾಜನ ಅಪ್ಪಣೆಯನ್ನು ಪಡೆದು ಕೃಷ್ಣಾಂಶಾದಿಗಳೊಡನೆ ಜಾಗ್ರತೆಯಾಗಿ ಹೊರಟನು.

೩೮. ತಾಲನ ಮೊದಲಾದವರು ತಮ್ಮ ಏಳುಲಕ್ಷ ಸೇನೆಯೊಡನೆ ಇವನನ್ನು ಹಿಂಬಾಲಿಸಿದರು. ಹೀಗೆ ಲಕ್ಷಣಕುಮಾರನು ಪ್ರಯಾಣಮಾಡಿ ಕಾಶೀಪಟ್ಟಣಕ್ಕೆ ಬಂದು ಅದನ್ನು ಮುತ್ತಿದನು.

೩೯. ಗೌಡವಂಶಕ್ಕೆ ಯಶಸ್ಸನ್ನು ಸಂಪಾದಿಸಿದ್ದ ರುದ್ರವರ್ಮನೆಂಬುವನು ಆಗ ಅಲ್ಲಿ ರಾಜನಾಗಿದ್ದನು. ಅವನು ತನ್ನ ಐವತ್ತುಸಾವಿರ ಸೇನೆಯೊಡನೆ ಇವರ ಮೇಲೆ ಯುದ್ಧಕ್ಕೆ ಬಂದನು.

ಯಾಮಮಾತ್ರೇಣ ತಂ ಜಿತ್ವಾ ಷೋಡಶಾಬ್ದಸ್ಯ ವೈ ಕರಂ ।
ಕೋಟಿಮುದ್ರಾಮಯಂ ಪ್ರಾಪ್ಯ ಜಯಚಂದ್ರಾಯ ಚಾರ್ಪಯತ್ ॥೪೦॥

ಮಾಗಧೇಶಂ ಪುನರ್ಜಿತ್ವಾ ನಾಮ್ನಾ ವಿಜಿಯಕಾರಿಣಂ ।
ವಿಂಶತ್ಯಬ್ದಕರಂ ಪ್ರಾಪ್ಯ ಸ್ವಭೂಪಾಯ ಸಮಾರ್ಪಯತ್ ॥ ೪೧ ॥

ಪಂಚಕೋಟೀಶ್ಚ ವೈ ಮುದ್ರಾ ರಾಜತಸ್ಯ ಪುನರ್ಯಯೌ ।
ಅಂಗದೇಶಪತಿಂ ಭೂಪಂ ಮಾಯೂರವರ್ಮಾಣಮುತ್ತಮಂ ॥ ೪೨ ॥

ಸೈನ್ಯಾಯುತಯುತಂ ಜಿತ್ವಾ ವಿಂಶತ್ಯಬ್ದಸ್ಯ ವೈ ಕರಂ ।
ಕೋಟಿಮುದ್ರಾಶ್ಚ ಸಂಪ್ರಾಪ್ಯ ಸ್ವಭೂಪಾಯ ಸಮಾರ್ಪಯತ್ ॥ ೪೩ ॥

---

೪೦. ಒಂದುಜಾವ ಯುದ್ಧ ನಡೆಯುವುದರೊಳಗಾಗಿ ಲಕ್ಷಣನು ಆ ರುದ್ರವರ್ಮನನ್ನು ಜಯಿಸಿ ಹದಿನಾರು ವರ್ಷಗಳಿಂದ ಬರಬೇಕಾದ ಪೊಗದಿಯ ಹಣವಾದ ಒಂದುಕೋಟಿ ಸ್ವರ್ಣಮುದ್ರಿಕೆಯನ್ನು ಅವನಿಂದ ಪಡೆದು ತನ್ನ ದೊಡ್ಡಪ್ಪನಾದ ಜಯಚಂದ್ರನ ಸಮೀಪಕ್ಕೆ ಕಳುಹಿಸಿದನು

೪೧. ಅಲ್ಲಿಂದ ಮುಂದೆ ಹೊರಟು ಮಗಧದೇಶದ ರಾಜನಾದ ವಿಜಯಕಾರಿಯನ್ನು ಜಯಿಸಿ, ಅವನಿಂದ ಇಪ್ಪತ್ತುವರ್ಷದ ಪೊಗದಿಯ ಹಣವನ್ನು ಕೇಳಿದನು.

೪೨. ಅವನು ಸಲ್ಲಿಸಿದ ಐದುಕೋಟಿ ಬೆಳ್ಳಿಯ ಮೊಹರಗಳನ್ನು ಪರಿಗ್ರಹಿಸಿ ಅದನ್ನು ತನ್ನ ರಾಜನ ಸಮೀಪಕ್ಕೆ ಕಳುಹಿಸಿ ಅಲ್ಲಿಂದ ಮುಂದಕ್ಕೆ ಅಂಗದೇಶಕ್ಕೆ ಪ್ರಯಾಣಮಾಡಿದನು.

೪೩. ಅಲ್ಲಿಯ ರಾಜನಾದ ಮಯೂರವರ್ಮನೊಡನೆ ಯುದ್ಧಮಾಡಿ ಅವನ ಹತ್ತುಸಾವಿರ ಸೈನ್ಯವನ್ನು ಜಯಿಸಿ, ಅವನಿಂದ ಇಪ್ಪತ್ತುವರ್ಷದ ಪೊಗದಿಯ ಹಣವಾದ ಒಂದುಕೋಟಿ ನಾಣ್ಯವನ್ನು ಪಡೆದು ಅದನ್ನು ಜಯಚಂದ್ರರಾಜನಿಗೆ ಕಳುಹಿಸಿದನು.

ವಂಗದೇಶಪತಿಂ ವೀರೋ ಲಕ್ಷಣೋ ವೈ ಯುತಶ್ಚ ತೈಃ ।
ಲಕ್ಷಸೈನ್ಯಯುತಂ ಭೂಪಂ ಕಾಲೀವರ್ಮಾಣಮುತ್ತಮಂ ।
ಅಹೋರಾತ್ರೇಣ ತಂ ಜಿತ್ವಾ ಮಹಾಯುದ್ಧೇನ ಲಕ್ಷಣಃ ॥ ೪೪ ॥

ವಿಂಶತ್ಯಬ್ದಕರಂ ಪ್ರಾಪ್ಯ ಕೋಟಿಂ ಸ್ವರ್ಣಮಯಂ ತದಾ ।
ಪ್ರೇಷಯಾಮಾಸ ಭೂಪಾಯ ಜಯಚಂದ್ರಾಯ ವೈ ಮುದಾ ॥ ೪೫ ॥

ಉಷ್ಟ್ರದೇಶಂ ಯಯೌ ವೀರಃ ಪಾಲಿತಂ ತೈರ್ಮಹಾಬಲೈಃ ।
ಧೋಯೀಕವಿಸ್ತತ್ರ ಭೂಪೋ ಲಕ್ಷಸೈನ್ಯಸಮನ್ವಿತಃ ॥ ೪೬ ॥

ಜಗನ್ನಾಥಾಜ್ಞಯಾ ಪ್ರಾಪ್ತಃ ತೈಶ್ಚ ಸಾರ್ಧಂ ರಣೋನ್ಮುಖೇ ।
ತಯೋಶ್ಚಾಸೀನ್ಮಹದ್ಯುದ್ಧಂ ತುಮುಲಂ ರೋಮಹರ್ಷಣಂ ॥ ೪೭ ॥

---

೪೪. ಅನಂತರ ವೀರನಾದ ಲಕ್ಷಣನು ಅವರೊಡನೆ ಅಂಗದೇಶಕ್ಕೆ ಹೋಗಿ ಅಲ್ಲಿಯ ರಾಜನಾದ ಕಾಲೀವರ್ಮನೆಂಬ ರಾಜನನ್ನೂ ಅವನ ಒಂದುಲಕ್ಷ ಸೈನ್ಯವನ್ನೂ ಎದುರಿಸಿ ಕೃಷ್ಣಾಂಶಾದಿಗಳ ಸಹಾಯದಿಂದ ಹಗಲೂ ರಾತ್ರಿ ಹೋರಾಡಿ ಯುದ್ಧ ಮಾಡಿ ಗೆದ್ದನು.

೪೫. ಸೋತುಹೋದ ಕಾಲೀವರ್ಮನಿಂದ ಇಪ್ಪತ್ತುವರ್ಷದ ಪೊಗದಿಹಣವಾದ ಒಂದುಕೋಟಿ ಸ್ವರ್ಣಮುದ್ರಿಕೆಯನ್ನು ಪಡೆದು, ಅದನ್ನು ಸಂತೋಷದಿಂದ ಜಯಚಂದ್ರನ ಬಳಿಗೆ ಕಳುಹಿಸಿದನು.

೪೬. ಬಳಿಕ ವೀರನಾದ ಲಕ್ಷಣನು ಕೃಷ್ಣಾಂಶಾದಿಗಳೊಡನೆ ಉಷ್ಟ್ರ (ಓಢ್ರ) ದೇಶಕ್ಕೆ ದಂಡೆತ್ತಿಹೋದನು. ಅಲ್ಲಿನ ರಾಜನಾದ ಮಹಾಬಲಶಾಲಿ ಧೋಯೀಕವಿಯು ತನ್ನ ಒಂದುಲಕ್ಷ ಸೈನ್ಯದೊಡನೆ ಅವನನ್ನು ಎದುರಿಸಿದನು.

೪೭. ಜಗನ್ನಾಥನ ಆಜ್ಞೆಯಂತೆ ಅವರೊಡನೆ ಯುದ್ಧವು ಆರಂಭವಾಗಿ ನೋಡಿದವರಿಗೆ ರೋಮಾಂಚವಾಗುವಷ್ಟು ಭಯಂಕರವಾದ ಸಂಕುಲಯುದ್ಧವು ಹಗಲೂರಾತ್ರೆ ಅವಿಚ್ಛಿನ್ನವಾಗಿ ನಡೆದು ಕೊನೆಗೆ ಕೃಷ್ಣಾಂಶನು ಆ ರಾಜನನ್ನು ಸೋಲಿಸಿಬಿಟ್ಟನು.

ಅಹೋರಾತ್ರಪ್ರಮಾಣೇನ ಕೃಷ್ಣಾಂಶೇನ ಜಿತೋ ನೃಪಃ ।
ವಿಂಶತ್ಯಬ್ದಕರಂ ಸರ್ವಂ ಕೋಟಿಸ್ವರ್ಣಸಮನ್ವಿತಂ ।
ಸಂಪ್ರಾಪ್ಯ ಪ್ರೇಷಯಾಮಾಸ ಕಾನ್ಯಕುಬ್ಜಾಧಿಪಾಯ ವೈ ॥ ೪೮ ॥

ಪುಂಡ್ರದೇಶಂ ಯಯೌ ವೀರೋ ಲಕ್ಷಣೋ ಬಲವತ್ತರಃ ।
ನೃಪಂ ನಾಗಪತಿಂ ನಾಮ ಪಂಚಾಯುತಬಲೈರ್ಯುತಂ ।
ದಿನಮಾತ್ರೇಣ ತಂ ಜಿತ್ವಾ ಕೋಟಿಮುದ್ರಾ ಗೃಹೀತವಾನ್ ॥ ೪೯ ॥

ಮಹೇಂದ್ರಗಿರಿಮಾಗತ್ಯ ನತ್ವಾ ತಂ ಭಾರ್ಗವಂ ಮುನಿಂ ।
ತತೋ ನಿವೃತ್ಯ ತೇ ಸರ್ವೇ ನೇತ್ರಪಾಲಪುರಂ ಯಯುಃ ॥ ೫೦ ॥

ಯೋಗಸಿಂಹಸ್ತದಾಗತ್ಯ ಕೃಷ್ಣಾಂಶಂ ಪ್ರತಿ ಭಾರ್ಗವ ।
ಕೋಟಿಮುದ್ರಾ ದದೌ ತಸ್ಮೈ ಸಪ್ತರಾತ್ರಮವಾಸಯತ್ ॥ ೫೧ ॥

---

೪೮. ಬಳಿಕ ಇಪ್ಪತ್ತುವರ್ಷಗಳ ಪೂಗದಿಯ ಹಣವಾದ ಒಂದುಕೋಟಿ ವರಹ ಸುವರ್ಣನಾಣ್ಯಗಳನ್ನು ಅವನಿಂದ ಸೆಳೆದುಕೊಂಡು ಅದನ್ನು ಕನ್ಯಾಕುಬ್ಜಾಧಿಪನ ಬಳಿಗೆ ಕಳುಹಿಸಿನು

೪೯. ಹೀಗೆ ಮುಂದಕ್ಕೆ ಪ್ರಯಾಣಮಾಡುತ್ತಾ ಬಲಶಾಲಿಯಾದ ಲಕ್ಷಣನು ಪುಂಡ್ರವೆಂಬ ದೇಶಕ್ಕೆ ಬಂದನು. ಅಲ್ಲಿಯ ರಾಜನಾದ ನಾಗಪತಿಯನ್ನೂ ಅವನ ಐವತ್ತುಸಾವಿರ ಸೇನೆಯನ್ನೂ ಒಂದೇದಿನದ ಯುದ್ಧದಲ್ಲಿ ಗೆದ್ದು, ಅವನಿಂದಲೂ ಒಂದುಕೋಟಿ ನಾಣ್ಯವನ್ನು ಕಿತ್ತುಕೊಂಡನು.

೫೦. ಹಾಗೆಯೇ ಮುಂದಕ್ಕೆ ಪ್ರಯಾಣಮಾಡಿ ಮಹೇಂದ್ರಪರ್ವತಕ್ಕೆ ಬಂದು ಅಲ್ಲಿದ್ದ ಭಾರ್ಗವಮಹರ್ಷಿಯನ್ನು ದರ್ಶನಮಾಡಿ ಸತ್ಕರಿಸಿ ನಮಸ್ಕರಿಸಿ, ಅಲ್ಲಿಂದ ಹಿಂದಿರುಗಿ ಅವರೆಲ್ಲರೂ ನೇತ್ರಪಾಲಪುರಕ್ಕೆ ಬಂದರು.

೫೧. ಆಗ ಅಲ್ಲಿಯ ರಾಜನಾದ ಯೋಗಸಿಂಹನು ಕೃಷ್ಣಾಂಶನ ಬಳಿಗೆ ಬಂದು ಅವನಿಗೆ ಒಂದುಕೋಟಿ ಮುದ್ರೆಗಳನ್ನು ಸಮರ್ಪಿಸಿದುದಲ್ಲದೆ ಏಳು ದಿನಗಳವರೆಗೆ ಅವರನ್ನು ತನ್ನ ನಗರದಲ್ಲಿ ನಿಲ್ಲಿಸಿಕೊಂಡು ಸತ್ಕರಿಸಿದನು.

ವೀರಸಿಂಹಪುರಂ ಜಗ್ಮುಸ್ತೇ ವೀರಾ ಮದವತ್ತರಾಃ ।
ರುರುಧುರ್ನಗರೀಂ ಸರ್ವಾಂ ಹಿಮತುಂಗೋಪರಿ ಸ್ಥಿತಾಂ ॥ ೫೨ ॥

ಪಾಲಿತಾಂ ಗೋರಖಾಖ್ಯೇನ ಯೋಗಿನಾ ಭಕ್ತಕಾರಣಾತ್ ।
ಭೂಪಾನುಜಃ ಪ್ರವೀರಶ್ಚ ಸೈನ್ಯಾಯುತಸಮನ್ವಿತಃ ।
ಕೃತವಾನ್ ದಾರುಣಂ ಯುದ್ಧಂ ಲಕ್ಷಣಸ್ಯೈವ ಸೇನಯಾ ॥ ೫೩ ॥

ಪ್ರತ್ಯಹಂ ಬಲವಾಞ್ಛೂರೋ ಹತ್ವಾ ಶೂರಸಹಸ್ರಕಂ ।
ಸಾಯಂಕಾಲೇ ಗೃಹಂ ಪ್ರಾಪ್ಯ ಯೋಗಿನಂ ತಮಪೂಜಯತ್ ॥ ೫೪ ॥

ಪೂಜನಾತ್ಸ ಪ್ರಸನ್ನಾತ್ಮಾ ಸೈನ್ಯಮುಜ್ಜೀವ್ಯ ಭೂಪತೇಃ ।
ದತ್ವಾ ಗಜಬಲಂ ತೇಭ್ಯಃ ಪುನರ್ಯೋಗಂ ಕರೋತಿ ವೈ ॥ ೫೫ ॥

---

೫೨. ಮದಶಾಲಿಗಳೂ ವೀರರೂ ಆದ ಕೃಷ್ಣಾಂಶ ಮೊದಲಾದವರು ಬಳಿಕ ವೀರಸಿಂಹಪುರಕ್ಕೆ ಬಂದು, ಹಿಮತುಂಗದ ಮೇಲೆ ಇರುವ ಅವನ ನಗರವನ್ನು ಮುತ್ತಿದರು.

೫೩. ಗೋರಖನೆಂಬ ಯೋಗಿವರ್ಯನೊಬ್ಬನು ತನ್ನ ಶಿಷ್ಯನಾದ ವೀರಸಿಂಹನ ಮೇಲಿನ ಪ್ರೀತಿಯಿಂದ ಆ ಪಟ್ಟಣವನ್ನು ರಕ್ಷಿಸುತ್ತಿದ್ದನು. ಆಗ ಆ ರಾಜನ ತಮ್ಮನಾದ ಪ್ರವೀರನು ಹತ್ತುಸಾವಿರ ಸೈನ್ಯದೊಡನೆ ಬಂದು ಲಕ್ಷಣನ ಸೇನೆಯೊಡನೆ ಘೋರವಾಗಿ ಯುದ್ಧಮಾಡಿದನು.

೫೪. ಬಲಿಷ್ಠನಾದ ಪ್ರವೀರನು ಪ್ರತಿನಿತ್ಯವೂ ಹಗಲಿನಲ್ಲಿ ಶತ್ರುಪಕ್ಷದ ಸಾವಿರ ವೀರರನ್ನು ಸಂಹರಿಸಿ ಸಾಯಂಕಾಲವಾಗುತ್ತಲೆ ಆ ಗೋರಖಯೋಗಿಯ ಸಮೀಪಕ್ಕೆ ಹೋಗಿ ಆ ಮಹಾತ್ಮನನ್ನು ಪೂಜಿಸುತ್ತಿದ್ದನು.

೫೫. ಅದರಿಂದ ಆ ಯೋಗಿಯು ಸಂತುಷ್ಟನಾಗಿ ಇವನಕಡೆ ನಾಶವಾಗಿದ್ದ ಸೈನ್ಯವನ್ನೆಲ್ಲಾ ಬದುಕಿಸಿ, ಅವರಿಗೆ ಆನೆಯಷ್ಟು ಶಕ್ತಿಯುಂಟಾಗುವಂತೆ ಅನುಗ್ರಹಿಸಿ ಪುನಃ ಯೋಗನಿರತನಾಗುತ್ತಿದ್ದನು.

ಸಾರ್ಧಮಾಸೋ ಗತಸ್ತತ್ರ ಯುದ್ಧ್ಯತಾಂ ಬಲಶಾಲಿನಾಂ ।
ತದಾ ತೇ ತು ನಿರುತ್ಸಾಹಾಃ ದೇವಸಿಂಹಂ ತಮಬ್ರುವನ್ ॥ ೫೬ ॥

ವಿಜಯೋ ನಃ ಕಥಂ ಭೂಪ ಬ್ರೂಹಿ ನಸ್ತತ್ತ್ವಮಗ್ರತಃ ।
ಇತಿ ಶ್ರುತ್ವಾ ಸ ಹೋವಾಚ ಶೃಣು ಕೃಷ್ಣಾಂಶ ಮೇ ವಚಃ ॥ ೫೭ ॥

ಯೋಗಿನಂ ಗೋರಖಂ ನಾಮ ಪರಾಜಿತ್ಯ ಸ್ವನೃತ್ಯತಃ ।
ಪುನರ್ಯುದ್ಧಂ ಕುರು ತ್ವಂ ವೈ ತತೋ ಜಯಮವಾಪ್ಸ್ಯಸಿ ॥ ೫೮ ॥

ಇತ್ಯುಕ್ತಾಸ್ತೇ ಹಿ ಕೃಷ್ಣಾದ್ಯಾಃ ಕೃತ್ವಾ ಯೋಗಮಯಂ ವಪುಃ ।
ಸ್ಥಾಪಯಿತ್ವಾ ರಣೇ ಸೇನಾಂ ಪಾಲಿತಾಂ ಲಕ್ಷಣೇನ ವೈ ॥ ೫೯ ॥

ಪ್ರಾತಃ ಕಾಲೇ ಯಯುಸ್ತೇ ವೈ ಮಂದಿರಂ ತಸ್ಯ ಯೋಗಿನಃ ।
ಕೃಷ್ಣಾಂಶೋ ನರ್ತಕಶ್ಚಾಸೀದ್ವೇಣುವಾದ್ಯವಿಶಾರದಃ ॥ ೬೦ ॥

---

೫೬. ಹೀಗೆ ಹದಿನೈದು ದಿನಗಳವರೆಗೂ ಬಲಶಾಲಿಗಳಾದ ಇವನ ಸೈನಿಕರು ಸಗ್ಗದೆ ಯುದ್ಧಮಾಡಿದರು. ಲಕ್ಷಣನ ಕಡೆಯ ವೀರರು ಇದನ್ನು ನೋಡಿ, ನಿರುತ್ಸಾಹರಾದರು.

೫೭. ಆಗ ದೇವಸಿಂಹನನ್ನು ಕುರಿತು "ನಮಗೆ ಜಯವುಂಟಾಗಲು ಏನು ಮಾಡಬೇಕು. ಎಂಬುದನ್ನು ಕೂಡಲೆ ತಿಳಿಸು" ಎಂದು ಕೃಷ್ಣಾಂಶನು ಕೇಳಿದನು.

೫೮. ತ್ರಿಕಾಲಜ್ಞಾನಿಯಾದ ದೇವಸಿಂಹನು ಕೃಷ್ಣಾಂಶನನ್ನು ಕುರಿತು "ಅಯ್ಯಾ ವೀರನೇ! ಯೋಗಿಯಾದ ಗೋರಖನನ್ನು ನೀವು ನಿಮ್ಮ ನಾಟ್ಯಾದಿಗಳಿಂದ ಮೆಚ್ಚಿಸಿ ಅನಂತರ ಯುದ್ಧಮಾಡಿದರೆ ನಿಮಗೆ ಜಯಲಭಿಸುವುದು" ಎಂದನು.

೫೯. ದೇವಸಿಂಹನು ಹೀಗೆ ಹೇಳುತ್ತಲೇ ಕೃಷ್ಣಾಂಶ ಮೊದಲಾದವರೆಲ್ಲ ಯೋಗಿಗಳ ವೇಷವನ್ನು ಧರಿಸಿಕೊಂಡರು. ಲಕ್ಷಣನನ್ನು ಸೇನೆಯ ರಕ್ಷಣೆಗೆ ನೇಮಿಸಿದರು.

೬೦. ಬೆಳಗಾಗುತ್ತಲೆ ಅವರೆಲ್ಲರೂ ಆ ಗೋರಖನ ನಿವಾಸಕ್ಕೆ ಹೋದರು, ಕೊಳಲು ಬಾರಿಸುವುದರಲ್ಲಿ ನಿಪುಣನಾದ ಕೃಷ್ಣಾಂಶನು ಆಗ ನರ್ತಕನಾಗಿದ್ದನು.

ದೇವಸಿಂಹೋ ಮೃದಂಗಾಢ್ಯೋ ವೀಣಾಧಾರೀ ಚ ತಾಲನಃ ।
ಕಾಂಸ್ಯಧಾರೀ ತದಾಹ್ಲಾದೋ ಜಗೌ ಗೀತಾಂ ಸನಾತನೀಂ ॥ ೬೧ ॥

ತದರ್ಥಂ ಹೃದಯೇ ಕೃತ್ವಾ ಗೋರಖಸ್ಸರ್ವಯೋಗವಾನ್ ।
ವರಂ ವೃಣುತ ತಾನಾಹ ತೇ ತಚ್ಛ್ರುತ್ವಾಬ್ರುವನ್ವಚಃ ॥ ೬೨ ॥

ನಮಸ್ಯಾಮೋ ವಯಂ ತುಭ್ಯಂ ಯದಿ ದೇಯೋ ವರಸ್ತ್ವಯಾ ।
ದೇಹಿ ಸಂಜೀವಿನೀಂ ವಿದ್ಯಾಮಾಹ್ಲಾದಾಯ ಮಹಾತ್ಮನೇ ॥ ೬೩ ॥

ಇತಿ ಶ್ರುತ್ವಾ ಹೃದಿ ಧ್ಯಾತ್ವಾ ತಾನುವಾಚ ಪ್ರಸನ್ನಧೀಃ ।
ವಿದ್ಯಾಸಂಜೀವಿನೀ ತುಭ್ಯಂ ವರ್ಷಮಾತ್ರಂ ಭವಿಷ್ಯತಿ ।
ತತ್ಪಶ್ಚಾನ್ನಿಷ್ಫಲೀಭೂಯಾಗಮಿಷ್ಯತಿ ಮದಂತಿಕಂ ॥ ೬೪ ॥

---

೬೧. ದೇವಸಿಂಹನು ಮೃದಂಗ ಬಾರಿಸುವನಾದನು. ತಾಲನನು ವೈಣಿಕನಾದನು. ಆಹ್ಲಾದನು ತಾಳವನ್ನು ಹಾಕುತ್ತಿದ್ದನು. ಹೀಗೆ ಎಲ್ಲರೂ ಸಮೂಹವಾಗಿ ಪುರಾತನವಾದ ಗೀತೆಯನ್ನು ಹಾಡಿದರು.

೬೨. ಯೋಗಿಯಾದ ಗೋರಖನು ಇವರ ಸಂಗೀತದ ಅರ್ಥವನ್ನು ಗ್ರಹಿಸಿ ಸಂತೋಷದಿಂದ ಕೃಷ್ಣಾಂಶಾದಿಗಳನ್ನು ಕುರಿತು " ನಿಮಗೆ ಇಷ್ಟವಾದ ವರಗಳನ್ನು ಕೇಳಿ " ಎಂದು ಹೇಳಿದನು.

೬೩. ಆ ಮಾತನ್ನು ಕೇಳಿ ಕೃಷ್ಣಾಂಶ ಮೊದಲಾದವರು " ಅಯ್ಯಾ ಯೋಗೀಶ್ವರನೇ! ನೀನು ನಮಗೆ ವರವನ್ನು ಕರುಣಿಸುವುದಾದರೆ ಮಹಾಪುರುಷನಾದ ಆಹ್ಲಾದನಿಗೆ ಸಂಜೀವಿನೀ ವಿದ್ಯೆಯನ್ನು ಉಪದೇಶಿಸು " ಎಂದು ಕೇಳಿದರು.

೬೪. ಅವರು ಈರೀತಿ ಹೇಳಿದುದನ್ನು ಕೇಳಿ ಆ ಗೋರಖಯೋಗಿಯು ಮನಸ್ಸಿನಲ್ಲಿ ಸ್ವಲ್ಪಹೊತ್ತು ಯೋಚಿಸಿ, ಕೃಷ್ಣಾಂಶಾದಿಗಳನ್ನು ಕುರಿತು " ನಾನು ನಿಮಗೆ ಸಂಜೀವಿನೀ ವಿದ್ಯೆಯನ್ನು ಸಂತೋಷದಿಂದ ಉಪದೇಶಿಸುವೆನು. ಆದರೆ ಅದು ನಿಮಗೆ ಒಂದುವರ್ಷ ಮಾತ್ರ ಸಿದ್ಧಿಯನ್ನುಂಟುಮಾಡುವುದು. ಅನಂತರ ನಿಮಗೆ ಸಿದ್ಧಿಸದೆ ಪುನಃ ನನ್ನನ್ನೇ ಸೇರುವುದು."

ಅದ್ಯಪ್ರಭೃತಿ ಭೋ ವೀರ ಮಯಾ ತ್ಯಕ್ತಮಿದಂ ಜಗತ್ ।
ಯತ್ರ ಭರ್ತೃಹರಿಃ ಶಿಷ್ಯಸ್ತತ್ರ ಗತ್ವಾ ಶಯೇ ಹ್ಯಹಂ ॥ ೬೫ ॥

ಇತ್ಯುಕ್ತ್ವಾಂತರ್ಹಿತೋ ಯೋಗೀ ಜಗ್ಮುಸ್ತೇ ರಣಮೂರ್ಧನಿ ।
ಜಿತ್ವಾ ಪ್ರವೀರಸಿಂಹಂ ಚ ವೀರಸಿಂಹಂ ತಥೈವ ಚ ॥ ೬೬ ॥

ಹತ್ವಾ ತಸ್ಯಾಯುತಂ ಸೈನ್ಯಂ ಲುಂಠಯಿತ್ವಾ ಚ ತದ್ಗೃಹಂ ।
ಕೃತ್ವಾ ದಾಸಮಯಂ ಭೂಪಂ ಲಕ್ಷ್ಮಣಃ ಪ್ರಯಯೌ ಮುದಾ ॥ ೬೭ ॥

ಕೋಶಲಂ ದೇಶಮಾಗತ್ಯ ಜಿತ್ವಾ ತಸ್ಯ ಮಹೀಪತಿಂ ।
ಸೈನ್ಯಾಯುತಂ ಸೂರ್ಯಧರಂ ಕರಯೋಗ್ಯಮಚೀಕರತ್ ॥ ೬೮ ॥

ಷೋಡಶಾಬ್ದಕರಂ ಪ್ರಾಪ್ಯ ಮುದ್ರಾಕೋಟ್ಯಯುತಂ ಮುದಾ ।
ನೈಮಿಷಾರಣ್ಯಮಾಗಮ್ಯ ತತ್ರೋಷುಃ ಸ್ನಾನತತ್ಪರಾಃ ॥ ೬೯ ॥

---

೬೫. "ಅಲ್ಲದೆ ಅಯ್ಯಾ ವೀರನೆ! ಇಂದು ಮೊದಲುಗೊಂಡು ನಾನು ಈ ಸ್ಥಳವನ್ನು ಬಿಟ್ಟು, ನಮ್ಮ ಶಿಷ್ಯನಾದ ಭರ್ತೃಹರಿ ಇರುವಕಡೆ ಹೋಗಿ ಅಲ್ಲಿಯೇ ವಾಸಿಸುವೆನು" ಎಂದು ಹೇಳಿದನು.

೬೬. ಆ ಯೋಗಿಯು ಹೀಗೆ ಹೇಳಿ ಅಂತರ್ಧಾನನಾಗುತ್ತಲೆ, ಕೃಷ್ಣಾಂಶನೇ ಮೊದಲಾದ ವೀರರೆಲ್ಲರೂ ರಣಭೂಮಿಗೆ ಬಂದು ಪ್ರವೀರಸಿಂಹ ವೀರಸಿಂಹರನ್ನು ಎದುರಿಸಿದರು.

೬೭. ಯುದ್ಧದಲ್ಲಿ ಅವರನ್ನು ಜಯಿಸಿ ಅವರ ಹತ್ತುಸಾವಿರ ಸೇನೆಯನ್ನೂ ಧ್ವಂಸಮಾಡಿ, ಅರಮನೆಯನ್ನು ಲೂಟಿಮಾಡಿ ಆ ರಾಜನನ್ನು ತನ್ನ ಅಡಿಯಾಳಾಗಿ ಮಾಡಿಕೊಂಡನು.

೬೮. ಅನಂತರ ಲಕ್ಷ್ಮಣನು ಸಂತೋಷದಿಂದ ಮುಂದುವರಿದು ಕೋಶಲ ದೇಶಕ್ಕೆ ಬಂದು, ಅಲ್ಲಿಯ ರಾಜನಾದ ಸೂರ್ಯಧರನನ್ನೂ ಅವನ ಹತ್ತುಸಾವಿರ ಸೇನೆಯನ್ನೂ ಜಯಿಸಿ ಅವನು ಪ್ರತಿವರ್ಷವೂ ಕಪ್ಪಕೊಡುವಂತೆ ಮಾಡಿದನು.

೬೯. ಅಷ್ಟೇ ಅಲ್ಲದೆ ಹದಿನಾರುವರ್ಷದ ಪೊಗದಿ ಹಣವಾದ ಹತ್ತುಸಾವಿರ ಕೋಟಿ ದ್ರವ್ಯವನ್ನು ಕೂಡಲೇ ತೆಗೆದುಕೊಂಡು ಸಂತೋಷದಿಂದ ನೈಮಿಷಾರಣ್ಯಕ್ಕೆ ಬಂದು ಅಲ್ಲಿ ಪುಣ್ಯತೀರ್ಥಸ್ನಾನಾದಿಗಳಲ್ಲಿ ಆಸಕ್ತರಾಗಿ ಸ್ವಲ್ಪಕಾಲ ನಿಂತರು.

ಹೋಲಿಕಾಯಾ ದಿನೇ ರಮ್ಯೇ ಲಕ್ಷಣೋ ಬಲವತ್ತರಃ ।
ದತ್ವಾ ದಾನಾನಿ ವಿಪ್ರೇಭ್ಯೋ ಮಹೋತ್ಸವಮಕಾರಯತ್ ॥ ೭೦ ॥

ತದಾ ವಯಂ ಚ ಮುನಯಃ ಸಮಾಧಿಸ್ಥಾಶ್ಚ ಭೂಪತಿಃ ।
ಯದಾ ಸ ಲಕ್ಷಣಃ ಪ್ರಾಪ್ತೋ ನೈಮಿಷಾರಣ್ಯಮುತ್ತಮಂ ॥ ೭೧ ॥

ಸ್ನಾತ್ವಾ ಸರ್ವಾಣಿ ತೀರ್ಥಾನಿ ಸಂತರ್ಪ್ಯ ದ್ವಿಜದೇವತಾಃ ।
ಕಾನ್ಯಕುಬ್ಜಪುರಂ ಜಗ್ಮುಶ್ಚೈತ್ರಕೃಷ್ಣಾಷ್ಟಮೀದಿನೇ ॥ ೭೨ ॥

ಇತಿ ತೇ ಕಥಿತಂ ವಿಪ್ರ ಯಥಾ ದಿಗ್ವಿಜಯೋಽಭವತ್ ।
ಶೃಣು ವಿಪ್ರ ಕಥಾಂ ರಮ್ಯಾಂ ಬಲಖಾನಿರ್ಯಥಾ ಮೃತಃ ॥ ೭೩ ॥

ಮಾರ್ಗಕೃಷ್ಣಸ್ಯ ಸಪ್ತಮ್ಯಾಂ ಭೂಮಿರಾಜೋ ಮಹಾಬಲಃ ।
ಮಹೀಪತೇಶ್ಚ ವಾಕ್ಯೇನ ಸಾಮಂತಂ ಪ್ರಾಹ ನಿರ್ಭಯಃ ॥ ೭೪ ॥

---

೭೦. ಮನೋಹರವಾದ ಹೋಳಿಹಬ್ಬದ ದಿನ (ಕಾಮನ ಹುಣಿಮೆಯ ದಿನ) ಬಲಶಾಲಿಯಾದ ಲಕ್ಷಣನು ಬ್ರಾಹ್ಮಣೋತ್ತಮರಿಗೆ ದಾನದಕ್ಷಿಣೆಗಳನ್ನು ಕೊಟ್ಟು ದೊಡ್ಡ ಉತ್ಸವವನ್ನು ಮಾಡಿಸಿದನು.

೭೧. ಆಗ ಮಹರ್ಷಿಗಳಾದ ನಾವು ಸಮಾಧಿಯೋಗದಲ್ಲಿದ್ದೆವು. ಆ ವೇಳೆಯಲ್ಲೇ ರಾಜನಾದ ಲಕ್ಷಣನು ಪವಿತ್ರವಾದ ನೈಮಿಷಾರಣ್ಯಕ್ಕೆ ಬಂದಿದ್ದನು.

೭೨. ಆರೀತಿ ಬಂದ ಆತನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿ, ದೇವಬ್ರಾಹ್ಮಣರನ್ನು ಪೂಜಾದಿಗಳಿಂದ ತೃಪ್ತಿಪಡಿಸಿ ಚೈತ್ರ ಕೃಷ್ಣ ಅಷ್ಟಮಿಯ ದಿನ ಅಲ್ಲಿಂದ ಕನ್ಯಕುಬ್ಜ ಪಟ್ಟಣಕ್ಕೆ ಹೊರಟನು.

೭೩. "ಅಯ್ಯಾ ಶೌನಕನೇ! ಕೇಳು; ಈರೀತಿ ಲಕ್ಷಣನು ಕೃಷ್ಣಾಂಶಾದಿಗಳೊಡನೆ ದಿಗ್ವಿಜಯ ಮಾಡಿದುದನ್ನು ನಿನಗೆ ತಿಳಿಸಿಯಾಯಿತು. ಇನ್ನು ಬಲಖಾನಿಯು ಮರಣಹೊಂದಿದ ಕಥೆಯನ್ನೂ ನಿನಗೆ ವಿವರಿಸುವೆನು" ಎಂದು ಹೇಳಿದನು.

೭೪. ಮಾರ್ಗಶಿರ ಕೃಷ್ಣ ಸಪ್ತಮಿಯ ದಿನ ಬಲಶಾಲಿಯಾದ ಪೃಥ್ವೀರಾಜನು ಮಹೀಪತಿರಾಜನ ಮಾತಿನಂತೆ ಸಾಮಂತವಿಪ್ರನನ್ನು ಕುರಿತು ನಿರ್ಭಯದಿಂದ ಈರೀತಿ ಹೇಳಿದನು.

ಮಯಾ ಶ್ರುತಸ್ತೇ ತನಯಃ ಶಾರದಾವರವರ್ಧಿತಃ ।
ರಕ್ತಬೀಜತ್ವಮಾಪನ್ನಸ್ತಂ ಮೇ ದೇಹಿ ಕೃಪಾಂ ಕುರು    ॥ ೭೫ ॥

ಇತ್ಯುಕ್ತಃ ಸ ತು ಸಾಮಂತಃ ತೇನ ರಾಜ್ಞೇವ ಸತ್ಕೃತಃ ।
ಚಾಮುಂಡಂ ನಾಮ ತನಯಂ ಸಮಾಹೂಯಾಬ್ರವೀದಿದಂ    ॥ ೭೬ ॥

ಪುತ್ರ ತ್ವಂ ನೃಪತೇಃ ಕಾರ್ಯಂ ಸದಾ ಕುರು ರಣಪ್ರಿಯ ।
ಇತಿ ಶ್ರುತ್ವಾ ಪಿತುರ್ವಾಕ್ಯಂ ಸ ವೈ ರಾಜಾನಮಬ್ರವೀತ್    ॥ ೭೭ ॥

ದೇಹ್ಯಾಜ್ಞಾಂ ನೃಪತೇ ಮಹ್ಯಂ ಶೀಘ್ರಂ ಜಯಮವಾಪ್ಸ್ಯಸಿ ।
ಇತಿ ಶ್ರುತ್ವಾ ಸ ಹೋವಾಚ ಬಲಖಾನಿರ್ಮಹಾಬಲಃ    ॥ ೭೮ ॥

---

೭೫. “ಎಲೈ ಸಾಮಂತನೇ! ನಿನ್ನ ಮಗನು ಶಾರದಾದೇವಿಯ ವರವನ್ನು ಪಡೆದು ಅಭಿವೃದ್ಧಿಹೊಂದಿದ್ದಾನೆ. ಅಲ್ಲದೆ ರಕ್ತಬೀಜಾಂಶವನ್ನು ಸಹ ಹೊಂದಿರುವನು (ಎಂದರೆ ಅವನ ರಕ್ತವು ಭೂಮಿಗೆ ಬಿದ್ದ ಒಡನೆ ಅವನಂತೆಯೇ ಇರುವ ಅನೇಕರು ಜನಿಸುವಂತೆ ವರಪಡೆದಿರುವನು.) ಎಂದು ನಾನು ಕೇಳಿದ್ದೇನೆ. ಈಗ ನೀನು ದಯವಿಟ್ಟು ಅವನನ್ನು ನನ್ನ ವಶಪಡಿಸು” ಎಂದು ಹೇಳಿದನು.

೭೬. ಪೃಥ್ವೀರಾಜನು ಹೀಗೆ ಹೇಳುತ್ತಲೆ ಅವನಿಂದ ರಾಜಾರ್ಹವಾದ ಸತ್ಕಾರ ಹೊಂದಿದ ಸಾಮಂತನು ತನ್ನ ಮಗನಾದ ಚಾಮುಂಡನನ್ನು ಕುರಿತು “ವತ್ಸಾ! ಯಾವಾಗಲೂ ಯುದ್ಧಪ್ರಿಯನಾದ ನೀನು ಈಗ ಅಧಿರಾಜನಾದ ಪೃಥ್ವೀರಾಜನ ಕಾರ್ಯವನ್ನು ಸ್ವಲ್ಪ ನಡೆಯಿಸಿಕೊಡು” ಎಂದು ಹೇಳಿದನು.

೭೭. ತಂದೆ ಹೇಳಿದ ಈ ಮಾತನ್ನು ಕೇಳಿ ಆ ಚಾಮುಂಡನು ಪೃಥ್ವೀರಾಜನನ್ನು ಕುರಿತು “ಮಹಾರಾಜರೇ! ನಾನು ಮಾಡತಕ್ಕ ಕಾರ್ಯವು ಯಾವುದು? ಅಪ್ಪಣೆಯಾಗಲಿ; ಜಾಗ್ರತೆ ತಮಗೆ ಜಯಲಭಿಸುವಂತೆ ಮಾಡುವೆನು” ಎಂದು ಹೇಳಿದನು.

೭೮-೭೯. ಪೃಥ್ವೀರಾಜನು ಇದನ್ನು ಕೇಳಿ “ಅಯ್ಯಾ ವೀರನೇ! ಮಹಾಬಲಶಾಲಿಯಾದ ಬಲಖಾನಿಯು ನನ್ನ ಶಿರೀಷವನವನ್ನು ನಾಶಪಡಿಸಿ ಶ್ರೇಷ್ಠವಾದ ಆ

ಮಚ್ಛರೀಷವನಂ ಭಿತ್ವಾ ಗೃಹೀತ್ವಾ ರಾಷ್ಟ್ರಮುತ್ತಮಂ ।
ಸುಸ್ಥಿತೋ ನಿರ್ಭಯೋ ಗೇಹೇ ಬಾಹುಶಾಲೀ ಯತೇಂದ್ರಿಯಃ ॥ ೭೯ ॥

ಯದಿ ತ್ವಂ ಬಲಖಾನಿಂ ಚ ಜಿತ್ವಾ ಮೇಽರ್ಪಯಿಷ್ಯಸಿ !
ಹತ್ವಾ ವಾ ತಸ್ಯ ಸಕಲಂ ರಾಷ್ಟ್ರಂ ತ್ವಯಿ ಭವಿಷ್ಯತಿ ॥ ೮೦ ॥

ಇತ್ಯುಕ್ತ್ವಾ ರಕ್ತಬೀಜಂ ತಂ ಸಮಾಹೂಯ ಬಲಂ ಸ್ವಕಂ ।
ಸಪ್ತಲಕ್ಷಂ ದದೌ ತಸ್ಮೈ ಸ ತತ್ಪ್ರಾಪ್ಯ ಮುದಾ ಯಯೌ ॥ ೮೧ ॥

ಉಷಿತ್ವಾ ತ್ರಿದಿನಂ ಮಾರ್ಗೇ ಶಿರೀಷಾಖ್ಯಮುಪಾಗತಃ ।
ರುರೋಧ ನಗರೀಂ ಸರ್ವಾಂ ಬಲಖಾನೇರ್ಮಹಾತ್ಮನಃ ॥ ೮೨ ॥

ಚಾಮುಂಡಾಗಮನಂ ಶ್ರುತ್ವಾ ಬಲಖಾನಿರ್ಮಹಾಬಲಃ ।
ಪೂಜಯಿತ್ವಾ ಮಹಾಮಾಯಾಂ ದತ್ವಾ ದಾನಾನ್ಯನೇಕಶಃ ।
ಲಕ್ಷಸೈನ್ಯೇನ ಸಹಿತಃ ಪ್ರಯಯೌ ನಗರಾದ್ಬಹಿಃ ॥ ೮೩ ॥

---

ಪ್ರಾಂತ್ಯವನ್ನು ತಾನು ಆಕ್ರಮಿಸಿಕೊಂಡನು. ಬಹು ಪರಾಕ್ರಮಿಯೂ ಜಿತೇಂದ್ರಿಯನೂ ಆದ ಅವನು ಯಾರ ಹೆದರಿಕೆಯೂ ಇಲ್ಲದೆ ಅಲ್ಲಿ ಸುಖವಾಗಿ ವಾಸಿಸುತ್ತಿರುವನು."

೮೦. "ನೀನು ಅವನನ್ನು ಜಯಿಸಿ ಕೈಸೆರೆಹಿಡಿದು ನನಗೆ ಸಮರ್ಪಿಸಿದರೂ ಸರಿ, ಅಥವಾ ಕೊಂದುಹಾಕಿದರೂ ಸರಿ. ಅವನ ರಾಜ್ಯವನ್ನು ನಿನಗೇ ಕೊಡುವೆನು" ಎಂದು ಹೇಳಿದನು.

೮೧. ಈರೀತಿ ಪೃಥ್ವೀರಾಜನು ಹೇಳಿ ತನ್ನ ಹತ್ತುಲಕ್ಷ ಸೈನ್ಯವನ್ನು ಕರೆಯಿಸಿ ಅವನ ವಶಪಡಿಸಿದನು. ಆ ಚಾಮುಂಡನು 'ಹಾಗೆಯೇ ಆಗಲಿ' ಎಂದು ಆ ಸೈನ್ಯ ಗಳನ್ನು ತೆಗೆದುಕೊಂಡು ಸಂತೋಷದಿಂದ ಹೊರಟನು.

೮೨. ಅನಂತರ ಮೂರುದಿನಗಳು ಪೂರ್ತ ಪ್ರಯಾಣಮಾಡಿ ಶಿರೀಷನಗರಿಗೆ ಬಂದು ಮಹಾಪರಾಕ್ರಮಿಯಾದ ಬಲಖಾನಿಯು ಇದ್ದ ಆ ನಗರಕ್ಕೆ ಮುತ್ತಿಗೆ ಹಾಕಿದನು. ಚಾಮುಂಡನು ತನ್ನ ಮೇಲೆ ದಂಡೆತ್ತಿ ಬಂದು ಪಟ್ಟಣವನ್ನು ಮುತ್ತಿಗೆ ಹಾಕಿರುವುದನ್ನು ಬಲಖಾನಿಯು ಕೇಳಿದನು.

೮೩. ಕೂಡಲೆ ಮಹಾಮಾಯಾಸ್ವರೂಪಿಣಿಯಾದ ಜಗದಂಬಿಕೆಯನ್ನು ಪೂಜಿಸಿ, ವಿಪ್ರರಿಗೆ ಸಮೃದ್ಧಿಯಾಗಿ ದಾನಗಳನ್ನು ಕೊಟ್ಟು, ತನ್ನ ಒಂದುಲಕ್ಷ ಸೇನೆ ಯೊಡನೆ ನಗರದ ಹೊರಕ್ಕೆ ಬಂದು ಶತ್ರುವನ್ನು ಎದುರಿಸಿದನು.

ತಸ್ಯಾನುಜೋ ಮಹಾವೀರಃ ಸುಖಖಾನಿರ್ಬಲೈಃ ಸಹ ।
ಹರಿಣೀಂ ತಾಂ ಸಮಾರುಹ್ಯ ಶತ್ರುಸೈನ್ಯಮಚಿಕ್ಷಪತ್ ॥ ೮೪ ॥

ಬಲಖಾನಿಃ ಕಪೋತಸ್ಥೋ ನಾಶಯಿತ್ವಾ ರಿಪೋರ್ಬಲಂ ।
ಲಕ್ಷಸೈನ್ಯಂ ಮುದಾ ಯುಕ್ತಶ್ಚಾಮುಂಡಂ ಪ್ರತಿ ಚಾಗಮತ್ ॥ ೮೫ ॥

ತಯೋಶ್ಚಾಸೀನ್ಮಹಾಯುದ್ಧಂ ಸ್ವಸ್ವಸೈನ್ಯಕ್ಷಯಂಕರಂ ।
ಅಹೋರಾತ್ರಪ್ರಮಾಣೇನ ನಿಹತಾಃ ಕ್ಷತ್ರಿಯಾ ರಣೇ ॥ ೮೬ ॥

ಪ್ರಾತಃಕಾಲೇ ತು ಸಂಪ್ರಾಪ್ತೇ ಕೃತ್ವಾ ಸ್ನಾನಾದಿಕಾಃ ಕ್ರಿಯಾಃ ।
ಜಗ್ಮತುಸ್ತೌ ರಣೇ ವೀರೌ ಧನುರ್ಬಾಣವಿಶಾರದೌ ॥ ೮೭ ॥

ರಥಸ್ಥೋ ಬಲಖಾನಿಶ್ಚ ಚಾಮುಂಡೋ ಗಜಪೃಷ್ಠಗಃ ।
ಚಕ್ರತುಸ್ತುಮುಲಂ ಘೋರಂ ನರವಿಸ್ಮಯಕಾರಕಂ ॥ ೮೮ ॥

---

೮೪. ಅವನ ಸಹೋದರನೆನಿಸಿದ ಮಹಾವೀರನಾದ ಸುಖಖಾನಿಯು ಹರಿಣಿ ಎಂಬ ತನ್ನ ಅಶ್ವವನ್ನೇರಿ ಸೇನೆಯೊಡನೆ ಹೊರಟು ಶತ್ರುಸೈನ್ಯವನ್ನು ನಾಶಮಾಡ ತೊಡಗಿದನು.

೮೫. ಬಲಖಾನಿಯು ಕಪೋತವೆಂಬ ತನ್ನ ಕುದುರೆಯನ್ನೇರಿ ಶತ್ರುಗಳ ಕಡೆಯ ಒಂದುಲಕ್ಷ ಸೇನೆಯನ್ನು ಧ್ವಂಸಮಾಡಿ ಸಂತೋಷದಿಂದ ಚಾಮುಂಡನನ್ನು ಎದುರಿಸಿದನು.

೮೬. ಅವರಿಬ್ಬರಿಗೂ ಪರಸ್ಪರ ಘೋರಯುದ್ಧವು ನಡೆದು, ಎರಡು ಕಡೆ ಯಲ್ಲಿಯೂ ಬಹು ಸೈನಿಕರು ಹತರಾದರು. ಹಗಲೂರಾತ್ರಿ ಎಡೆಬಿಡದೆ ಯುದ್ಧ ನಡೆದು ಅನೇಕ ಕ್ಷತ್ರಿಯರು ಅಂದಿನ ಯುದ್ಧದಲ್ಲಿ ಮಡಿದರು.

೮೭. ಬೆಳಗಾಗುತ್ತಲೆ ತಮ್ಮ ಸ್ನಾನಾದಿಕರ್ಮಗಳನ್ನು ನೆರವೇರಿಸಿಕೊಂಡು ಧನುರ್ವಿದ್ಯಾವಿಶಾರದರಾದ ಆ ವೀರರಿಬ್ಬರೂ ಯುದ್ಧಕ್ಕೆ ಬಂದರು.

೮೮. ಆ ವೀರರಿಬ್ಬರಲ್ಲಿ ಬಲಖಾನಿಯು ರಥದ ಮೇಲೂ, ಚಾಮುಂಡನು ಆನೆಯ ಮೇಲೂ, ಕುಳಿತಿದ್ದರು. ನೋಡುತ್ತಿರುವವರಿಗೆ ಆಶ್ಚರ್ಯವುಂಟಾಗುವಂತೆ ಅವರು ಪರಸ್ಪರ ಘೋರ ಯುದ್ಧಮಾಡಿದರು.

ಬಾಣೈರ್ಬಾಣಾಂಶ್ಚ ಸಂಛಿದ್ಯ ದೇವೀಭಕ್ತೌ ಚ ತೌ ಮುದಾ ।
ಅನ್ಯೋನ್ಯಂ ವಾಹನೇ ಹತ್ವಾ ಭೂತಲತ್ವಮುಪಾಗತೌ ।
ಖಡ್ಗಚರ್ಮಧರೌ ವೀರೌ ಯುಯುಧಾತೇ ಪರಸ್ಪರಂ ॥ ೮೯ ॥

ಯಾವಂತೋ ರಕ್ತಬೀಜಾಂಗಾತ್ ಸಂಜಾತಾ ರಕ್ತಬಿಂದವಃ ।
ತಾವಂತಃ ಪುರುಷಾ ಜಾತಾ ರಕ್ತಬೀಜಪರಾಕ್ರಮಾಃ ॥ ೯೦ ॥

ತೈಶ್ಚ ವೀರೈರ್ಮದೋನ್ಮತ್ತೈರ್ಬಲಖಾನಿಃ ಸಮಂತತಃ ।
ಸಂರುದ್ಧೋಽಭೂದ್ದ್ವಿಜಶ್ರೇಷ್ಠ ಶಾರದಾಂ ಶರಣಂ ಯಯೌ ॥ ೯೧ ॥

ಏತಸ್ಮಿನ್ನಂತರೇ ವೀರಃ ಸುಖಖಾನಿಸ್ತತೋಽನುಜಃ ।
ಆಗ್ನೇಯಂ ಶರಮಾದಾಯ ರಕ್ತಬೀಜಾನತಾಡಯತ್ ॥ ೯೨ ॥

---

೮೯. ದೇವೀಭಕ್ತರಾದ ಇವರಿಬ್ಬರೂ ಉತ್ಸಾಹದಿಂದ ಯುದ್ಧಮಾಡುತ್ತಾ ತನ್ನ ಬಾಣಗಳಿಂದ ಎದುರಾಳಿಯ ಬಾಣಗಳನ್ನು ಖಂಡಿಸಿ, ಒಬ್ಬರ ವಾಹನವನ್ನು ಮತ್ತೊಬ್ಬರು ನಾಶಪಡಿಸಿ, ಬಳಿಕ ಇಬ್ಬರೂ ಭೂಮಿಯ ಮೇಲೆ ನಿಂತು ಯುದ್ಧ ಮಾಡತೊಡಗಿದರು.

೯೦. ಕತ್ತಿ, ಗುರಾಣಿಗಳನ್ನು ಹಿಡಿದು ಮಹಾವೀರರಿಬ್ಬರೂ ಪರಸ್ಪರ ಯುದ್ಧ ಮಾಡುತ್ತಿರಲು ರಕ್ತಬೀಜಾಂಶನಾದ ಚಾಮುಂಡನ ಅವಯವದಿಂದ ರಕ್ತದ ಎಷ್ಟು ಬಿಂದುಗಳು ಕೆಳಗೆ ಬಿದ್ದವೋ ಅಷ್ಟುಜನ ಈ ಚಾಮುಂಡನಷ್ಟೇ ಪರಾಕ್ರಮಿಗಳಾದ ವೀರರು ಉತ್ಪನ್ನರಾದರು.

೯೧. ಹಾಗೆ ಉತ್ಪತ್ತಿಯಾದ ಮಹಾವೀರರು ರಣಮದದಿಂದ ಬಲಖಾನಿ ಯನ್ನು ಸುತ್ತಲೂ ಆವರಿಸಿ ಯುದ್ಧಮಾಡತೊಡಗಿದರು. ಆಗ ಬಲಖಾನಿಯು ದಿಕ್ಕುತೋರದೆ ಶಾರದಾದೇವಿಯನ್ನೇ ಮರೆಹೊಕ್ಕನು.

೯೨. ಈ ಸಮಯದಲ್ಲಿ ಬಲಖಾನಿಯ ತಮ್ಮನೂ, ವೀರನೂ ಆದ ಸುಖಖಾನಿಯು ಆಗ್ನೇಯಾಸ್ತ್ರವನ್ನು ಪ್ರಯೋಗಮಾಡಿ ಆ ರಕ್ತಬೀಜೋತ್ಪನ್ನರಾದ ಪುರುಷರನ್ನೆಲ್ಲಾ ಸುಟ್ಟುಹಾಕಿದನು.

ಪುರಾ ತು ಸುಖಖಾನಿಶ್ಚ ಹವ್ಯೈರ್ದೇವಂ ಚ ಪಾವಕಂ ।
ಪಂಚಾಬ್ದಾನ್ ಪೂಜಯಾಮಾಸ ತದಾ ತುಷ್ಟಸ್ಸ್ವಯಂ ಪ್ರಭುಃ ॥ ೯೩ ॥

ಪಾವಕೀಯಂ ಶರಂ ರಮ್ಯಂ ಶತ್ರುಸಂಹಾರಕಾರಕಂ ।
ದದೌ ತಸ್ಮೈ ಪ್ರಸನ್ನಾತ್ಮಾ ತೇನಾಸಾವಭವಜ್ಜಯೀ ॥ ೯೪ ॥

ಬಲಖಾನಿಸ್ತು ಬಲವಾನ್ ದೃಷ್ಟ್ವಾ ಶತ್ರುವಿನಾಶನಂ ।
ಪರಾಜಿತಂ ಚ ಚಾಮುಂಡಂ ಬಧ್ವಾ ಗೇಹಮುಪಾಗಮತ್ ॥ ೯೫ ॥

ಕೃತ್ವಾ ನಾರೀಮಯಂ ವೇಷಂ ಸ ಭೀತೋ ಬ್ರಹ್ಮಹತ್ಯಯಾ ।
ದೋಲಾಮಾರೋಪ್ಯ ಬಲವಾನ್ ಪ್ರೇಷಯಾಮಾಸ ಶತ್ರವೇ ॥ ೯೬ ॥

ಹತಶೇಷಂ ಪಂಚಲಕ್ಷಂ ಸೈನ್ಯಂ ಗತ್ವಾ ಚ ದೇಹಲೀಂ ।
ವೃತ್ತಾಂತಂ ಕಥಯಾಮಾಸ ಯಥಾ ಜಾತೋ ಮಹಾರಣಃ ॥ ೯೭ ॥

---

೯೩. ಹಿಂದೆ ಸುಖಖಾನಿಯು ಐದು ವರ್ಷಗಳಕಾಲ ಅಗ್ನಿಪುರುಷನನ್ನು ಹವಿಸ್ಸುಗಳಿಂದ ಪೂಜಿಸಿ ಸಂತೋಷಗೊಳಿಸಿದ್ದನು. ಸಮರ್ಥನಾದ ಅಗ್ನಿದೇವನು ಆಗ ಅವನ ಆರಾಧನೆಯಿಂದ ಸಂತುಷ್ಟನಾದನು.

೯೪. ಕೂಡಲೇ ಆ ಭಕ್ತನಿಗೆ ಶತ್ರುಸಂಹಾರಕರವೂ ದಿವ್ಯವೂ ಆದ ಆಗ್ನೇಯಾಸ್ತ್ರವನ್ನು ಸಂತೋಷದಿಂದ ಕೊಟ್ಟಿದ್ದನು. ಅದರ ಪ್ರಭಾವದಿಂದ ಈಗ ಸುಖಖಾನಿಯು ಜಯಶೀಲನಾದನು.

೯೫. ಬಳಿಕ ಶೂರನಾದ ಬಲಖಾನಿಯು, ಶತ್ರುವು ನಾಶವಾದುದನ್ನು ನೋಡಿ, ಸೋತುಹೋಗಿರುವ ಚಾಮುಂಡನನ್ನು ಬಂಧಿಸಿ ಶಿಬಿರಕ್ಕೆ ಎಳೆತಂದನು.

೯೬. ಬ್ರಹ್ಮಹತ್ಯಾ ಭಯದಿಂದ ಅವನನ್ನು ಕೊಲ್ಲುವುದಕ್ಕೆ ಹಿಂಜರಿದು, ಅವಮಾನಪಡಿಸುವುದಕ್ಕಾಗಿ ಅವನಿಗೆ ಹೆಣ್ಣುವೇಷವನ್ನು ಹಾಕಿ, ಮೇನೆಯಲ್ಲಿ ಕೂರಿಸಿ ಶತ್ರುವಾದ ಪೃಥ್ವೀರಾಜನ ಬಳಿಗೆ ಕಳುಹಿಸಿದನು.

೯೭. ಕಳೆದುಳಿದ ಐದುಲಕ್ಷ ಸೇನೆಯವರು ದೆಹಲಿಗೆ ಹಿಂತಿರುಗಿಬಂದು ಮಹಾಯುದ್ಧದಲ್ಲಿ ನಡೆದ ಸಂಗತಿಗಳನ್ನೆಲ್ಲಾ ಪೃಥ್ವೀರಾಜನಿಗೆ ವಿವರಿಸಿ ಹೇಳಿದರು.

ನಾರೀವೇಷಂ ಚ ಚಾಮುಂಡಂ ಸ ದೃಷ್ಟ್ವಾ ಚ ಮಹೀಪತಿಃ ।
ಕ್ರೋಧಾವಿಷ್ಟಶ್ಚ ಬಲವಾನ್ ಮಹೀಪತಿಮುವಾಚ ಹ ॥ ೯೮ ॥

ಕಥಂ ಜಯೋ ಮೇ ಭವಿತಾ ಸುಖಖಾನೌ ಚ ಜೀವಿತೇ ।
ಶ್ರುತ್ವಾ ಮಹೀಪತಿಃ ಪ್ರಾಹ ಛದ್ಮನಾ ಕಾರ್ಯಮಾಕುರು ॥ ೯೯ ॥

ಬ್ರಾಹ್ಮೀ ಮಾತಾ ತಯೋರ್ಜ್ಞೇಯಾ ಶುದ್ಧಾ ಸೈವ ಪತಿವ್ರತಾ ।
ದೂತೀಭಿಃ ಕಾರಣಂ ಜ್ಞಾತ್ವಾ ಪುನರ್ಯುದ್ಧಂ ಕುರುಷ್ವ ಭೋಃ ॥ ೧೦೦ ॥

ಇತಿ ಶ್ರುತ್ವಾ ಮಹೀರಾಜೋ ದೂತೀಸ್ತಾಶ್ಛಲಕೋವಿದಾಃ ।
ಆಹೂಯ ಪ್ರೇಷಯಾಮಾಸ ಬಲಖಾನಿಗೃಹಂ ಪ್ರತಿ ॥ ೧೦೧ ॥

---

೯೮. ಪೃಥ್ವೀರಾಜನು ಸ್ತ್ರೀವೇಷದಲ್ಲಿ ಬಂದ ಚಾಮುಂಡನನ್ನು ನೋಡಿ ರೋಷಾವೇಶದಿಂದ ಕಿಡಿಕಿಡಿಯಾದನು. ಇದುವರೆಗೂ ಮಹಾಬಲಶಾಲಿ ಎನಿಸಿದ್ದ ಅವನು ತನಗಾದ ಅವಮಾನಕ್ಕಾಗಿ ನೊಂದು ಮಹೀಪತಿರಾಜನನ್ನು ಕರೆಸಿ ಇಂತೆಂದನು.

೯೯. "ಸುಖಖಾನಿಯು ಜೀವಿತನಾಗಿರುವವರೆಗೆ ನನಗೆ ಜಯದಾಸೆ ಎಲ್ಲಿ ಬಂತು?" ಎಂದು ಖೇದದಿಂದ ಹೇಳಿದನು. ಮಹೀಪತಿರಾಜನು ಇದನ್ನು ಕೇಳಿ ಪೃಥ್ವೀರಾಜನನ್ನು ಕುರಿತು "ಇಂತಹ ಸಂದರ್ಭದಲ್ಲಿ ಮೋಸದಿಂದಲಾದರೂ ಕಾರ್ಯವನ್ನು ಸಾಧಿಸಿಕೊಳ್ಳಬೇಕು."

೧೦೦. "ಸುಖಖಾನಿ, ಬಲಖಾನಿ ಇವರಿಬ್ಬರಿಗೂ ಬ್ರಾಹ್ಮೀದೇವಿಯೇ ತಾಯಿಯು. ಆಕೆಯು ಪರಿಶುದ್ಧೆಯಾದ ಮಹಾಪತಿವ್ರತೆ. ಗೂಢಚಾರಿಣಿಯರಾದ ದೂತಿಯರಿಂದ ಇವರ ಗುಟ್ಟನ್ನು ತಿಳಿದುಕೊಂಡು ಅವರೊಡನೆ ಪುನಃ ಒಂದಾವೃತ್ತಿ ಯುದ್ಧಮಾಡು" ಎಂದನು.

೧೦೧. ಈ ಮಾತನ್ನು ಕೇಳಿ ಪೃಥ್ವೀರಾಜನು ಮೋಸದಲ್ಲಿ ನಿಪುಣೆಯರಾದ ದೂತಿಯರನ್ನು ಕರೆಯಿಸಿ ಬಲಖಾನಿಯ ಅರಮನೆಗೆ ಹೋಗಿ ಗುಪ್ತವೇಷದಿಂದಿದ್ದು ಅಲ್ಲಿ ಬ್ರಾಹ್ಮೀದೇವಿಯಿಂದ ಅವರ ವಿಷಯವನ್ನು ತಿಳಿದುಬರುವಂತೆ ಕಳುಹಿಸಿದನು.

ಬ್ರಾಹ್ಮಣ್ಯಸ್ತಾಸ್ತದಾ ಭೂತ್ವಾ ಬಲಖಾನಿಗೃಹಂ ಯಯುಃ ।
ಸಸುತಾಂ ತಾಂ ಪ್ರಶಸ್ಯಾಶು ಪಪ್ರಚ್ಛುರ್ವಿನಯಾನ್ವಿತಾಃ ॥ ೧೦೨ ॥

ತವ ಪುತ್ರೌ ಮಹಾವೀರೌ ದಿಷ್ಟ್ಯಾ ಶತ್ರುಕ್ಷಯಂಕರೌ ।
ತಯೋರ್ಮೃತ್ಯುಃ ಕಥಂ ಭೂಯಾಜ್ಜೀವತಾಂ ಶರದಾಂ ಶತಂ ॥ ೧೦೩ ॥

ತದಾ ಬ್ರಾಹ್ಮೀ ವಚಃ ಪ್ರಾಹ ಪಾವಕೀಯಃ ಶರಃ ಶುಭಃ ।
ಸುಖಖಾನೇರ್ಜೀವಕರೋ ಬಲಖಾನೇಃ ಪದಾಹ್ವಕಃ ॥ ೧೦೪ ॥

ಇತಿ ಜ್ಞಾತ್ವಾ ತು ತಾ ದೂತ್ಯಃ ಪ್ರಯಯುರ್ದೇಹಲೀಂ ಪ್ರತಿ ।
ಕಥಯಿತ್ವಾ ನೃಪಸ್ಯಾಗ್ರೇ ಧನಂ ಪ್ರಾಪ್ಯ ಗೃಹಂ ಯಯುಃ ॥ ೧೦೫ ॥

---

೧೦೨. ಆ ದೂತಿಯರು ಬ್ರಾಹ್ಮಣಸ್ತ್ರೀಯರ ವೇಷವನ್ನು ಧರಿಸಿ ಬಲಖಾನಿಯ ಅರಮನೆಗೆ ಬಂದರು. ಹೀಗೆ ಬಂದ ಅವರು ಮಕ್ಕಳೊಡನೆ ಕುಳಿತಿದ್ದ ಬ್ರಾಹ್ಮೀದೇವಿಯನ್ನು ಬಹುವಾಗಿ ಹೊಗಳಿ, ವಿನಯದಿಂದ ಮಾತಾಡತೊಡಗಿದರು.

೧೦೩. "ಮಹಾಶೂರರಾದ ನಿನ್ನ ಮಕ್ಕಳಿಬ್ಬರೂ ಅದೃಷ್ಟಶಾಲಿಗಳು ಶತ್ರುಗಳನ್ನು ಎದುರಿಸಿ ಸಂಹಾರಮಾಡುತ್ತಿರುವರು. ಅವರಿಬ್ಬರಿಗೂ ಮೃತ್ಯುಸಂಘಟನೆ ಎಂದರೇನು ? ನೂರುವರ್ಷ ಅವರು ಸುಖವಾಗಿ ಬದುಕಿರಲಿ" ಎಂದು ಹೇಳಿದರು.

೧೦೪. ಆಗ ಬ್ರಾಹ್ಮೀದೇವಿಯು "ಮೃತ್ಯುವು ಎಲ್ಲರಿಗೂ ಎಂದಾದರೂ ಒದಗಲೇಬೇಕು ಆದರೆ ಶುಭಕರವಾದ ಆಗ್ನೇಯಾಸ್ತ್ರವು ನಮ್ಮ ಸುಖಖಾನಿಗೆ ಎಂಥ ಎಡರಿನಲ್ಲೂ ಜೀವವುಳಿಸುವುದು. ಹಾಗೆಯೇ ಪದಕವೆಂಬುದು ನಮ್ಮ ಬಲಖಾನಿಯ ಜೀವವನ್ನುಳಿಸುವುದು" ಎಂದು ಹೇಳಿದಳು.

೧೦೫. ಬ್ರಾಹ್ಮೀದೇವಿಯು ಈರೀತಿ ಹೇಳಿದ್ದರ ಅಭಿಪ್ರಾಯವನ್ನು ಆ ದೂತಿಯರು ಗ್ರಹಿಸಿಕೊಂಡು ಅಲ್ಲಿಂದ ಹೊರಟು ದೆಹಲಿಗೆ ಬಂದು, ರಾಜಸನ್ನಿಧಿಯಲ್ಲಿ ಅವರ ಗುಟ್ಟನ್ನು ತಿಳಿಸಿ, ರಾಜನಿಂದ ತುಂಬಾ ಹಣವನ್ನು ಬಹುಮಾನ ಪಡೆದು ತಮ್ಮ ತಮ್ಮ ಮನೆಗೆ ಹೋದರು.

ಮಹೀರಾಸ್ತು ತಚ್ಛ್ರುತ್ವಾ ಮಹಾದೇವಮುಮಾಪತಿಂ ।
ಪಾರ್ಥಿವೈಃ ಪೂಜನಂ ಚಕ್ರೇ ಸಹಸ್ರದಿವಸಾನ್ಮುದಾ ॥ ೧೦೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಚತುರ್ವಿಂಶೋऽಧ್ಯಾಯಃ



---

೧೦೬. ಪೃಥ್ವೀರಾಜನು ಈ ಒಳಗುಟ್ಟನ್ನು ತಿಳಿದುಕೊಂಡು ಆದಕ್ಕೆ ಪ್ರತ್ಯಸ್ತ್ರವನ್ನು ಪಡೆಯಬೇಕೆಂದು ಮಹಾದೇವನಾದ ಪಾರ್ವತೀಪತಿಯನ್ನು ಪಾರ್ಥಿವಲಿಂಗ ಪೂಜಾವಿಧಾನದಿಂದ ಸಾವಿರದಿನಗಳ ಪರ್ಯಂತ ಸಂತೋಷದಿಂದ ಪೂಜಿಸಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಪಂಚವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಷಡ್ವಿಂಶಾಬ್ದೇ ಚ ಕೃಷ್ಣಾಂಶೇ ಯಥಾ ಜಾತಂ ತಥಾ ಶೃಣು ।
ಮುನೇ ಬಿಂದುಸರೋ ನಾಮ ದಕ್ಷಿಣಸ್ಯಾಂ ದಿಶಿ ಸ್ಥಿತಂ ॥ ೧ ॥

ತಸ್ಯ ತೀರೇಽವಸದ್ಗ್ರಾಮೋ ಯೋಜನಾಯಾಮಸಂಯುತಃ ।
ನಾಮ್ನಾ ಬಿಂದುಗಡೋ ದುರ್ಗೋ ವರ್ಣಧರ್ಮಪ್ರವರ್ತಕಃ ॥ ೨ ॥

ತಸ್ಮಿನ್ ಗ್ರಾಮೇಽವಸದ್ಭೂಪೋ ವಿಷ್ವಕ್ಸೇನಾನ್ವಯೋದ್ಭವಃ ।
ಶಾರದಾನಂದನೋ ನಾಮ ಬ್ರಹ್ಮಧ್ಯಾನಪರಾಯಣಃ ॥ ೩ ॥

---

### ಇಪ್ಪತ್ತೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಅಯ್ಯಾ ಶೌನಕನೇ! ಕೃಷ್ಣಾಂಶನಿಗೆ ಇಪ್ಪತ್ತಾರು ವರ್ಷವಾದ ಮೇಲೆ ನಡೆದ ವೃತ್ತಾಂತವನ್ನು ಹೇಳುವೆನು ಕೇಳು ದಕ್ಷಿಣ ಪ್ರಾಂತದಲ್ಲಿ ಬಿಂದುಸರವೆಂಬ ಒಂದು ಸರಸ್ಸು ಇದ್ದಿತು.

೨. ಆ ಸರೋವರದ ದಡದಲ್ಲಿ ಒಂದು ಯೋಜನವಿಸ್ತೀರ್ಣವುಳ್ಳ ಬಿಂದುಗಡ ವೆಂಬ ಗ್ರಾಮವಿದ್ದಿತು. ಆ ದುರ್ಗವು ಸಕಲವರ್ಣದ ಜನರಿಗೂ ಆಶ್ರಯವಾಗಿದ್ದಿತು.

೩. ಆ ಗ್ರಾಮದಲ್ಲಿ ವಿಷ್ವಕ್ಸೇನವಂಶದಲ್ಲಿ ಜನಿಸಿದ ಶಾರದಾನಂದನನೆಂಬ ರಾಜನು ಆಳುತ್ತಿದ್ದನು. ಅವನು ಸದಾ ಬ್ರಹ್ಮಧ್ಯಾನದಲ್ಲಿ ಮಗ್ನನಾಗಿರುತ್ತಿದ್ದನು.

ಬ್ರಹ್ಮಚರ್ಯಪ್ರಭಾವೇಣ ತದ್ವೀರ್ಯಂ ಶಿರಸಿ ಸ್ಥಿತಂ ।
ಅತಃ ಸ ಕಾಮಪಾಲಾಖ್ಯೋ ಪ್ರಥಿತೋಽಭೂನ್ಮಹೀತಲೇ ॥ ೪ ॥

ಯಜ್ಞೈಃ ಸಂಪೂಜಯಾಮಾಸ ಸುರಜ್ಯೇಷ್ಠಂ ಪ್ರಜಾಪತಿಂ ।
ಯಜ್ಞಾಂಶಭುಕ್ತಮಾತ್ರೇಣ ರಾಜ್ಞೀ ಗರ್ಭಮುಪಾದಧೌ ॥ ೫ ॥

ದಶಮಾಸಾಂತರೇ ಜಾತಾ ಕನ್ಯಾ ಸರ್ವಗುಣಾಲಯಾ ।
ಪದ್ಮಿನೀನಾಮ ವಿಖ್ಯಾತಾ ಸರ್ವಶೋಭಾಸಮನ್ವಿತಾ ॥ ೬ ॥

ದ್ವಾದಶಾಬ್ದವಯಃಪ್ರಾಪ್ತಾ ಬಭೂವ ವರವರ್ಣಿನೀ ।
ಪದ್ಮಾಕರೋ ಭೂಪಸುತೋ ಮಹೀರಾಜಪದಾನುಗಃ ॥ ೭ ॥

ಪಿತುರಾಜ್ಞಾನುಸಾರೇಣ ಭೂಪಾನಾಹೂಯ ಸತ್ವರಂ ।
ಸ್ವಯಂವರಂ ಭಗಿನ್ಯಾಶ್ಚ ಕಾರಯಾಮಾಸ ವೈ ಮುದಾ ॥ ೮ ॥

---

೪. ಅವನು ತನ್ನ ಬ್ರಹ್ಮಚರ್ಯದ ಮಹಿಮೆಯಿಂದ ತನ್ನ ವೀರ್ಯವನ್ನು ಶಿರಸ್ಸಿನಲ್ಲಿ ಧರಿಸಿದ್ದನು. ಆ ಕಾರಣದಿಂದ ಭೂಮಂಡಲದಲ್ಲಿ ಅವನಿಗೆ ಕಾಮಪಾಲ ನೆಂಬ ಹೆಸರು ಪ್ರಸಿದ್ಧಿಯಾಯ್ತು.

೫. ಈ ಕಾಮಪಾಲನು ಅನೇಕ ಯಜ್ಞಗಳನ್ನು ಮಾಡಿ ದೇವಶ್ರೇಷ್ಠನಾದ ಬ್ರಹ್ಮನನ್ನು ತೃಪ್ತಿಪಡಿಸಿದನು. ಆ ಯಜ್ಞಾಂಶದ ಹವಿಷ್ಯಾನ್ನ ಸೇವನೆಯಿಂದ ಅವನ ಪತ್ನಿಯು ಗರ್ಭವನ್ನು ಧರಿಸಿದಳು.

೬. ಹತ್ತು ತಿಂಗಳಾದ ಮೇಲೆ ಅವಳಿಗೆ ಸಕಲ ಗುಣಗಳಿಗೂ ಆಶ್ರಯಳಾದ ಒಬ್ಬ ಕನ್ಯೆ ಹುಟ್ಟಿದಳು. ಸರ್ವಾಲಂಕಾರಶೋಭಿತೆಯಾದ ಈ ಕನ್ಯೆಗೆ ಪದ್ಮಿನಿ ಎಂಬ ಹೆಸರು ಪ್ರಸಿದ್ಧಿಯಾಯ್ತು.

೭. ಈ ಪದ್ಮಿನಿಗೆ ಹನ್ನೆರಡು ವರ್ಷವಾಗುತ್ತಲೇ ಮದುವೆಗೆ ಅರ್ಹಳಾದಳು. ಈ ರಾಜನ ಮಗನಾದ ಪದ್ಮಾಕರನು ಪೃಥ್ವೀರಾಜನ ಸಾಮಂತನಾಗಿದ್ದನು.

೮. ಇವನು ತಂದೆಯ ಅಪ್ಪಣೆಯನ್ನು ಪಡೆದು ವಿವಾಹಾರ್ಹರಾದ ಅನೇಕ ರಾಜರುಗಳನ್ನು ಜಾಗ್ರತೆ ಕರೆಯಿಸಿ ಸಂತೋಷದಿಂದ ತನ್ನ ಸಹೋದರಿಯ ಸ್ವಯಂವರವನ್ನೇರ್ಪಡಿಸಿದನು.

ನಾನಾದೇಶ್ಯಾ ಯಯುರ್ಭೂಪಾಃ ಮುಖ್ಯಶೂರಸಮನ್ವಿತಾಃ ।
ಸಹಾಹ್ಲಾದೈಶ್ಚತುರ್ವೀರೈರ್ಲಕ್ಷಣಃ ಪಿತುರಾಜ್ಞಯಾ ॥ ೯ ॥

ಯಯೌ ಬಿಂದುಗಡಂ ಗ್ರಾಮಂ ಸ್ಥಿತೋ ಯತ್ರ ಮಹೋತ್ಸವಃ ।
ಮಹೀರಾಜಸ್ತು ಬಲವಾನ್ ದೃಷ್ಟ್ವಾ ಲಕ್ಷಣಮಾಗತಂ ॥ ೧೦ ॥

ಸ್ವಸೇನಾಂ ಸ್ಥಾಪಯಾಮಾಸ ರಕ್ಷಾರ್ಥೇ ಸರ್ವಭೂಭುಜಾಂ ।
ಏತಸ್ಮಿನ್ನಂತರೇ ದೇವೀ ಸಖೀಭಿಃ ಸಹ ಪದ್ಮಿನೀ ॥ ೧೧ ॥

ಸರ್ವಭೂಪಾನ್ವಿಲೋಕ್ಯಾಶು ಲಕ್ಷಣಾಂತಮುಪಾಯಯೌ ।
ಶ್ಯಾಮಾಂಗಂ ಚ ಯುವಾನಂ ಚ ಸರ್ವಲಕ್ಷಣಲಕ್ಷಿತಂ ॥ ೧೨ ॥

---

೯. ಈ ಸ್ವಯಂವರೋತ್ಸವಕ್ಕೆ ಅನೇಕ ದೇಶದ ರಾಜರು ತಮ್ಮ ಕಡೆಯ ಶೂರರೊಡನೆ ಬಂದಿದ್ದರು. ಜಯಚಂದ್ರ ಮಹಾರಾಜನ ಮಗನಾದ ಲಕ್ಷಣನು ತಾನೂ ಸ್ವಯಂವರಕ್ಕೆ ಹೊರಡಲು ತನ್ನ ತಂದೆಯ ಅಪ್ಪಣೆಯನ್ನು ಪಡೆದುಕೊಂಡನು.

೧೦. ಕೂಡಲೆ ಆಹ್ಲಾದನೇ ಮೊದಲಾದ ನಾಲ್ವರು ಶೂರರನ್ನೂ ತನ್ನ ಜತೆ ಕರೆದುಕೊಂಡು ಹೊರಟು ಸ್ವಯಂವರ ನಡೆಯಬೇಕಾಗಿದ್ದ ಬಿಂದುಗಡಗ್ರಾಮಕ್ಕೆ ಬಂದು ಸೇರಿದನು.

೧೧. ಬಲಶಾಲಿಯಾದ ಪೃಥ್ವೀರಾಜನು ಈರೀತಿ ಲಕ್ಷಣನು ಬಂದದ್ದನ್ನು ನೋಡಿ ಸ್ವಯಂವರಕ್ಕೆ ಬಂದಿದ್ದ ರಾಜರುಗಳ ರಕ್ಷಣೆಗಾಗಿ ತನ್ನ ಸೇನೆಯನ್ನು ಸಿದ್ಧಮಾಡಿ ನಿಲ್ಲಿಸಿದನು.

೧೨ ಈ ಸಂದರ್ಭದಲ್ಲಿ ಪದ್ಮಿನಿಯು ತನ್ನ ಸಖಿಯರೊಡನೆ ಸ್ವಯಂವರ ಮಂಟಪಕ್ಕೆ ಬಂದು ಕ್ರಮದಿಂದ ಎಲ್ಲ ರಾಜರನ್ನೂ ನೋಡುತ್ತಾ ಕೊನೆಗೆ ಜಾಗ್ರತೆಯಾಗಿ ಲಕ್ಷಣನ ಸಮೀಪಕ್ಕೆ ಬಂದಳು.

ಚತುರ್ವಿಂಶತ್ತಥಾ ಪಂಚವಿಂಶದಬ್ದವಯೋಽನ್ವಿತಂ ।
ವ್ಯೂಢೋರಸ್ಕಂ ವೃಷಸ್ಕಂಧಂ ನಿರ್ಜರಂ ರೋಗವರ್ಜಿತಂ ॥ ೧೩ ॥

ದೃಷ್ಟ್ವಾ ತಮಾತ್ಮಸದೃಶಂ ಆಹ್ಲಾದಾದ್ಯೈಶ್ಚ ರಕ್ಷಿತಂ ।
ಜಯಮಾಲಾಂ ದದೌ ತಸ್ಮೈ ಪದ್ಮಿನೀ ಲಕ್ಷಣಾಯ ಚ ॥ ೧೪ ॥

ತದಾ ಸ ಲಕ್ಷಣೋ ವೀರೋ ಗೃಹೀತ್ವಾ ಪಾಣಿಮುತ್ತಮಂ ।
ಸ್ವರಥಂ ಚ ಸಮಾರುಹ್ಯ ರಾಜ್ಞಾಂ ಮಧ್ಯೇ ಜಗಾಮ ಹ ॥ ೧೫ ॥

ಪೃಥ್ವೀರಾಜಸ್ತಥಾ ಸರ್ವೇ ಭೂಮಿಪಾ ಬಲಸಂಯುತಾಃ ।
ರುರುಧುಃ ಸರ್ವತೋ ವೀರಂ ಲಕ್ಷಣಂ ಬಲವತ್ತರಂ ॥ ೧೬ ॥

ತಾಲನಃ ಸಿಂಹಿನೀಸಂಸ್ಥೋ ಗೃಹೀತ್ವಾ ಪರಿಘಂ ಮುದಾ ।
ಸೈನ್ಯಾನಿ ಯೋಧಯಾಮಾಸ ಭೀಮಸೇನಾಂಶಸಂಭವಃ ॥ ೧೭ ॥

---

೧೩. ಆಗ ಪದ್ಮಿನಿಯು ಶ್ಯಾಮವರ್ಣದ ಅವಯವವುಳ್ಳವನೂ, ಸರ್ವಲಕ್ಷಣ ಸಂಯುತನೂ, ಇಪ್ಪತ್ತುನಾಲ್ಕು ಅಥವಾ ಇಪ್ಪತ್ತೈದು ವಯಸ್ಸಿನ ಯುವಕನೂ ಆಗಿ, ಉಬ್ಬಿದ ಎದೆ, ಗೂಳಿಯ ಹಿಳಲಿನಂತೆ ಇರುವ ಭುಜ, ಕಳೆಗುಂದದ ಮುಖ ಇವುಗಳಿಂದ ಕೂಡಿ ಆರೋಗ್ಯದೃಢಕಾಯನಾಗಿದ್ದ ಲಕ್ಷಣನನ್ನು ನೋಡಿದಳು.

೧೪. ಇವನೇ ತನಗೆ ಅನುರೂಪನಾದ ವರನು. ಎಂದು ನಿಶ್ಚಯಿಸಿ ಆಹ್ಲಾದ ಮುಂತಾದವರಿಂದ ಪರಿಪಾಲಿತನಾಗಿ ಕುಳಿತಿದ್ದ ಆ ಲಕ್ಷಣಕುಮಾರನಿಗೆ ವರಣಮಾಲಿಕೆಯನ್ನು ಹಾಕಿದಳು.

೧೫. ಆಗ ವೀರನಾದ ಲಕ್ಷಣಕುಮಾರನು ಪದ್ಮಿನಿಯ ಪಾಣಿಗ್ರಹಣಮಾಡಿ ಅವಳನ್ನು ತನ್ನ ರಥದ ಮೇಲೆ ಕೂರಿಸಿಕೊಂಡು ರಾಜರುಗಳ ಸಮಕ್ಷಮವೇ ಹಾಯ್ದುಹೋದನು.

೧೬. ಆಗ ಪೃಥ್ವೀರಾಜನೂ ಇತರ ಎಲ್ಲಾ ರಾಜರೂ ಒಟ್ಟುಗೂಡಿ ತಮ್ಮ ಸೇನೆಗಳೊಡನೆ ಬಂದು ಬಲಶಾಲಿಯಾದ ಲಕ್ಷಣನ ಸುತ್ತಲೂ ಮುತ್ತಿದರು.

೧೭. ಭೀಮಸೇನಾಂಶದಿಂದ ಜನಿಸಿ, ಲಕ್ಷಣನ ಸೇನಾಪತಿತ್ವವನ್ನು ವಹಿಸಿದ್ದ ತಾಲನನು ಇದನ್ನು ನೋಡಿ ತನ್ನ ಸಿಂಹಿನೀ ಕುದುರೆಯನ್ನು ಏರಿ, ಪರಿಘಾಯುಧವನ್ನು ಹಿಡಿದು ಯುದ್ಧಮಾಡುತ್ತಾ ಶತ್ರುಸೇನೆಗಳನ್ನು ಧ್ವಂಸಮಾಡತೊಡಗಿದನು.

ಪಂಚಶಬ್ದಗಜಾರೂಢಶ್ಚಾಹ್ಲಾದೋ ತೋಮರಾಯುಧಃ ।
ರಿಪೂನ್ ವಿದಾರಯಾಮಾಸ ಬಲಭದ್ರಾಂಶಸಂಭವಃ ॥ ೧೮ ॥

ಕೃಷ್ಣಾಂಶೋ ಬಿಂದುಲಾರೂಢೋ ಗೃಹೀತ್ವಾ ಖಡ್ಗಮುತ್ತಮಂ ।
ಭೂಪತೀನ್ ಬಹುಧಾ ಛಿತ್ವಾ ಮಹಾವಧಮಕಾರಯತ್ ॥ ೧೯ ॥

ದೇವೋ ಮನೋರಥಾರೂಢೋ ಭೈರವಂ ಭಲ್ಲಮಾದಧೌ ।
ಹತ್ವಾ ಚ ಬಹುಧಾ ಸೈನ್ಯಂ ನನರ್ದ ಚ ಪುನಃಪುನಃ ॥ ೨೦ ॥

ಲಕ್ಷಣೋ ಧನುರಾದಾಯ ವೈಷ್ಣವಾಸ್ತ್ರಾಣಿ ವೈ ಪುನಃ ।
ಸಂಧಾಯ ಚ ಜಘಾನಾಶು ಮಹೀರಾಜಸ್ಯ ಸೈನ್ಯಪಾನ್ ॥ ೨೧ ॥

ಯಾಮಮಾತ್ರಮಭೂದ್ಯುದ್ಧಂ ತೇಷಾಂ ತೈಶ್ಚ ಸಮನ್ವಿತಂ ।
ತ್ಯಕ್ತ್ವಾ ಯುದ್ಧಂ ಮಹೀರಾಜಃ ಸರ್ವಭೂಪಸಮನ್ವಿತಃ ॥ ೨೨ ॥

---

೧೮. ಬಲರಾಮಾಂಶನಾದ ಆಹ್ಲಾದನು ಪಂಚಶಬ್ದವೆಂಬ ಹೆಸರುಳ್ಳ ತನ್ನ ಆನೆಯನ್ನು ಏರಿ ತೋಮರಾಯುಧವನ್ನು ಧರಿಸಿ ಶತ್ರುಗಳನ್ನು ನುಚ್ಚುನುರಿ ಮಾಡುತ್ತಾ ಯುದ್ಧಮಾಡಿದನು.

೧೯. ಕೃಷ್ಣಾಂಶನೂ ಕೂಡ ತನ್ನ ಬಿಂದುಲಾಶ್ವವನ್ನು ಏರಿ ಉತ್ತಮವಾದ ಕತ್ತಿಯನ್ನು ಹಿಡಿದು ಅನೇಕ ರಾಜರನ್ನು ಕತ್ತರಿಸಿ ತುಂಬಾ ಸೇನೆಯನ್ನು ಧ್ವಂಸ ಮಾಡಿದನು.

೨೦. ದೇವಸಿಂಹನು ಮನೋರಥಾಶ್ವವನ್ನು ಏರಿ ಭೈರವಾನುಗ್ರಹದಿಂದ ಸಂಪಾದಿಸಿದ ಭಲ್ಲೆಯವನ್ನು ಹಿಡಿದು ಶತ್ರುಸೇನೆಯನ್ನು ನಾನಾರೀತಿಯಿಂದ ಸಂಹರಿಸಿ ಬಾರಿಬಾರಿಗೂ ಸಿಂಹನಾದ ಮಾಡಿದನು.

೨೧. ರಾಜಕುಮಾರ ಲಕ್ಷಣನು ಧನುರ್ಧಾರಿಯಾಗಿ ಪದೇ ಪದೇ ವೈಷ್ಣವಾಸ್ತ್ರವನ್ನು ಪ್ರಯೋಗಿಸುತ್ತಾ ಪೃಥ್ವೀರಾಜನ ಕಡೆಯ ಸೈನ್ಯರಕ್ಷಕರಾದ ಮುಖ್ಯ ಅರಸುಗಳನ್ನು ಜಾಗ್ರತೆಯಲ್ಲಿಯೇ ಕೊಂದುಹಾಕಿದನು.

೨೨. ಈರೀತಿ ಒಂದುಜಾವದವರೆಗೆ ಪರಸ್ಪರ ಯುದ್ಧ ನಡೆಯಿತು. ಅನಂತರ ಪೃಥ್ವೀರಾಜನು ನಿರ್ವಹಿಸಲು ಸಾಧ್ಯವಿಲ್ಲವೆಂದು ಯುದ್ಧವನ್ನು ನಿಲ್ಲಿಸಿ ತನ್ನ ಕಡೆಯ ಎಲ್ಲಾ ರಾಜರುಗಳೊಡನೆ ದೆಹಲಿಗೆ ಹಿಂದಿರುಗಿ ಹೋದನು.

ಯಯೌ ಸ ದೇಪಲೀಗ್ರಾಮೇ ಶಾರದಾನಂದನಸ್ತದಾ ।
ಸಂಸ್ಥಾಪ್ಯ ಮಂಡಪಶುಭಂ ಕೃತ್ವಾವೈವಾಹಿಕೀಃ ಕ್ರಿಯಾಃ ।
ದದೌ ಕನ್ಯಾಂ ವಿಧಾನೇನ ಧನಧಾನ್ಯಾದಿಸಂವೃತಾಂ ॥ ೨೩ ॥

ಏತಸ್ಮಿನ್ನಂತರೇ ಪ್ರಾಪ್ತೋ ಮಹೀಪತಿರುವಾಚ ತಂ ।
ಪದ್ಮಾಕರಂ ಭೂಪಸುತಂ ಲಕ್ಷಸೈನ್ಯಸಮನ್ವಿತಂ ॥ ೨೪ ॥

ಅಹೋ ಮಿತ್ರ ಮಹಾವೀರ ಕೀದೃಶೀ ತೇ ಮತಿಃ ಸ್ಥಿತಾ ।
ವಿಷ್ವಕ್ಸೇನಾನ್ವಯೇ ತ್ವಂ ವೈ ಸಂಜಾತಃ ಕ್ಷತ್ರಿಯೋತ್ತಮಃ ॥ ೨೫ ॥

ಲಕ್ಷಣೋ ಧರ್ಮರಹಿತೋ ವರ್ಣಸಂಕರಸಂಯುತಃ ।
ಆಹ್ಲಾದಾದ್ಯಾಶ್ಚ ತೇ ಶೂರಾ ಆಭೀರಮಾತೃಸಂಭವಾಃ ।
ತೈರ್ಯುತಶ್ಚ ನಿವಾಸೋ ವೈ ಸಂತ್ಯಾಜ್ಯೋ ಧರ್ಮಕೋವಿದೈಃ ॥ ೨೬ ॥

---

೨೩. ಇತ್ತ ಪದ್ಮಿನಿಯ ತಂದೆಯಾದ ಶಾರದಾನಂದನನು ಸ್ವಯಂವರ ಮಂಟಪದಲ್ಲಿ ವಿವಾಹ ಮಹೋತ್ಸವಾರ್ಥವಾಗಿ ಮಂಗಳವಾದ್ಯಗಳನ್ನು ಮಾಡಿಸಿ ಬಹು ಧನಧಾನ್ಯಾದಿಗಳೊಡನೆ ಪುತ್ರಿಯಾದ ಪದ್ಮಿನಿಯನ್ನು ಶಾಸ್ತ್ರೋಕ್ತರೀತಿಯಿಂದ ಲಕ್ಷಣಕುಮಾರನಿಗೆ ಮದುವೆಮಾಡಿಕೊಡಲು ಸಿದ್ಧಪಡಿಸಿದನು.

೨೪. ಈ ವೇಳೆಗೆ ಸರಿಯಾಗಿ, ಕೇಡಿಗನಾದ ಆ ಮಹೀಪತಿರಾಜನು ಬಿಂದುಗಡಕ್ಕೆ ಬಂದು ಶಾರದಾನಂದನನ ಮಗನೂ ಒಂದುಲಕ್ಷಸೇನೆಗೆ ಅಧಿಪನೂ ಆದ ಪದ್ಮಾಕರನನ್ನು ಕುರಿತು ಹೀಗೆಂದನು.

೨೫. "ಅಯ್ಯಾ ಮಹಾವೀರನಾದ ಸ್ನೇಹಿತನೇ! ಇದೇನು? ನಿನ್ನ ಬುದ್ಧಿ ಈರೀತಿ ಪರಿಣಮಿಸಬಹುದೇ? ನೀನು ವಿಷ್ವಕ್ಸೇನವಂಶಸಂಭೂತನಾದ ಕ್ಷತ್ರಿಯ ಶ್ರೇಷ್ಠನು."

೨೬. "ಈ ಲಕ್ಷಣಕುಮಾರನು ಸಂಕರಜಾತಿಯವನಾಗಿ ಧರ್ಮಭ್ರಷ್ಟನಾಗಿರುವನು. ಇವನ ಅನುಯಾಯಿಗಳಾದ ಆಹ್ಲಾದಾದಿ ವೀರರೂ ಶೂದ್ರ ಯೋನಿಯಲ್ಲಿ ಹುಟ್ಟಿದವರು. ಅವರೊಡನೆ ಕೂಡಿರುವ ಈ ಲಕ್ಷಣಕುಮಾರನ ಸಹವಾಸವನ್ನು ಧರ್ಮಸೂಕ್ಷ್ಮ ತಿಳಿದವರು ಖಂಡಿತ ವರ್ಜ್ಯಮಾಡುವರು" ಎಂದು ಹೇಳಿದನು.

ಇತಿ ಪದ್ಮಾಕರಃ ಶ್ರುತ್ವಾ ಸರ್ವಮಾಯಾವಿಶಾರದಃ ।
ಸ ಕೃತ್ವಾ ಶಾಂಬರೀಂ ಮಾಯಾಂ ಬಧ್ವಾ ತಾನೇವ ದುರ್ಜಯಾನ್ ।
ಸ್ವಗೇಹೇ ಸ್ಥಾಪಯಾಮಾಸ ಕಾರಾಗಾರೇ ಶಿಲಾಮಯೇ ॥ ೨೭ ॥

ದೇವ್ಯಾಶ್ಚ ವರದಾನೇನ ದೇವಸಿಂಹಸ್ತದಾ ನಿಶಿ ।
ತ್ಯಕ್ತ್ವಾ ಮಾಯಾಂ ಮೋಹಮಯೀಂ ಕಾನ್ಯಕುಬ್ಜಮುಪಾಯಯೌ ॥ ೨೮ ॥

ಇಂದುಲಾಗ್ರೇ ಚ ತೇ ಸರ್ವೇ ಗದಿತ್ವಾ ತೇನ ಸಂಯುತಃ ।
ಪ್ರಾಪ್ತೋ ಬಿಂದುಗಡಂ ಶೀಘ್ರಂ ದಿವ್ಯಮಾಯಾವಿಶಾರದಃ ॥ ೨೯ ॥

ಪದ್ಮಾಕರಸ್ತು ತಚ್ಛ್ರುತ್ವಾ ಕೃತ್ವಾ ಮಾಯಾಂ ಚ ಶಾಂಬರೀಂ ।
ಮೋಹನಾಯೋದ್ಯತಸ್ತತ್ರ ಯಥಾ ಮೇಘೋ ರವಿಂ ದಿವಿ ॥ ೩೦ ॥

---

೨೭. ಮಹೀಪತಿರಾಜನು ಈರೀತಿ ಹೇಳಿದುದನ್ನು ಕೇಳಿ, ಸಮಸ್ತ ಮಾಯಾ ನಿಪುಣನೂ ರಾಜಪುತ್ರನೂ ಆದ ಪದ್ಮಾಕರನು ಅದನ್ನು ನಿಜವೆಂದು ನಂಬಿ, ತನ್ನ ಶಬರಮಾಯೆಯನ್ನು ಪ್ರಯೋಗಿಸಿ ಅಜೇಯರಾದ ಲಕ್ಷಣಾದಿಗಳನ್ನು ಬಂಧಿಸಿ ತಮ್ಮ ಅರಮನೆಯಲ್ಲಿ ಶಿಲಾಮಯವಾದ ಕಾರಾಗೃಹದಲ್ಲಿ ಇವರನ್ನು ಸೆರೆಹಾಕಿದನು.

೨೮. ಹೀಗಿರುವಾಗ ದೇವಸಿಂಹನು ಆದಿನ ರಾತ್ರಿ ಶಾರದಾದೇವಿಯ ವರ ಪ್ರಸಾದದಿಂದ ಮಾಯಾವಿಮೋಚನೆಹೊಂದಿ ಎಚ್ಚೆತ್ತು ಕನ್ಯಾಕುಬ್ಜಪಟ್ಟಣಕ್ಕೆ ಬಂದನು. ಬಳಿಕ ಅವನು ಇಂದುಲನ ಸಮ್ಮುಖದಲ್ಲಿ ತನ್ನ ಬಂಧುಗಳಿಗೆ ಅಪಮಾನವಾದ ವೃತ್ತಾಂತವನ್ನೆಲ್ಲಾ ತಿಳಿಸಿದನು.

೨೯. ದಿವ್ಯಮಾಯಾನಿಪುಣನಾದ ಇಂದುಲನು ಇದನ್ನು ಕೇಳಿ, ತನ್ನ ಪರಿವಾರದವರೊಡನೆ ದೇವಸಿಂಹನ ಜತೆಯಲ್ಲಿ ಹೊರಟು ಜಾಗ್ರತೆಯಾಗಿ ಬಿಂದುಗಡ ಗ್ರಾಮಕ್ಕೆ ಬಂದು ಸೇರಿದನು.

೩೦. ಅತ್ತ ಪದ್ಮಾಕರನು ಇವರು ಬಂದ ವೃತ್ತಾಂತವನ್ನು ಕೇಳಿ, ಇವನ ಮೇಲೂ ಶಬರಮಾಯೆಯನ್ನು ಪ್ರಯೋಗಿಸಿ ಮೂರ್ಛೆಗೊಳಿಸಲು ಪ್ರಯತ್ನಿಸಿದನು. ಆದರೆ ಇವನ ಯತ್ನವು ಹಗಲಿನಲ್ಲಿ ಸೂರ್ಯನನ್ನು ಎದುರಿಸಲು ಪ್ರಯತ್ನಿಸಿದ ಮೇಘ ದಂತೆ ನಿಷ್ಫಲವಾಯಿತು.

ಇಂದುಲಶ್ಚ ತದಾ ಚಾಪೇ ಸಂಧಾಯ ಶರಮುತ್ತಮಂ ।
ಕಾಮಾಸ್ತ್ರೇಣ ತು ತನ್ಮಾಯಾ ಭಸ್ಮೀಭೂತಾಭವತ್ಕ್ಷಣಾತ್ ॥ ೩೧ ॥

ತದಾ ತೇ ಬೋಧಿತಾಃ ಸರ್ವೇ ಕಾಮಾಸ್ತ್ರೇಣ ಮಹಾಬಲಾಃ ।
ಭಿತ್ವಾ ಲೋಹಮಯಂ ಜಾಲಂ ಕಪಾಟಂ ಚ ತದಾ ದೃಢಂ ॥ ೩೨ ॥

ಬಹಿರ್ಭೂತಾಃ ಸಮಾಜಗ್ಮುಃ ಶತ್ರುಸೈನ್ಯಾನ್ಯನಾಶಯನ್ ।
ಕ್ಷತ್ರಿಯಾಃ ಪಂಚಸಾಹಸ್ರಾ ಮೃತಾ ಯಮಪುರಂ ಯಯುಃ ॥ ೩೩ ॥

ಶಾರದಾನಂದನೋ ಭೂಪಸ್ತತ್ರಾಗತ್ಯ ವಿನಮ್ಯ ತಾನ್ ।
ಸ್ವಸುತಾಂ ಚ ದದೌ ತಸ್ಮೈ ಲಕ್ಷಣಾಯ ಮಹಾತ್ಮನೇ ॥ ೩೪ ॥

ನಾನಾವಿಧಾನಿ ಭೋಜ್ಯಾನಿ ಪ್ರಶಸ್ಯಾಭರಣಾನಿ ಚ ।
ಸರ್ವೇಭ್ಯಶ್ಚ ದದೌ ರಾಜಾ ಸಹಸ್ರೇಭ್ಯಸ್ತದಾ ಮುದಾ ॥ ೩೫ ॥

---

೩೧. ಆಗ ಇಂದುಲನು ತನ್ನ ಧನುಸ್ಸಿನಲ್ಲಿ ಉತ್ತಮವಾದ ಕಾಮಾಸ್ತ್ರವನ್ನು ಹೂಡಿ ಅವರ ಮೇಲೆ ಪ್ರಯೋಗಿಸಿದನು. ಈ ಅಸ್ತ್ರದ ಪ್ರಭಾವದಿಂದ ಶತ್ರುವು ಹರಹಿದ್ದ ಶಾಬರೀಮಾಯೆಯು ಕ್ಷಣಮಾತ್ರದೊಳಗೆ ಧ್ವಂಸವಾಗಿಹೋಯಿತು.

೩೨. ಆಗ ಮಹಾಪರಾಕ್ರಮಿಗಳಾದ ಆಹ್ಲಾದ ಮೊದಲಾದವರು ಈ ಕಾಮಾಸ್ತ್ರದ ಪ್ರಭಾವದಿಂದ ಶಾಬರೀಮಾಯಾಮೂರ್ಛೆ ತಿಳಿದು ಎಚ್ಚೆತ್ತು, ತಮ್ಮ ಸುತ್ತಲೂ ಇದ್ದ ಲೋಹಮಯವಾದ ಬಲೆಯನ್ನು ಭೇದಿಸಿದರು.

೩೩. ಕೂಡಲೆ ಕಾರಾಗೃಹದ ದೃಢವಾದ ಬಾಗಿಲನ್ನು ಒಡೆದುಕೊಂಡು ಹೊರಕ್ಕೆ ಬಂದು ಶತ್ರುಸೇನೆಯನ್ನು ಧ್ವಂಸಮಾಡತೊಡಗಿದರು. ಇವರಿಂದ ಐದು ಸಾವಿರ ಕ್ಷತ್ರಿಯ ವೀರರು ಮೃತರಾಗಿ ಯಮಪುರಿಯನ್ನೈದಿದರು.

೩೪ ಆಗ ಶಾರದಾನಂದನರಾಜನು ಅಲ್ಲಿಗೆ ಬಂದು ಮಹಾಪುರುಷರಾದ ಲಕ್ಷಣಾದಿಗಳಿಗೆ ನಮಸ್ಕರಿಸಿ ಆ ಮಹಾಮಹಿಮನಿಗೆ ತನ್ನ ಮಗಳನ್ನು ಕೊಟ್ಟು ಮದುವೆಯನ್ನು ಸಾಂಗವಾಗಿ ನೆರವೇರಿಸಿದನು.

೩೫. ಈ ವಿವಾಹ ಮಹೋತ್ಸವದಲ್ಲಿ ಬಹು ಬಗೆಯ ಭಕ್ಷ್ಯಭೋಜ್ಯಾದಿಗಳಿಂದ ಅವರೆಲ್ಲರಿಗೂ ಸಂತೋಷವುಂಟಾಗುವಂತೆ ಊಟ ಉಪಚಾರಗಳಿಂದ ತೃಪ್ತಿಪಡಿಸಿ, ಅವರ ಮಹಿಮೆಯನ್ನು ಕೊಂಡಾಡಿ ಲಕ್ಷಣನ ಕಡೆಯ ಸಾವಿರಾರುಮಂದಿಗೂ ಅನೇಕ ಆಭರಣಗಳನ್ನು ಉಡುಗೊರೆಯಾಗಿ ಕೊಟ್ಟನು.

ಕುಮಾರಿಕಾಂ ಸ್ವಕೀಯಾಂ ಚ ಬಹುರೋದನತತ್ಪರಾಂ ।
ಸ ಮತ್ವಾ ಕಾಮಪಾಲೋ ವೈ ಸ್ವಗೇಹಾತ್ತಂ ನ್ಯವಾಸಯತ್ ।
ಆಗತೋ ಲಕ್ಷಣೋ ಗೇಹಂ ಮಾಘಕೃಷ್ಣಾಷ್ಟಮೀದಿನೇ ॥ ೩೬ ॥

ಜಯಚಂದ್ರಸ್ತು ತಂ ದೃಷ್ಟ್ವಾ ಲಕ್ಷಣಂ ಪ್ರೇಮವಿಹ್ವಲಃ ।
ಶತಗ್ರಾಮಂ ದದೌ ತೇಭ್ಯಸ್ತಾಲನಾದಿಭ್ಯ ಏವ ಚ ॥ ೩೭ ॥

ದತ್ವಾ ತತೋಽನ್ಯದಾನಾನಿ ಗೋವಸ್ತ್ರಾಭರಣಾನಿ ಚ ।
ಪ್ರದದೌ ಬ್ರಾಹ್ಮಣೇಭ್ಯಶ್ಚ ಸ ಚಕಾರ ಮಹೋತ್ಸವಂ ॥ ೩೮ ॥

॥ ಸೂತ ಉವಾಚ ॥
ಮಹೀರಾಜೋ ವರಂ ಪ್ರಾಪ್ತಃ ಶಂಕರಾತ್‌ಪಾರ್ಥಿವಾರ್ಚನಾತ್ ।
ಸಂಯೋಜ್ಯ ಫಾಲ್ಗುನೇ ಮಾಸೀ ಸೇನಾಂ ಶತ್ರುಭಯಂಕರಾಂ ॥ ೩೯ ॥

---

೩೬. ಅಲ್ಲದೆ ತತ್ಕಾಲದಲ್ಲಿ ತಂದೆತಾಯಿಗಳನ್ನು ಅಗಲಲಾರದೆ ಶೋಕಿಸುತ್ತಿದ್ದ ತನ್ನ ಮಗಳನ್ನು ಅವನಿಗೆ ಸಂತೋಷದಿಂದ ಸಮರ್ಪಿಸಿ, ಎಲ್ಲರನ್ನೂ ಅವರ ಪಟ್ಟಣಕ್ಕೆ ಸಾಗಕಳುಹಿಸಿಕೊಟ್ಟನು. ಬಳಿಕ ಲಕ್ಷಣ ಕುಮಾರನು ಅಲ್ಲಿಂದ ಹೊರಟು ಮಾಘ ಕೃಷ್ಣ ಅಷ್ಟಮಿಯದಿನ ತನ್ನ ಮನೆಗೆ ಬಂದು ಸೇರಿದನು.

೩೭. ತನ್ನ ಮಗನು ಈರೀತಿ ಜಯಶಾಲಿಯಾಗಿ ಬಂದುದನ್ನು ನೋಡಿ ಜಯಚಂದ್ರನು ಪ್ರೀತ್ಯತಿಶಯದಿಂದ ತಾಲನ ಮೊದಲಾದವರಿಗೆ ನೂರು ಗ್ರಾಮಗಳನ್ನು ಜಹಗೀರಾಗಿ ಕೊಟ್ಟನು.

೩೮. ಅಲ್ಲದೆ ಈ ಮಹೋತ್ಸವಾಂಗವಾಗಿ ಬ್ರಾಹ್ಮಣೋತ್ತಮರಿಗೆ ಗೋವುಗಳು, ವಸ್ತ್ರಗಳು, ಆಭರಣಗಳು ಮುಂತಾದ ನಾನಾದಾನಗಳನ್ನು ಕೊಟ್ಟನು. ದೊಡ್ಡ ಉತ್ಸವವು ವೈಭವದಿಂದ ನೆರವೇರಿತು.

೩೯. ಸೂತಮುನಿವರ್ಯನು ಹೇಳುತ್ತಾನೆ—ಇತ್ತ ಪೃಥ್ವೀರಾಜನು ಪಾರ್ಥಿವ ಲಿಂಗಪೂಜಾ ವಿಧಾನದಿಂದ ಪರಮೇಶ್ವರನನ್ನು ಬಹುದಿನ ಆರಾಧಿಸಿ ವರವನ್ನು ಪಡೆದನು. ಬಳಿಕ ಫಾಲ್ಗುಣಮಾಸದಲ್ಲಿ ತನ್ನ ಸೈನ್ಯವನ್ನೆಲ್ಲಾ ಒಟ್ಟುಗೂಡಿಸಿದನು. ಈ ಸೈನ್ಯವು ಎಂತಹ ಶತ್ರುಸೇನೆಗೂ ಭಯವನ್ನು ಉಂಟುಮಾಡುವಹಾಗಿದ್ದಿತು.

ಸಪ್ತಲಕ್ಷೈಶ್ಚ ಸಹಿತಃ ಶಿರೀಷಾಖ್ಯಪುರಂ ಯಯೌ ।
ನೃಪಾಜ್ಞಯಾ ಚ ಚಾಮುಂಡೋ ರುರೋಧ ನಗರಂ ಪುನಃ ॥ ೪೦ ॥

ಸುಖಖಾನಿಸ್ತದಾ ಕ್ರುದ್ಧೋ ಲಕ್ಷಸೈನ್ಯಸಮನ್ವಿತಃ ।
ನಗರಾದ್ಬಹಿರಾಗತ್ಯ ಮಹಾವಧಮಕಾರಯತ್ ॥ ೪೧ ॥

ಪಾವಕಾಸ್ತ್ರೇಣ ಬಲವಾನ್ ಹತ್ವಾ ದಶಸಹಸ್ರಕಂ ।
ಮಹೀರಾಜಮುಪಾಗಮ್ಯ ವಚನಂ ಪ್ರಾಹ ನಿರ್ಭಯಃ ॥ ೪೨ ॥

ಅದ್ಯ ತ್ವಾಂ ಚ ಹನಿಷ್ಯಾಮಿ ತ್ವಂ ವಾ ಹಂತಾ ರಣೇ ಮಮ ।
ಸ್ವವಿದ್ಯಾಂ ಕುರು ಭೂಪ ತ್ವಂ ನೋಚೇದ್ಯಾಸ್ಯಸಿ ವೈಶಸಂ ॥ ೪೩ ॥

ಇತಿ ಶ್ರುತ್ವಾ ಮಹೀರಾಜೋ ರೌದ್ರಾಸ್ತ್ರಂ ಚಾಪ ಆದಧೇ ।
ತದಸ್ತ್ರಾಚ್ಚ ಮಹಾವಹ್ನಿಃ ಪ್ರಾದುರ್ಭೂತೋ ಭಯಂಕರಃ ॥ ೪೪ ॥

---

೪೦. ಈರೀತಿ ಸೇರಿದ ಸೈನ್ಯವು ಒಟ್ಟು ಏಳುಲಕ್ಷವಾಯಿತು. ಪೃಥ್ವೀರಾಜನ ಅಪ್ಪಣೆಯ ಪ್ರಕಾರ ಚಾಮುಂಡನು ಆ ಸೇನೆಯೊಡನೆ ವೇಗವಾಗಿ ಬಂದು ಪುನಃ ಶಿರೀಷಪಟ್ಟಣಕ್ಕೆ ಮುತ್ತಿಗೆ ಹಾಕಿದನು.

೪೧. ಆಗ ಸುಖಖಾನಿಯು ಕೋಪಗೊಂಡು ತನ್ನ ಒಂದುಲಕ್ಷ ಸೈನ್ಯದೊಡನೆ ಹೊರಟು ಪಟ್ಟಣದ ಹೊರಭಾಗಕ್ಕೆ ಬಂದು ಶತ್ರು ಸೈನ್ಯದಲ್ಲಿ ಬಹುಮಂದಿಯನ್ನು ಘಾತಿಸಿ ವಧೆಮಾಡಿದನು.

೪೨-೪೩. ಇದೇ ಕಾಲದಲ್ಲಿ ಶೂರನಾದ ಬಲಖಾನಿಯು ಆಗ್ನೇಯಾಸ್ತ್ರದಿಂದ ಶತ್ರುಪಕ್ಷದ ಹತ್ತುಸಾವಿರಸೇನೆಯನ್ನೂ ಕೊಂದು, ಪೃಥ್ವೀರಾಜನನ್ನೇ ಎದುರಿಸಿ ನಿರ್ಭಯನಾಗಿ ಅವನನ್ನು ಕುರಿತು " ಈದಿನ ನಾನು ನಿನ್ನನ್ನು ಕೊಲ್ಲಬೇಕು ಹಾಗಾಗದಿದ್ದರೆ ನೀನು ನನ್ನನ್ನು ಕೊಲ್ಲಬೇಕು. ಎಲೈ ರಾಜನೇ ! ಈಗ ನಿನ್ನ ರಣಕೌಶಲವನ್ನು ತೋರಿಸು, ಇಲ್ಲವಾದರೆ ನರಕಪ್ರಾಪ್ತಿಯಾದೀತು " ಎಂದು ಹೇಳಿದನು.

೪೪. ಸುಖಖಾನಿಯು ಹೀಗೆಂದುದನ್ನು ಕೇಳಿ ಪೃಥ್ವೀರಾಜನು ತನ್ನ ಬಿಲ್ಲಿನಲ್ಲಿ ರುದ್ರಸಂಬಂಧವಾದ ಅಸ್ತ್ರವನ್ನು ಹೂಡಿದನು. ಆ ಅಸ್ತ್ರಪ್ರಭಾವದಿಂದ ಭಯಂಕರವಾದ ದೊಡ್ಡ ಅಗ್ನಿಯು ಉತ್ಪನ್ನವಾಯಿತು.

ಸುಖಖಾನಿಸ್ತದಾಗ್ನೇಯಂ ಸಂದಧೌ ತಸ್ಯ ಶಾಂತಯೇ ।
ರೌದ್ರಾಗ್ನಿನಾ ಸ ಶರಃ ಸುಖಖಾನಿರ್ಲಯಂ ಗತಃ ॥ ೪೫ ॥

ತದಸ್ತ್ರಂ ಶಿವತೂಣೀರೇ ಗತಂ ಕಾರ್ಯಂ ವಿಧಾಯ ತತ್ ।
ಬಲಖಾನಿಸ್ತು ತಚ್ಛ್ರುತ್ವಾ ಭಯಭೀತಃ ಸಮಾಗತಃ ॥ ೪೬ ॥

ಭ್ರಾತುರ್ವೈರಮುಪಾದಾಯ ಜಘಾನ ಚ ರಿಪೋರ್ಬಲಂ ।
ಧ್ಯಾತ್ವಾ ಚ ಶಾರದಾಂ ದೇವೀಂ ಭೂಮಿರಾಜಮುಪಾಗಮತ್ ॥ ೪೭ ॥

ಭೂಮಿರಾಜಸ್ತು ತಂ ದೃಷ್ಟ್ವಾ ತದ್ಬಲಾಧಿಕ್ಯಮೋಹಿತಃ ।
ಉವಾಚ ವಚನಂ ಪ್ರೇಮ್ಣಾ ಬಲಖಾನೇ ಶೃಣುಷ್ವ ಭೋ॥ ॥ ೪೮ ॥

ಕ್ರೋಶಮಾತ್ರಾಂತರೇ ಗರ್ತಾ ದ್ವಾದಶೈವ ಮಯಾ ಕೃತಾಃ ।
ರಕ್ಷಿತಾ ದ್ವಾದಶಶತೈಃ ಶೂರೈರ್ಯುದ್ಧವಿಶಾರದೈಃ ॥ ೪೯ ॥

---

೪೫. ಆಗ ಸುಖಖಾನಿಯು ಅದನ್ನು ನಾಶಗೊಳಿಸುವುದಕ್ಕಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆಗ ರೌದ್ರಾಸ್ತ್ರದ ಅಗ್ನಿಯಿಂದ ಆ ಆಗ್ನೇಯಾಸ್ತ್ರವು ಸಂಹೃತವಾಯಿತು. ವೀರನಾದ ಸುಖಖಾನಿಯೂ ಸಂಹೃತನಾದನು.

೪೬. ಆ ರೌದ್ರಾಸ್ತ್ರವು ತನ್ನ ಕೆಲಸವನ್ನು ಪೂರೈಸಿದನಂತರ ಪುನಃ ಈಶ್ವರನ ಬಳಿಗೆ ಹೋಗಿ ಸೇರಿತು. ಬಲಖಾನಿಯು ಈ ವೃತ್ತಾಂತವನ್ನು ಕೇಳಿ ಭಯದಿಂದ ಹೆದರಿಕೊಂಡೇ ಯುದ್ಧಕ್ಕೆ ಬಂದನು.

೪೭. ತನ್ನ ಸಹೋದರನಿಗೆ ಉಂಟಾದ ವಿಪತ್ತನ್ನು ನೆನಸಿಕೊಂಡು ಆ ವೈರದಿಂದ ಶತ್ರುಸೈನ್ಯವನ್ನು ಬಹಳವಾಗಿ ನಾಶಪಡಿಸಿದನು. ಮತ್ತೆ ಶಾರದಾದೇವಿಯನ್ನು ಧ್ಯಾನಮಾಡುತ್ತಾ ಪೃಥ್ವೀರಾಜನ ಸಮೀಪಕ್ಕೆ ಬಂದನು.

೪೮. ಪೃಥ್ವೀರಾಜನು ತನ್ನನ್ನು ಸಮೀಪಿಸಿ ಬಂದ ಬಲಖಾನಿಯನ್ನೂ ಅವನ ಅಪಾರವಾದ ಸೇನೆಯನ್ನೂ ನೋಡಿ, ಹೆದರಿ ಅವನನ್ನು ಕುರಿತು ಪ್ರೀತಿಯಿಂದ ಮಾತಾಡಿಸುವನಂತೆ ಇಂತೆಂದನು.

೪೯. "ಎಲೈ ಬಲಖಾನೀ! ಕೇಳು; ಇಲ್ಲಿಂದ ಒಂದು ಗಾವುದದ ದೂರದಲ್ಲಿ ನಾನು ಹನ್ನೆರಡು ಹಳ್ಳಗಳನ್ನು ತೋಡಿಸಿರುವೆನು. ಅಲ್ಲಿ ಸಾವಿರದ ಇನ್ನೂರುಮಂದಿ ಯುದ್ಧವಿಶಾರದರಾದ ವೀರರು ಅವುಗಳನ್ನು ರಕ್ಷಿಸುತ್ತಿರುವರು.''

ಶೂರಾಞ್ಜಿತ್ವಾ ಸಮುಲ್ಲಂಘ್ಯ ಗರ್ತಾನ್ದ್ವಾದಶಸಂಮ್ಮಿತಾನ್ ।
ಮಮಾರ್ಧಂ ಸಕಲಂ ರಾಷ್ಟ್ರಂ ಗೃಹಾಣ ಬಲಿಸತ್ತಮ ॥ ೫೦ ॥

ಇತಿ ಶ್ರುತ್ವಾ ಪ್ರಿಯಂ ವಾಕ್ಯಂ ತದ್ರಾಜ್ಞಾ ಸತ್ಯಭಾಷಿತಂ ।
ಕಪೋತಂ ಹಯಮಾರುಹ್ಯ ಖಡ್ಗಹಸ್ತೋ ವನಂ ಯಯೌ ॥ ೫೧ ॥

ದೃಷ್ಟ್ವಾ ಗರ್ತಾನ್ ಮಹಾವೀರೋ ಹತ್ವಾ ಶೂರಾಞ್ಛತಞ್ಛತಂ ।
ಯಯೌ ಸ ದ್ವಾದಶಾನ್ ಗರ್ತಾನ್ ಬಾಹುಶಾಲೀ ಜಿತೇಂದ್ರಿಯಃ ॥ ೫೨ ॥

ಚಾಮುಂಡಸ್ತು ತದಾಗತ್ಯ ಶೂರಾಯುತಸಮನ್ವಿತಃ ।
ರುರೋಧ ಸರ್ವತೋ ವೀರಂ ಛದ್ಮಕಾರೀ ದ್ವಿಜಾಧಮಃ ॥ ೫೩ ॥

ಬಲಖಾನಿಶ್ಚ ಮಹತೀಂ ಸೇನಾಂ ತಸ್ಯ ಜಘಾನ ಹ ।
ಚಾಮುಂಡಂ ತಮುಪಾಗಮ್ಯ ನನರ್ದ ಚ ಪುನಃಪುನಃ ॥ ೫೪ ॥

---

೫೦. "ಎಲೈ ವೀರನೇ! ಆ ಶೂರರನ್ನೆಲ್ಲಾ ಜಯಿಸಿ ಆ ಹನ್ನೆರಡು ಹಳ್ಳಗಳನ್ನೂ ದಾಟಿಬಿಡು. ಆಗ ನನ್ನ ಅರ್ಧರಾಜ್ಯವನ್ನು ನೀನೇ ತೆಗೆದುಕೊಳ್ಳುವಂತೆ" ಎಂದು ಹೇಳಿದನು.

೫೧. ಪೃಥ್ವೀರಾಜನು ಪ್ರೀತಿಯುಕ್ತನಾದವನಂತೆ ಹೇಳಿದ ಈ ಮಾತನ್ನು ಬಲಖಾನಿಯು ಸತ್ಯವೆಂದೇಭಾವಿಸಿ ಕಪೋತವೆಂಬ ತನ್ನ ಕುದುರೆಯನ್ನು ಏರಿಕೊಂಡು ಖಡ್ಗಧಾರಿಯಾಗಿ ಆ ಕಾಡಿಗೆ ಹೋದನು.

೫೨. ಮಹಾವೀರನಾದ ಬಲಖಾನಿಯು ಅಲ್ಲಿಗೆ ಹೋಗಿ ಅಲ್ಲಿದ್ದ ಗುಳಿಗಳನ್ನು ಕಂಡು, ಅಲ್ಲಿ ಕಾವಲಿದ್ದ ನೂರಾರುಮಂದಿ ಸೈನಿಕರನ್ನು ಕೊಂದುಹಾಕಿ ಒಂದೊಂದನ್ನಾಗಿ ದಾಟಿ, ಮುಂದೆಸಾಗುತ್ತಾ ಬಾಹುಬಲಶಾಲಿಯೂ, ಜಿತೇಂದ್ರಿಯನೂ ಆದ ಇವನು ಆ ಹಳ್ಳಗಳನ್ನೆಲ್ಲಾ ದಾಟಿದನು.

೫೩. ಅಷ್ಟರಲ್ಲಿ ಮೋಸಗಾರನೂ ಬ್ರಾಹ್ಮಣಾಧಮನೂ ಆದ ಚಾಮುಂಡನು ತನ್ನ ಹತ್ತುಸಾವಿರ ಸೈನ್ಯದೊಡನೆ ಅಲ್ಲಿಗೆ ಬಂದು, ವೀರನಾದ ಬಲಖಾನಿಯ ಸುತ್ತಲೂ ಮುತ್ತಿದನು.

೫೪. ಇದನ್ನು ನೋಡಿ ಬಲಖಾನಿಯು ಕೋಪದಿಂದ ಆ ದೊಡ್ಡ ಸೈನ್ಯವನ್ನು ನಾಶಪಡಿಸಿ ಚಾಮುಂಡನನ್ನು ಸಮೀಪಿಸಿ ಬಂದು ಪುನಃ ಗರ್ಜಿಸಿದನು.

ತ್ರಯೋದಶಂ ಗುಪ್ತಗರ್ತಂ ತೃಣೈರಾಚ್ಛಾದಿತಂ ಮೃದಾ ।
ವಿಷಧೌತೈರ್ಮಹಾಭಲ್ಲೈಸ್ಸಂರುದ್ಧಂ ವಿವರಪ್ರಭಂ ॥ ೫೫ ॥

ಪತಿತಃ ಸಕಪೋತಶ್ಚ ಸ ವೀರೋ ದೈವನೋದಿತಃ ।
ಅಂಧಕಾರೇ ಮಹಾಘೋರಂ ಗಭೀರಂ ಕ್ರೋಶಮಾತ್ರಕಂ ॥ ೫೬ ॥

ವಿದೀರ್ಣಸ್ತತ್ರ ಚರಣಃ ಸಪದ್ಮೋ ವತ್ಸಜಸ್ಯ ವೈ ।
ಮಹಾಕಷ್ಟೇನ ತದ್ವಾಜೀ ಗರ್ತಾದಾಗತ್ಯ ವೈ ಬಹಿಃ ।
ಸ್ವಪದೈಸ್ತಾಡಯಾಮಾಸ ಮಹೀರಾಜಸ್ಯ ತದ್ಬಲಂ ॥ ೫೭ ॥

ಚಾಮುಂಡಸ್ತು ತದಾಗತ್ಯ ಬಲಖಾನೇಶ್ಚ ವೈ ಶಿರಃ ।
ಛಿತ್ವಾ ಜಘಾನ ತತ್ಸೈನ್ಯಂ ಹಾಹಾಭೂತಂ ವಿನೇಶ್ವರಂ ॥ ೫೮ ॥

---

೫೫. ಪೃಥ್ವೀರಾಜನು ತಾನು ಹೇಳಿದ್ದಂತೆ ಹನ್ನೆರಡು ಹಳ್ಳಗಳನ್ನು ಪ್ರಕಟವಾಗಿ ಮಾಡಿಸಿದ್ದುದಲ್ಲದೆ ಹದಿಮೂರನೆಯ ಗುಳಿಯೊಂದನ್ನು ತೋಡಿಸಿ ಅದು ಪ್ರಕಟವಾಗಿ ಕಾಣಿಸದಿರುವಂತೆ ತೆಳುವಾದ ಗಳುವನ್ನು ಹಾಸಿ, ಅದರ ಮೇಲೆ ಹುಲ್ಲು, ಮಣ್ಣುಗಳಿಂದ ಮುಚ್ಚಿ ನೆಲವೆಂದು ಕಾಣುವಂತೆ ರಚಿಸಿದ್ದನು. ಆ ಹಳ್ಳದೊಳಗೆ ವಿಷವ್ಯಾಪ್ತವಾದ ದೊಡ್ಡ ಭಲ್ಲೆಯುಗಳನ್ನು ನೆಡಿಸಿದ್ದನು.

೫೬. ವೀರನಾದ ಬಲಖಾನಿಯು ಈ ಮೋಸವನ್ನು ಗೊತ್ತುಹಚ್ಚಲಾರದೆ, ಕತ್ತಲೆಯಲ್ಲಿ ಆ ಚಾಮುಂಡನನ್ನು ಆಕ್ರಮಣ ಮಾಡಬೇಕೆಂದು ನೇರವಾಗಿ ನುಗ್ಗಿದನು. ದುರ್ವಿಧಿಯ ಮೋಸದಿಂದ ಆ ಕೃತಕವಾದ ನೆಲದ ಮೇಲೆ ರಭಸದಿಂದ ಕುದುರೆ ನುಗ್ಗಲಾಗಿ, ಮಹಾಭಯಂಕರವೂ ಆಳವೂ ಆಗಿ, ಒಂದು ಯೋಜನ ವಿಸ್ತಾರವುಳ್ಳ ಆ ಹಳ್ಳದೊಳಕ್ಕೆ ತನ್ನ ಕಪೋತವೆಂಬ ಕುದುರೆ ಸಹಿತವಾಗಿ ಬಿದ್ದು ಹೋದನು.

೫೭. ಹಾಗೆ ಬೀಳುತ್ತಲೆ ಕಮಲರೇಖಾಯುಕ್ತವಾದ ಅವನ ಕಾಲುಗಳಿಗೂ ಮೈಗೂ ಭಲ್ಲೆಗಳು ಚುಚ್ಚಿ ಸೀಳಿ ಗಾಯಗಳಾದುವು. ಬಲಖಾನಿಯ ದಿವ್ಯಾಶ್ವವು ತುಂಬಾ ಶ್ರಮಪಟ್ಟು ಮೇಲಕ್ಕೆ ಬಂದು ಪೃಥ್ವೀರಾಜನ ಸೇನೆಯವರನ್ನು ತನ್ನ ಕಾಲಿನಿಂದ ಒದೆದು ಧ್ವಂಸಮಾಡಹತ್ತಿತು.

೫೮. ಇಷ್ಟರಲ್ಲಿ ಚಾಮುಂಡನು ಅಲ್ಲಿಗೆ ಬಂದು ಬಲಖಾನಿಯ ತಲೆಯನ್ನು ಕತ್ತರಿಸಿ ಯಜಮಾನನಿಲ್ಲದೆ ಅವ್ಯವಸ್ಥೆಯಾಗಿದ್ದ ಅವನ ಸೈನ್ಯವನ್ನೂ ಸಹ ಕೊಂದು ಹಾಕಿದನು.

ಗಜಮುಕ್ತಾ ಚ ತಚ್ಛ್ರುತ್ವಾ ಚಿತಾಮಾರೋಪ್ಯ ವೈ ಪತಿಂ ।
ದಾಹಯಾಮಾಸ ಚಾಂಗಾನಿ ಸಾ ಪತ್ಯಾ ಸಹ ವೈ ಸತೀ ॥ ೫೯ ॥

ತದಾ ಬ್ರಹ್ಮಾ ಸ್ವವಧ್ವಾ ಚ ಸಾರ್ಧಮಾಗತ್ಯ ತತ್ರ ವೈ ।
ಸುಖಖಾನಿಂ ಚ ಸಂಹೂಯ ದದಾಹ ತತ್ಕಲೇವರಂ ॥ ೬೦ ॥

ಶೂನ್ಯಭೂತಂ ಚ ನಗರಂ ಭಸ್ಮ ಕೃತ್ವಾ ಸ ವೈ ನೃಪಃ ।
ಜಗಾಮ ದೆಹಲೀಂ ಶೀಘ್ರಂ ಮಹೋತ್ಸಾಹಸಮನ್ವಿತಃ ॥ ೬೧ ॥

ಇತಿ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಪಂಚವಿಂಶೋಽಧ್ಯಾಯಃ



---

೫೯. ಬಲಖಾನಿಯ ಪತ್ನಿಯಾದ ಗಜಮುಕ್ತಾದೇವಿಯು ಇದನ್ನು ಕೇಳಿ ಅಲ್ಲಿಗೆ ಬಂದು ತನ್ನ ಪತಿಯ ಶರೀರವನ್ನು ಚಿತೆಯಮೇಲಿರಿಸಿ ಅವನ ಕಳೇಬರದೊಡನೆ ತಾನೂ ಸಹಗಮನಮಾಡಿದಳು.

೬೦. ಆಗ ಬ್ರಹ್ಮಾನಂದನು ತನ್ನ ಮಗಳೊಡನೆ ಅಲ್ಲಿಗೆ ಬಂದು ಸುಖಖಾನಿಯ ಶರೀರವನ್ನೂ ಸಹ ತರಿಸಿ ಆ ಶರೀರದೊಡನೆ ಅವನ ಪತ್ನಿಯನ್ನೂ ಸಹ ಸಹಗಮನ ಮಾಡಿಸಿದನು.

೬೧. ಈರೀತಿ ಆ ಪೃಥ್ವಿರಾಜನು ಶಿರೀಷನಗರವನ್ನು ಜನಶೂನ್ಯವಾಗುವಂತೆ ಮಾಡಿ ಅದರ ಕೆಲವು ಭಾಗಕ್ಕೆ ಬೆಂಕಿಯನ್ನು ಹತ್ತಿಸಿದನು. ಈ ವಿಜಯದ ಸಂತೋಷದಿಂದ ತಾನು ವೈಭವದಿಂದ ಮೆರೆವಣಿಗೆ ಮಾಡಿಕೊಂಡು ಜಾಗ್ರತೆ ದೆಹಲಿಗೆ ಬಂದು ಸೇರಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ತೃತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಷಡ್ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಶ್ರಾವಣೇ ಮಾಸಿ ಸಂಪ್ರಾಪ್ತೇ ದೆಹಲೀಂ ಚ ಮಹೀಪತಿಃ ।
ನಾಗೋತ್ಸವಾಯ ಪ್ರಯಯೌ ಸದೈವ ಕಲಹಪ್ರಿಯಃ ॥ ೧ ॥

ದೃಷ್ಟ್ವಾ ನಾಗೋತ್ಸವಂ ತತ್ರ ಗೀತನೃತ್ಯಸಮನ್ವಿತಂ ।
ಮಹೀರಾಜಂ ನಮಸ್ಕೃತ್ಯ ವಚನಂ ಪ್ರಾಹ ನಮ್ರಧೀಃ ॥ ೨ ॥

---

### ಇಪ್ಪತ್ತಾರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಯಾವಾಗಲೂ ಕಲಹಪ್ರಿಯನಾದ ಮಹೀಪತಿರಾಜನು ಆ ವರ್ಷದ ಶ್ರಾವಣಮಾಸದಲ್ಲಿ ನಾಗಪಂಚಮೀ ಮಹೋತ್ಸವ ನಿಮಿತ್ತವಾಗಿ ದೆಹಲೀ ಪಟ್ಟಣಕ್ಕೆ ಬಂದನು.

೨. ಅಲ್ಲಿ ನಾನಾವಿಧವಾದ ಸಂಗೀತ ನರ್ತನ ಮೊದಲಾದುವುಗಳಿಂದ ವೈಭವವಾಗಿ ನಡೆಯುತ್ತಿದ್ದ ನಾಗೋತ್ಸವವನ್ನು ಸಮಗ್ರವಾಗಿ ನೋಡಿದನು. ಬಳಿಕ ಒಂದುದಿನ ಪೃಥ್ವೀರಾಜನಿಗೆ ನಮಸ್ಕರಿಸಿ ಅವನೊಡನೆ ವಿನಯದಿಂದ ಸಂಭಾಷಣೆಮಾಡುತ್ತಾ ಅವನನ್ನು ಕುರಿತು,

ರಾಜನ್ಮಹಾವತೀಗ್ರಾಮೇ ಕೀರ್ತಿಸಾಗರಮಧ್ಯಗೇ ।
ವಾಮನೋತ್ಸವಮತ್ಯಂತಂ ಯವವ್ರೀಹಿಸಮನ್ವಿತಃ ।
ಪಶ್ಯ ತ್ವಂ ತತ್ರ ಗತ್ವಾ ಚ ಮನ್ಯೈವ ವಚನಂ ಕುರು ॥ ೩ ॥

ಇತಿ ಶ್ರುತ್ವಾ ಮಹೀರಾಜೋ ಧುಂಧುಕಾರೇಣ ಸಂಯುತಃ ।
ಸಪ್ತಲಕ್ಷಬಲೈರ್ಯುಕ್ತಃ ಚಾಮುಂಡೇನ ಸಮನ್ವಿತಃ ।
ಪ್ರಾಪ್ತಃ ಶಿರೀಷವಿಪಿನೇ ತತ್ರ ವಾಸಮಕಾರಯತ್ ॥ ೪ ॥

ಮಹೀಪತಿಸ್ತು ನೃಪತಿಂ ನತ್ವಾ ವೈ ಚಂದ್ರವಂಶಿನಂ ।
ಉವಾಚ ವಚನಂ ದುಃಖೀ ಧೂರ್ತೋ ಮಾಯಾವಿಶಾರದಃ ॥ ೫ ॥

ರಾಜನ್ ಪ್ರಾಪ್ತೋ ಮಹೀರಾಜೋ ಯುದ್ಧಾರ್ಥೀ ತ್ವಾಮುಪಸ್ಥಿತಃ ।
ಚಂದ್ರಾವಲೀಂ ಚ ತನಯಾಂ ಬ್ರಹ್ಮಾನಂದಂ ತವಾತ್ಮಜಂ ।
ದಿವ್ಯಲಿಂಗಂ ಸಸಂಪೂಜ್ಯ ಬಲಾತ್ಕಾರಾದ್ಗ್ರಹಿಷ್ಯತಿ ॥ ೬ ॥

---

೩. "ಎಲೈ ರಾಜೇಂದ್ರನೇ! ಕೀರ್ತಿಸಾಗರದ ದಡದಲ್ಲಿರುವ ಮಹಾವತೀ ನಗರದಲ್ಲಿ ಅತ್ಯಂತ ವಿಜೃಂಭಣೆಯಿಂದ ವಾಮನೋತ್ಸವ ನಡೆಯುವುದು. ನೀನು ಯವ, ವ್ರೀಹಿ, ಧಾನ್ಯಸಮೇತನಾಗಿ ಅಲ್ಲಿಗೆ ಹೋಗಿ ಅದನ್ನು ನೋಡಿ ಅನಂತರ ನಾನು ಹೇಳಿದಂತೆ ನಡೆಯಿಸು" ಎಂದು ಹೇಳಿದನು.

೪. ಮಹೀಪತಿರಾಜನು ಈರೀತಿ ಹೇಳಿದುದನ್ನು ಪೃಥ್ವೀರಾಜನು ಕೇಳಿ ಧುಂಧುಕಾರ, ಚಾಮುಂಡ, ಇವರನ್ನು ಜತೆಮಾಡಿಕೊಂಡು ಏಳುಲಕ್ಷ ಸೈನ್ಯವನ್ನು ತೆಗೆದುಕೊಂಡು ಶಿರೀಷಾರಣ್ಯಕ್ಕೆ ಬಂದು ಅಲ್ಲಿ ಇಳಿದುಕೊಂಡಿದ್ದನು.

೫. ಇತ್ತ ಧೂರ್ತನೂ ಮಾಯಾವಿಯೂ ಆದ ಮಹೀಪತಿರಾಜನು ಚಂದ್ರ ವಂಶದ ರಾಜನಾದ ಪರಿಮಳನ ಬಳಿಗೆ ಬಂದು ನಮಸ್ಕರಿಸಿ ತುಂಬಾ ದುಃಖಿತನಾದವನಂತೆ ನಟಿಸುತ್ತಾ ಅವನನ್ನು ಕುರಿತು ಹೇಳತೊಡಗಿದನು.

೬. "ಎಲೈ ಪ್ರಭುವೇ! ಪೃಥ್ವೀರಾಜನು ನಿನ್ನ ಮೇಲೆ ಯುದ್ಧಮಾಡುವುದಕ್ಕಾಗಿ ಬಂದಿರುವನು. ತಾನು ಮಾಡಿರುವ ಪಾರ್ಥಿವ ಪೂಜಾರೂಪವಾದ ಪರಮೇಶ್ವರಾರಾಧನೆಯ ಮಹಿಮೆಯಿಂದ ಕೊಬ್ಬಿ ಹೋಗಿದ್ದಾನೆ. ನಿನ್ನ ಮಗಳಾದ ಚಂದ್ರಾವಲಿಯನ್ನೂ ಮಗನಾದ ಬ್ರಹ್ಮಾನಂದನನ್ನೂ ಬಲಾತ್ಕಾರವಾಗಿ ಹಿಡಿದುಕೊಂಡು ಹೋಗಬೇಕೆಂದು ಉದ್ದೇಶ ಮಾಡಿರುವನು.

ತಸ್ಮಾತ್ತ್ವಂ ಸ್ವಬಲೈಃ ಸಾರ್ಧಂ ಮಯಾ ಸಹ ಮಹಾಮತೇ ।
ಛದ್ಮನಾ ತಂ ಪರಾಜಿತ್ಯ ನಗರೇಽಸ್ಮಿನ್ ಸುಖೀ ಭವ ॥ ೭ ॥

ಇತಿ ಶ್ರುತ್ವಾ ದೈವವಶೋ ರಾಜಾ ಪರಿಮಲೋ ಬಲೀ ।
ಚತುರ್ಲಕ್ಷಬಲೈಃಸಾರ್ಧಂ ನಿಶೀಥೇ ಚ ಸಮಾಗತಃ ॥ ೮ ॥

ಶಯಿತಾನ್ ಕ್ಷತ್ರಿಯಾಞ್ಛೂರಾನ್ ಹತ್ವಾ ಪಂಚಸಹಸ್ರಕಾನ್ ।
ಶತಘ್ನೀಂ ರೋಷಣೀಂ ಚಕ್ರೇ ಬಹುಶೂರವಿನಾಶಿನೀಂ ॥ ೯ ॥

ತದೋತ್ಥಾಯ ಮಹೀರಾಜಃ ಕಟಿಮಾಬದ್ಧ್ಯ ಸಂಭ್ರಮಾತ್ ।
ವೈರಿಣಂ ಪರಮಂ ಮತ್ವಾ ಮಹದ್ಯುದ್ಧಮಚೀಕರತ್ ॥ ೧೦ ॥

ಯುದ್ಧ್ಯಂತೋಃ ಸೇನಯೋಸ್ತತ್ರ ಮಲನಾಪುತ್ರಗೃದ್ಧಿನೀ ।
ಶಾರದಾಮಾದರಾದ್ಗತ್ವಾ ಪೂಜಯಾಮಾಸ ಭಕ್ತಿತಃ ॥ ೧೧ ॥

---

೭. "ಆದ್ದರಿಂದ ನೀನು ನಿನ್ನ ಸೇನೆಯೊಡನೆ ನನ್ನ ಜತೆ ಬಾ, ಮೋಸದಿಂದ ಅವನನ್ನು ಸೋಲಿಸಿ ಜಯಶಾಲಿಯಾಗಿ ನಿನ್ನ ಪಟ್ಟಣಕ್ಕೆ ಬಂದು ಸುಖವಾಗಿರು" ಎಂದು ಹೇಳಿದನು.

೮. ಮಹೀಪತಿರಾಜನು ಹೀಗೆ ಹೇಳಿದ್ದನ್ನು ಕೇಳಿ ಅದೇ ನಿಜವೆಂದು ನಂಬಿ ಬಲಶಾಲಿಯಾದ ಆ ಪರಿಮಳರಾಜನು ದೈವಪ್ರೇರಿತನಾಗಿ ತನ್ನ ನಾಲ್ಕುಲಕ್ಷ ಸೇನೆಯೊಡನೆ ರಾತ್ರಿಯ ವೇಳೆಯಲ್ಲಿ ಪ್ರಯಾಣಹೊರಟನು.

೯. ಹೀಗೆ ಅನಿರೀಕ್ಷಿತರಾಗಿ ಬಂದು ಶತ್ರುಪಾಳೆಯದಲ್ಲಿ ಮಲಗಿ ನಿದ್ರಿಸುತ್ತಿದ್ದ ಐದುಸಾವಿರ ಮಂದಿ ಕ್ಷತ್ರಿಯ ವೀರರನ್ನು ಕೊಂದು ಅನೇಕ ಮಂದಿ ಹತವಾಗುವಂತೆ ಫಿರಂಗಿಗಳನ್ನು ಹೊಡೆಯಿಸಿದನು.

೧೦. ಆಗ ಪೃಥ್ವೀರಾಜನು ಗಾಬರಿಯಿಂದ ಎದ್ದು ಶತ್ರುವು ಬಲಶಾಲಿಯೆಂದು ತಿಳಿದು ಸೊಂಟವನ್ನು ಕಟ್ಟಿ ಹೊರಟು ಘೋರ ಯುದ್ಧವನ್ನು ಮಾಡಿದನು.

೧೧. ಎರಡು ಸೇನೆಗಳೂ ಹೀಗೆ ಯುದ್ಧಮಾಡುತ್ತಿರಲು ಅತ್ತಲಾಗಿ ಅರಮನೆಯಲ್ಲಿ ಮಲನಾದೇವಿಯು ಪುತ್ರಪ್ರೇಮದಿಂದ ಅವನ ಸುರಕ್ಷಿತತೆಗೋಸ್ಕರ ಶಾರದಾದೇವಿಯನ್ನು ಭಕ್ತಿ ಪ್ರೀತಿಗಳಿಂದ ಪೂಜಿಸಿ ಸ್ತುತಿಸಿದಳು.

ದೇವಿದೇವಿ ಮಹಾದೇವಿ ಸರ್ವದುಃಖವಿನಾಶಿನಿ ।
ಹರ ಮೇ ಸಕಲಾಂ ಬಾಧಾಂ ಕೃಷ್ಣಾಂಶಂ ಬೋಧಯಾಶು ಚ ॥ ೧೨ ॥

ಜಪ್ತ್ವಾಯುತಮಿಮಂ ಮಂತ್ರಂ ಹುತ್ವಾ ತರ್ಪಣಮಾರ್ಜನೇ ।
ಕೃತ್ವಾ ಸುಷ್ವಾಪ ತದ್ವೇಶ್ಮಂ ಸ್ತದಾ ತುಷ್ಟಾ ಸ್ವಯಂ ಶಿವಾ ॥ ೧೩ ॥

ಮಲನೇ ಮಹತೀ ಬಾಧಾ ಕ್ಷಯಂ ಯಾಸ್ಯತಿ ಮಾ ಶುಚಃ ॥ ೧೪ ॥

ಇತ್ಯುಕ್ತ್ವಾ ಶಾರದಾ ದೇವೀ ಕೃಷ್ಣಾಂಶಂ ಪ್ರತಿ ಚಾಗಮತ್ ।
ಪುತ್ರ ತೇ ಜನನೀ ಭೂಮಿರ್ಮಹೀರಾಜೇನ ಪೀಡಿತಾ ।
ಕ್ಷಯಂ ಯಾಸ್ಯತಿ ಶೀಘ್ರಂ ಚ ತಸ್ಮಾತ್ತ್ವಂ ತಾಂ ಸಮುದ್ಧರ ॥ ೧೫ ॥

---

೧೨. "ವಿಜಯಪ್ರದೆಯೂ ತೇಜಸ್ವಿನಿಯೂ ಆದ ಎಲೌ ಮಹಾದೇವಿಯೇ! ಸಕಲ ದುಃಖಗಳನ್ನು ನಾಶಮಾಡುವ ನೀನು ನಮಗೆ ಈಗ ಒದಗಿರುವ ಬಾಧೆಗಳನ್ನೆಲ್ಲಾ ಪರಿಹರಿಸಿ ಜಾಗ್ರತೆಯಾಗಿ ಕೃಷ್ಣಾಂಶನಿಗೆ ಯುದ್ಧಮಾಡುವ ಮನಸ್ಸುಂಟಾಗುವಂತೆ ಮಾಡು" ಎಂಬದಾಗಿ ದೈನ್ಯದಿಂದ ಪ್ರಾರ್ಥಿಸಿದಳು.

೧೩. ಈ ಅರ್ಥವುಳ್ಳ ಮಂತ್ರವನ್ನು ಹತ್ತುಸಾವಿರಸಾರಿ ಸ್ತೋತ್ರಮಾಡಿ ಮಂತ್ರಪೂರ್ವಕವಾಗಿ ಹೋಮ, ತರ್ಪಣ, ಮಾರ್ಜನಾದಿಗಳನ್ನು ನೆರವೇರಿಸಿ ತನ್ನ ಮನೆಯಲ್ಲಿ ಸುಖವಾಗಿ ಮಲಗಿಕೊಂಡಳು.

೧೪. ಆಗ ಶುಭಕರಳಾದ ಶಾರದಾದೇವಿಯು ಇವಳ ಸ್ತೋತ್ರಕ್ಕೆ ಸಂತುಷ್ಟಳಾಗಿ ಸ್ವಪ್ನದಲ್ಲಿ ದರ್ಶನಕೊಟ್ಟು "ಎಲೌ ಮಲನಾದೇವಿ! ನಿನಗೆ ಉಂಟಾಗಿರುವ ಈ ದೊಡ್ಡ ಕಷ್ಟವು ಶೀಘ್ರದಲ್ಲಿ ಪರಿಹಾರವಾಗುವುದು, ಇದಕ್ಕಾಗಿ ನೀನು ದುಃಖಿಸಬೇಡ" ಎಂದಳು.

೧೫. ಹೀಗೆ ಹೇಳಿ ಶಾರದೇವಿಯು ಕೃಷ್ಣಾಂಶನ ಹತ್ತಿರಕ್ಕೆ ಬಂದು "ವತ್ಸಾ! ನಿನ್ನ ಜನನಿಯಾದ ಭೂದೇವಿಯು (ನಿನ್ನ ರಾಜ್ಯವು) ಪೃಥ್ವೀರಾಜನಿಂದ ಪೀಡಿತೆಯಾಗಿ ನಾಶಹೊಂದುತ್ತಿರುವಳು. ನೀನು ಜಾಗ್ರತೆ ಹೋಗಿ ಅವಳನ್ನು ಉದ್ಧಾರ ಮಾಡು" ಎಂಬದಾಗಿ ಬೋಧನೆಮಾಡಿದಳು.

ಇತಿ ಶ್ರುತ್ವಾ ವಚೋ ದೇವ್ಯಾಸ್ಸ ವೀರೋ ವಿಸ್ಮಯಾನ್ವಿತಃ ।
ದೇವಕೀಂ ಪ್ರತಿ ಸಂಪ್ರಾಪ್ತಃ ಕಥಯಾಮಾಸ ಕಾರಣಂ ॥ ೧೬ ॥

ಸಾ ತು ಶ್ರುತ್ವಾ ವಚೋ ಘೋರಂ ಸ್ವರ್ಣವತ್ಯಾ ಸಮನ್ವಿತಾ ।
ರುರೋಧ ಭೃಶಮುದ್ವಿಗ್ನಾ ವಿಲಪ್ಯ ಬಹುಧಾ ಸತೀ ॥ ೧೭ ॥

ಕೃಷ್ಣಾಂಶಸ್ತು ತದಾ ದುಃಖೀ ದೇವಸಿಂಹಮುವಾಚ ಹ ।
ಕಿಂ ಕರ್ತವ್ಯಂ ಮಯಾ ವೀರ ದೇಹ್ಯಾಜ್ಞಾಂ ದಾರುಣೇ ಭಯೇ ॥ ೧೮ ॥

ತಚ್ಛ್ರುತ್ವಾ ತೇನ ಸಹಿತೋ ಲಕ್ಷಣೇನ ಸಮನ್ವಿತಃ ।
ಯಯೌ ದಿಗ್ವಿಜಯಾರ್ಥೇನ ವ್ಯಾಜೇನ ಚ ಮಹಾವತೀಂ ॥ ೧೯ ॥

ತಾಲನೋ ಭೀಮಸೇನಾಂಶೋ ಸೇನಾಪತಿರುದಾರಧೀಃ ।
ಸಪ್ತಲಕ್ಷ ಬಲೈಸ್ಸಾರ್ಧಂ ವಿನಾಹ್ಲಾದೇನ ಸಂಯಯೌ ॥ ೨೦ ॥

---

೧೬. ಶಾರದಾದೇವಿಯು ಈರೀತಿ ಹೇಳಿದುದನ್ನು ಕೇಳಿ, ವೀರನಾದ ಕೃಷ್ಣಾಂಶನು ಆಶ್ಚರ್ಯಹೊಂದಿ ತನ್ನ ತಾಯಿಯಾದ ದೇವಕೀದೇವಿಯ ಬಳಿಗೆ ಬಂದು (ಸ್ವಪ್ನದಲ್ಲಿ) ನಡೆದ ಸಂಗತಿಯನ್ನೆಲ್ಲಾ ಅವಳಿಗೆ ತಿಳಿಸಿದನು.

೧೭. ಆ ದೇವಕೀದೇವಿಯು ಭಯಂಕರವಾದ ಈ ಮಾತನ್ನು ಕೇಳಿ ಸೊಸೆಯಾದ ಸ್ವರ್ಣವತಿಯೊಡನೆ ದುಃಖಿಸುತ್ತಾ ಗಟ್ಟಿಯಾಗಿ ರೋದಿಸತೊಡಗಿದಳು.

೧೮. ಆಗ ಕೃಷ್ಣಾಂಶನು ಇದನ್ನು ನೋಡಿ ತುಂಬಾ ದುಃಖಗೊಂಡು ತ್ರಿಕಾಲ ಜ್ಞಾನಿಯಾದ ದೇವಸಿಂಹನನ್ನು ಕುರಿತು " ಅಯ್ಯಾ ವೀರನೇ ! ಈಗ ಒದಗಿರುವ ಭಯಂಕರವಾದ ವಿಪತ್ತಿನಲ್ಲಿ ನಾನು ಏನು ಮಾಡಬೇಕು ? ಅಪ್ಪಣೆ ಕೊಡು, ಅದರಂತೆ ನಡೆಯಿಸಲು ಸಿದ್ಧನಾಗಿರುವೆನು ಎಂದು ಹೇಳಿದನು.

೧೯. ಕೃಷ್ಣಾಂಶನು ಆಡಿದ ಮಾತನ್ನು ಕೇಳಿ ದೇವಸಿಂಹನು ಅವನೊಡನೆ ಲಕ್ಷಣನನ್ನು ಜತೆಗೆ ಕರೆದುಕೊಂಡು ದಿಗ್ವಿಜಯದ ನೆವದಿಂದ ಮಹಾವತೀನಗರಕ್ಕೆ ಹೊರಟನು.

೨೦. ಭೀಮಸೇನಾಂಶಸಂಭೂತನೂ, ಉದಾರಬುದ್ಧಿಯೂ, ಸೇನಾಪತಿಯೂ ಆದ ತಾಲನನು ಆಹ್ಲಾದನನ್ನು ಅಲ್ಲಿಯೇ ಬಿಟ್ಟು, ತನ್ನ ಏಳುಲಕ್ಷಸೇನೆಯೊಡನೆ ಮಹಾವತೀನಗರಕ್ಕೆ ಹೊರಟನು

ಕಲ್ಪಕ್ಷೇತ್ರಮುಪಾಗಮ್ಯ ಯೋಗಿನಸ್ತೇ ತದಾಭವನ್ ।
ಸೇನಾಂ ನಿವೇಶಯಾಮಾಸ ವಿಪಿನೇ ತತ್ರ ದಾರುಣೇ ॥ ೨೧ ॥

ಕೃಷ್ಣಾಂಶಸ್ತಾಲನೋ ದೇವೋ ಲಕ್ಷಣೋ ಬಲವತ್ತರಃ ।
ಗೃಹೀತ್ವಾ ಲಾಸ್ಯವಸ್ತೂನಿ ಯುದ್ಧಭೂಮಿಮುಪಾಗಮತ್ ॥ ೨೨ ॥

ಸಪ್ತಾಹಂ ಚ ತಯೋರ್ಯುದ್ಧಂ ಜಾತಂ ಮೃತ್ಯುವಿವರ್ಧನಂ ।
ಸಪ್ತಮೇಽಹ್ನಿ ತೇ ವೀರಾಸ್ಸಂಪ್ರಾಪ್ತಾ ರಣಮೂರ್ಧನಿ ॥ ೨೩ ॥

ತಸ್ಮಿನ್ದಿನೇ ಮಹಾಭಾಗ ಮಹದ್ಯುದ್ಧಮವರ್ತತ ॥ ೨೪ ॥

ದೃಷ್ಟ್ವಾ ಪರಾಜಿತಂ ಸೈನ್ಯಂ ರಾಜಾ ಪರಿಮಲೋ ಬಲೀ ।
ರಥಸ್ಥಃ ಚಾಪಮಾದಾಯ ಮಹೀರಾಜಮುಪಾಯಯೌ ॥ ೨೫ ॥

---

೨೧. ಹೀಗೆ ಪ್ರಯಾಣಮಾಡುತ್ತಾ ದಾರಿಯಲ್ಲಿ ಕಲ್ಪಕ್ಷೇತ್ರಕ್ಕೆ ಬಂದನಂತರ ತಮ್ಮ ಸೇನೆಯನ್ನು ಭಯಂಕರವಾದ ಆ ಕಾಡಿನಲ್ಲಿ ನಿಲ್ಲಿಸಿ ಕೃಷ್ಣಾಂಶ ಮೊದಲಾದವರೆಲ್ಲರೂ ಯೋಗಿಗಳ ವೇಷವನ್ನು ಧರಿಸಿಕೊಂಡು ಬಳಿಕ ಮುಂದೆ ಸಾಗಿದರು.

೨೨. ಕೃಷ್ಣಾಂಶ, ತಾಲನ, ದೇವಸಿಂಹ ಬಲಶಾಲಿಯಾದ ಲಕ್ಷಣ ಇವರೆಲ್ಲಾ ನಾಟ್ಯಕ್ಕೆ ಉಪಯುಕ್ತವಾದ ಸಲಕರಣೆಗಳ ಸಮೇತವೇ ಎಲ್ಲರೂ ಸಮರಾಂಗಣಕ್ಕೆ ಬಂದಿದ್ದರು.

೨೩. ಪರಿಮಳರಾಜನ ಕಡೆಯವರಿಗೂ ಪೃಥ್ವೀರಾಜನ ಕಡೆಯವರಿಗೂ ಆದುವರೆಗೆ ಆರುದಿನಗಳಕಾಲ ಘೋರಯುದ್ಧವು ನಡೆದು ಬಹುಮಂದಿ ಶೂರರು ಮೃತ್ಯುವಿಗೆ ತುತ್ತಾಗಿದ್ದರು.

೨೪. ಏಳನೆಯದಿನ ಕೃಷ್ಣಾಂಶ ಮೊದಲಾದ ವೀರರೆಲ್ಲರೂ ಯುದ್ಧಾಂಗಣಕ್ಕೆ ಬಂದರು ಅಯ್ಯಾ ಮಹಾಭಾಗನಾದ ಶೌನಕನೇ ! ಆ ದಿನವೂ ದೊಡ್ಡ ಯುದ್ಧ ನಡೆಯಿತು.

೨೫. ಆದರೆ ಪರಿಮಳರಾಜನ ಸೈನ್ಯವು ಸೋತುಹೋಯಿತು. ಬಲಶಾಲಿಯಾದ ಪರಿಮಳರಾಜನು ತನ್ನ ಸೇನೆ ಈರೀತಿ ಸೋತುದನ್ನು ನೋಡಿ ತಾನೇ ರಥವನ್ನೇರಿ ಧನುರ್ಧಾರಿಯಾಗಿ ಪೃಥ್ವೀರಾಜನನ್ನು ಎದುರಿಸಿದನು.

ಯಾದವಶ್ಚ ಗಜಾರೂಢಸ್ತದಾ ಚಂದ್ರಾವಲೀಪತಿಃ ।
ಧುಂಧುಕಾರಂ ಸಮಾಹೂಯ ಧನುರ್ಯುದ್ಧಮಚೀಕರತ್ ॥ ೨೬ ॥

ಹರಿನಾಗರಮಾರುಹ್ಯ ಬ್ರಹ್ಮಾನಂದೋ ಮಹಾಬಲಃ ।
ತಾರಕಂ ಶತ್ರುಮಾಹೂಯ ಧನುರ್ಯುದ್ಧಂ ಚಕಾರ ಹ ॥ ೨೭ ॥

ಮರ್ದನಂ ರಾಜಪುತ್ರಂ ಚ ರಣಜಿದ್ಗಜಸಂಸ್ಥಿತಃ ।
ಸ್ವಶರೈಸ್ತಾಡಯಾಮಾಸ ತತ್ಸುತಂ ಚ ಜಘಾನ ಹ ॥ ೨೮ ॥

ರೂಪಣೋ ವೈ ಶರದನಂ ಹಯಾರೂಢೋ ಜಗಾಮ ಹ ।
ಆಭೀರೀತನಯೋ ಜಾತೋ ಮದನೋ ನಾಮ ವೈ ಬಲೀ ।
ನೃಹರಂ ರಾಜಪುತ್ರಂ ಚ ಶಂಖಾಂಶಶ್ಚ ಜಗಾಮ ಹ ॥ ೨೯ ॥

ತೇಷು ಸಂಗ್ರಾಮಮೇತೇಷು ಚಾಮುಂಡೋಽಯುತಸೈನ್ಯಪಃ ।
ಮಹೀಪತೇಶ್ಚ ವಚನಂ ಮತ್ವಾ ನಗರಮಾಯಯೌ ॥ ೩೦ ॥

---

೨೬. ಚಂದ್ರಾವಲಿಯ ಗಂಡನಾದ ಯಾದವನೂ ಸಹ ಆಗ ತನ್ನ ಗಜವನ್ನು ಏರಿ ಶತ್ರುಪಕ್ಷದ ಧುಂಧುಕಾರನನ್ನು ಎದುರಿಸಿ ಬಾಣಗಳನ್ನು ಪ್ರಯೋಗಿಸಿ ಯುದ್ಧ ಮಾಡಿದನು.

೨೭. ಮಹಾಬಲಶಾಲಿಯಾದ ಬ್ರಹ್ಮಾನಂದನೂ ಸಹ ಹರಿನಾಗರವೆಂಬ ಕುದುರೆಯನ್ನೇರಿ ಶತ್ರುವಾದ ತಾರಕನನ್ನು ಎದುರಿಸಿ ಬಾಣಯುದ್ಧ ಮಾಡಿದನು.

೨೮. ರಣಜಿತ್‌ಕುಮಾರನು ಗಜವನ್ನು ಏರಿ ಮರ್ದನನೆಂಬ ರಾಜಪುತ್ರನನ್ನು ಎದುರಿಸಿ ತನ್ನ ಬಾಣಗಳಿಂದ ಅವನನ್ನು ಹೊಡೆದುದಲ್ಲದೆ ಅವನ ಮಗನನ್ನು ಕೊಂದುಹಾಕಿದನು.

೨೯. ರೂಪಣನು ತನ್ನ ಕುದುರೆಯನ್ನೇರಿ ಸರದನನೆಂಬವನನ್ನು ಎದುರಿಸಿದನು. ಶೂದ್ರಸ್ತ್ರೀಯಲ್ಲಿ ಜನಿಸಿದವನೂ ವಿಷ್ಣುಶಂಖಾಂಶಸಂಭೂತನೂ ಬಲಶಾಲಿಯೂ ಆದ ಮದನನು ನೃಹರನೆಂಬ ರಾಜಪುತ್ರನನ್ನು ಎದುರಿಸಿದನು

೩೦ ಈರೀತಿ ಇವರೆಲ್ಲರೂ ಪರಸ್ಪರ ಯುದ್ಧಮಾಡುತ್ತಿರಲು ಚಾಮುಂಡನು ಮಹೀಪತಿರಾಜನ ದುರಾಲೋಚನೆಯ ಮಾತಿನ ಪ್ರಕಾರ ಹತ್ತುಸಾವಿರ ಸೇನೆಯೊಡನೆ ಮಹಾವತೀನಗರಕ್ಕೆ ಹೋದನು.

ದದರ್ಶ ನಗರೀಂ ರಮ್ಯಾಂ ಚತುರ್ವರ್ಣಸಮನ್ವಿತಾಂ ।
ಧನಧಾನ್ಯಯುತಾಂ ವೀರೋ ದೇವೀಭಕ್ತಿಪರಾಯಣಃ ॥ ೩೧ ॥

ಮಹೀಪತಿಸ್ತು ವೈ ಧೂರ್ತೋ ದುರ್ಗದ್ವಾರಿ ಸಮಾಗತಃ ।
ಚಾಮುಂಡೇನ ಯುತಃ ಪಾಪೀ ರಾಜಗೇಹಮುಪಾಯಯೌ ॥ ೩೨ ॥

ಮಲನಾ ಭ್ರಾತರಂ ದೃಷ್ಟ್ವಾ ವಚನಂ ಪ್ರಾಹ ದುಃಖಿತಾ ।
ಭಾದ್ರಕೃಷ್ಣಾಷ್ಟಮೀ ಚಾದ್ಯ ಯುವವ್ರೀಹಿ ಗೃಹೇ ಸ್ಥಿತಂ ॥ ೩೩ ॥

ನ ಪ್ರಾಪ್ತಂ ಜಲಸಂಸ್ಥಾನೇ ಸುಪುಣ್ಯೇ ಕೀರ್ತಿಸಾಗರೇ ।
ಮಹೀರಾಜೋ ಮಹಾಪಾಪೀ ವಾಮನೋತ್ಸವಮಾಗತಃ ॥ ೩೪ ॥

---

೩೧. ನಾಲ್ಕುವರ್ಣದ ಜನರಿಂದ ನಿಬಿಡವೂ ಮನೋಹರವೂ ಆದ ಆ ಪಟ್ಟಣವನ್ನು ನೋಡಿ ಆ ಪಟ್ಟಣವು ಧನಧಾನ್ಯ ಸಂಪದ್ಯುಕ್ತವಾಗಿದ್ದುದನ್ನು ಸಮಗ್ರವಾಗಿ ಸಂದರ್ಶಿಸಿ ಮುಂದೆ ಸಾಗುತ್ತಾ, ದೇವೀಭಕ್ತಿಪರಾಯಣನಾದ ಆ ವೀರನು ಹಾಗೇ ನೋಡಿಕೊಂಡು ದುರ್ಗದ ಬಾಗಿಲಿಗೆ ಬಂದನು.

೩೨. ಮಹಾಪಾಪಿಯೂ ವಂಚಕನೂ ಆದ ಮಹೀಪತಿರಾಜನೂ ಕೂಡ ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದು ಚಾಮುಂಡನೊಡನೆ ಅರಮನೆಯೊಳಕ್ಕೆ ಪ್ರವೇಶಿಸಿದನು.

೩೩. ತನ್ನ ಸಹೋದರನಾದ ಮಹೀಪತಿರಾಜನು ಬಂದುದನ್ನು ನೋಡಿ ಮಲನಾದೇವಿಯು ದುಃಖದಿಂದ ಅವನನ್ನು ಕುರಿತು “ಈ ದಿವಸ ಭಾದ್ರಪದ ಕೃಷ್ಣ ದಶಮಿಯಾಗಿದೆ. ಮನೆಯಲ್ಲಿ ಯುವ ವ್ರಿಹಿ ಮೊದಲಾದ ಧಾನ್ಯಾದಿಗಳು ಬೇಕಾದ ಹಾಗೆ ಇವೆ.”

೩೪. “ಈ ದಿವಸ ಕೀರ್ತಿಸಾಗರಸರೋವರದ ದಡದಲ್ಲಿ ಮಹಾಪುಣ್ಯಕರವಾದ ವಾಮನೋತ್ಸವವನ್ನು ಆಚರಿಸಬೇಕಾಗಿತ್ತು. ಈ ಸಮಯಕ್ಕೆ ಸರಿಯಾಗಿ ಪಾಪಿಯಾದ ಪೃಥ್ವೀರಾಜನು ದಂಡೆತ್ತಿ ಬಂದು ಅದಕ್ಕೆ ಅಡ್ಡಿಯಾದನು.

ವಿನಾಹ್ಲಾದಂ ಚ ಕೃಷ್ಣಾಂಶಂ ಮಹದ್ದುಃಖಮುಪಾಗತಂ ।
ಇತ್ಯುಕ್ತಸ್ಸ ವಿಹಸ್ಯಾಹ ಬ್ರಾಹ್ಮಣೋಽಯಂ ಮಹಾಬಲೀ ।
ಕಾನ್ಯಕುಬ್ಜಾತ್ಸಮಾಯಾತಃ ಕೃಷ್ಣಾಂಶೇನ ಪ್ರಯೋಜಿತಃ ॥ ೩೫ ॥

ದೇವೀದತ್ತಶ್ಚ ನಾಮ್ನಾಽಯಂ ಸ ತೇ ಕಾರ್ಯಂ ಕರಿಷ್ಯತಿ ।
ಶ್ರುತ್ವಾ ಚಂದ್ರಾವಲೀ ದೇವೀ ಸರ್ವಭೂಷಣಸಂಯುತಾ ॥ ೩೬ ॥

ಕಾಮಾಗ್ನಿಪೀಡಿತಂ ವಿಪ್ರಂ ಚಾಮುಂಡಂ ಚ ದದರ್ಶ ಹ ।
ಮಾತರಂ ಪ್ರತಿ ಚಾಗಮ್ಯ ವಚನಂ ಪ್ರಾಹ ನಿರ್ಭರಂ ॥ ೩೭ ॥

ಧೂರ್ತೋಽಯಂ ಬ್ರಾಹ್ಮಣೋ ಮಾತರ್ನಿಶ್ಚಯಂ ಮಾಂ ಹರಿಷ್ಯತಿ ।
ಕೋಽಯಂ ವೀರೋ ನ ಜಾನಾಮಿ ಕಥಂ ಯಾಮಿ ಪತಿವ್ರತಾ ॥ ೩೮ ॥

---

೩೫. "ಈ ಅವಗಡದ ಸಮಯದಲ್ಲಿ ಆಹ್ಲಾದನೂ ಕೃಷ್ಣಾಂಶನೂ ಇಲ್ಲಿ ಇಲ್ಲದಿರುವುದರಿಂದ ನಮಗೆ ಈ ಮಹಾದುಃಖವುಂಟಾಯಿತು" ಎಂದು ಹೇಳಿದಳು. ಮಲನಾದೇವಿ ಈ ಪ್ರಕಾರ ಹೇಳಿದುದನ್ನು ಕೇಳಿ ಮಹೀಪತಿರಾಜನು ಸ್ವಲ್ಪ ನಕ್ಕು, ಸಹೋದರಿ ಮಲನಾದೇವಿಗೆ ತನ್ನ ಜತೆ ಬಂದಿದ್ದ ಚಾಮುಂಡನನ್ನು ತೋರಿಸಿ, "ಈ ಬ್ರಾಹ್ಮಣನು ಮಹಾಬಲಶಾಲಿಯು, ಕನ್ಯಕುಬ್ಜದಿಂದ ಬಂದಿದ್ದಾನೆ. ಇವನನ್ನು ಕೃಷ್ಣಾಂಶನೇ ಇಲ್ಲಿಗೆ ಕಳುಹಿಸಿದನು."

೩೬. "ಇವನನ್ನು ದೇವೀದತ್ತನೆಂದು ಕರೆಯುವರು. ಈ ಮಹಾಪುರುಷನು ನಿನ್ನ ಕಾರ್ಯವನ್ನು ನೆರವೇರಿಸಿಕೊಡುವನು" ಎಂದು ಹೇಳುತ್ತಿರಲು, ಆಕೆಯ ಪುತ್ರಿ ಚಂದ್ರಾವಳೀದೇವಿಯು ಇದನ್ನು ಕೇಳಿ, ಆ ವಿಪ್ರನ ಸತ್ವಪರೀಕ್ಷೆಗಾಗಿ ತನ್ನ ಒಡವೆಗಳನ್ನೆಲ್ಲಾ ಧರಿಸಿಕೊಂಡು ಆವನೆದುರಿಗೆ ಬಂದಳು.

೩೭. ಚಾಮುಂಡ ಬ್ರಾಹ್ಮಣನು ಇವಳನ್ನು ನೋಡಿ ಕಾಮಪೀಡಿತನಾದನು. ಅದನ್ನು ಕಂಡು ಆಕೆ ಕೂಡಲೆ ತನ್ನ ತಾಯಿಯಾದ ಮಲನಾದೇವಿಯ ಬಳಿಗೆ ಬಂದು ನಿರ್ಭಯವಾಗಿ ಹೀಗೆಂದಳು.

೩೮. "ತಾಯೀ! ಈ ಬ್ರಾಹ್ಮಣನು ಮೋಸಗಾರನೆಂದು ಕಾಣುವುದು. ನಿಜವಾಗಿಯೂ ನನ್ನನ್ನು ಅಪಹರಿಸಲು ಹವಣಿಸಿ ಈರೀತಿ ಬಂದಿರುವನು. ಈತನು ಯಾರೋ ವೀರನಾಗಿರಬೇಕು. ನನಗೆ ತಿಳಿಯದು. ಪತಿವ್ರತೆಯಾದ ನಾನು ಇವನೊಡನೆ ಹೇಗೆ ಹೋಗಲಿ? ನಾನು ಹೋಗಲಾರೆ" ಎಂದು ತಾಯಿಯ ಸಂಗಡ ನಿರ್ಧರವಾಗಿ ಹೇಳಿದಳು.

ಇತಿ ಶ್ರುತ್ವಾ ವಚಸ್ತಸ್ಯಾ ಲಜ್ಜಿತಸ್ಸ ಮಹೀಪತಿಃ ।
ಚಾಮುಂಡೇನ ಯುತಃ ಪ್ರಾಪ್ತೋ ಯತ್ರಾಭೂತ್ಸ ಮಹಾರಣಃ ॥ ೩೯ ॥

ಏತಸ್ಮಿನ್ನಂತರೇ ತೇ ವೈ ಬ್ರಹ್ಮಾದ್ಯಾಸ್ತೈಃ ಪರಾಜಿತಾಃ ।
ತ್ಯಕ್ತ್ವಾ ಯುದ್ಧಂ ಗೃಹಂ ಪ್ರಾಪ್ತಾಸ್ತ್ರಿಲಕ್ಷಬಲಸಂಯುತಾಃ ॥ ೪೦ ॥

ಕಪಾಟಂ ಸುದೃಢಂ ಕೃತ್ವಾ ಮಹಾಚಿಂತಾಮುಪಾಯಯುಃ ।
ಮಹೀರಾಜಸ್ತು ಬಲವಾನ್ಮಹೀಪತ್ಯನುಮೋದಿತಃ ॥ ೪೧ ॥

ಪ್ರಮದಾವನಮಾಗತ್ಯ ಷಷ್ಟಿಲಕ್ಷಬಲಾನ್ವಿತಾಃ ।
ಜುಗೋಪ ತತ್ರ ಬಲವಾನ್ ವಾಮನೋತ್ಸವಹೇತವೇ ॥ ೪೨ ॥

ತಾಲನಾದ್ಯಾಶ್ಚ ಚತ್ವಾರಃ ಶಿರೀಷಾಖ್ಯಪುರಂ ಯಯುಃ ।
ಸ್ಥಲೀಭೂತಂ ಚ ತಂ ಗ್ರಾಮಂ ದೃಷ್ಟ್ವಾ ತೇ ವಿಸ್ಮಯಾನ್ವಿತಾಃ ।
ಪ್ರಯಯುಸ್ತೇ ಸುಖಭ್ರಷ್ಟಾ ದದೃಶುರ್ಹಿಮದಂ ಮುನಿಂ ॥ ೪೩ ॥

---

೩೯. ಚಂದ್ರಾವಳಿಯು ಹೀಗೆ ಹೇಳಿದುದನ್ನು ಕೇಳಿ ಮಹೀಪತಿರಾಜನು ಲಜ್ಜಿತನಾಗಿ ಚಾಮುಂಡನೊಡನೆ ಹಿಂದಿರುಗಿ ಹೊರಟು ಘೋರಯುದ್ಧ ನಡೆಯುತ್ತಿದ್ದ ಸ್ಥಳಕ್ಕೆ ಬಂದನು.

೪೦. ಇಷ್ಟರೊಳಗೆ ಬ್ರಹ್ಮಾನಂದ ಮೊದಲಾದವರೆಲ್ಲರೂ ಪೃಥ್ವೀರಾಜನ ಪಕ್ಷದವರಿಂದ ಪರಾಜಿತರಾಗಿ ಯುದ್ಧಮಾಡುವುದನ್ನು ಬಿಟ್ಟು, ಉಳಿದುಳಿದ ಮೂರು ಲಕ್ಷ ಸೈನ್ಯದೊಡನೆ ಹಿಂದಿರುಗಿದರು.

೪೧. ಬಳಿಕ ಅವರೆಲ್ಲ ಊರಿಗೆ ಓಡಿ ಬಂದು, ಕೋಟೆಯನ್ನು ಹೊಕ್ಕು ಕೋಟೆಯ ಬಾಗಿಲನ್ನು ಭದ್ರವಾಗಿ ಮುಚ್ಚಿಸಿ ಕುಳಿತು ತುಂಬಾ ಚಿಂತೆಗೊಳಗಾದರು.

೪೨. ಪೃಥ್ವೀರಾಜನು ಮಹೀಪತಿರಾಜನ ಮಾತಿನ ಪ್ರಕಾರ ತನ್ನ ಆರುಲಕ್ಷ ಸೇನೆಯೊಡನೆ ವಾಮನೋತ್ಸವನಿಮಿತ್ತದಿಂದ ಪ್ರಮದಾವನಕ್ಕೆ ಬಂದು ಆ ಪ್ರದೇಶವನ್ನು ರಕ್ಷಿಸುತ್ತಿದ್ದನು

೪೩. ತಾಲನನೇ ಮುಂತಾದ ನಾಲ್ಕುಮಂದಿ ವೀರರೂ ಶಿರೀಷಪಟ್ಟಣಕ್ಕೆ ಬಂದು, ಆ ಗ್ರಾಮವು ಜನಶೂನ್ಯವಾಗಿದ್ದುದನ್ನು ನೋಡಿ ಆಶ್ಚರ್ಯಹೊಂದಿದರು. ಬಳಿಕ ಅವರೆಲ್ಲರೂ ತಮ್ಮ ಸುಖಗಳನ್ನು ಲಕ್ಷಿಸದೆ ಹಿಮದನೆಂಬ ಮಹರ್ಷಿಯ ಆಶ್ರಮವನ್ನು ಸೇರಿ ಅವನ ದರ್ಶನಕ್ಕೆ ಹೋದರು.

ಪ್ರಣಮ್ಯೋಚುಃ ಶುಚಾವಿಷ್ಟಾ ಬಲಖಾನಿರ್ಮುನೇ ಬಲೀ ।
ಕ್ವ ಗತಃ ಸಮರಶ್ಲಾಘೀ ಸ ಚ ಕುನಾಗರೈರ್ಯುತಃ　　　॥ ೪೪ ॥

ಶ್ರುತ್ವಾಹ ಹಿಮದೋ ಯೋಗೀ ಮಹೀರಾಜೇನ ನಾಶಿತಃ ।
ಛದ್ಮನಾ ಬಲಖಾನಿಶ್ಚ ತಸ್ಯೇಯಂ ಸುಂದರೀಚಿತಾ　　　॥ ೪೫ ॥

ಇತಿ ಶ್ರುತ್ವಾ ವಚೋ ಘೋರಂ ಕೃಷ್ಣಾಂಶಃ ಶೋಕತತ್ಪರಃ　　　॥ ೪೬ ॥

ವಿಲಲಾಪ ಭೃಶಂ ತತ್ರ ಹಾ ಬಂಧೋ ಧರ್ಮಜಾಂಶಕ ।
ತ್ವದ್ಯತೇ ಭೂತಲೇ ವಾಸೋ ಮಮಾತೀವ ಭಯಂಕರಃ　　　॥ ೪೭ ॥

ದರ್ಶನಂ ದೇಹಿ ಮೇ ಕ್ಷಿಪ್ರಂ ನೋಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥ ೪೮ ॥

---

೪೪. ಆ ಮಹರ್ಷಿಗೆ ನಮಸ್ಕರಿಸಿ ದುಃಖಾಕ್ರಾಂತರಾಗಿ, "ಸ್ವಾಮಿ ಮಹರ್ಷಿಗಳೇ ! ಸಮರಶ್ಲಾಘಿಯೂ ಬಲಶಾಲಿಯೂ ಆದ ಬಲಖಾನಿ ಎಲ್ಲಿ ಹೋದನು ? ಒಂದುವೇಳೆ ಆ ಪಟ್ಟಣದ ಜನಗಳು ಕೆಟ್ಟವರಾಗಿದ್ದರೂ ಅವನನ್ನು ಹೇಗೆ ಬಿಟ್ಟುಕೊಟ್ಟರು ? " ಎಂದು ಕೇಳಿದರು.

೪೫. ಯೋಗಿಯಾದ ಹಿಮದ ಮಹಾಮುನಿಯು ಇವರ ಮಾತನ್ನು ಕೇಳಿ ಅವರನ್ನು ಕುರಿತು " ಪೃಥ್ವೀರಾಜನು ಮೋಸದಿಂದ ಬಲಖಾನಿಯನ್ನು ಕೊಂದುಹಾಕಿದನು. ಈ ಮುಂದೆ ಕಾಣುತ್ತಿರುವುದೇ ಪವಿತ್ರವಾದ ಅವನ ಚಿತೆ " ಎಂದು ಹೇಳಿದನು.

೪೬. ಕರ್ಣಕಠೋರವಾದ ಈ ಮಾತನ್ನು ಕೇಳಿ ಕೃಷ್ಣಾಂಶನು ಶೋಕಾಕುಲನಾಗಿ ಚಿಂತೆಮಾಡುತ್ತಾ ಈರೀತಿ ಪ್ರಲಾಪಿಸಿದನು.

೪೭. " ಧರ್ಮಪುರುಷಾಂಶಸಂಭೂತನಾದ ಬಂಧುವೇ ! ನಿನ್ನನ್ನು ಅಗಲಿ ಭೂಮಿಯಲ್ಲಿ ವಾಸಿಸುವುದು ನನಗೆ ಭಯಂಕರವಾಗಿದೆ."

೪೮. " ಅಯ್ಯೋ ಬಂಧುವೇ ! ಜಾಗ್ರತೆ ನನಗೆ ದರ್ಶನ ಕೊಡು, ಇಲ್ಲದಿದ್ದರೆ ನಾನು ಪ್ರಾಣಬಿಡುವೆನು ಎಂದು " ಗಟ್ಟಿಯಾಗಿ ಅತ್ತನು.

ಇತ್ಯುಕ್ತಃ ಸ ತು ತದ್ಭ್ರಾತಾ ಬಲಖಾನಿಃ ಪಿಶಾಚಗಃ ।
ಸಪತ್ನೀಕಃಸಮಾಯಾತೋ ರೋದನಂ ಕೃತವಾನ್ ಬಹು ।
ಕಥಿತ್ವಾ ಸರ್ವವೃತ್ತಾಂತಂ ಯಥಾಜಾತಂ ಸ್ವವೈಶಸಂ ॥ ೪೯ ॥

ದಿವ್ಯಂ ವಿಮಾನಮಾರುಹ್ಯ ಗತೋ ನಾಕಂ ಮನೋರಮಂ ।
ಯುಧಿಷ್ಠಿರೇ ತಸ್ಯ ಕಲಾ ಬಲಖಾನೇರ್ಲಯಂ ಗತಾ ॥ ೫೦ ॥

ತದಾ ದುಃಖೀ ಸ ಕೃಷ್ಣಾಂಶಃ ಕೃತ್ವಾ ಭ್ರಾತುಸ್ತಿಲಾಂಜಲಿಂ ।
ಮಹಾವತೀಂ ಸಮಾಗತ್ಯ ರಾಜಗೇಹಮುಪಾಯಯೌ ॥ ೫೧ ॥

ವೇಣುಶಬ್ದೇನ ಕೃಷ್ಣಾಂಶೋ ನನರ್ತ ಜನಮೋಹನಃ ।
ವೀಣಾಪ್ರವಾದ್ಯಂ ಚ ಜಗೌ ತಾಲನೋ ಯೋಗಿರೂಪಧೃಕ್ ॥ ೫೨ ॥

---

೪೯. ಈರೀತಿ ಕೃಷ್ಣಾಂಶನು ರೋದನಮಾಡುತ್ತಿರಲು ಕೃಷ್ಣಾಂಶನ ಅಣ್ಣನಾದ ಬಲಖಾನಿಯು ಪತ್ನೀಸಮೇತನಾಗಿ ಪಿಶಾಚಿ ರೂಪದಲ್ಲಿ ಬಂದು ರೋದಿಸುತ್ತಾ ತನಗೆ ಮೋಸದಿಂದ ಮರಣಪ್ರಾಪ್ತಿಯಾದ ಕ್ರಮವನ್ನೆಲ್ಲಾ ಸ್ವಲ್ಪವೂ ಬಿಡದಂತೆ ಕೃಷ್ಣಾಂಶನಿಗೆ ತಿಳಿಸಿದನು.

೫೦. ಅನಂತರ ಅವನು ದಿವ್ಯವಿಮಾನವನ್ನೇರಿ ಮನೋಹರವಾದ ಸ್ವರ್ಗವನ್ನು ಸೇರಿದನು. ಈ ಬಲಖಾನಿಯಲ್ಲಿ ಆವಿರ್ಭವಿಸಿದ್ದ ಕಲಾಂಶವು ಹೋಗಿ ಯುಧಿಷ್ಠಿರನಲ್ಲಿ ಸೇರಿಕೊಂಡಿತು.

೫೧. ಬಳಿಕ ಕೃಷ್ಣಾಂಶನು ತನ್ನ ಅಣ್ಣನಿಗಾಗಿ ದುಃಖಿಸುತ್ತ ತಿಲಾಂಜಲಿಯನ್ನು ಕೊಟ್ಟು, ಅನಂತರ ಯೋಗಿವೇಷದಿಂದಲೇ ಮಹಾವತೀ ನಗರಕ್ಕೆ ಬಂದು ಅರಮನೆಯನ್ನು ಸೇರಿದನು.

೫೨. ಅಲ್ಲಿ ಕೃಷ್ಣಾಂಶನು ಕೊಳಲನ್ನು ಬಾಜಿಸುತ್ತಾ ನರ್ತನಮಾಡಿ ಜನಗಳನ್ನೆಲ್ಲಾ ಸಂತೋಷಪಡಿಸಿದನು. ಯೋಗಿರೂಪವನ್ನು ಧರಿಸಿದ್ದ ತಾಲನನು ವೀಣೆಯನ್ನು ನುಡಿಸಿದನು.

ಮೃದಂಗಧ್ವನಿನಾ ದೇವೋ ಲಕ್ಷಣಃ ಕಾಂಸ್ಯನಾದಕಃ ।
ಸುಸ್ವರಂ ಚ ಜಗೌ ತತ್ರ ಶ್ರುತ್ವಾ ರಾಜಾ ವಿಮೋಹಿತಃ ॥ ೫೩ ॥

ತದಾ ತು ಮಲನಾ ರಾಜ್ಞೀ ದೃಷ್ಟ್ವಾ ತದ್ವಾಮನೋತ್ಸವಂ ।
ರುದಿತ್ವಾ ವಚನಂ ಪ್ರಾಹ ಕ್ವ ಗತೋ ಮೇ ಪ್ರಿಯಂಕರಃ ॥ ೫೪ ॥

ಕೃಷ್ಣಾಂಶೋ ಬಂಧುಸಹಿತಃ ತ್ಯಕ್ತ್ವಾ ಮಾಂ ಮಂದಭಾಗಿನೀಂ ।
ತ್ವಯಾ ವಿರಹಿತೋ ದೇಶೋ ಮಹೀರಾಜೇನ ಲುಂಠಿತಃ ॥ ೫೫ ॥

ಇತ್ಯುಕ್ತಾಂ ಮಲನಾಂ ದೃಷ್ಟ್ವಾ ಕೃಷ್ಣಾಂಶಃ ಸ್ನೇಹಕಾತರಃ ।
ವಚನಂ ಪ್ರಾಹ ನಮ್ರಾತ್ಮಾ ದೇವಿ ತ್ವಂ ವಚನಂ ಕುರು ॥ ೫೬ ॥

---

೫೩. ದೇವಸಿಂಹನು ಮೃದಂಗವನ್ನು ಬಾರಿಸಿದನು. ಲಕ್ಷಣನು ತಾಳ ಹಾಕುತ್ತಿದ್ದನು. ಹೀಗೆ ಅವರೆಲ್ಲರೂ ಸುಸ್ವರದಿಂದ ಮಧುರಗಾನ ಮಾಡುತ್ತಾ ಅಲ್ಲಿ ಸೇರಿದ್ದ ಜನಗಳನ್ನೆಲ್ಲಾ ಸಂತೋಷಪಡಿಸಿದರು. ಪರಿಮಳರಾಜನು ಈ ನರ್ತನ ಸಂಗೀತಾದಿಗಳನ್ನು ಪರಾಮರ್ಶಿಸಿ ಸಂತೋಷಪರವಶನಾದನು.

೫೪. ಆಗ ರಾಣಿಯಾದ ಮಲನಾದೇವಿಯು ಈ ವಾಮನೋತ್ಸವವನ್ನು ನೋಡಿ, ತನ್ನ ಸಮೀಪದಲ್ಲಿ ಬಲಖಾನಿ, ಕೃಷ್ಣಾಂಶಾದಿಗಳು ಇರುತ್ತಿದ್ದಾಗ ಈ ಉತ್ಸವ ನಡೆಯುತ್ತಿದ್ದುದು ಸ್ಮರಣೆಗೆ ಬಂದು ರೋದನಮಾಡುತ್ತಾ "ನನಗೆ ಪ್ರಿಯವನ್ನುಂಟು ಮಾಡುವ ಬಂಧುವು (ಬಲಖಾನಿ) ಎಲ್ಲಿ ಹೋದನು ?"

೫೫. "ಮಂದಭಾಗಿನಿಯಾದ ನನ್ನನ್ನು ಬಿಟ್ಟು ಕೃಷ್ಣಾಂಶನೂ ತನ್ನ ಬಂಧುಗಳೊಡನೆ ಹೊರಟುಹೋದನಲ್ಲಾ ! ಹಾ ! ಧೀರನಾದ ಕೃಷ್ಣಾಂಶಾ ! ನೀನು ಇಲ್ಲಿ ಇಲ್ಲದೆ ಇರುವಾಗ ಪೃಥ್ವೀರಾಜನು ನಮ್ಮ ರಾಜ್ಯವನ್ನು ಲೂಟಿಮಾಡಿದ್ದಾನೆ" ಎಂದು ಹೇಳಿಕೊಂಡು ಗೋಳಿಟ್ಟಳು.

೫೬. ತಾಯಿಯಾದ ಮಲನಾದೇವಿಯು ಹೀಗೆ ಹೇಳುತ್ತಾ ದುಃಖಿಸುವುದನ್ನು ನೋಡಿ ಕೃಷ್ಣಾಂಶನು ಸ್ನೇಹಕಾತರನಾಗಿ ಅವಳನ್ನು ಕುರಿತು "ದೇವಿಯೇ ನೀನು ನಮ್ಮ ಮಾತನ್ನು ಲಾಲಿಸು".

ಯೋಗಿನಶ್ಚ ವಯಂ ರಾಜ್ಞೀ ಸರ್ವಯುದ್ಧವಿಶಾರದಾಃ ।
ತವೇದಂ ಸಕಲಂ ಕಾರ್ಯಂ ಕೃತ್ವಾ ಯಾಮೋ ಹಿ ನೈಮಿಷಂ ॥ ೫೭ ॥

ಯೇ ಯವವ್ರೀಹಯಶ್ಚೈವ ತವ ಸದ್ಮನಿ ಸಂಸ್ಥಿತಾಃ ।
ಗೃಹೀತ್ವಾ ಯೋಷಿತಃ ಸರ್ವಾ ಗಚ್ಛಂತು ಸಾಗರಾಂತಿಕಂ ।
ವಯಂ ತು ಯೋಗಸೈನ್ಯೇನ ತವ ರಕ್ಷಾಂ ಚ ಕುರ್ಮಹೇ ॥ ೫೮ ॥

ಇತಿ ಶ್ರುತ್ವಾ ವಚಸ್ತಸ್ಯ ತತ್ಸುತಾ ಚ ಪತಿವ್ರತಾ ।
ಮಾತರಂ ವಚನಂ ಪ್ರಾಹ ಕೃಷ್ಣಾಂಶೋಽಯಂ ನ ನರ್ತಕಃ ॥ ೫೯ ॥

ಪುಂಡರೀಕನಿಭೇ ನೇತ್ರೇ ಶ್ಯಾಮಾಂಗಂ ತಸ್ಯ ಸುಂದರಂ ।
ಕೃಷ್ಣಾಂಶೇನ ವಿನಾ ಮಾತಃ ಕೋ ರಕ್ಷಾರ್ಥಂ ಕ್ಷಮೋ ಭುವಿ ।
ದುರ್ಜಯಶ್ಚ ಮಹೀರಾಜಃ ಕೃಷ್ಣಾಂಶೇನ ವಿನಿರ್ಜಿತಃ ॥ ೬೦ ॥

---

೫೭. "ಎಲೌ ಮಹಾರಾಣಿಯೇ! ಯೋಗಿಗಳಾದ ನಾವೆಲ್ಲರೂ ಸಕಲ ಯುದ್ಧಗಳಲ್ಲೂ ಪರಿಶ್ರಮವುಳ್ಳವರಾಗಿದ್ದೇವೆ. ನಿನ್ನ ಮನಸ್ಸಿಗೆ ಒಪ್ಪಾಗುವಂತೆ ಈ ಕಾರ್ಯವನ್ನು ಸಾಧಿಸಿಕೊಟ್ಟು ಬಳಿಕ ನಾವುಗಳು ನೈಮಿಶಾರಣ್ಯಕ್ಕೆ ಹೋಗುವೆವು"

೫೮. "ಈಗ ನೀವು ನಿಮ್ಮ ಮನೆಯಲ್ಲಿರುವ ಯವ ಮತ್ತು ವ್ರೀಹಿಗಳನ್ನು ತೆಗೆದುಕೊಂಡು ಸ್ತ್ರೀಯರೆಲ್ಲರೊಡನೆ ಕೀರ್ತಿಸಾಗರಸರಸ್ಸಿನ ಬಳಿಗೆ ಹೊರಡಿ. ನಾವು ನಮ್ಮ ಸಂನ್ಯಾಸಿ ವೃಂದದೊಡನೆ ಅಲ್ಲಿಗೆ ಬಂದು ಯಾವ ಅಪಾಯವೂ ಇಲ್ಲದಂತೆ ನಿಮ್ಮನ್ನು ರಕ್ಷಿಸುವೆವು" ಎಂದು ವಿನಯದಿಂದ ಹೇಳಿದನು.

೫೯. ಮಲನಾದೇವಿಯ ಪುತ್ರಿಯೂ ಪತಿವ್ರತೆಯೂ ಆದ ಚಂದ್ರಾವಳಿಯು ತಾಯಿಯಾದ ಮಲನಾದೇವಿಯನ್ನು ಕುರಿತು "ಅಮ್ಮಾ ಇವನು ಕೃಷ್ಣಾಂಶನೇ ಸರಿ, ನಿಜವಾದ ಯೋಗಿಯೂ ಅಲ್ಲ, ನರ್ತಕನೂ ಅಲ್ಲ. ಇವನ ಕಣ್ಣುಗಳು ಕಮಲದಂತೆ ಶೋಭಿಸುತ್ತಿವೆ. ಸುಂದರವಾದ ಇವನ ದೇಹವು ಶ್ಯಾಮವರ್ಣದಿಂದ ಕೂಡಿದೆ".

೬೦. "ತಾಯೀ! ನಮ್ಮನ್ನು ರಕ್ಷಿಸುವೆನೆಂದು ಧೈರ್ಯವಾಗಿ ಹೇಳಬೇಕಾದರೆ ಕೃಷ್ಣಾಂಶನು ಹೊರತು ಈ ಭೂಮಂಡಲದಲ್ಲಿ ಇನ್ನು ಯಾರು ತಾನೆ ಸಮರ್ಥರಿರುವರು? ಯಾರಿಗೂ ಸೋಲದೆ ದುರ್ಜಯನೆನಿಸಿದ್ದ ಪೃಥ್ವೀರಾಜನು ಸಹ ಕೃಷ್ಣಾಂಶನಿಗೆ ಸೋತು ಹೋಗಿದ್ದಾನೆ" ಎಂದು ತಿಳಿಸಿದಳು.

ಇತಿ ತದ್ವಚನಂ ಶ್ರುತ್ವಾ ಮಲನಾ ಪ್ರೇಮವಿಹ್ವಲಾ ।
ಯವವ್ರೀಹಯೋ ನಿಷ್ಕಾಸ್ಯ ಯೋಷಿತಾಂ ಸ್ಥಾಪಿತಾಃ ಕರೇ ॥ ೬೧ ॥

ಜಗುಸ್ತಾ ಯೋಷಿತಃ ಸರ್ವಾಃ ಕೃಷ್ಣಾಂಶಚರಿತಂ ಶುಭಂ ।
ಲಕ್ಷಣಃ ಶ್ರೀಘ್ರಮಾಗಮ್ಯ ಯೋಗಿವೇಷಾನ್ ಸ್ವಸೈನಿಕಾನ್ ।
ಸಜ್ಜೀಕೃತ್ಯ ಸ್ಥಿತಸ್ತತ್ರ ತಾಲನಾದ್ಯೈಃ ಸುರಕ್ಷಿತಃ ॥ ೬೨ ॥

ಕೀರ್ತಿಸಾಗರಮಾಗಮ್ಯ ತೇ ವೀರಾ ಬಲದರ್ಪಿತಾಃ ।
ರುರುಧುಃ ಸರ್ವತೋ ನಾರೀರ್ದೋಲಾಯುತಮಿತಸ್ಥಿತಾಃ ॥ ೬೩ ॥

ಮಹೀಪತಿಸ್ತು ಕುಲಹಾ ಜ್ಞಾತ್ವಾ ಕೃಷ್ಣಾಂಶಮಾಗತಂ ।
ಚಂದ್ರವಂಶಿನಮಾಗಮ್ಯ ಸಪುತ್ರಶ್ಚ ರುರೋದ ಹ ॥ ೬೪ ॥

---

೬೧. ಮಗಳು ಹೇಳಿದ ಮಾತನ್ನು ಕೇಳಿ ಮಲನಾದೇವಿಯು ಪ್ರೀತ್ಯತಿಶಯದಿಂದ ವಿಹ್ವಲೆಯಾಗಿ, ಮನೆಯಲ್ಲಿರುವ ಯವ, ವ್ರೀಹಿಗಳನ್ನೆಲ್ಲಾ ತೆಗೆಯಿಸಿಕೊಂಡು ಎಲ್ಲ ಸ್ತ್ರೀಯರೊಡನೆ ಹತ್ತುಸಾವಿರ ಮೇನೆಗಳಲ್ಲಿ ಕುಳಿತು ಹೊರಟು, ಕೃಷ್ಣಾಂಶನ ಮಂಗಳಚರಿತ್ರವನ್ನು ಗಾನಮಾಡುತ್ತಾ ಸಾಗಿದರು.

೬೨. ಇಷ್ಟರೊಳಗೆ ಲಕ್ಷಣನು ತನ್ನ ಸೇನೆಯನ್ನು ಬಚ್ಚಿಟ್ಟಿದ್ದ ಸ್ಥಳಕ್ಕೆ ಜಾಗ್ರತೆಯಾಗಿ ಹೋಗಿ ಸೈನಿಕರನ್ನೆಲ್ಲಾ ಯೋಗಿವೇಷಧಾರಿಗಳನ್ನಾಗಿ ಮಾರ್ಪಡಿಸಿ ತಾಲನ ಮೊದಲಾದವರ ಸಹಾಯಸಮೇತನಾಗಿ ಕೀರ್ತಿಸಾಗರಕ್ಕೆ ಬಂದನು.

೬೩. ಬಲದಿಂದ ಗರ್ವಿತರಾದ ಯೋಗಿವೇಷದ ಆ ವೀರರು ಹತ್ತುಸಾವಿರ ಮೇನೆಗಳಲ್ಲಿ ಕುಳಿತು ಬಂದಿರುವ ಆ ಸ್ತ್ರೀಯರಸುತ್ತಲೂ ಕಾವಲಾಗಿ ಆವರಿಸಿಕೊಂಡು ರಕ್ಷಣೆಯಲ್ಲಿ ನಿರತರಾದರು.

೬೪. ಕುಲನಾಶಕನಾದ ಮಹೀಪತಿರಾಜನು ಇಷ್ಟರೊಳಗೆ ಕೃಷ್ಣಾಂಶನು ಅಲ್ಲಿಗೆ ಬಂದಿರುವುದನ್ನು ತಿಳಿದು, ತನ್ನ ಮಗನೊಡನೆಕೂಡಿ ಚಂದ್ರವಂಶಾಧೀಶನಾದ ಪರಿಮಳರಾಜನ ಬಳಿಗೆ ಬಂದು, ದುಃಖಿತನಾದವನಂತೆ ನಟಿಸಿ ರೋದನಮಾಡತೊಡಗಿದನು.

ಯೋಗಿಭಿಸ್ತ್ರೈರ್ಮಹಾರಾಜ ಲುಂಠಿತಾಃ ಸರ್ವಯೋಷಿತಃ ।
ಮಲನಾ ಸಂಹೃತಾ ತತ್ರ ತಥಾ ಚಂದ್ರಾವಲೀ ಸುತಾ ॥ ೬೫ ॥

ಮಹೀರಾಜಸ್ಯ ತೇ ಸೈನ್ಯಾ ಯೋಗಿವೇಷಾ ಸ್ಸಮಾಗತಾಃ ।
ತಾರಕಾಯ ಸುತಾಂ ಪ್ರಾದಾನ್ಮಹೀರಾಜಾಯ ಮತ್ಸ್ವಸಾಂ ॥ ೬೬ ॥

ಇತಿ ಶ್ರುತ್ವಾ ವಚೋ ಘೋರಂ ಬ್ರಹ್ಮಾನಂದೋ ಮಹಾಬಲಃ ।
ಲಕ್ಷಸೈನ್ಯಾನ್ವಿತಸ್ತತ್ರ ಯಯೌ ರೋಷಸಮನ್ವಿತಃ ॥ ೬೭ ॥

ಮಹೀರಾಜಸ್ತು ಕಲಹೀ ಸೈನ್ಯಾಯುತಸಹಾತ್ಮಜಃ ।
ರಕ್ಷಿತಃ ಕಾಮಸೇನೇನ ತಥಾ ರಣಜಿತಾ ಯಯೌ ॥ ೬೮ ॥

---

೬೫. ಮತ್ತು ಆ ರಾಜನನ್ನು ಕುರಿತು "ಮಹಾರಾಜನೇ! ನಿನ್ನ ಕಡೆಯ ಸ್ತ್ರೀಯರೆಲ್ಲರೂ ಯೋಗಿಗಳ ಲೂಟಿಗೆ ಒಳಗಾದರು. ಮಲನಾದೇವಿ ಚಂದ್ರಾವಳಿ ಇವರಿಬ್ಬರನ್ನೂ ಅಪಹರಿಸಿ ಬಿಟ್ಟಿದ್ದಾರೆ."

೬೬. "ಪೃಥ್ವೀರಾಜನ ಸೈನ್ಯವೇ ಯೋಗಿವೇಷವನ್ನು ಧರಿಸಿ ಅಲ್ಲಿಗೆ ಬಂದು, ಹೀಗೆಮಾಡಿ ಅಪಹರಿಸಿ ನನ್ನ ತಂಗಿ ಮಲನಾದೇವಿಯನ್ನು ಪೃಥ್ವೀರಾಜನಿಗೂ ನಿನ್ನ ಕುಮಾರಿ ಚಂದ್ರಾವಳಿಯನ್ನು ಪೃಥ್ವೀರಾಜಸುತನಾದ ತಾರಕನಿಗೂ ಒಪ್ಪಿಸಿರುವರಂತೆ" ಎಂದು ಹೇಳಿದನು.

೬೭. ತಮ್ಮ ಮನೆಯ ಸ್ತ್ರೀಯರು ಅಪಹೃತರಾದರೆಂಬ ದಾರುಣವಾದ ಈ ವಾರ್ತೆಯನ್ನು ಕೇಳಿ, ಪರಿಮಳನ ಮಗನೂ ಮಹಾಬಲಶಾಲಿಯೂ ಆದ ಬ್ರಹ್ಮಾನಂದನು ತುಂಬಾ ಕೋಪಗೊಂಡು ಒಂದುಲಕ್ಷ ಸೇನೆಯನ್ನು ತೆಗೆದುಕೊಂಡು ಆ ಕೀರ್ತಿಸಾಗರಕ್ಕೆ ಬಂದನು.

೬೮. ಯುದ್ಧಪ್ರಿಯನಾದ ಪೃಥ್ವೀರಾಜನೂ ಹತ್ತುಸಾವಿರ ಸೇನೆಯೊಡನೆ ತನ್ನ ಮಗನನ್ನೂ ಜತೆಯಲ್ಲಿ ಕರೆದುಕೊಂಡು ಕಾಮಸೇನ ಮತ್ತು ರಣಜಿತ್ ಇವರುಗಳ ಬೆಂಗಾವಲಿನೊಡನೆ ಆ ಸ್ಥಳಕ್ಕೆ ಬಂದು ಸೇರಿದನು.

ತಯೋಶ್ಚಾಸೀನ್ಮಹದ್ಯುದ್ಧಂ ಸೇನಯೋರುಭಯೋರ್ಭುವಿ ।
ತಾಲನೋ ಯೋಗಿವೇಷಶ್ಚ ಬ್ರಹ್ಮಾನಂದಮುಪಾಯಯೌ　　॥ ೬೯ ॥

ಲಕ್ಷಣಶ್ಚಾಭಯಂ ಶೂರಂ ದೇವಸಿಂಹೋ ಮಹೀಪತಿಂ ।
ಜಿತ್ವಾ ಬದ್ಧ್ವಾ ಚ ಮುದಿತೌ ಕಾಮಸೇನಃ ಸಮಾಗತಃ　　॥ ೭೦ ॥

ಲಕ್ಷಣಃ ಕಾಮಸೇನಂ ಚ ದೇವೋ ರಣಜಿತಂ ತದಾ ।
ಬದ್ಧ್ವಾ ತತ್ರ ಸ್ಥಿತೌ ವೀರೌ ಶತ್ರುಸೈನ್ಯಕ್ಷಯಂಕರೌ　　॥ ೭೧ ॥

ಏತಸ್ಮಿನ್ನಂತರೇ ಬ್ರಹ್ಮಾ ಬಧ್ವಾ ವೈ ತಾಲನಂ ಬಲೀ ।
ಲಕ್ಷಣಾಂತಮುಪಾಗಮ್ಯ ಧನುರ್ಯುದ್ಧಮಚೀಕರತ್　　॥ ೭೨ ॥

ಲಕ್ಷಣಂ ಛಿನ್ನಧನ್ವಾನಂ ಪುನರ್ಬಧ್ವಾ ಮಹಾಬಲಃ ।
ದೇವಸಿಂಹಮುಪಾಗಮ್ಯ ಮೂರ್ಛಿತಂ ತಂ ಚಕಾರ ಹ　　॥ ೭೩ ॥

---

೬೯. ಈ ಎರಡು ಸೇನೆಗಳಿಗೂ ಪರಸ್ಪರ ಭಯಂಕರವಾದ ಯುದ್ಧನಡೆಯಿತು. ಯೋಗಿವೇಷದಲ್ಲಿದ್ದ ತಾಲನನು ಬ್ರಹ್ಮಾನಂದನನ್ನು ಎದುರಿಸಿದನು.

೭೦. ಲಕ್ಷಣನು ಶೂರನಾದ ಅಭಯನನ್ನೂ, ದೇವಸಿಂಹನು ಮಹೀಪತಿ ರಾಜನನ್ನೂ ಎದುರಿಸಿ ಹೋರಾಡಿ ಅವರನ್ನು ಜಯಿಸಿ ಕೈಸೆರೆಹಿಡಿದು ಬಂಧಿಸಿ, ಹರ್ಷದಿಂದಿದ್ದರು. ಅಷ್ಟರಲ್ಲಿ ಕಾಮಸೇನಾದಿಗಳು ಎದುರಾಗಿ ಬಂದರು.

೭೧. ಬಲಶಾಲಿಯಾದ ಲಕ್ಷಣನು ಕಾಮಸೇನನನ್ನೂ, ದೇವಸಿಂಹನು ರಣಜಿತ್ತನನ್ನೂ ಸೆರೆಹಿಡಿದು ಬಂಧಿಸಿದ್ದಲ್ಲದೆ ಆ ವೀರರಿಬ್ಬರೂ ಶತ್ರುಸೇನೆಯನ್ನು ಧ್ವಂಸ ಮಾಡುತ್ತಾ ಅಲ್ಲಿಯೇ ಇದ್ದರು.

೭೨. ಇಷ್ಟರಲ್ಲಿ ಬಲಶಾಲಿಯಾದ ಬ್ರಹ್ಮಾನಂದನು ತಾಲನನನ್ನು ಸೋಲಿಸಿ ಬಂಧಿಸಿಟ್ಟು, ಲಕ್ಷಣನನ್ನು ಸಂಧಿಸಿಬಂದು ಬಾಣಪ್ರಯೋಗಮಾಡುತ್ತಾ ಯುದ್ಧಮಾಡ ತೊಡಗಿದನು.

೭೩. ಹೀಗೆ ಯುದ್ಧಮಾಡುತ್ತಿರಲು ಲಕ್ಷಣನ ಬಿಲ್ಲು ಕತ್ತರಿಸಿಹೋಯಿತು. ಆಗ ಮಹಾಬಲನಾದ ಬ್ರಹ್ಮಾನಂದನು ಆ ವೀರನನ್ನು ಬಂಧಿಸಿ, ಅಲ್ಲಿಂದ ದೇವಸಿಂಹನ ಬಳಿಗೆ ಬಂದು ಅವನ ಮೇಲೆ ಯುದ್ಧಮಾಡಿ ಅವನನ್ನು ಮೂರ್ಛೆಬೀಳುವಂತೆ ಹೊಡೆದನು.

ಹಾಹಾಭೂತೇ ಯೋಗಿಸೈನ್ಯೇ ಪ್ರದ್ರುತೇ ಸರ್ವತೋ ದಿಶಂ ।
ಕೃಷ್ಣಾಂಶೋ ಯೋಷಿತಸ್ಸರ್ವಾ ವಚನಂ ಪ್ರಾಹ ನಮ್ರಧೀಃ ॥ ೭೪ ॥

ಬ್ರಹ್ಮಾನಂದೋಽಯಮಾಯಾತೋ ಮಮ ಸೈನ್ಯಕ್ಷಯಂಕರಃ ।
ತಸ್ಮಾದ್ಯೂಯಂ ಮಯಾ ಸಾರ್ಧಂ ಗಚ್ಛತಾಶು ಚ ತಂ ಪ್ರತಿ ॥ ೭೫ ॥

ಇತ್ಯುಕ್ತ್ವಾ ತಾಃ ಸಮಾದಾಯ ಬ್ರಹ್ಮಾನಂದಮುಪಾಯಯೌ ।
ತಯೋಶ್ಚಾನ್ಮಸೀದ್ಯುದ್ಧಂ ನರನಾರಾಯಣಾಂಶಯೋಃ ॥ ೭೬ ॥

ಕೃಷ್ಣಾಂಶಸ್ತತ್ರ ಬಲವಾನ್ನಭೋಮಾರ್ಗೇಣ ತಂ ಪ್ರತಿ ।
ರಥಸ್ಥಂ ಚ ಸಮಾಗಮ್ಯ ಮೋಹಯಾಮಾಸ ಸೋಽಸಿನಾ ॥ ೭೭ ॥

ತದಾ ತು ಮೂರ್ಛಿತೇ ತಸ್ಮಿನ್ ಮೋಚಯಿತ್ವಾ ಚ ತಾ ಮುದಾ ।
ಯೋಗೀ ಸೈನ್ಯಾನ್ವಿತೋ ಯುದ್ಧಾತ್ ಪಲಾಯನಪರೋಽಭವತ್॥ ೭೮ ॥

---

೭೪. ಯೋಗಿವೇಷಧಾರಿಗಳಾಗಿದ್ದ ಕೃಷ್ಣಾಂಶನ ಸೈನ್ಯದವರು ಹಾಹಾಕಾರ ಮಾಡುತ್ತಾ ದಿಕ್ಕುದಿಕ್ಕಿಗೆ ಚೆದರಿ ಓಡುತ್ತಿರಲು ಆಗ ಕೃಷ್ಣಾಂಶನು ಆ ಸ್ತ್ರೀಯರನ್ನು ಕುರಿತು ವಿನಯದಿಂದ ಮಾತಾಡತೊಡಗಿ,

೭೫. "ಬ್ರಹ್ಮಾನಂದನು ಇಲ್ಲಿ ಬಂದು ನನ್ನ ಕಡೆಯವರನ್ನೆಲ್ಲಾ ನಾಶ ಮಾಡುತ್ತಿರುವನು. ಆದುದರಿಂದ ನೀವೆಲ್ಲರೂ ನನ್ನೊಡನೆ ಬನ್ನಿ. ಅವನ ಸಮೀಪಕ್ಕೆ ಹೋಗೋಣ" ಎಂದನು.

೭೬. ಕೃಷ್ಣಾಂಶನು ಆ ಸ್ತ್ರೀಯರಿಗೆ ಹೀಗೆ ಹೇಳಿ ಅವರನ್ನೆಲ್ಲಾ ಕರೆದು ಕೊಂಡು ಬ್ರಹ್ಮಾನಂದನ ಸಮೀಪಕ್ಕೆ ಹೋದನು. ಆಗ ಅಲ್ಲಿ ನರನಾರಾಯಣ ಸ್ವರೂಪರಾದ ಬ್ರಹ್ಮಾನಂದಕೃಷ್ಣಾಂಶರಿಗೆ ದೊಡ್ಡ ಯುದ್ಧವಾಯಿತು.

೭೭. ಹೀಗೆ ಯುದ್ಧವಾಗುತ್ತಿರುವಾಗ ಬಲಶಾಲಿಯಾದ ಕೃಷ್ಣಾಂಶನು ಅಂತ ರಿಕ್ಷ ಮಾರ್ಗದಿಂದ ಬಂದು, ರಥದ ಮೇಲೆ ಕುಳಿತಿದ್ದ ಬ್ರಹ್ಮಾನಂದನನ್ನು ಕತ್ತಿಯಿಂದ ಪ್ರಹರಿಸಿ ಗಾಯಗೊಳಿಸಿ ಮೂರ್ಛೆಬೀಳಿಸಿದನು.

೭೮. ಹೀಗೆ ಬ್ರಹ್ಮಾನಂದನು ಮೂರ್ಛಿತನಾಗಲಾಗಿ ಯೋಗಿವೇಷಧಾರಿ ಯಾಗಿದ್ದ ಕೃಷ್ಣಾಂಶನು ಆ ಸ್ತ್ರೀಯರನ್ನೆಲ್ಲಾ ಬಿಡಿಸಿಕೊಂಡು ಸೈನ್ಯದೊಡನೆ ಯುದ್ಧ ರಂಗದಿಂದ ಹಿಂದಿರುಗಿ ಓಡಲು ಉಪಕ್ರಮಿಸಿದನು.

ಪರಾಜಿತೇ ಯೋಗಿಸೈನ್ಯೇ ಬ್ರಹ್ಮಾನಂದೋ ಮಹಾಬಲಃ ।
ಯೋಷಿತಸ್ತಾಃ ಸಮಾದಾಯ ಸ್ವಗೇಹಾಯ ದಧೌ ಮನಃ ॥ ೭೯ ॥

ಮಹೀರಾಜಸ್ತು ಸಂಪ್ರಾಪ್ತೋ ಮಹೀಪತ್ಯನುಮೋದಿತಃ ।
ರುರೋಧ ಸರ್ವತೋ ನಾರೀಃ ಶಿವದತ್ತವರೋ ಬಲೀ ॥ ೮೦ ॥

ನೃಹರಶ್ಚಾಽಭಯಂ ಶೂರಂ ಮರ್ದನಶ್ಚೈವ ರೂಪಣಂ ।
ಮದನಂ ವೈ ಸರದನೋ ಬ್ರಹ್ಮಾನಂದಂ ಚ ತಾರಕಃ ॥ ೮೧ ॥

ಚಾಮುಂಡಃ ಕಾಮಸೇನಂ ಚ ಧನುರ್ಯುದ್ಧಮಚೀಕರತ್ ।
ತದಾಭಯೋ ಮಹಾವೀರೋ ಘ್ನನ್ವಂತಂ ನೃಹರಂ ರಿಪುಂ ॥ ೮೨ ॥

ಛಿತ್ವಾ ಧನುಸ್ತಮಾಗತ್ಯ ಖಡ್ಗಯುದ್ಧಮಚೀಕರತ್ ।
ನೃಹರಃ ಖಡ್ಗರಹಿತೋಽಭವದ್ಯುದ್ಧಪರಾಙ್ಮುಖಃ ।
ತಮಾಹ ವಚನಂ ಕ್ರುದ್ಧೋಽಭಯೋ ಯುದ್ಧಾರ್ಥಮುದ್ಯತಃ ॥ ೮೩ ॥

---

೭೯. ಹೀಗೆ ಯೋಗಿವೇಷದ ಸೈನ್ಯವೆಲ್ಲಾ ಸೋತು ಓಡಲು ಮೂರ್ಛೆ ತಿಳಿದೆದ್ದ ಮಹಾಪರಾಕ್ರಮಿಯಾದ ಬ್ರಹ್ಮಾನಂದನು ಆ ಸ್ತ್ರೀಯರನ್ನೆಲ್ಲಾ ತನ್ನ ಮನೆಗೆ ಕರೆದುಕೊಂಡು ಹೋಗಬೇಕೆಂದು ಮನಸ್ಸುಮಾಡಿದನು.

೮೦. ಆಗ ಮಹೀಪತಿರಾಜನಿಂದ ಪ್ರೇರಿತನಾದ ಪೃಥ್ವೀರಾಜನು ಈಶ್ವರ ವರಪ್ರಸಾದದಿಂದ ಲಬ್ಧವಾದ ಬಲದಿಂದ ಬ್ರಹ್ಮಾನಂದನನ್ನು ಎದುರಿಸಿ ಆ ಸ್ತ್ರೀಸಮೂಹ ವನ್ನು ಸುತ್ತಲೂ ಮುತ್ತಿದನು.

೮೧. ನೃಹರನು ಶೂರನಾದ ಅಭಯನನ್ನೂ, ಮರ್ದನನು ರೂಪಣನನ್ನೂ, ಸರದನನು ಮದನನನ್ನೂ, ತಾರಕನು ಬ್ರಹ್ಮಾನಂದನನ್ನೂ, ಚಾಮುಂಡನು ಕಾಮ ಸೇನನನ್ನೂ ಎದುರಿಸಿ ಧನುರ್ಯುದ್ಧಮಾಡಿದರು.

೮೨. ಮಹಾವೀರನಾದ ಅಭಯನು ಆಗ ಮೈಯನ್ನು ಕುಣಿಸುತ್ತಾ ಬರು ತ್ತಿರುವ ಶತ್ರುವೀರನಾದ ನೃಹರನನ್ನು ಎದುರಿಸಿ ಅವನ ಬಿಲ್ಲನ್ನು ಕತ್ತರಿಸಿದನು.

೮೩. ಬಳಿಕ ಅವನ ಸಮೀಪಕ್ಕೆ ನುಗ್ಗಿ ಅವನೊಡನೆ ಖಡ್ಗಯುದ್ಧಮಾಡ ತೊಡಗಿದನು. ಆಗ ನೃಹರನ ಕತ್ತಿಯು ಮುರಿದುಹೋಗಲು ಖಡ್ಗರಹಿತನಾದ ಅವನು ಯುದ್ಧಮಾಡಲು ಹಿಂದೆಗೆದು ಹಿಮ್ಮೆಟ್ಟಿ ಹೋದನು.

ಭವಾನ್ಮೈ ಮಾತೃಷ್ವಸ್ರೀಯೋ ಮಹೀರಾಜಸ್ಯ ಜಾತ್ಮಜಃ ॥ ೮೪ ॥

ಕ್ಷತ್ರಿಯಾಣಾಂ ಪರಂ ಧರ್ಮಂ ಕಥಂ ಸಂಹರ್ತುಮಿಚ್ಛತಿ ।
ಇತಿ ಶ್ರುತ್ವಾ ತು ನೃಹರೋ ಗೃಹೀತ್ವಾ ಪರಿಘಂ ರುಷಾ ॥ ೮೫ ॥

ಜಘಾನ ತಂ ಚ ಶಿರಸಿ ಸ ಹತಃ ಸ್ವರ್ಗಮಾಯಯೌ ।
ಸ ಚ ವೈ ಕೃತವರ್ಮಾಂಶೋ ವಿಲೀನಃ ಕೃತವರ್ಮಣಿ ॥ ೮೬ ॥

ಮದನಂ ಗೋಪಜಾತಂ ಚ ಹತ್ವಾ ಸರದನೋ ಬಲೀ ।
ಜಯಶಬ್ದಂ ಚಕಾರೋಚ್ಚೈಃ ಪುನರ್ಹತ್ವಾ ರಿಪೋರ್ಬಲಂ ।
ಉತ್ತರಾಂಶಶ್ಚ ಸ ಜ್ಞೇಯೋ ಮದನಶ್ಚೋತ್ತರೇ ಲಯಃ ॥ ೮೭ ॥

---

೮೪. ಆಗ ಇದನ್ನು ನೋಡಿ ಅಭಯಸಿಂಹನು ಕೋಪಗೊಂಡು "ಎಲಾ ನೃಹರ ! ನೀನು ನನ್ನ ತಾಯಿಯ ತಂಗಿಯಮಗ. ಸಾಲದುದಕ್ಕೆ ಮಂಡಲಾಧಿಪನಾದ ಪೃಥ್ವೀರಾಜನ ಮಗ."

೮೫. "ಹೀಗಿದ್ದೂ ನೀನು ವಂಶಗೌರವವನ್ನು ಗಮನಿಸದೆ ಕ್ಷತ್ರಿಯ ಧರ್ಮವನ್ನು ದೂರಮಾಡಲು ನಿನಗೆ ಮನಸ್ಸು ಹೇಗೆ ಬಂದಿತು ? ಯುದ್ಧಕ್ಕೆ ಬಂದು ನಿಂತಮೇಲೆ ಶತ್ರುವಿಗೆ ಸೋತು ಹಿಮ್ಮೆಟ್ಟುವುದು ಕ್ಷತ್ರಿಯ ಧರ್ಮಕ್ಕೆ ಸಂಪೂರ್ಣವಾಗಿ ವಿರುದ್ಧವು" ಎಂದು ಹೀಯಾಳಿಸಿದನು.

೮೬. ಈ ಮಾತನ್ನು ಕೇಳಿ ನೃಹರನು ಕೋಪಾವಿಷ್ಟನಾಗಿ ಪರಿಘಾಯುಧವನ್ನು ತೆಗೆದುಕೊಂಡು ಅಭಯನ ತಲೆಗೆ ಗುರಿಯಿಟ್ಟು ಹೊಡೆಯಲು, ಅಭಯನು ಆ ಪೆಟ್ಟುತಾಗಿ ಬಿದ್ದು ಸ್ವರ್ಗಸ್ಥನಾದನು. ಕೃತವರ್ಮನ ಅಂಶದಿಂದ ಅವನು ಜನಿಸಿದ್ದನು. ಈ ಮೃತಶರೀರದಿಂದ ಆ ಕಲೆಯು ಹೊರಬಿದ್ದು ಕೃತವರ್ಮನ ಆತ್ಮದಲ್ಲಿ ಐಕ್ಯವಾಯಿತು.

೮೭. ಅನಂತರ ಬಲಶಾಲಿಯಾದ ಸರದನನು ಗೋಪಕುಮಾರನಾದ ಮದನನನ್ನು ಕೊಂದು, ದೊಡ್ಡದಾಗಿ ಜಯಘೋಷಮಾಡುತ್ತಾ ಪುನಃಪುನಃ ಶತ್ರುಬಲವನ್ನು ನಾಶಪಡಿಸುತ್ತಿದ್ದನು. ಉತ್ತರನ ಅಂಶದಿಂದ ಸಂಭೂತನಾದ ಮದನನು ಮೃತನಾಗುತ್ತಲೆ ಅವನಲ್ಲಿದ್ದ ಆ ಕಲೆಯು ಹೊರಬಿದ್ದು ಉತ್ತರನ ಆತ್ಮದಲ್ಲಿ ಐಕ್ಯವಾಯಿತು.

ರೂಪಣಶ್ಚ ಸಮಾಗತ್ಯ ಮೂರ್ಛಯಿತ್ವಾ ಚ ಮರ್ದನಂ ।
ಪುನಸ್ಸರದನಂ ಪ್ರಾಪ್ಯ ಖಡ್ಗಯುದ್ಧಂ ಚಕಾರ ಸಃ ॥ ೮೮ ॥

ಬ್ರಹ್ಮಾನಂದಶ್ಚ ಭಗವಾನ್ ಸ ಬಧ್ವಾ ತಾರಕಂ ರುಷಾ ।
ಮಹೀರಾಜಾಂತಮಾಗಮ್ಯ ಧನುರ್ಯುದ್ಧಂ ಚಕಾರ ಹ ॥ ೮೯ ॥

ನೃಹರಂ ರಣಜಿತ್‌ಪ್ರಾಪ್ಯ ಸ್ವಭಲ್ಲೇನ ತದಾ ರುಷಾ ।
ಜಘಾನ ಸಮರಶ್ಲಾಘೀ ಮಹೀರಾಜಸುತಂ ಶುಭಂ ॥ ೯೦ ॥

ಸ ವೈ ದುಶ್ಶಾಸನಾಂಶಶ್ಚ ಮೃತಸ್ತಸ್ಮಿನ್ ಸಮಾಗತಃ ॥ ೯೧ ॥

ನಿಹತೇ ನೃಹರೇ ಬಂಧೌ ಮರ್ದನಃ ಕ್ರೋಧತತ್ಪರಃ ।
ಸ್ವಶರೈಸ್ತಾಡಯಾಮಾಸ ಸಾತ್ಯಕೇರಂಶಮುತ್ತಮಂ ॥ ೯೨ ॥

---

೮೮. ಬಳಿಕ ರೂಪಣನು ಮರ್ದನನನ್ನು ಘಾತಿಸಿ ಮೂರ್ಛೆಗೊಳಿಸಿ ಪುನಃ ಸರದನನ ಸಮೀಪಕ್ಕೆ ಬಂದು ಅವನೊಡನೆ ಖಡ್ಗಯುದ್ಧಮಾಡಲು ಉಪಕ್ರಮಿಸಿದನು.

೮೯. ಆಗ ಬ್ರಹ್ಮಾನಂದನು ಕೋಪದಿಂದ ತಾರಕನ ಸಮೀಪಕ್ಕೆ ಬಂದು ಅವನನ್ನು ಬಂಧಿಸಿ, ಅನಂತರ ಪೃಥ್ವೀರಾಜನ ಸಮೀಪಕ್ಕೆ ಬಂದು ಅವನೊಡನೆ ಧನುರ್ಯುದ್ಧಮಾಡಲು ತೊಡಗಿದನು.

೯೦. ಬಳಿಕ ರಣಜಿತ್‌ಕುಮಾರನು ಪೃಥ್ವೀರಾಜನ ಮಗನಾದ ನೃಹರನನ್ನು ಎದುರಿಸಿ ಹೋರಾಡಿ ಎಲ್ಲರೂ ಶ್ಲಾಘಿಸುವಷ್ಟುಮಟ್ಟಿಗೆ ಕೌಶಲ ತೋರಿಸಿ ತನ್ನ ಭಲ್ಲೆಯದಿಂದ ಯುದ್ಧಮಾಡುತ್ತಾ ಅವನನ್ನು ಸಂಹರಿಸಿದನು.

೯೧. ನೃಹರನು ದುಶ್ಶಾಸನನ ಅಂಶದಿಂದ ಜನಿಸಿದವನು. ಈಗ ಅವನು ಮೃತನಾಗುತ್ತಲೆ ಆ ಕಲೆಯು ಅವನ ದೇಹದಿಂದ ಹೊರಬಿದ್ದು ಪುನಃ ದುಶ್ಶಾಸನನ ಆತ್ಮದಲ್ಲಿ ಐಕ್ಯವಾಯಿತು.

೯೨. ತನ್ನ ಸಹೋದರನಾದ ನೃಹರನು ಮೃತನಾದುದನ್ನು ನೋಡಿ ಮರ್ದನನು ಕೋಪಾವೇಶದಿಂದ ಕೂಡಿ ಸಾತ್ಯಕಿಯ ಅಂಶಸಂಭೂತನಾದ ರಣಜಿತ್ ಕುಮಾರನನ್ನು ತನ್ನ ಬಾಣಗಳಿಂದ ಘಾತಿಸಿ ನೋಯಿಸಿದನು.

ಛಿತ್ವಾ ತಾನ್ರಣಜಿಚ್ಛೂರಸ್ಸ ವೈ ಪರಿಮಲೋದ್ಭವಃ ।
ಸ್ವಭಲ್ಲೇನ ಶಿರಃ ಕಾಯಾನ್ಮರ್ದನಸ್ಯ ಸ ಚಾಹರತ್ ॥ ೯೩ ॥

ಮೃತೇऽಸ್ಮಿನ್ಮರ್ದನೇ ವೀರೇ ತದಾ ಸರದನೋ ಬಲೀ ।
ತಾಡಯಾಮಾಸ ತಂ ವೀರಂ ಸ್ವಭಲ್ಲೇನೈವ ವಕ್ಷಸಿ ॥ ೯೪ ॥

ಮಹತ್ಕಷ್ಟಮುಪಾಗಮ್ಯ ರಣಜಿನ್ಮಲನೋದ್ಭವಃ ।
ಸ್ವಖಡ್ಗೇನ ಶಿರಃ ಕಾಯಾದಪಾಹರತ ವೈರಿಣಃ ॥ ೯೫ ॥

ತ್ರಿಬಂಧೌ ನಿಹತೇ ಯುದ್ಧೇ ತಾರಕಃ ಕ್ರೋಧಮೂರ್ಛಿತಃ ।
ರಥಸ್ಥಶ್ಚ ರಥಸ್ಥಂ ಚ ತಾಡಯಾಮಾಸ ವೈ ಶರೈಃ ॥ ೯೬ ॥

---

೯೩. ಪರಿಮಳರಾಜನ ಮಗನಾದ ರಣಜಿತ್ಕುಮಾರನು ಶತ್ರುವಿನ ಬಾಣಗಳನ್ನೂ ಬಿಲ್ಲನ್ನೂ ಸಹ ಕತ್ತರಿಸಿ ತುಂಡುಮಾಡಿ, ತನ್ನ ಭರ್ಜಿಯನ್ನು ತೆಗೆದುಕೊಂಡು ಅದರಿಂದ ಮರ್ದನನ ಶಿರಸ್ಸನ್ನು ಛೇದಿಸಿಹಾಕಿದನು.

೯೪. ವೀರನಾದ ಮರ್ದನನು ಹೀಗೆ ಮೃತನಾಗಲು ಆಗ ಬಲಶಾಲಿಯಾದ ಸರದನನು ಆ ರಣಜಿತ್ಕುಮಾರನ ವಕ್ಷಸ್ಥಳಕ್ಕೆ ಗುರಿಯಿಟ್ಟು ತನ್ನ ಭಲ್ಲೆಯದಿಂದ ಹೊಡೆದು ನೋಯಿಸಿದನು.

೯೫. ಆ ಭಲ್ಲೆಯದ ಏಟಿನಿಂದ ಮಲನಾಪುತ್ರನಾದ ರಣಜಿತ್ಕುಮಾರನು ತುಂಬಾ ತೊಂದರೆಯನ್ನು ಅನುಭವಿಸಿ, ರೇಗಿ ತನ್ನ ಕತ್ತಿಯನ್ನು ತೆಗೆದುಕೊಂಡು ಶತ್ರುವಾದ ಸರದನನ ತಲೆಯನ್ನೇ ಕತ್ತರಿಸಿಹಾಕಿದನು.

೯೬. ಹೀಗೆ ತನ್ನ ಮೂವರು ಸಹೋದರರೂ ಮೃತರಾಗಲು ಆಗ ತಾರಕನು ಕೋಪದಿಂದ ಕಿಡಿಕಿಡಿಯಾಗಿ ರಥವನ್ನೇರಿ ಯುದ್ಧಮಾಡುತ್ತಿರುವ ರಣಜಿತ್ಕುಮಾರನನ್ನು ತನ್ನ ಬಾಣಗಳಿಂದ ನೋಯಿಸಿದನು.

ಛಿತ್ವಾ ಬಾಣಂ ಚ ರಣಜಿತ್ತ್ವೈವ ಚ ರಿಪೋರ್ಧನುಃ ।
ತ್ರಿಶರೈಸ್ತಾಡಯಾಮಾಸ ಕರ್ಣಾಂಶಂ ತಾರಕಂ ಹೃದಿ ॥ ೯೭ ॥

ಅಮರ್ಷವಶಮಾಪನ್ನೋ ಯಥಾ ದಂಡೈರ್ಭುಜಂಗಮಃ ।
ಧ್ಯಾತ್ವಾ ಚ ಶಂಕರಂ ದೇವಂ ವಿಷಧೌತಂ ಶರಂ ಪುನಃ ॥ ೯೮ ॥

ಸಂಧಾಯ ತರ್ಜಯಿತ್ವಾ ಚ ಶತ್ರುಕಂಠಮತಾಡಯತ್ ।
ತೇನ ಬಾಣೇನ ರಣಜಿತ್ತ್ಯಕ್ತ್ವಾ ದೇಹಂ ದಿವಂ ಗತಃ ॥ ೯೯ ॥

ಹತೇ ತಸ್ಮಿನ್ ಮಹಾವೀರ್ಯೇ ಬ್ರಹ್ಮಾನಂದಶ್ಚ ದುಃಖಿತಃ ।
ಮಹೀರಾಜಭಯಾದ್ಬ್ರಹ್ಮಾ ಪುರಸ್ಕೃತ್ಯ ಚ ಯೋಷಿತಃ ॥ ೧೦೦ ॥

---

೯೭. ಆಗ ರಣಜಿತ್ಕುಮಾರನು ಶತ್ರುವಿನ ಬಾಣಗಳನ್ನು ಕತ್ತರಿಸಿದುದಲ್ಲದೆ ಅವನ ಬಿಲ್ಲನ್ನೂ ಸಹ ತುಂಡುಮಾಡಿ, ಮೂರು ಬಾಣಗಳನ್ನು ತೆಗೆದುಕೊಂಡು ಕರ್ಣಾಂಶಸಂಭೂತನಾದ ತಾರಕನ ಹೃದಯಕ್ಕೆ ಗುರಿಯಿಟ್ಟು ಹೊಡೆದನು.

೯೮. ಆಗ ತಾರಕನು ಕೋಲಿನ ಏಟುಬಿದ್ದ ಸರ್ಪದ ಹಾಗೆ, ತುಂಬಾ ಕೋಪಗೊಂಡು ದೇವದೇವನಾದ ಶಂಕರನನ್ನು ಧ್ಯಾನಮಾಡಿ ವಿಷದಿಂದ ಅದ್ದಿದ ಬಾಣವನ್ನು ಬಿಲ್ಲಿನಲ್ಲಿ ಹೂಡಿದನು.

೯೯. ಅದನ್ನು ಶತ್ರುವಾದ ರಣಜಿತ್ತಿನ ಕಂಠಕ್ಕೆ ಗುರಿಯಿಟ್ಟು ಪ್ರಯೋಗಿಸಲು, ಆ ಬಾಣವು ರಣಜಿತ್ಕುಮಾರನ ಕುತ್ತಿಗೆಗೆ ತಗಲಿ ಅದರಿಂದ ಅವನು ಮೃತನಾಗಿ ಸ್ವರ್ಗಕ್ಕೆ ತೆರಳಿದನು.

೧೦೦. ಹೀಗೆ ಮಹಾಪರಾಕ್ರಮಿಯಾದ ರಣಜಿತ್ಕುಮಾರನು ಮೃತನಾಗಲು ಬ್ರಹ್ಮಾನಂದನು ತುಂಬಾ ದುಃಖಪಟ್ಟು ಪೃಥ್ವೀರಾಜನು ಇನ್ನೇನುಮಾಡುವನೋ ಎಂದು ಹೆದರಿಕೆಯಿಂದ ಕೂಡಿ, ಆ ಸ್ತ್ರೀಯರನ್ನೆಲ್ಲಾ ಮುಂದೆ ಬಿಟ್ಟುಕೊಂಡು ಸಾಗಿದನು.

ಸಂಧ್ಯಾಕಾಲೇ ತು ಸಂಪ್ರಾಪ್ತೇ ಭಾದ್ರಕೃಷ್ಣಾಷ್ಟಮೀದಿನೇ ।
ಕಪಾಟಂ ಸುದೃಢಂ ಕೃತ್ವಾ ಸೈನ್ಯೈಃ ಷಷ್ಟಿಸಹಸ್ರಕೈಃ ।
ಸಾರ್ಧಂ ಗೇಹಮುಪಾಗಮ್ಯ ಶಾರದಾಂ ಶರಣಂ ಯಯೌ ॥ ೧೦೧ ॥

ಮಹೀರಾಜಸ್ತು ಬಲವಾನ್ ಪುತ್ರಶೋಕೇನ ದುಃಖಿತಃ ।
ಸಂಕಲ್ಪಂ ಕೃತವಾರ್ನ್ಘೋರಂ ಶೃಣ್ವತಾಂ ಸರ್ವಭೂಭೃತಾಂ ॥ ೧೦೨ ॥

ಶಿರೀಷಾಖ್ಯಪುರಂ ರಮ್ಯಂ ಯಥಾ ಶೂನ್ಯಂ ಮಯಾ ಕೃತಂ ।
ತಥಾ ಮಹಾವತೀ ಸರ್ವಾ ಬ್ರಹ್ಮಾನಂದಾದಿಭಿಃಸಹ ।
ಕ್ಷಯಂ ಯಾಸ್ಯಂತಿ ಮದ್ಬಾಣೈಃ ಸರ್ವೇ ತೇ ಚಂದ್ರವಂಶಿನಃ ॥ ೧೦೩ ॥

ಇತ್ಯುಕ್ತ್ವಾ ಧುಂಧುಕಾರಂ ವೈ ಚಾಹ್ವಯಾಮಾಸ ಭೂಪತಿಃ ।
ಪಂಚಲಕ್ಷಬಲೈಃ ಸಾರ್ಧಂ ಶೀಘ್ರಮಾಗಮ್ಯತಾಂ ಪ್ರಿಯ ॥ ೧೦೪ ॥

ಇತಿ ಶ್ರುತ್ವಾ ಧುಂಧುಕಾರೋ ಗತ್ವಾ ಶೀಘ್ರಂ ಚ ದೇಹಲೀಂ ।
ಉಷಿತ್ವಾ ಸಪ್ತದಿವಸಾನ್ಯುದ್ಧಭೂಮಿಮುಪಾಗಮತ್ ॥ ೧೦೫ ॥

---

೧೦೧ ಹೀಗೆ ಬಂದು ಭಾದ್ರಪದ ಕೃಷ್ಣ ಅಷ್ಟಮಿಯದಿನ ಸಾಯಂಕಾಲದ ವೇಳೆಗೆ ನಗರಕ್ಕೆ ಬಂದು ಕೋಟೆಯ ಹೆಬ್ಬಾಗಿಲನ್ನು ಬಿಗಿಯಾಗಿ ಭದ್ರಪಡಿಸಿ, ಅರುವತ್ತುಸಾವಿರ ಸೇನೆಗಳನ್ನು ರಕ್ಷಣೆಗಾಗಿ ಇಟ್ಟು, ತನ್ನ ಮನೆಗೆ ಬಂದು ಅಲ್ಲಿ ಶಾರದಾದೇವಿಯನ್ನು ಶರಣುಹೊಕ್ಕು ಪ್ರಾರ್ಥಿಸಿದನು.

೧೦೨-೧೦೪. ಇತ್ತ ಪೃಥ್ವೀರಾಜನು ಬಲಶಾಲಿಯಾಗಿದ್ದರೂ ಪುತ್ರಶೋಕ ದಿಂದ ದುಃಖಪಡುತ್ತಾ ಎಲ್ಲ ರಾಜರ ಸಮ್ಮುಖದಲ್ಲಿ ನಿಂತು, ಅವರೆಲ್ಲರಿಗೂ ಕೇಳಿಸು ವಂತೆ ಘೋರವಾದ ಧ್ವನಿಯಿಂದ ಇಂತೆಂದನು. "ಮನೋಹರವಾಗಿದ್ದ ಶಿರೀಷ ನಗರವನ್ನು ಜನಶೂನ್ಯವನ್ನಾಗಿ ಮಾಡಿದ ಹಾಗೆಯೇ ಮಹಾವತೀನಗರವನ್ನೂ ಜನರಹಿತವನ್ನಾಗಿ ಮಾಡುವೆನು. ಬ್ರಹ್ಮಾನಂದಾದಿ ಚಂದ್ರವಂಶದ ರಾಜಕುಮಾರರ ನ್ನೆಲ್ಲಾ ನನ್ನ ಬಾಣಗಳಿಂದ ಧ್ವಂಸಮಾಡುವೆನು" ಎಂದು ಪ್ರತಿಜ್ಞೆಮಾಡಿದನು. ಹೀಗೆ ಪ್ರತಿಜ್ಞೆಮಾಡಿದ ಬಳಿಕ ಐದುಲಕ್ಷ ಸೇನೆಯೊಡನೆ ಜಾಗ್ರತೆಯಾಗಿ ಬರ ಬೇಕೆಂದು ಧುಂಧುಕಾರನಿಗೆ ಹೇಳಿ ಕಳುಹಿಸಿದನು.

೧೦೫. ಇದನ್ನು ಕೇಳಿ ಧುಂಧುಕಾರನು ಶೀಘ್ರವಾಗಿ ದೆಹಲಿಗೆ ಬಂದು, ಅಲ್ಲಿ ಏಳು ದಿವಸಗಳ ಕಾಲ ಸಿದ್ಧತೆಯನ್ನು ನಡೆಸಿ ಅನಂತರ ಯುದ್ಧಭೂಮಿಗೆ ಸಾಗಿದನು.

**ತದಾಷ್ಟಲಕ್ಷಸಹಿತೋ ಮಹೀರಾಜೋ ಮಹಾಬಲಃ ।**
**ತಾರಕೇಣ ಚ ಸಂಯುಕ್ತೋ ಯುದ್ಧಾಯ ಸಮುಪಾಯಯೌ ॥ ೧೦೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಷಡ್ವಿಂಶೋಽಧ್ಯಾಯಃ**



---

೧೦೬. ಹೀಗೆ ಮಹಾಬಲಶಾಲಿಯಾದ ಪೃಥ್ವೀರಾಜನು ತನ್ನ ಎಂಟುಲಕ್ಷ ಸೈನ್ಯದೊಡನೆ ತಾರಕನ ಜತೆಯಲ್ಲಿ ಹೊರಟು ಬ್ರಹ್ಮಾನಂದನೊಡನೆ ಯುದ್ಧಕ್ಕೆ ಇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತಾರನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಸಪ್ತವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಸಪ್ತವಿಂಶಾಬ್ದಕೇ ಪ್ರಾಪ್ತೇ ಕೃಷ್ಣಾಂಶೇ ಸರ್ವಮಂಗಲೇ ।
ಭಾದ್ರಕೃಷ್ಣದಶಮ್ಯಾಂ ಚ ಮಲನಾ ಶೋಕಕಾತರಾ ।
ಜನನಾಯಕಮಾಹೂಯ ವಚನಂ ಪ್ರಾಹ ದುಃಖಿತಾ ॥ ೧ ॥

ಅಯೇ ಕಚ್ಛಪದೇಶೀಯ ಗೌತಮಾನ್ವಯಸಂಭವ ।
ಹರಿನಾಗರಮಾರುಹ್ಯ ಕಾನ್ಯಕುಬ್ಜಂ ವ್ರಜಾಽಧುನಾ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಸರ್ವಮಂಗಳ ಸ್ವರೂಪನಾದ ಕೃಷ್ಣಾಂಶನಿಗೆ ಇಪ್ಪತ್ತೇಳನೆಯ ವರ್ಷ ಪ್ರಾರಂಭವಾಯಿತು. ಭಾದ್ರಪದ ಕೃಷ್ಣ ನವಮಿಯದಿನ ಮಲನಾದೇವಿಯು ಶೋಕಕಾತರಳಾಗಿ ದುಃಖದಿಂದ ತಮ್ಮ ಬಳಿ ವಾಸಿಸುತ್ತಿದ್ದ ತನ್ನ ಮಗಳ ಮಗನಾದ ಜನನಾಯಕನನ್ನು ಕುರಿತು ಇಂತೆಂದಳು.

೨ "ಎಲೈ ಗೌತಮವಂಶಸಂಭೂತನಾದ ಕಚ್ಛಪದೇಶದ ರಾಜನೇ! ಈಗಲೇ ನೀನು ಹರಿನಾಗರವೆಂಬ ಅಶ್ವವನ್ನೇರಿ ಕಾನ್ಯಕುಬ್ಜ ಪಟ್ಟಣಕ್ಕೆ ಹೋಗು."

ಪುತ್ರಮಾಹ್ಲಾದಮಾಹೂಯ ಸಾನುಜಂ ಮತ್ಪ್ರಿಯಂಕರಂ ।
ಇತಿ ಶ್ರುತ್ವಾ ತು ವಚನಂ ಹೃದಿ ಸಂಚಿಂತ್ಯ ವೈ ಪುನಃ ॥ ೩ ॥

ಮಲನಾಂ ದುಃಖಿತಾಂ ಪ್ರಾಹ ನ ತ್ವಾಯಾಸ್ಯತಿ ಸ ಪ್ರಭುಃ ।
ರಾಜ್ಞಃ ಪರಿಮಲಸ್ಯೈವ ವಾಕ್ಯಂ ಮತ್ವಾ ಸುದುಃಖದಂ ॥ ೪ ॥

ಇತಿ ಶ್ರುತ್ವಾ ತು ವಚನಂ ರುರೋದ ಮಲನಾ ಸತೀ ।
ಪುನರ್ಮೂರ್ಛಾಂ ಗತಾ ಭೂಮೌ ಜೀವನಂ ತ್ಯಕ್ತುಮುದ್ಯತಾ ॥ ೫ ॥

ಹಾ ರಾಮಾಂಶ ಮಹಾಬಾಹೋ ವತ್ಸ ಕೃಷ್ಣಾಂಶ ಸುಂದರ ।
ಕ್ವ ಗತೌ ಸಹ ದೇವಕ್ಯಾ ತ್ಯಕ್ತ್ವಾ ಮಾಂ ಮಂದಭಾಗಿನೀಂ ॥ ೬ ॥

---

೩. "ನನಗೆ ಪ್ರೀತಿಪಾತ್ರನಾದ ಆಹ್ಲಾದನನ್ನೂ ಅವನ ಸಹೋದರನನ್ನೂ ಅಲ್ಲಿಂದ ಕರೆದುಕೊಂಡು ಬಾ" ಎಂದಳು ಈ ಮಾತನ್ನು ಕೇಳಿ ಕಚ್ಛರಾಜನಾದ ಜನನಾಯಕನು ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿದನು.

೪. ಬಳಿಕ ದುಃಖಿತೆಯಾದ ಮಲನಾದೇವಿಯನ್ನು ಕುರಿತು "ಎಲೌ ದೇವಿಯೇ! ಸರ್ವಸಮರ್ಥನಾದ ಆಹ್ಲಾದನು ನಾನು ಹೋಗಿ ಕರೆದರೆ ಹಿಂದಿರುಗಿ ಬರುವುದಿಲ್ಲ ಪರಿಮಳರಾಜನು ಅಂದ ಮಾತು ಬಹು ದುಃಖಪ್ರದವಾದ್ದೆಂದು ತಿಳಿದಿದ್ದಾನೆ" ಎಂದು ಹೇಳಿದನು.

೫. ಈ ಮಾತನ್ನು ಕೇಳಿ ಮಲನಾದೇವಿಯು ಗಟ್ಟಿಯಾಗಿ ರೋದನ ಮಾಡುತ್ತಾ ಪುನಃ ಭೂಮಿಯಲ್ಲಿ ಬಿದ್ದು ಮೂರ್ಛೆಹೊಂದಿ ಪ್ರಾಣತ್ಯಾಗಮಾಡಲು ಸಿದ್ಧಳಾದಳು.

೬. ಮತ್ತೆ ಅವನಿಗಾಗಿ ಹಲುಬುತ್ತಾ "ಮಹಾಬಾಹುವೇ! ಬಲರಾಮಾಂಶ ಸಂಭೂತನಾದ ಎಲೈ ಆಹ್ಲಾದಾ! ಸುಂದರನೂ, ಪ್ರೀತಿಪಾತ್ರನೂ ಆದ ಕೃಷ್ಣಾಂಶಾ! ನೀವಿಬ್ಬರೂ ಮಂದಭಾಗಿನಿಯಾದ ನನ್ನನ್ನು ಬಿಟ್ಟು ನಿಮ್ಮ ತಾಯಿಯಾದ ದೇವಕಿಯೊಡನೆ ಎಲ್ಲಿ ಹೋದಿರಿ" ಎಂದು ಗೋಳಾಡತೊಡಗಿದಳು.

ತದಾ ಪರಿಮಲಾಪುತ್ರೋ ದೃಷ್ಟ್ವಾ ರಾಜ್ಞೀಂ ತಥಾ ಗತಾಂ ।
ಬಹುಧಾಶ್ವಾಸ್ಯ ಬಲವಾನ್ ಕಾನ್ಯಕುಬ್ಜಪುರಂ ಯಯೌ ॥ ೭ ॥

॥ ಋಷಯ ಊಚುಃ ॥

ತ್ವಯಾ ಪರಿಮಲಾಪುತ್ರಸ್ಸಂಪ್ರೋಕ್ತೋ ಜನನಾಯಕಃ ।
ರೋಮಹರ್ಷಣ ಮೇ ಬ್ರೂಹಿ ಸೋಽಯಂ ಕಸ್ತೇನ ಕಿಂ ಕೃತಂ ॥ ೮ ॥

॥ ಸೂತ ಉವಾಚ ॥

ಇಂದ್ರಪ್ರಸ್ಥಪುರೇವಾಸೀವಪ್ರದ್ಯೋತಃ ಕಥಿತೋ ಮಯಾ ।
ಪಿತಾ ಪರಿಮಲಸ್ಯೈವಾಮಾತ್ಯೋಽನಂಗಮಹೀಪತೇಃ ॥ ೯ ॥

ತಸ್ಯ ಕನ್ಯಾ ಸಮಾಜಾತಾ ನಾಮ್ನಾ ಪರಿಮಲಾ ಮುನೇ ।
ದುಶ್ಯಲಾಂಶಸಮುದ್ಭೂತಾ ರಂಭೇವ ಸುಕುಮಾರಿಕಾ ॥ ೧೦ ॥

---

೭. ಆಗ ಪರಿಮಳಾದೇವಿಯ ಮಗನಾದ ಜನನಾಯಕನು ಮಹಾದೇವಿಯೂ, ತಮ್ಮ ತಾಯಿಯ ತಾಯಿಯೂ ಆದ ರಾಣಿಯು ಈರೀತಿ ರೋದನಮಾಡುವುದನ್ನು ನೋಡಿ, ಬಲಶಾಲಿಯಾದ ಇವನು ಅವಳನ್ನು ಬಹು ಪ್ರಕಾರ ಸಂತೈಸಿ, ಆಹ್ಲಾದಾದಿಗಳನ್ನು ಕರೆತರುವುದಕ್ಕೆ ಕಾನ್ಯಕುಬ್ಜ ಪಟ್ಟಣಕ್ಕೆ ಹೋದನು.

೮. ಋಷಿಗಳು ಕೇಳುತ್ತಾರೆ.—ಎಲೈ ಶೌನಕ ಮಹರ್ಷಿಯೇ! ಪರಿಮಳೆಯ ಪುತ್ರನು ಜನನಾಯಕನೆಂದು ನೀನು ಹೇಳಿದೆಯಷ್ಟೆ ಅವನು ಯಾರು? ಅವನು ಏನುಮಾಡಿದನು? ಅದನ್ನು ನಮಗೆ ತಿಳಿಸು ಎಂದರು.

೯. ಆಗ ಸೂತಮುನಿವರ್ಯನು ಹೇಳುತ್ತಾನೆ.—ಇಂದ್ರಪ್ರಸ್ಥಪುರಿಯಲ್ಲಿ ಪ್ರದ್ಯೋತನೆಂಬ ರಾಜನು ಇದ್ದನೆಂದು ಹಿಂದೆಯೇ ಹೇಳಿದೆನಷ್ಟೆ. ಅವನೇ ಪರಿಮಳನ ತಂದೆ; ಆತನು ಅನಂಗಪಾಲನಿಗೆ ಮಂತ್ರಿಯಾಗಿದ್ದನು.

೧೦. ಆ ಪರಿಮಳನಿಗೆ ಮರಿಮಳೆ ಎಂಬ ಹೆಸರುಳ್ಳ ಒಬ್ಬಳು ಕನ್ಯೆ ಜನಿಸಿದಳು. ಅಯ್ಯಾ ಮಹರ್ಷಿಯೇ! ಆ ಕುಮಾರಿಯು ದುಶ್ಯಳೆಯ ಅಂಶದಿಂದ ಹುಟ್ಟಿ, ರಂಭೆಯಂತೆ ಸುಂದರಾಂಗಿಯಾಗಿದ್ದಳು.

ತದ್ವಿವಾಹಾರ್ಥಮುದ್ಯೋಗಃ ಕೃತಃ ಪಿತ್ರಾ ಸ್ವಯಂವರಃ ।
ಪುತ್ರಃ ಕಚ್ಛಪಭೂಪಸ್ಯ ಸ ನಾಮ್ನಾ ಕಮಲಾಪತಿಃ ।
ತಾಮುದ್ವಾಹ್ಯ ವಿಧಾನೇನ ಸ್ವಗೇಹಾಯ ಯಯೌ ಮುದಾ　　॥ ೧೧ ॥

ತಯೋಸ್ಸಮಾಗಮೋ ಜಾತಃ ಪುತ್ರೋಽಯಂ ಜನನಾಯಕಃ ।
ಶತ್ರುವಿದ್ಯಾಪರಃ ಶೂರಃ ಖಡ್ಗಯುದ್ಧವಿಶಾರದಃ　　॥ ೧೨ ॥

ಜಿತ್ವಾ ಭೂಪಾನ್ ಬಲಾದ್ವೀರಃ ಸಿಂಧುತೀರನಿವಾಸಿನಃ ।
ಷಡಂಶಕರಮಾದಾಯ ಪಿತೃರಾಜ್ಯಮುಪಸ್ಥಿತಃ　　॥ ೧೩ ॥

ಏಕದಾ ತು ಮಹೀರಾಜಃ ಸ್ವಸೈನ್ಯಪರಿವಾರಿತಃ ।
ಕಚ್ಛದೇಶಮುಪಾಗಮ್ಯ ಕರಾರ್ಥಂ ಸಮುಪಸ್ಥಿತಃ　　॥ ೧೪ ॥

---

೧೧. ಮಗಳು ಪ್ರಾಪ್ತವಯಸ್ಕಳಾಗಲಾಗಿ ತಂದೆಯು ಅವಳ ಸ್ವಯಂವರಕ್ಕೋಸ್ಕರ ಪ್ರಯತ್ನ ಮಾಡಿದನು. ಆಗ ಕಚ್ಛರಾಜನ ಮಗನಾದ ಕಮಲಾಪತಿಯೆಂಬುವನು ಆ ಪರಿಮಳಾದೇವಿಯನ್ನು ಶಾಸ್ತ್ರೋಕ್ತವಾಗಿ ಪಾಣಿಗ್ರಹಣ ಮಾಡಿಕೊಂಡು ಅವಳೊಡನೆ ಸಂತೋಷದಿಂದ ತನ್ನ ದೇಶಕ್ಕೆ ಹಿಂದಿರುಗಿದನು.

೧೨. ಕಮಲಾಪತಿ ಮತ್ತು ಪರಿಮಳದೇವಿ ಇವರಿಬ್ಬರ ಅನ್ಯೋನ್ಯ ಸಮಾಗಮದಿಂದ ಈ ಜನನಾಯಕನೆಂಬ ಪುತ್ರನು ಹುಟ್ಟಿದನು. ಇವನು ಶತ್ರುವನ್ನು ನಾಶಮಾಡುವುದರಲ್ಲಿ ಸಮರ್ಥನೂ, ವೀರನೂ, ಖಡ್ಗಯುದ್ಧ ನಿಪುಣನೂ ಆಗಿದ್ದನು.

೧೩. ಈ ವೀರನು ಸಿಂಧೂನದೀತೀರದ ರಾಜ್ಯದಲ್ಲಿರುವ ರಾಜರನ್ನೆಲ್ಲಾ ತನ್ನ ಸಾಮರ್ಥ್ಯದಿಂದ ಜಯಿಸಿ ಆ ದೇಶದ ಆರನೆಯ ಒಂದುಭಾಗ ಉತ್ಪನ್ನವನ್ನು ಅವರಿಂದ ಕಪ್ಪವನ್ನಾಗಿ ಕೆಗೆದುಕೊಂಡು ತನ್ನ ತಂದೆಯ ರಾಜ್ಯಕ್ಕೆ ಹಿಂದಿರುಗಿದನು.

೧೪. ಒಂದುಸಲ ಪೃಥ್ವೀರಾಜನು ತನ್ನ ಸೈನ್ಯದೊಡನೆ ಹೊರಟು ಕಚ್ಛದೇಶಕ್ಕೆ ಬಂದು ಅಲ್ಲಿ ಕಪ್ಪವನ್ನು ವಸೂಲು ಮಾಡುವುದಕ್ಕೋಸ್ಕರ ಮುತ್ತಿದನು.

ತಯೋಶ್ಚಾಸೀನ್ಮಹದ್ಯುದ್ಧಂ ಜನನಾಯಕಭೂಪಯೋಃ ।
ಮಾಸಾಂತೇ ಸೂರ್ಯವಂಶೀಯೋ ಮಹೀರಾಜೇನ ನಿರ್ಜಿತಃ ॥ ೧೫ ॥

ತ್ಯಕ್ತ್ವಾ ರಾಷ್ಟ್ರಂ ಚ ಸಕುಲಃ ಸಂಪ್ರಾಪ್ತಶ್ಚ ಮಹಾವತೀಂ ।
ಪರಿಮಲಸ್ತು ತದಾ ರಾಜಾ ತಸ್ಮೈ ಗ್ರಾಮಂ ಶುಭಂ ದದೌ ॥ ೧೬ ॥

ನಿವಾಸಂ ಕೃತವಾಂಸ್ತತ್ರ ಸ್ವನಾಮ್ನಾ ಪ್ರಥಿತಂ ಭುವಿ ।
ಸ ವೈ ಕಚ್ಛಪದೇಶೀಯೋ ಯಯೌ ಪರಿಮಲಾಜ್ಞಯಾ ॥ ೧೭ ॥

ತದಾಽಸೌ ಚ ಮಹೀರಾಜೋ ಮಹೀಪತ್ಯನುಮೋದಿತಃ ।
ಚಾಮುಂಡಂ ಶೀಘ್ರಮಾಹೂಯ ಲಕ್ಷಸೈನ್ಯಸಮನ್ವಿತಂ ।
ಆದೇಶಂ ಕೃತವಾನ್ರಾಜಾ ತಸ್ಯ ಬಂಧನಹೇತವೇ ॥ ೧೮ ॥

---

೧೫. ಆಗ ಆ ಪೃಥ್ವೀರಾಜನಿಗೂ ಜನನಾಯಕನಿಗೂ ದೊಡ್ಡ ಯುದ್ಧವಾಯಿತು. ಒಂದುತಿಂಗಳಕಾಲ ದೊಡ್ಡ ಯುದ್ಧವೇ ನಡೆಯಿತು. ಬಳಿಕ ಸೂರ್ಯವಂಶೋತ್ಪನ್ನನಾದ ಈ ಜನನಾಯಕನು ಪೃಥ್ವೀರಾಜನಿಗೆ ಸೋತುಹೋದನು

೧೬. ಹೀಗೆ ಸೋತ ಅವನು ತನ್ನ ರಾಜ್ಯವನ್ನು ಬಿಟ್ಟು ತನ್ನ ಪರಿವಾರದೊಡನೆ ಹೊರಟು ಮಾತಾಮಹನ ಪಟ್ಟಣವಾದ ಮಹಾವತೀನಗರಕ್ಕೆ ಬಂದು ಸೇರಿದನು. ಆಗ ಪರಿಮಳರಾಜನು ಅವನ ವಾಸಕ್ಕಾಗಿ ಶುಭಕರವಾದ ಒಂದು ಗ್ರಾಮವನ್ನು ಬಿಟ್ಟುಕೊಟ್ಟನು.

೧೭. ಆ ಜನನಾಯಕನು ತನ್ನ ಹೆಸರಿನಿಂದ ಪ್ರಸಿದ್ಧವಾದ ಆ ಗ್ರಾಮದಲ್ಲಿಯೇ ವಾಸಿಸತೊಡಗಿದನು. ಆ ಕಚ್ಛಪದೇಶದ ರಾಜನಾದ ಜನನಾಯಕನೇ ಈಗ ಪರಿಮಳಿಯ ಆಜ್ಞೆಯಿಂದ ಕಾನ್ಯಕುಬ್ಜ ಪಟ್ಟಣಕ್ಕೆ ಹೊರಟನು.

೧೮. ಇತ್ತ ಪೃಥ್ವೀರಾಜನು ಮಹೀಪತಿ ರಾಜನಿಂದ ಪ್ರೇರಿತನಾಗಿ ಜಾಗ್ರತೆಯಾಗಿ ಚಾಮುಂಡನನ್ನು ಕರೆಯಿಸಿ, ಅವನ ವಶಕ್ಕೆ ಒಂದುಲಕ್ಷ ಸೇನೆಯನ್ನು ಕೊಟ್ಟು ಆ ಜನನಾಯಕನನ್ನು ಕೈಸೆರೆಹಿಡಿದು ತರಬೇಕೆಂದು ಅಪ್ಪಣೆ ಮಾಡಿದನು.

ಸ ಚ ನೇತ್ರವತೀಕೂಲೇ ಸಂಪ್ರಾಪ್ತೇ ಲಕ್ಷಸೈನ್ಯಪಃ ।
ರುರೋಧ ಸೂರ್ಯವಂಶೀಯಂ ಜನನಾಯಕಮುತ್ತಮಂ ॥ ೧೯ ॥

ಸ ತದಾ ಖಡ್ಗಮಾದಾಯ ಬಾಹುಶಾಲೀ ಯತೇಂದ್ರಿಯಃ ।
ತತ್ರ ಶೂರಶತಂ ಹತ್ವಾ ನಭೋಮಾರ್ಗಮುಪಾಯಯೌ ॥ ೨೦ ॥

ಸೇನಾಪತೇಶ್ಚ ಮುಕುಟಂ ಗಜಸ್ಥಸ್ಯ ಗೃಹೀತವಾನ್ ।
ಲಜ್ಜಿತಸ್ಸ ತು ಚಾಮುಂಡೋ ವಚನಂ ಪ್ರಾಹ ನಮ್ರಧೀಃ ॥ ೨೧ ॥

ಭವಾನ್ವೃತ್ತಿಕರೋ ಮಹ್ಯಂ ಕ್ಷತ್ರಿಯೋ ಬ್ರಾಹ್ಮಣಸ್ಯ ವೈ ।
ದೇಹಿ ಮೇ ಮುಕುಟಂ ವೀರ ಚಿರಂ ಜೀವ ಸುಖೀ ಭವ ॥ ೨೨ ॥

ಇತಿ ಶ್ರುತ್ವಾ ಸ ವಿನಯಂ ದತ್ವಾ ತಸ್ಮೈ ಶುಭಂ ವಸು ।
ಕುಠಾರನಗರೇ ಪ್ರಾಪ್ತೋ ವಾಮನೇನ ಸುರಕ್ಷಿತಃ ॥ ೨೩ ॥

---

೧೯. ಆ ಸೇನಾಪತಿಯಾದ ಚಾಮುಂಡನು ಲಕ್ಷಸೇನೆಯೊಡನೆ ನೇತ್ರವತೀ ದಡಕ್ಕೆ ಬಂದು ಸೂರ್ಯವಂಶೀಯನೂ, ಶ್ರೇಷ್ಠನೂ ಆದ ಜನನಾಯಕನನ್ನು ಕೂಡಲೇ ಮುತ್ತಿದನು.

೨೦. ಆಗ ಬಾಹುಶಾಲಿಯೂ ಜಿತೇಂದ್ರಿಯನೂ ಆದ ಜನನಾಯಕನು ಖಡ್ಗವನ್ನು ಹಿಡಿದು ನೂರಾರುಜನ ವೀರರನ್ನು ಕೊಂದು ಅಂತರಿಕ್ಷಕ್ಕೆ ಹಾರಿದನು.

೨೧. ಆಕಾಶದಲ್ಲಿ ಚರಿಸುವ ಅವನು ಸೇನಾಪತಿಯೆನಿಸಿ ಆನೆಯ ಮೇಲೆ ಕುಳಿತಿದ್ದ ಚಾಮುಂಡನ ಕಿರೀಟವನ್ನೇ ಅಪಹರಿಸಿದನು. ಆಗ ಚಾಮುಂಡನು ಲಜ್ಜಿತನಾಗಿ ಆ ಜನನಾಯಕನನ್ನು ಕುರಿತು ವಿನಯದಿಂದ ಮಾತಾಡತೊಡಗಿದನು.

೨೨. "ಅಯ್ಯಾ ವೀರನೆ! ನೀನು ಕ್ಷತ್ರಿಯನು. ಬ್ರಾಹ್ಮಣನಿಗೆ ಉದ್ಯೋಗವನ್ನು ಕಲ್ಪಿಸುವವನು. ಆದ್ದರಿಂದ ಪೂಜ್ಯನಾದ ನೀನು ನನ್ನ ಕಿರೀಟವನ್ನು ಕೊಟ್ಟು ಬಹಳಕಾಲ ಸುಖವಾಗಿಬಾಳು" ಎಂದು ಹೇಳಿದನು.

೨೩. ಈರೀತಿ ವಿನಯಯುಕ್ತವಾಗಿ ಹೇಳಿದ ಆ ಮಾತನ್ನು ಕೇಳಿ ಆ ಜನನಾಯಕನು ಅವನಿಗೆ ಶುಭಕರವಾದ ಆ ರತ್ನ ಕಿರೀಟವನ್ನು ಕೊಟ್ಟನು. ಬಳಿಕ ಇವನು ವಾಮನ ಎಂಬಾತನಿಂದ ರಕ್ಷಣೆಯನ್ನು ಹೊಂದುತ್ತಾ ಕುಠಾರನಗರಕ್ಕೆ ಬಂದು ಸೇರಿದನು.

ದೃಷ್ಟ್ವಾ ತತ್ರ ವಟಚ್ಛಾಯಾಂ ಶ್ರಮೇಣಾತೀವ ಕರ್ಷಿತಃ ।
ಸುಷ್ವಾಪ ನಿರ್ಭಯೋ ವೀರಸ್ತತ್ರ ಸ್ಥಾನೇ ಸುಖಪ್ರದೇ ॥ ೨೪ ॥

ತದಾ ತು ವಾಮನೋ ಜ್ಞಾತ್ವಾ ಸ್ವದೂತೈಸ್ತತ್ರ ಕಾರಣಂ ।
ವಸ್ತ್ರಾಣ್ಯಾಚ್ಛಾದ್ಯ ಚಾಗಮ್ಯ ಚಾಹರದ್ಧರಿನಾಗರಂ ॥ ೨೫ ॥

ಹೃತೇ ತಸ್ಮಿಂಶ್ಚ ದಿವ್ಯಾಶ್ವೇ ಪ್ರಬುದ್ಧೋ ಜನನಾಯಕಃ ।
ಚಿಂತಾಮುಪಾಪ್ಯ ಮಹತೀಂ ರೋದನಂ ಕೃತವಾನ್ ಬಹು ॥ ೨೬ ॥

ಅಶ್ವಾಂಘ್ರಿಚಿಹ್ನಮಾಲೋಕ್ಯ ವಾಮನಂ ಪ್ರಾಪ್ಯ ನಿರ್ಭಯಃ ।
ವಚನಂ ಪ್ರಾಹ ನಮ್ರಾತ್ಮಾ ನೃಪಂ ಗೌರಾನ್ವಯೋದ್ಭವಂ ॥ ೨೭ ॥

ಕ್ಷತ್ರಿಯಾಣಾಂ ಹಿ ಸಂಹಾರ್ಯೋ ಭಯದೋ ಭುವಿ ಸರ್ವದಾ ।
ಸ ಭವಾನ್ರಾಜನೀತಿಜ್ಞೋ ದೇಹಿ ಮೇsಶ್ವಂ ಸುಖೀ ಭವ ॥ ೨೮ ॥

---

೨೪. ಅಲ್ಲಿ ಆಲದಮರದ ನೆರಳನ್ನು ನೋಡಿ, ತುಂಬ ಆಯಾಸವಾಗಿದ್ದುದರಿಂದ ಸುಖಕರವಾದ ಆ ಸ್ಥಳದಲ್ಲಿ ವೀರನಾದ ಆ ಜನನಾಯಕನು ನಿರಾತಂಕದಿಂದ ಮಲಗಿಕೊಂಡನು.

೨೫ ಆಗ ವಾಮನನು ತನ್ನ ದೂತರ ಮುಖಾಂತರ ಇವರುಗಳ ವಿಷಯವನ್ನು ತಿಳಿದು, ತಾವು ಬಟ್ಟೆಗಳನ್ನು ಮುಸುಕುಹಾಕಿಕೊಂಡು ಕಾಣದಂತೆ ಬಂದು, ಅಲ್ಲಿ ಕಟ್ಟಿದ್ದ ಆ ಹರಿನಾಗರ ಅಶ್ವವನ್ನು ಅಪಹರಿಸಿದರು.

೨೬. ತಮ್ಮ ಬಳಿ ಇದ್ದ ದಿವ್ಯಾಶ್ವವು ಹೀಗೆ ಅಪಹೃತವಾಯಿತು. ಅನಂತರ ಎಚ್ಚರಗೊಂಡ ಜನನಾಯಕನು ಚಿಂತಾಕ್ರಾಂತನಾಗಿ ಬಹುವಾಗಿ ರೋದನ ಮಾಡಿದನು.

೨೭. ಬಳಿಕ ಕುದುರೆಯ ಹೆಜ್ಜೆಯಜಾಡನ್ನೇ ಹಿಡಿದು ನಡೆಯುತ್ತ ವಾಮನನಿದ್ದೆಡೆಗೆ ಹೋಗಿ ಅವನಿಗೆ ಸ್ವಲ್ಪವೂ ಹೆದರದೆ ವಿನಯದಿಂದ ಗೌರವಂಶೋತ್ಪನ್ನನಾದ ಅವನನ್ನು ಕುರಿತು ಈರೀತಿ ಹೇಳಿದನು.

೨೮. "ನೀನು ಭೂಮಿಯಲ್ಲಿ ಯಾವಾಗಲೂ ಕ್ಷತ್ರಿಯರುಗಳಿಗೆ ಭಯಂಕರನೆನಿಸಿದವನು. ಅಲ್ಲದೆ ರಾಜನೀತಿಯನ್ನು ತಿಳಿದಿರುವೆ. ಅದನ್ನು ತಿಳಿದಿದ್ದರೂ ಹೀಗೆ ಮಾಡಿದರೆ ಹಾಸ್ಯಕ್ಕೆ ಗುರಿಯಾಗುವೆ. ಪೂಜ್ಯನಾದ ನೀನು ನನ್ನ ಕುದುರೆಯನ್ನು ನನಗೆ ಕೊಟ್ಟು ಸುಖವಾಗಿರು."

ನೋ ಚೇತ್ತ್ವಾಂ ವೈ ಸನಗರಂ ಕೃಷ್ಣಾಂಶಃ ಕ್ಷಪಯಿಷ್ಯತಿ ।
ಇತಿ ಶ್ರುತ್ವಾ ತು ವಚನಂ ವಾಮನೋ ಗೌರವಂಶಜಃ ॥ ೨೯ ॥

ಭಯಭೀತೋ ವಿನಿಶ್ಚಿತ್ಯ ಪ್ರದದೌ ಹರಿನಾಗರಂ ॥ ೩೦ ॥

ಪ್ರತೋದಂ ಸ್ವರ್ಣರಚಿತಂ ನಾನಾರತ್ನಸಮನ್ವಿತಂ ।
ಲೋಭಾಚ್ಚ ನ ದದೌ ರಾಜಾ ಮೃಷಾ ಶಪಥಕಾರಕಃ ॥ ೩೧ ॥

ತದಾ ಪರಿಮಲಾಪುತ್ರಃ ಕುಂಠಿತಃ ಪ್ರಾಹ ಭೂಪತಿಂ ।
ಪ್ರತೋದಲೋಭಾತ್ತೇ ರಾಜನ್ ಕ್ಷಯಂ ದುರ್ಗೋ ಗಮಿಷ್ಯತಿ ॥ ೩೨ ॥

ಇತ್ಯುಕ್ತ್ವಾ ಪ್ರಯಯೌ ವೀರಃ ಕಾನ್ಯಕುಬ್ಜಂ ಮಹೋತ್ತಮಂ ।
ಲಕ್ಷಣೋ ಹಸ್ತಿನೀ ಸಂಸ್ಥೋ ವಚನಂ ಪ್ರಾಹ ಗರ್ವಿತಃ ।
ಕಸ್ತ್ವಂ ಪ್ರಾಪ್ತೋ ಹಯಾರೂಢೋ ನಿರ್ಭಯಃ ಕ್ಷತ್ರಿಯೋತ್ತಮಃ ॥ ೩೩ ॥

---

೨೯. "ಇಲ್ಲದಿದ್ದರೆ ಕೃಷ್ಣಾಂಶನು ನಿನ್ನ ಪಟ್ಟಣವನ್ನೂ ನಿನ್ನನ್ನೂ ನಾಶಗೊಳಿಸುವನು" ಎಂದು ಹೇಳಲು ಗೌರವಂಶೋತ್ಪನ್ನನಾದ ವಾಮನನು ಆ ಮಾತನ್ನು ಕೇಳಿ ಆಲೋಚಿಸಿದನು.

೩೦. ಕೃಷ್ಣಾಂಶನಿಂದ ತನಗೆ ಕೇಡಾಗುವುದು ನಿಶ್ಚಯವೆಂದು ದಿಗಿಲುಬಿದ್ದು ಹರಿನಾಗರಾಶ್ವವನ್ನು ಅವನಿಗೆ ಕೊಟ್ಟುಬಿಟ್ಟನು.

೩೧. ನಾನಾ ರತ್ನ ಸುವರ್ಣಗಳಿಂದ ರಚಿತವಾದ ಪ್ರತೋದವೆಂಬ ಆಭರಣವನ್ನು ಆ ಕುದುರೆಗೆ ಧರಿಸಿದ್ದಿತು. ವಾಮನನು ಲೋಭದಿಂದ ಸುಳ್ಳು ಆಣೆಗಳನ್ನು ಇಟ್ಟುಕೊಂಡು ಅದನ್ನು ಮಾತ್ರ ಕೊಡಲಿಲ್ಲ.

೩೨. ಆಗ ಪರಿಮಳಾಪುತ್ರನಾದ ಜನನಾಯಕನು ಮನನೊಂದು ವಾಮನನನ್ನು ಕುರಿತು "ಎಲೈ ರಾಜನೇ! ಪ್ರತೋದಾಭರಣದ ಮೇಲೆ ಆಶೆಮಾಡಿ ಸುಳ್ಳು ಆಣೆಯಿಟ್ಟು ಮೋಸಮಾಡಿದ್ದೀ. ಇದರಿಂದ ನಿನ್ನ ದುರ್ಗವೇ ನಾಶವಾಗುವುದು" ಎಂದನು.

೩೩. ಹೀಗೆ ಹೇಳಿ ಆ ವೀರನು ಮಹಾಶ್ರೇಷ್ಠವಾದ ಕನ್ಯಾಕುಬ್ಜ ಪಟ್ಟಣಕ್ಕೆ ಬಂದನು. ಆಗ ಹಸ್ತಿನೀ ಎಂಬ ಆನೆಯ ಮೇಲೆ ಕುಳಿತಿದ್ದ ಲಕ್ಷಣ ಕುಮಾರನು ಜನನಾಯಕನನ್ನು ಕಂಡು "ಕ್ಷತ್ರಿಯೋತ್ತಮನಂತೆ ಗರ್ವದಿಂದ ಯಾರ ಹೆದರಿಕೆಯೂ ಇಲ್ಲದೆ ಅಶ್ವವನ್ನು ಏರಿಕೊಂಡು ಬಂದಿರುವ ನೀನು ಯಾರು? ಏತಕ್ಕೆ ಬಂದಿರುವೆ" ಎಂದು ಕೇಳಿದನು.

ಸ ಹೋವಾಚ ಮಹಾರಾಜ ಪ್ರೇಷಿತಶ್ಚಂದ್ರವಂಶಿನಾ ।
ತವಾಂತಿಕಂ ಸಮಾಯಾತಃ ಶರಣಾಗತವತ್ಸಲ ॥ ೩೪ ॥

ಮಹೀರಾಜಶ್ಚ ಬಲವಾನ್ಸಕುಲಂ ಚಂದ್ರವಂಶಿನಂ ।
ಹನಿಷ್ಯತಿ ಚ ರೌದ್ರಾಸ್ತ್ರೈರ್ಮಹೀಪತ್ಯನುಮೋದಿತಃ ॥ ೩೫ ॥

ಅತಸ್ತ್ವಂ ಸ್ವಬಲೈಸ್ಸಾರ್ಧಂ ಸಹಾಹ್ಲಾದಾದಿಭಿರ್ಯುತಃ ।
ಗಚ್ಛಗಚ್ಛ ಮಹಾರಾಜ ಮೃತಾನುಜ್ಜೀವಯಾಧುನಾ ॥ ೩೬ ॥

ಇತ್ಯುಕ್ತೋ ಲಕ್ಷಣಸ್ತೇನ ಜಯಚಂದ್ರಂ ಪ್ರಣಮ್ಯ ಸಃ ।
ಸರ್ವಂ ವೈ ಕಥಯಾಮಾಸ ಮಹೀರಾಜೋ ಯಥಾಗತಃ ॥ ೩೭ ॥

ಜಯಚಂದ್ರಸ್ತು ತಚ್ಛ್ರುತ್ವಾ ಚಾಹೂಯ ಜನನಾಯಕಂ ।
ವಚನಂ ಪ್ರಾಹ ಕ್ರುದ್ಧಾತ್ಮಾ ಶೃಣು ಗೌತಮವಂಶಜ ॥ ೩೮ ॥

---

೩೪. ಆಗ ಅದನ್ನು ಕೇಳಿ ಜನನಾಯಕನು "ಮಹಾರಾಜನೇ! ಚಂದ್ರವಂಶೋತ್ಪನ್ನನಾದ ರಾಜನು ನನ್ನನ್ನು ನಿನ್ನ ಸಮೀಪಕ್ಕೆ ಕಳುಹಿಸಿರುವನು."

೩೫. "ಶರಣಾಗತವತ್ಸಲನಾದ ಎಲೈ ರಾಜನೇ! ಬಲಶಾಲಿಯಾದ ಪೃಥ್ವೀರಾಜನು ಮಹೀಪತಿರಾಜನಿಂದ ಪ್ರೇರಿತನಾಗಿ ತನ್ನ ರೌದ್ರಾಸ್ತ್ರದಿಂದ ಚಂದ್ರವಂಶದ ರಾಜನನ್ನು ಪರಿವಾರಸಮೇತವಾಗಿ ನಾಶಮಾಡುವನು".

೩೬. "ಆದುದರಿಂದ ನೀನು ಆಹ್ಲಾದಾದಿಗಳೊಡನೆ ನಿನ್ನ ಸೈನ್ಯವನ್ನು ತೆಗೆದುಕೊಂಡು ಬೇಗ ಹೋಗಿ ಮೃತ್ಯುಸನ್ನಿಹಿತರಾಗಿರುವ ಚಂದ್ರವಂಶದವರನ್ನು ಬದುಕಿಸು" ಎಂದು ಹೇಳಿದನು.

೩೭. ಈರೀತಿ ಜನನಾಯಕನು ಹೇಳಲಾಗಿ ಲಕ್ಷಣನು ತಂದೆಯಾದ ಜಯಚಂದ್ರನಿಗೆ ನಮಸ್ಕರಿಸಿ, ಪೃಥ್ವೀರಾಜನ ಅತ್ಯಾಚಾರವನ್ನೆಲ್ಲಾ ಅವನಿಗೆ ಅರಿಕೆ ಮಾಡಿದನು.

೩೮-೩೯. ಆಗ ಜಯಚಂದ್ರನು ಆ ಮಾತನ್ನು ಕೇಳಿ ಜನನಾಯಕನನ್ನು ಕರೆಯಿಸಿ ಕೋಪದಿಂದ "ಅಯ್ಯಾ ಗೌತಮವಂಶದ ರಾಜನೇ! ಕ್ರೂರಿಯಾದ

ರಾಜಾ ಪರಿಮಲಃ ಕ್ರೂರಸ್ತ್ಯಕ್ತ್ವಾ ಮಾಂ ನಿಜಭೂಪತಿಂ ।
ಪ್ರೀತಿಂ ಚ ಕೃತವಾಂಸ್ತೇನ ಮಚ್ಛತ್ರೋರ್ದೇಹಲೀಪತೇಃ ॥ ೩೯ ॥

ಪ್ರಿಯಂ ಸಂಬಂಧಿನಂ ಮತ್ವಾ ಸಂತ್ಯಕ್ತಾಸ್ತೇನ ರಕ್ಷಕಾಃ ।
ಯಥಾ ಕೃತಂ ಫಲಂ ತೇನ ಭೋಕ್ತವ್ಯಂ ಚ ತಥಾ ಭುವಿ ॥ ೪೦ ॥

ಇತಿ ಶ್ರುತ್ವಾ ತು ವಚನಂ ಕೃಷ್ಣಾಂಶಃ ಪ್ರಾಹ ನಮ್ರಧೀಃ ।
ರಾಜಞ್ಛುದ್ಧಃ ಪರಿಮಲೋ ಮಹೀಪತ್ಯನುಮೋದಕಃ ।
ಅತೋ ವೈ ತ್ವಾಂ ಸಮುತ್ಸೃಜ್ಯ ಭೂಮಿರಾಜವಶಂ ಗತಃ ॥ ೪೧ ॥

ಭವಾನ್ ವೈ ಸರ್ವಧರ್ಮಜ್ಞಸ್ತತ್ಕ್ಷಮಸ್ವಾಪರಾಧಕಂ ।
ಆಜ್ಞಾಂ ದೇಹಿ ಮಹಾರಾಜ ನಿವತ್ಸ್ಯಾಮಸ್ತದಂತಿಕಂ ॥ ೪೨ ॥

---

ಪರಿಮಳರಾಜನು ತನ್ನ ಪಕ್ಷದ ಅಧಿರಾಜನಾದ ನನ್ನನ್ನು ಬಿಟ್ಟು ನನ್ನ ಶತ್ರುವೂ, ದೆಹಲಿಯನಗರಕ್ಕೆ ರಾಜನೂ ಆದ ಪೃಥ್ವೀರಾಜನೊಡನೆ ಸ್ನೇಹಮಾಡಿದನು."

೪೦. "ಅಲ್ಲದೆ ತನ್ನ ಸಂಬಂಧಿ,- ಪ್ರೀತಿಪಾತ್ರ ಎಂದು ತಿಳಿದೂ ತನಗೆ ರಕ್ಷಕರಾಗಿದ್ದ ಕೃಷ್ಣಾಂಶಾದಿಗಳೆಲ್ಲರನ್ನೂ ಓಡಿಸಿದನು. ಆದುದರಿಂದ ತಾನು ಮಾಡಿದ ಕರ್ಮಫಲವನ್ನು ಈಗ ಅವನು ಭೂಲೋಕದಲ್ಲಿ ಅನುಭವಿಸಬೇಕು" ಎಂದು ಹೇಳಿದನು.

೪೧. ಈ ಮಾತನ್ನು ಕೇಳಿ ಕೃಷ್ಣಾಂಶನು ವಿನಯದಿಂದ ಜಯಚಂದ್ರನನ್ನು ಕುರಿತು "ಎಲೈ ರಾಜನೇ! ಪರಿಮಳರಾಜನು ಶುದ್ಧಾಂತಃಕರಣನು. ಆದರೆ ಮಹೀಪತಿಯ ಚಾಡಿಯ ಮಾತನ್ನು ಕೇಳಿ ಅವನು ನಿನ್ನನ್ನು ಬಿಟ್ಟು ಪೃಥ್ವೀರಾಜನಿಗೆ ಅಧೀನನಾದನು."

೪೨. "ಪೂಜ್ಯನಾದ ನೀನು ಸಕಲ ಧರ್ಮಸೂಕ್ಷ್ಮಗಳನ್ನೂ ತಿಳಿದಿರುವೆ. ಆದುದರಿಂದ ಅವನ ಅಪರಾಧವನ್ನು ನೀನು ಕ್ಷಮಿಸಿ ನಮಗೆ ಅಪ್ಪಣೆಕೊಡು. ಅವನ ಬಳಿಗೆ ಹೋಗಿ ಅಲ್ಲೇ ಇದ್ದು ಬಿಡುತ್ತೇವೆ" ಎಂದು ಹೇಳಿದನು.

ಇತಿ ಶ್ರುತ್ವಾ ತು ವಚನಂ ಜಯಚಂದ್ರೋ ಮಹೀಪತಿಃ ।
ಕೃಷ್ಣಾಂಶಂ ಪ್ರಾಹ ಭೋ ವೀರ ದೇಹಿ ಮೇ ಭುಕ್ತಿಮೂಲ್ಯಕಂ ।
ಶೀಘ್ರಂ ವ್ರಜ ತ್ವಂ ಸಕುಲೋ ನೋ ಚೇನ್ನೋ ಗಂತುಮರ್ಹಸಿ ॥ ೪೩ ॥

ಇತಿ ಶ್ರುತ್ವಾ ವಿಹಸ್ಯಾಹ ಕೃಷ್ಣಾಂಶಸ್ಸರ್ವಮೋಹನಃ ।
ಮಯಾ ದಿಗ್ವಿಜಯಃ ಸರ್ವಃ ಕೃತೋ ವೀರಭಯಂಕರಃ ।
ತದ್ದೇಯಂ ದೇಹಿ ಮೇ ರಾಜನ್ ಗೃಹಾಣ ಭುಕ್ತಿಮೂಲ್ಯಕಂ ॥ ೪೪ ॥

ಇತ್ಯುಕ್ತಸ್ಸ ತು ಭೂಪಾಲಃ ಕೃಷ್ಣಾಂಶೇನ ವಿಲಜ್ಜಿತಃ ।
ಸೈನ್ಯಮಾಜ್ಞಾಪಯಾಮಾಸ ಸಪ್ತಲಕ್ಷಂ ಮಹಾಬಲಂ ॥ ೪೫ ॥

---

೪೩. ಈ ಮಾತನ್ನು ಕೇಳಿ ಜಯಚಂದ್ರ ಮಹಾರಾಜನು ಕೃಷ್ಣಾಂಶನನ್ನು ಕುರಿತು "ಎಲೈ ವೀರನೇ ! ಇಲ್ಲಿಯವರೆಗೆ ನಿಮ್ಮ ಭೋಜನಾದಿಗಳಿಗೆ ವೆಚ್ಚವಾಗಿರುವ ದ್ರವ್ಯವನ್ನು ಕೊಟ್ಟುಬಿಡು."

೪೪. "ಹಾಗೆ ಕೊಟ್ಟರೆ ಜಾಗ್ರತೆಯಾಗಿ ನಿನ್ನ ಪರಿವಾರದೊಡನೆ ಹೊರಟು ಹೋಗಬಹುದು. ಹಾಗೆ ದ್ರವ್ಯಕೊಡದೆ ಇದ್ದರೆ ಅನುಮತಿಕೊಡಲು ಸಾಧ್ಯವಿಲ್ಲ" ಎಂದು ಹೇಳಿದನು. ಈ ಮಾತನ್ನು ಕೇಳಿ ಎಲ್ಲರಿಗೂ ಸಂತೋಷಗೊಳಿಸುವ ಸ್ವಭಾವದ ಕೃಷ್ಣಾಂಶನು ಸ್ವಲ್ಪ ನಕ್ಕು, ಜಯಚಂದ್ರನನ್ನು ಕುರಿತು "ಎಲೈ ರಾಜನೇ ! ವೀರರಿಗೂ ಸಹ ಭಯವನ್ನುಂಟುಮಾಡುವಂಥ ದಿಗ್ವಿಜಯವನ್ನು ನಾನು ನಿನಗೆ ಸಾಧಿಸಿಕೊಟ್ಟಿರುವೆನು. ಆ ಸಕಲ ದಿಗ್ವಿಜಯಗಳಲ್ಲಿ ಲಭಿಸಿದ ದ್ರವ್ಯದಲ್ಲಿ ನನಗೆ ಪ್ರತಿಫಲವಾಗಿ ಕೊಡಬೇಕಾಗಿರುವ ದ್ರವ್ಯವನ್ನು ನೀನು ಕೊಡು. ನಮಗಾಗಿ ವೆಚ್ಚವಾಗಿರುವ ದ್ರವ್ಯವನ್ನು ನಮ್ಮಿಂದ ತೆಗೆದುಕೊ" ಎಂದು ಹೇಳಿದನು.

೪೫. ಕೃಷ್ಣಾಂಶನು ಹೀಗೆ ಹೇಳಿದುದನ್ನು ಕೇಳಿ ಜಯಚಂದ್ರ ಮಹಾರಾಜನು ನಾಚಿಕೆಗೊಂಡು ತನ್ನ ಏಳುಲಕ್ಷ ಸೈನ್ಯವನ್ನೂ ಅವನೊಡನೆ ಮಹಾವತೀನಗರಕ್ಕೆ ಹೋಗುವಂತೆ ಅಪ್ಪಣೆಮಾಡಿದನು.

ತದಾ ವೈ ಸಕುಲೋ ವೀರಶ್ಚಾಹ್ಲಾದೋ ಲಕ್ಷಣಾನ್ವಿತಃ ।
ನೃಪಸ್ಯಾಗ್ರೇ ಸಮಾಸ್ಥಾಯ ನಮಸ್ಕೃತ್ಯ ಯಯೌ ಮುದಾ ॥ ೪೬ ॥

ಕುಠಾರನಗರಂ ಪ್ರಾಪ್ಯ ನೃಪದುರ್ಗಂ ರುರೋಧ ಹ ।
ಜ್ಞಾತ್ವಾ ಸ ವಾಮನೋ ಭೂಪಃ ಪ್ರತೋದಂ ಚ ದದೌ ಮುದಾ ॥ ೪೭ ॥

ಸೈನ್ಯಾಯುತಯುತಂ ಭೂಪಂ ವಾಮನಂ ಲಕ್ಷಣೋ ಬಲೀ ।
ಪಶ್ಚಾತ್ಕೃತ್ಯ ಯಯೌ ಶೀಘ್ರಂ ಯಮುನಾತಟಮುತ್ತಮಂ ॥ ೪೮ ॥

ಯಮುನಾಜಲಮುತ್ತೀರ್ಯ ಕಲ್ಪಕ್ಷೇತ್ರಮವಾಪ್ತವಾನ್ ।
ಗಂಗಾಸಿಂಹಂ ಚ ನೃಪತಿಂ ಷಷ್ಟಿಸಾಹಸ್ರಸಂಯುತಂ ।
ಪುರಸ್ಕೃತ್ಯ ಯಯೌ ವೀರೋ ಲಕ್ಷಣೋ ಬಲವತ್ತರಃ ॥ ೪೯ ॥

---

೪೬. ಆಗ ವೀರನಾದ ಆಹ್ಲಾದನು ತನ್ನ ಪರಿವಾರದೊಡನೆಯೂ ರಾಜಕುಮಾರನಾದ ಲಕ್ಷಣನೊಡನೆಯೂ ಜಯಚಂದ್ರನ ಬಳಿಗೆ ಬಂದು, ಅವನಿಗೆ ನಮಸ್ಕರಿಸಿ ಅಲ್ಲಿಂದ ಸಂತೋಷವಾಗಿ ಪ್ರಯಾಣಮಾಡಿದನು.

೪೭. ಅನಂತರ ಕುಠಾರನಗರಕ್ಕೆ ಬಂದು ಅಲ್ಲಿಯ ರಾಜನ ದುರ್ಗಕ್ಕೆ ಮುತ್ತಿಗೆ ಹಾಕಿದನು ಅಲ್ಲಿನ ರಾಜನಾದ ವಾಮನನು ಇವರು ಬಂದುದಕ್ಕೆ ಕಾರಣವನ್ನು ತಿಳಿದು, ತಾನು ಹರಿನಾಗರಾಶ್ವದಿಂದ ಕದ್ದಿದ್ದ ಪ್ರತೋದವೆಂಬ ಆಭರಣವನ್ನು ಅವರಿಗೆ ಸಮರ್ಪಿಸಿದನು.

೪೮. ಅನಂತರ ಬಲಶಾಲಿಯಾದ ಲಕ್ಷಣನು ಆ ನಗರದ ಒಡೆಯನಾದ ವಾಮನನನ್ನು, ಹತ್ತುಸಾವಿರ ಸೇನೆಯ ಸಮೇತ ತನ್ನೊಡನೆ ಕರೆದುಕೊಂಡು ಜಾಗ್ರತೆ ಯಮುನಾತೀರಕ್ಕೆ ಬಂದು ಸೇರಿದನು.

೪೯. ಅಲ್ಲಿಂದ ಎಲ್ಲರೂ ಯಮುನಾನದಿಯನ್ನು ದಾಟಿ ಕಲ್ಪಕ್ಷೇತ್ರಕ್ಕೆ ಬಂದರು. ಅಲ್ಲಿ ಅರವತ್ತುಸಾವಿರ ಸೇನೆಗೆ ಒಡೆಯನಾದ ಗಂಗಾಸಿಂಹನನ್ನು ಜತೆಮಾಡಿಕೊಂಡು ವೀರನೂ ಬಲಶಾಲಿಯೂ ಆದ ಲಕ್ಷಣನು ಮುಂದಕ್ಕೆ ಹೊರಟನು.

ನದೀಂ ವೇತ್ರವತೀಂ ರಮ್ಯಾಂ ಸಮಾಗಮ್ಯ ಬಲೈಸ್ಸಹ ।
ತತ್ರೋಷುಃ ಕ್ಷತ್ರಿಯಾಃ ಶೂರಾಸ್ಸರ್ವಶಸ್ತ್ರಾಸ್ತ್ರಸಂಯುತಾಃ ॥ ೫೦ ॥

ಏತಸ್ಮಿನ್ನಂತರೇ ವೀರಶ್ಚಾಮುಂಡೋ ಲಕ್ಷಸೈನ್ಯಪಃ ।
ಶತಘ್ನೀಃ ಸ್ಥಾಪಯಾಮಾಸ ಭೈರವೀಃ ಶತ್ರುನಾಶನೀಃ ॥ ೫೧ ॥

ತಯೋಶ್ಚಾಸೀನ್ಮಹದ್ಯುದ್ಧಂ ಶತಘ್ನೀರಣಸಂಸ್ಥಯೋಃ ।
ಪ್ರಹರಾಂತೇ ಚ ತತ್ಸೈನ್ಯಂ ದೃಷ್ಟ್ವಾ ಶೂರಃ ಪರಾಜಿತಂ ॥ ೫೨ ॥

ರಕ್ತಬೀಜಃ ಸಮಾಗಮ್ಯ ಗಜಸ್ಥಸ್ತ್ವರಿತೋ ಬಲೀ ।
ಸ್ವಬಾಣೈಸ್ತಾಡಯಾಮಾಸ ಸೈನ್ಯಂ ತಾಲನಪಾಲಿತಂ ॥ ೫೩ ॥

---

೫೦. ಹೀಗೆ ಮುಂದೆ ಪ್ರಯಾಣಮಾಡುತ್ತಾ ಮನೋಹರವಾದ ವೇತ್ರವತೀ ನದಿಯ ಸಮೀಪಕ್ಕೆ ಬಂದು, ವೀರರೂ ಸಕಲ ಶಸ್ತ್ರಾಸ್ತ್ರನಿಪುಣರೂ ಆದ ಕ್ಷತ್ರಿಯರೆಲ್ಲರೂ ಅಲ್ಲಿ ತಮ್ಮ ತಮ್ಮ ಸೈನ್ಯಗಳೊಡನೆ ಇಳಿದುಕೊಂಡರು.

೫೧. ಇಷ್ಟರೊಳಗೆ ಒಂದುಲಕ್ಷ ಸೇನೆಗೆ ಒಡೆಯನೂ, ವೀರನೂ ಆದ ಚಾಮುಂಡನು ಶತ್ರುಧ್ವಂಸಕವೂ ಭಯಂಕರವೂ ಆದ ಫಿರಂಗಿಗಳನ್ನು ಅಲ್ಲಿ ಸ್ಥಾಪಿಸಿದ್ದನು.

೫೨. ಈ ಎರಡು ಸೇನೆಗಳಿಗೂ (ಎಂದರೆ ಫಿರಂಗಿಯ ಸೇನೆ ಮತ್ತು ಲಕ್ಷಣನ ಪದಾತಿಸೇನೆ ಇವುಗಳಿಗೆ) ಘೋರವಾದ ಯುದ್ಧವು ತೊಡಗಿತು. ಒಂದು ಜಾವದ ಹೊತ್ತು ಹೀಗೆ ಯುದ್ಧನಡೆಯಿತು.

೫೩. ಆಗ ಶೂರನಾದ ಚಾಮುಂಡನು ಶತ್ರುಸೈನ್ಯದಿಂದ ತನ್ನ ಕಡೆಯ ಸೇನೆಯು ಪರಾಜಿತವಾದುದನ್ನು ಕಂಡನು. ರಕ್ತಬೀಜಾಂಶನೂ, ಬಲಶಾಲಿಯೂ ಆದ ಇವನು ತನ್ನ ಆನೆಯನ್ನು ಏರಿ ಜಾಗ್ರತೆಯಾಗಿ ಯುದ್ಧರಂಗಕ್ಕೆ ಬಂದು ತಾಲನನ ರಕ್ಷಣೆಯಲ್ಲಿದ್ದ ಲಕ್ಷಣನ ಸೇನೆಯನ್ನು ತನ್ನ ಬಾಣಗಳಿಂದ ಘಾತಿಸಲು ತೊಡಗಿದನು.

ಕೇಚಿಚ್ಛೂರಾ ಹತಾ ಯುದ್ಧೇ ಕೇಚಿತ್ತತ್ರ ಪರಾಜಿತಾಃ ।
ದುದ್ರುವುರ್ಭಯಭೀತಾಶ್ಚ ಚಾಮುಂಡೇನ ಚ ಪೀಡಿತಾಃ ॥ ೫೪ ॥

ಪ್ರಭಗ್ನಂ ಸ್ವಬಲಂ ದೃಷ್ಟ್ವಾ ತಾಲನಃ ಪರಿಘಾಯುಧಃ ।
ಜಘಾನ ತೇನ ಸ ಗಜಂ ಚಾಮುಂಡೋ ಭೂಮಿಮಾಗತಃ ॥ ೫೫ ॥

ಖಡ್ಗಯುದ್ಧಪರೋ ವೀರಸ್ತಾಲನಂ ಪರಿಘಾಯುಧಂ ।
ಪರಾಜಿತ್ಯ ಯಯೌ ಪಶ್ಚಾಚ್ಛತ್ರುಸೈನ್ಯಕ್ಷಯಂಕರಃ ॥ ೫೬ ॥

ಲಕ್ಷಣಸ್ತ್ವರಿತೋ ಗತ್ವಾ ಸ್ವಭಲ್ಲೇನ ಚ ತಂ ರಿಪುಂ ।
ಭುಜಯೋಸ್ತಾಡಯಾಮಾಸ ತದಾ ತೇ ಬಹುಧಾಭ್ಯಭವನ್ ॥ ೫೭ ॥

---

೫೪. ಇದರಿಂದ ಕೆಲವರು ವೀರರು ಹತರಾದರು, ಮತ್ತೆ ಕೆಲವರು ಪರಾಜಿತರಾದರು. ಇನ್ನು ಕೆಲವರು ಚಾಮುಂಡನಿಂದ ಗಾಯಗೊಂಡು ಹೆದರಿ ಚೆಲ್ಲಾಪಿಲ್ಲಿಯಾಗಿ ಹೋದರು.

೫೫. ಆಗ ಈರೀತಿ ತನ್ನ ಸೇನೆಯು ನಾಶವಾದುದನ್ನು ನೋಡಿ ಸೇನಾಪತಿಯಾದ ತಾಲನನು ತನ್ನ ಪರಿಘಾಯುಧವನ್ನು ತೆಗೆದುಕೊಂಡು ಅದರಿಂದ ಚಾಮುಂಡನು ಏರಿದ್ದ ಆನೆಯನ್ನು ಕೊಂದುಬಿಟ್ಟನು. ಅನಂತರ ಚಾಮುಂಡನು ವಾಹನರಹಿತನಾಗಿ ನೆಲದ ಮೇಲೆ ನಿಂತನು.

೫೬. ಶತ್ರುಸೇನೆಯನ್ನು ನಾಶಗೊಳಿಸುವ ವೀರನಾದ ಚಾಮುಂಡನು ಅನಂತರ ಖಡ್ಗಯುದ್ಧ ಮಾಡುತ್ತಾ ಪರಿಘಾಯುಧಧಾರಿಯಾದ ತಾಲನನನ್ನು ಸೋಲಿಸಿ ಮುಂದಕ್ಕೆ ನುಗ್ಗಿದನು.

೫೭ ಇದನ್ನು ನೋಡಿ ಲಕ್ಷಣನು ಜಾಗ್ರತೆಯಾಗಿ ಅಲ್ಲಿಗೆ ಬಂದು ತನ್ನ ಭಲ್ಲೆಯದಿಂದ ಶತ್ರುವಾದ ಚಾಮುಂಡನ ಭುಜಕ್ಕೆ ಹೊಡೆದನು. ಆ ಭುಜದಿಂದ ರಕ್ತವು ಭೂಮಿಗೆ ಬೀಳಲು ಆಗ ಅನೇಕಮಂದಿ ಚಾಮುಂಡನ ರೂಪದ ವೀರರು ಉದ್ಭವಿಸಿ ಕಾಣಿಸಿದರು.

ಸಹಸ್ರಂ ರಕ್ತಬೀಜಾಶ್ಚ ಖಡ್ಗಶಕ್ತ್ಯೃಷ್ಟಿಪಾಣಯಃ ।
ತಿಷ್ಠತಿಷ್ಠೇತಿ ಭಾಷಂತಃ ಕ್ಷತ್ರಿಯಾನ್ಯುದ್ಧದುರ್ಮದಾ ॥ ೫೮ ॥

ಆಹ್ಲಾದಾದ್ಯಾಶ್ಚ ತೇ ಶೂರಾ ರಕ್ತಬೀಜಭಯಾತುರಾಃ ।
ತ್ಯಕ್ತ್ವಾ ಯುದ್ಧಂ ಯಯುಸ್ಸರ್ವೇ ಬ್ರಹ್ಮಾನಂದಂ ಮಹಾಬಲಂ ॥ ೫೯ ॥

ಬ್ರಹ್ಮಾನಂದಸ್ತು ತಾರ್ದೃಷ್ಟ್ವಾ ಗತ್ವಾ ಸ್ವಪಿತರಂ ಪ್ರತಿ ।
ವೃತ್ತಾಂತಂ ಕಥಯಾಮಾಸ ಲಕ್ಷಣಾಗಮನಂ ಮುನೇ ॥ ೬೦ ॥

ಶ್ರುತ್ವಾ ಪರಿಮಲೋ ರಾಜಾ ಪ್ರೇಮವಿಹ್ವಲಗದ್ಗದಃ ।
ಆಹ್ಲಾದಪಾರ್ಶ್ವಮಾಗಮ್ಯ ರುರೋದ ಭೃಶಮಾತುರಃ ॥ ೬೧ ॥

---

೫೮. ರಕ್ತಬೀಜರಾದ ಸಾವಿರಾರು ಮಂದಿ ಈ ವ್ಯಕ್ತಿಗಳು ಖಡ್ಗ, ಶಕ್ತಿ ಮುಂತಾದ ಆಯುಧಗಳನ್ನು ಹಿಡಿದು, ಯುದ್ಧದಲ್ಲಿ ಕೊಬ್ಬಿದ ಲಕ್ಷಣನ ಕಡೆಯ ಕ್ಷತ್ರಿಯರನ್ನು "ನಿಲ್ಲಿ, ನಿಲ್ಲಿ" ಎಂದು ಆರ್ಭಟಿಸುತ್ತಾ ಯುದ್ಧಮಾಡ ತೊಡಗಿದರು.

೫೯. ಆಗ ಆಹ್ಲಾದನೇ ಮುಂತಾದ ಶೂರರೆಲ್ಲರೂ ರಕ್ತಬೀಜರಿಗೆ ಹೆದರಿ ಭಯದಿಂದ ಯುದ್ಧಮಾಡುವುದನ್ನು ಬಿಟ್ಟು ಓಡಿ ಹೋಗಿ ಬಲಶಾಲಿಯಾದ ಬ್ರಹ್ಮಾನಂದನ ಬಳಿಗೆ ಸೇರಿದರು.

೬೦ ಆಗ ಬ್ರಹ್ಮಾನಂದನು ಆಹ್ಲಾದ ಮೊದಲಾದವರನ್ನು ನೋಡಿ ಜಾಗ್ರತೆ ತನ್ನ ತಂದೆಯಬಳಿಗೆ ಹೋಗಿ ಲಕ್ಷಣನೇ ಮೊದಲಾದವರು ಬಂದಿರುವ ಸಮಾಚಾರ ವನ್ನು ಅವನಿಗೆ ತಿಳಿಸಿದನು.

೬೧. ಎಲೈ ಮಹರ್ಷಿಯೇ! ಕೇಳು, ಆಗ ಕ್ಲೇಶಕ್ಕೊಳಗಾಗಿದ್ದ ಪರಿಮಳ ರಾಜನು ಈ ಸಮಾಚಾರವನ್ನು ಕೇಳಿ ಪ್ರೇಮದಿಂದ ಗದ್ಗದಕಂಠಧ್ವನಿಯುಳ್ಳವನಾಗಿ ಆಹ್ಲಾದನ ಸಮೀಪಕ್ಕೆ ಬಂದು ತುಂಬಾ ರೋದನಮಾಡಿದನು.

ತದಾ ತು ದೇವಕೀ ದೇವೀ ನೃಪತಿಂ ಪ್ರೇಮತತ್ಪರಂ ।
ಉವಾಚ ಸುಮುಖೀ ದೀನಾ ವಯಂ ತೇ ಭಕ್ತಿತತ್ಪರಾಃ ॥ ೬೨ ॥

ಭವತಾ ಸಂಪರಿತ್ಯಕ್ತಾ ವಿಚರಾಮೋಽನ್ಯಭೂಪತಿಂ ।
ಕ್ಷಮಸ್ವ ಮಮ ದೌರಾತ್ಮ್ಯಂ ಪೂರ್ವಜನ್ಮವಿಪಾಕಜಂ ॥ ೬೩ ॥

ಇತಿ ಶ್ರುತ್ವಾ ಚ ನೃಪತಿಃ ಪರಮಾನಂದನಿರ್ಭರಃ ।
ಮಂತ್ರಿಣಶ್ಚಾಧಿಕಾರಂ ಚ ರಾಮಾಂಶಾಯ ದದೌ ಮುದಾ ॥ ೬೪ ॥

ಸ್ವಕೀಯಂ ಲಕ್ಷಸೈನ್ಯಂ ಚ ತತ್ಪತಿಶ್ಚೋದಯಃ ಕೃತಃ ।
ತತಃ ಪಂಚದಿನಾಂತೇ ತು ಮಹೀರಾಜಸ್ಸಮಾಗತಃ ।
ರುರೋಧ ನಗರೀಂ ಸರ್ವಾಂ ಚಾಮುಂಡಬಲದರ್ಪಿತಃ ।
ತಯೋಶ್ಚಾಸೀನ್ಮಹದ್ಯುದ್ಧಂ ಮಾಸಮಾತ್ರಂ ಭಯಾನಕಂ ॥ ೬೫ ॥

---

೬೨. ಹೀಗೆ ಅತ್ಯಂತ ಪ್ರೀತಿಯುಕ್ತನಾಗಿ ವರ್ತಿಸಿದ ಪರಿಮಳರಾಜನನ್ನು ನೋಡಿ ಸುಮುಖಿಯಾದ ದೇವಕೀದೇವಿಯು ದೀನವದನೆಯಾಗಿ ಹೀಗೆ ಹೇಳಿದಳು.

೬೩. "ರಾಜನೇ ! ನಾವೆಲ್ಲರೂ ನಿನ್ನಲ್ಲಿ ಸಹಜಭಕ್ತಿಯುಳ್ಳವರು. ನೀನು ನಮ್ಮನ್ನು ವರ್ಜ್ಯಮಾಡಿದ್ದರಿಂದ ನಾವು ಇನ್ನೊಬ್ಬ ರಾಜನ ಸಮೀಪಕ್ಕೆ ಹೋಗಬೇಕಾಯಿತು. ನಮ್ಮಲ್ಲಿ ತಪ್ಪಿದ್ದರೆ ಕ್ಷಮಿಸು. ಇವೆಲ್ಲ ನಮ್ಮ ಜನ್ಮಾಂತರ ಕರ್ಮದ ಫಲ" ಎಂದು ನುಡಿದಳು.

೬೪. ಆಗ ಪರಿಮಳರಾಜನು ದೇವಕೀದೇವಿಯು ಆಡಿದ ಮಾತನ್ನು ಕೇಳಿ ತುಂಬಾ ಸಂತೋಷದಿಂದ ಹಿಗ್ಗಿ ರಾಮಾಂಶಸಂಭೂತನಾದ ಆಹ್ಲಾದನಿಗೆ ಮಂತ್ರಿಯ ಪದವಿಯನ್ನು ಸಂತೋಷದಿಂದ ಕೊಟ್ಟನು.

೬೫. ತನ್ನ ಒಂದುಲಕ್ಷ ಸೇನೆಗೆ ಕೃಷ್ಣಾಂಶನನ್ನು ಸೇನಾಪತಿಯನ್ನಾಗಿ ಮಾಡಿದನು. ಇದಾದ ಐದುದಿನಗಳ ಮೇಲೆ ಪೃಥ್ವೀರಾಜನು ರಕ್ತಬೀಜಾಂಶನಾದ ಚಾಮುಂಡನ ಬಲದಿಂದ ಕೊಬ್ಬಿ ಮಹಾವತೀನಗರದ ಮೇಲೆ ದಂಡೆತ್ತಿ ಬಂದು ಆ ಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಎರಡು ಕಡೆಯ ಸೇನೆಗಳಿಗೂ ಒಂದು ತಿಂಗಳವರೆಗೆ ಘೋರವಾದ ಯುದ್ಧ ನಡೆಯಿತು.

ಪ್ರಭಾತೇ ವಿಮಲೇ ಜಾತೇ ಕೃಷ್ಣಾಂಶೋ ಲಕ್ಷಸೈನ್ಯಪಃ ।
ಚಾಮುಂಡಾಂತಮುಪಾಗಮ್ಯ ಸಹಸ್ರಂ ಸ್ವಾಂಗಸಂಭವಂ ।
ಚಿಚ್ಛೇದ ಚ ಶಿರಸ್ತೇಷಾಂ ಚಾಮುಂಡಾನಾಂ ಪೃಥಕ್‌ಪೃಥಕ್ ॥ ೬೬ ॥

ಛಿನ್ನೇ ಶಿರಸಿ ತೇ ಸರ್ವೇ ಲಕ್ಷವೀರಾ ಬಭೂವಿರೇ ।
ತದಾ ತದ್ವ್ಯಾಕುಲಂ ಸೈನ್ಯಂ ಚಾಮುಂಡೈಸ್ತೈಃ ಪ್ರಪೀಡಿತಂ ॥ ೬೭ ॥

ವಿಸ್ಮಿತಶ್ಚೈವ ಕೃಷ್ಣಾಂಶೋ ಭಯಭೀತಸ್ತದಾ ಮುನೇ ।
ತುಷ್ಟಾವ ಶಾರದಾಂ ದೇವೀಂ ಸರ್ವಮಂಗಲಕಾರಿಣೀಂ ॥ ೬೮ ॥

॥ ಕೃಷ್ಣಾಂಶ ಉವಾಚ ॥

ನಮಸ್ತೇ ಶಾರದೇ ಮಾತರ್ಬ್ರಹ್ಮಲೋಕನಿವಾಸಿನಿ ।
ತ್ವಯಾ ತತಮಿದಂ ವಿಶ್ವಂ ಶಬ್ದಮಾತ್ರನಿರಂತರಂ ॥ ೬೯ ॥

---

೬೬. ಮಾರನೆಯದಿನ ಬೆಳಗಾಗುತ್ತಲೆ ಕೃಷ್ಣಾಂಶನು ತನ್ನ ಒಂದುಲಕ್ಷ ಸೇನೆಯನ್ನು ತೆಗೆದುಕೊಂಡು ಚಾಮುಂಡನ ಸಮೀಪಕ್ಕೆ ಬಂದು ರಕ್ತಬೀಜನಾದ ಅವನ ಅವಯವಸಂಭೂತರಾದ ಸಾವಿರಮಂದಿ ಚಾಮುಂಡಾಕಾರದ ವ್ಯಕ್ತಿಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಶಿರಚ್ಛೇದಮಾಡಿದನು.

೬೭. ಹೀಗೆ ಅವರ ತಲೆಯನ್ನು ಕತ್ತರಿಸುತ್ತಲೆ ಆ ರಕ್ತವು ಭೂಮಿಗೆ ಹನಿಯಲು ಪುನಃ ಲಕ್ಷಮಂದಿ ಚಾಮುಂಡಾಕೃತಿಯ ವೀರರು ಉತ್ಪನ್ನರಾದರು. ಆಗ ಆ ಲಕ್ಷಮಂದಿ ಚಾಮುಂಡರ ಬಾಣಪರಂಪರೆಯಿಂದ ಕೃಷ್ಣಾಂಶನ ಸೇನೆಯು ಪೀಡಿತವಾಗಿ ತುಂಬಾ ವ್ಯಾಕುಲಪಟ್ಟಿತು.

೬೮. ಎಲೈ ಶೌನಕನೇ ! ಕೇಳು, ಆಗ ಕೃಷ್ಣಾಂಶನು ತುಂಬಾ ಆಶ್ಚರ್ಯಗೊಂಡು ಭಯಪಟ್ಟು ಸರ್ವಮಂಗಳೆಯಾದ ಶಾರದಾದೇವಿಯನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ಕೃಷ್ಣಾಂಶನು ಮಾಡಿದ ಸ್ತೋತ್ರಮಂತ್ರಾರ್ಥವು ಇದು.

೬೯. " ಬ್ರಹ್ಮಲೋಕದಲ್ಲಿ ವಾಸಿಸುವಳೂ, ಜಗಜ್ಜನನಿಯೂ, ಆದ ಶಾರದಾದೇವಿಯೇ ! ನಿನಗೆ ನಮಸ್ಕಾರ. ಶಬ್ದಮಾತ್ರನಿರಂತರವಾದ ಈ ಪ್ರಪಂಚವೆಲ್ಲಾ ನಿನ್ನಿಂದ ಆವೃತವಾಗಿದೆ "

ರಕ್ತಬೀಜವಿನಾಶಾಯ ಚಾಮುಂಡಾರೂಪಧಾರಿಣಿ ।
ಚಾಮುಂಡಾಂಬೇ ನಮಸ್ತೇಸು ಪಾಹಿ ಮಾಂ ಶರಣಾಗತಂ ॥ ೭೦ ॥

ಇತಿ ಶ್ರುತ್ವಾ ಸ್ತವಂ ದೇವೀ ವರದಾ ಸರ್ವಕಾರಿಣೀ ।
ತಸ್ಯ ಖಡ್ಗಮುಪಾಗಮ್ಯ ರಕ್ತಬೀಜಂ ದದಾಹ ವೈ ॥ ೭೧ ॥

ಭಸ್ಮೀಭೂತೇ ಲಕ್ಷರಿಪೌ ಚಾಮುಂಡೋ ಭೂಮಿಮಾಗತಃ ।
ಬಬಂಧ ತಂ ಸ ಕೃಷ್ಣಾಂಶೋ ಬ್ರಹ್ಮಾನಂದಾಂತಿಕಂ ಯಯೌ ॥ ೭೨ ॥

ಭೂಮಿರಾಜಸ್ತು ತಚ್ಛ್ರುತ್ವಾ ಭಯಭೀತಃ ಸಮಾಗತಃ ।
ತದಾ ಪರಿಮಲಂ ಭೂಪಂ ದಯಾಲುಂ ಪ್ರೇಮವಿಹ್ವಲಂ ॥ ೭೩ ॥

ಉವಾಚ ವಚನಂ ರಾಜಾ ಕ್ಷಮಸ್ವ ಮಮ ದುಷ್ಕೃತಂ ।
ಮಹೀಪತೇಶ್ಚ ವಚನಾನ್ಮಹದ್ಭಯಮುಪಾಗತಂ ।

---

೭೦. "ಎಲೌ ದೇವಿಯೇ! ರಕ್ತಬೀಜನಾಶಕ್ಕಾಗಿ ಚಾಮುಂಡಾಂಬಾ ರೂಪವನ್ನು ಧರಿಸಿದ ನೀನು ಶರಣಾಗತನಾದ ನನ್ನನ್ನು ರಕ್ಷಿಸು, ದಿವ್ಯಸ್ವರೂಪಳಾದ ಚಾಮುಂಡಾಂಬಿಕೆಯೇ! ನಿನಗೆ ನಮಸ್ಕಾರ" ಎಂದು ಸ್ತುತಿಸಿದನು.

೭೧. ಸರ್ವಜಗನ್ನಿಯಾಮಿಕೆಯೂ ವರಪ್ರದೆಯೂ ಆದ ಶಾರದಾದೇವಿಯು ಕೃಷ್ಣಾಂಶನ ಸ್ತೋತ್ರಕ್ಕೆ ಮೆಚ್ಚಿ ಬಂದು ಆ ಕೃಷ್ಣಾಂಶನ ಖಡ್ಗವನ್ನು ತೆಗೆದುಕೊಂಡು ಘಾತಿಸಿ ಅದರ ಜ್ವಾಲೆಯಿಂದ ಲಕ್ಷಮಂದಿ ರಕ್ತಬೀಜರನ್ನೂ ಸುಟ್ಟುಬಿಟ್ಟಳು.

೭೨. ಹೀಗೆ ಲಕ್ಷಮಂದಿ ರಕ್ತಬೀಜರೂ ಭಸ್ಮವಾಗಲು ಚಾಮುಂಡನೊಬ್ಬನು ಭೂಮಿಯ ಮೇಲೆ ಕಾಣಿಸಿದನು. ಆಗ ಕೃಷ್ಣಾಂಶನು ಅವನನ್ನು ಬಂಧಿಸಿ ಬ್ರಹ್ಮಾನಂದನ ಸಮೀಪಕ್ಕೆ ಕರೆದುಕೊಂಡು ಬಂದನು.

೭೩. ಇದನ್ನು ಕೇಳಿ ಪೃಥ್ವೀರಾಜನು ಭಯದಿಂದ ಹೆದರಿ ದಯಾಳುವೂ ಪ್ರೇಮಕಾತರನೂ ಆದ ಪರಿಮಳರಾಜನ ಹತ್ತಿರಕ್ಕೆ ಬಂದು ಅವನನ್ನು ಕುರಿತು ಇಂತೆಂದನು.

೭೪. ಮಹಾರಾಜನೇ! ನನ್ನ ಅಪರಾಧವನ್ನು ಕ್ಷಮಿಸು. ಮಹೀಪತಿರಾಜನ ಮಾತನ್ನು ಕೇಳಿದ್ದರಿಂದ ಈ ಮಹಾಭಯವುಂಟಾಯಿತು. ಎಲೈ ವೀರನೇ!

ಅದ್ಯಪ್ರಭೃತಿ ಭೋ ವೀರ ಸಂತ್ಯಕ್ತಃ ಕಲಹಃ ಪ್ರಿಯಃ ।
ಭವಾಂಶ್ಚ ಮಮ ಸಂಬಂಧೀ ವಯಂ ವೈ ತವ ಕಿಂಕರಾಃ ॥ ೭೪ ॥

ಇತಿ ಶ್ರುತ್ವಾ ಪರಿಮಲೋ ರಾಜಾನಮಿದಮಬ್ರವೀತ್ ।
ರತ್ನಭಾನೋಶ್ಚ ತನಯಂ ಲಕ್ಷಣಂ ನಾಮ ವಿಶ್ರುತಂ ।
ಶರಣ್ಯಂ ಶರಣಂ ಯಾಹಿ ವಿಷ್ಣುಭಕ್ತಂ ದಯಾಪರಂ ॥ ೭೫ ॥

ಇತಿ ಶ್ರುತ್ವಾ ಭೂಮಿರಾಜೋ ದ್ವಿಜರೂಪಧರೋ ಬಲೀ ।
ಸಾಷ್ಟಾಂಗಂ ದಂಡವದ್ಭೂಮೌ ಲಕ್ಷಣಸ್ಯ ಚಕಾರ ಹ ॥ ೭೬ ॥

ತದಾ ತು ಲಕ್ಷಣೋ ವೀರಃ ಕೃತ್ವಾ ಸ್ನೇಹಂ ನೃಪೋಪರಿ ।
ಸಪ್ತಲಕ್ಷಬಲೈಃ ಸಾರ್ಧಂ ಕಾನ್ಯಕುಬ್ಜಮುಪಾಯಯೌ ॥ ೭೭ ॥

ಫಾಲ್ಗುನೇ ಮಾಸಿ ಸಂಪ್ರಾಪ್ತೇ ಸರ್ವೇ ಸ್ವಂಸ್ವಂ ಗೃಹಂ ಯಯುಃ॥ ೭೮ ॥

---

ಇದು ಮೊದಲುಗೊಂಡು ಕಲಹಪ್ರಿಯನಾದ ಆ ಕೇಡಿಗನನ್ನು ದೂರದಲ್ಲಿಡುವೆನು. ನೀನು ನನ್ನ ಬಂಧು; ನಾನೂ ನನ್ನ ಕಡೆಯವರೂ ನಿನ್ನ ಸೇವಕರಾಗಿರುವೆವು" ಎಂದು ಹೇಳಿದನು.

೭೫. ಪೃಥ್ವೀರಾಜನು ಹೇಳಿದ ಈ ಮಾತನ್ನು ಕೇಳಿ ಪರಿಮಳರಾಜನು ಅವನನ್ನು ಕುರಿತು "ರತ್ನಭಾನುವಿನ ಮಗನೂ ವಿಷ್ಣುಭಕ್ತನೂ, ದಯಾಶಾಲಿಯೂ ಆದ ಲಕ್ಷಣನನ್ನು ನೀನು ಶರಣು ಹೋಗು" ಎಂದು ಹೇಳಿದನು.

೭೬. ಆಗ ಪೃಥ್ವೀರಾಜನು ಪರಿಮಳರಾಜನ ಮಾತನ್ನು ಮನಸ್ಸಿಗೆ ತಂದು, ಬ್ರಾಹ್ಮಣ ವೇಷವನ್ನು ಧರಿಸಿ ಲಕ್ಷಣನ ಬಳಿಗೆ ಬಂದು, ಸಾಷ್ಟಾಂಗ ಪ್ರಣಾಮ ಮಾಡಿದನು.

೭೭. ಆಗ ವೀರನಾದ ಲಕ್ಷಣನು ಪೃಥ್ವೀರಾಜನೊಡನೆ ಸ್ನೇಹ ಬೆಳೆಸಿ ತನ್ನ ಏಳುಲಕ್ಷ ಸೇನೆಯೊಡನೆ ಕನ್ಯಾಕುಬ್ಜನಗರಿಗೆ ಹಿಂತಿರುಗಿ ಬಂದನು.

೭೮. ಈ ವೇಳೆಗೆ ಫಾಲ್ಗುಣಮಾಸ ಹುಟ್ಟಿತ್ತು, ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಿ ಸೇರಿದರು.

ಬಲಖಾನೇರ್ಗಯಾಶ್ರಾದ್ಧಮಚೀಕರದವಿಪ್ಲುತಃ ।
ಚೈತ್ರಮಾಸಿ ಸಿತೇ ಪಕ್ಷೇ ಸಂಪ್ರಾಪ್ಯ ನಿಜಮಂದಿರೇ ।
ಬ್ರಾಹ್ಮಣಾನ್ ಭೋಜಯಾಮಾಸ ಸಹಸ್ರಂ ವೇದತತ್ಪರಾನ್ ॥ ೭೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಸಪ್ತವಿಂಶೋಽಧ್ಯಾಯಃ



---

೭೯. ಅನಂತರ ಪರಿಮಳರಾಜನು ಬಲಖಾನಿಗೆ ಗಯಾಶ್ರಾದ್ಧವನ್ನು ನೆರವೇರಿಸಿ ತುಂಬ ಖೇದದಿಂದ ಚೈತ್ರಮಾಸದ ಶುಕ್ಲಪಕ್ಷದಲ್ಲಿ ಹಿಂದಿರುಗಿ ತನ್ನ ಮನೆಗೆ ಬಂದು ವೇದಾಧ್ಯಯನಸಂಪನ್ನರಾದ ಸಾವಿರ ಬ್ರಾಹ್ಮಣರಿಗೆ ತನ್ನ ಮನೆಯಲ್ಲಿ ಭೋಜನವನ್ನು ಮಾಡಿಸಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದ ತೃತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುಚ್ಚಯವೆಂಬ ಇಪ್ಪತ್ತೇಳನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಅಷ್ಟವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಅಷ್ಟಾವಿಂಶಾಬ್ದಕೇ ಪ್ರಾಪ್ತೇ ಕೃಷ್ಣಾಂಶೇ ಬಲವತ್ತರೇ ।
ಕಾರ್ತಿಕ್ಯಾಮಿಂದುವಾರೇ ಚ ಕೃತ್ತಿಕಾವ್ಯತಿಪಾತಭೇ ॥ ೧ ॥

ಕೃಷ್ಣಾಂಶೋಽಯುತಸೇನಾಢ್ಯಃ ಸ್ವರ್ಣವತ್ಯಾ ಸಮನ್ವಿತಃ ।
ವಿವಾಹಮುಕುಟಸ್ಯೈವ ಸಂತ್ಯಾಗಾಯ ಯಯೌ ಮುದಾ ॥ ೨ ॥

ಪವಿತ್ರಮುತ್ಪಲಾರಣ್ಯಂ ವಾಲ್ಮೀಕಿಮುನಿಸೇವಿತಂ ।
ಗಂಗಾಕೂಲೇ ಬ್ರಹ್ಮಮಯಂ ಲೋಹದೋಲಕಮುತ್ತಮಂ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯ

೧-೨. ಸೂತಮುನಿವರ್ಯನು ಹೇಳುತ್ತಾನೆ—ಬಲಶಾಲಿಯಾದ ಕೃಷ್ಣಾಂಶನಿಗೆ ಇಪ್ಪತ್ತೆಂಟನೆಯ ವರ್ಷ ಪ್ರಾಪ್ತವಾಯಿತು. ಕಾರ್ತಿಕಮಾಸದಲ್ಲಿ ಸೋಮವಾರದಲ್ಲಿ ಕೃತ್ತಿಕಾ ನಕ್ಷತ್ರ, ವ್ಯತೀಪಾತ ಇವು ಕೂಡಿ ಬಂದ ದಿನ, ಕೃಷ್ಣಾಂಶನು ಸ್ವರ್ಣವತೀ ದೇವಿಯನ್ನು ಕರೆದುಕೊಂಡು ತಾನು ವಿವಾಹ ಸಮಯದಲ್ಲಿ ಧರಿಸಿದ ಮಕುಟ (ಭೂಷಣ) ವನ್ನು ವಿಸರ್ಜಿಸುವುದಕ್ಕಾಗಿ ಹತ್ತುಸಾವಿರ ಸೇನೆಯೊಡನೆ ಸಂತೋಷ ದಿಂದ ಹೊರಟನು.

೩. ಹೀಗೆ ಪ್ರಯಾಣಮಾಡುತ್ತಾ ವಾಲ್ಮೀಕಿ ಮಹರ್ಷಿಯಿಂದ ಸೇವಿತವೂ, ಪವಿತ್ರವೂ ಎನಿಸಿ ಗಂಗಾನದಿಯ ದಡದಲ್ಲಿರುವ ಉತ್ಪಲಾರಣ್ಯಕ್ಕೆ ಬಂದು ಬ್ರಹ್ಮರ್ಷಿ ಗಳಿಗೆ ಆವಾಸವಾದ ಉತ್ತಮವಾದ ಲೋಹದೋಲಕವೆಂಬ ಕ್ಷೇತ್ರವನ್ನು ಸೇರಿದನು.

**ತತ್ರ ಗತ್ವಾ ಸ ಶುದ್ಧಾತ್ಮಾ ಪುಷ್ಪವತ್ಯಾ ಸಮನ್ವಿತಃ ।**
**ಗೋಸಹಸ್ರಂ ಚ ವಿಪ್ರೇಭ್ಯೋ ದದೌ ಸ್ನಾನೇ ಪ್ರಸನ್ನಧೀಃ ॥ ೪ ॥**

**ಏತಸ್ಮಿನ್ನಂತರೇ ಪ್ರಾಪ್ತಾ ಮ್ಲೇಚ್ಛಜಾತಿಸಮುದ್ಭವಾ ।**
**ಶೋಭಾ ನಾಮ ಮಹಾರಮ್ಯಾ ವೇಶ್ಯಾ ಪರಮಸುಂದರೀ ॥ ೫ ॥**

**ಸಾ ದದರ್ಶ ಪರಂ ರಮ್ಯಂ ಕೃಷ್ಣಾಂಶಂ ಪುರುಷೋತ್ತಮಂ ।**
**ತದ್ದೃಷ್ಟಿಮೋಹಮಾಪನ್ನಾ ವ್ಯಾಕುಲಾ ಚಾಭವತ್ ಕ್ಷಣಾತ್ ॥ ೬ ॥**

**ಮೂರ್ಛಿತಾಂ ತಾಂ ಸಮಾಲೋಕ್ಯ ಕೃಷ್ಣಾಂಶಃ ಸರ್ವಮೋಹನಃ ।**
**ಸ್ವನಿವಾಸಮುಪಾಗಮ್ಯ ವಿಪ್ರಾನಾಹೂಯ ಪೃಷ್ಟವಾನ್ ॥ ೭ ॥**

**ಅಷ್ಟಾದಶ ಪುರಾಣಾನಿ ಕೇನ ಪ್ರೋಕ್ತಾನಿ ಕಿಂ ಫಲಂ ।**
**ಬ್ರೂತ ಮೇ ವಿದುಷಾಂ ಶ್ರೇಷ್ಠಾ ವೇದಶಾಸ್ತ್ರಪರಾಯಣಾಃ ॥ ೮ ॥**

---

೪. ಅಲ್ಲಿ ಪರಿಶುದ್ಧಾಂತಃಕರಣನಾದ ಕೃಷ್ಣಾಂಶನು ನಿರ್ಮಲವಾದ ಮನಸ್ಸಿನಿಂದ ಪತ್ನಿಯಾದ (ಸ್ವರ್ಣ) ಪುಷ್ಪವತೀ ಸಮೇತ ಆ ಶುಭದಿವಸ ಆ ಕ್ಷೇತ್ರದಲ್ಲಿ ಸ್ನಾನಮಾಡಿ ಬ್ರಾಹ್ಮಣರಿಗೆ ಸಹಸ್ರ ಗೋದಾನಮಾಡಿದನು.

೫, ಇಷ್ಟರೊಳಗೆ ಮ್ಲೇಚ್ಛವಂಶೋದ್ಭವಳೆನಿಸಿ ಮನೋಹರಳೂ, ಪರಮಸುಂದರಿಯೂ ಆದ ಶೋಭಾ ಎಂಬ ವೇಶ್ಯೆಯು ಅಲ್ಲಿಗೆ ಬಂದಳು.

೬. ಅವಳು ಪುರುಷಶ್ರೇಷ್ಠನೂ ನಯನಮನೋಹರನೂ ಆದ ಕೃಷ್ಣಾಂಶನನ್ನು ನೋಡಿದಳು. ಈ ದರ್ಶನದಿಂದ ಕ್ಷಣಕಾಲದೊಳಗಾಗಿ ಮನೋವೈಕಲ್ಯ ಹೊಂದಿ ಆ ಕೃಷ್ಣಾಂಶನಲ್ಲಿ ಮೋಹಗೊಂಡು ಮೂರ್ಛಿತೆಯಾದಳು.

೭. ಹೀಗೆ ಮೂರ್ಛಿತಳಾಗಿರುವ ಆ ಶೋಭಾವೇಶ್ಯೆಯನ್ನು ನೋಡಿ ಜಗನ್ಮೋಹಕನಾದ ಕೃಷ್ಣಾಂಶನು ತನ್ನ ಕುಟೀರಕ್ಕೆ ಬಂದು ಬ್ರಾಹ್ಮಣರನ್ನು ಕರೆಯಿಸಿ ಈರೀತಿ ಪ್ರಶ್ನಿಸಿದನು.

೮. “ ಎಲೈ ವೇದಶಾಸ್ತ್ರಪಾರಂಗತರಾದ ವಿದ್ವದ್ವರೇಣ್ಯರೇ ! ಈ ಹದಿನೆಂಟು ಪುರಾಣಗಳನ್ನು ಯಾರು ಹೇಳಿದರು ? ಇವುಗಳಿಂದ ಏನು ಫಲ ? ಇದನ್ನು ನನಗೆ ತಿಳಿಸಿರಿ ” ಎಂದನು.

ಇತಿ ಶ್ರುತ್ವಾ ವಚೋ ರಮ್ಯಂ ವಿದ್ವಾಂಸಃ ಶಾಸ್ತ್ರಕೋವಿದಾಃ ।
ಅಬ್ರುವನ್ವಚನಂ ರಮ್ಯಂ ಕೃಷ್ಣಾಂಶಂ ಸರ್ವಧರ್ಮಗಂ ॥ ೯ ॥

ಪರಾಶರೇಣ ರಚಿತಂ ಪುರಾಣಂ ವಿಷ್ಣುದೈವತಂ ।
ಶಿವೇನ ರಚಿತಂ ಸ್ಕಾಂದಂ ಪಾದ್ಮಂ ಬ್ರಹ್ಮಮುಖೋದ್ಭವಂ ॥ ೧೦ ॥

ಶುಕಪ್ರೋಕ್ತಂ ಭಾಗವತಂ ಬ್ರಾಹ್ಮಂ ವೈ ಬ್ರಹ್ಮಣಾ ಕೃತಂ ।
ಗಾರುಡಂ ಹರಿಣಾ ಪ್ರೋಕ್ತಂ ಷಡ್ವೈ ಸಾತ್ವಿಕಸಂಭವಾಃ ॥ ೧೧ ॥

ಮತ್ಸ್ಯಃ ಕೌರ್ಮೋ ನೃಸಿಂಹಶ್ಚ ವಾಮನಃ ಶಿವ ಏವ ಚ ।
ವಾಯುರೇತತ್ಪುರಾಣಾನಿ ವ್ಯಾಸೇನ ರಚಿತಾನಿ ವೈ ॥ ೧೨ ॥

ರಾಜಸಾಃ ಷಟ್ ಸ್ಮೃತಾ ವೀರ ಕರ್ಮಕಾಂಡಮಯಾ ಭುವಿ ।
ಮಾರ್ಕಂಡೇಯಂ ಚ ವಾರಾಹಂ ಮಾರ್ಕಂಡೇಯೇನ ನಿರ್ಮಿತಂ ॥ ೧೩ ॥

---

೯. ಮನೋಹರವಾದ ಈ ಮಾತನ್ನು ಕೇಳಿ ಶಾಸ್ತ್ರಕೋವಿದರಾದ ವಿದ್ವಾಂಸರು ಧರ್ಮಶ್ರದ್ಧೆಯುಳ್ಳ ಕೃಷ್ಣಾಂಶನನ್ನು ಕುರಿತು ಅವನಿಗೆ ಬಹಳ ಸಂತೋಷವಾಗುವಂತೆ ಈರೀತಿ ಹೇಳಿದರು.

೧೦. ವಿಷ್ಣುದೇವತಾಕವಾದ ವಿಷ್ಣುಪುರಾಣವನ್ನು ಪರಾಶರರು ರಚಿಸಿದರು. ಸ್ಕಾಂದಪುರಾಣವನ್ನು ಪರಮೇಶ್ವರನು ರಚಿಸಿದನು. ಪದ್ಮಪುರಾಣವು ಬ್ರಹ್ಮನ ಮುಖದಿಂದ ಉದ್ಗತವಾಯಿತು.

೧೧. ಭಾಗವತವನ್ನು ಶುಕಮಹರ್ಷಿಗಳು ರಚಿಸಿದರು. ಬ್ರಾಹ್ಮಪುರಾಣವನ್ನು ಬ್ರಹ್ಮನೇ ರಚಿಸಿದನು. ಗರುಡಪುರಾಣವನ್ನು ವಿಷ್ಣುವು ನಿರ್ಮಿಸಿದನು. ಈ ಮೇಲೆ ಹೇಳಿದ ಆರು ಪುರಾಣಗಳನ್ನೂ ಸಾತ್ವಿಕ ಪುರಾಣಗಳೆಂದು ವ್ಯವಹರಿಸುವರು.

೧೨. ಮತ್ಸ್ಯಪುರಾಣ, ಕೂರ್ಮಪುರಾಣ, ನೃಸಿಂಹಪುರಾಣ, ವಾಮನಪುರಾಣ, ಶಿವಪುರಾಣ, ವಾಯುಪುರಾಣ ಈ ಆರೂ ವ್ಯಾಸಮಹರ್ಷಿಯಿಂದ ನಿರ್ಮಿತವಾದುವು.

೧೩. ಇವು ರಾಜಸಪುರಾಣಗಳೆನಿಸಿಕೊಂಡು ಜಗತ್ತಿನಲ್ಲಿ ಕರ್ಮಕಾಂಡಮಯವಾಗಿವೆ. ಅಯ್ಯಾ ವೀರನಾದ ಕೃಷ್ಣಾಂಶನೇ! ಮಾರ್ಕಂಡೇಯ, ವಾರಾಹ ಈ ಎರಡು ಪುರಾಣಗಳೂ ಮಾರ್ಕಂಡೇಯ ನಿರ್ಮಿತವಾದುವು.

ಆಗ್ನೇಯಮಂಗಿರಾಶ್ಚೈವ ಜನಯಾಮಾಸ ಚೋತ್ತಮಂ ।
ಲಿಂಗಬ್ರಹ್ಮಾಂಡಕೇ ಚಾಪಿ ತಂಡಿನಾ ರಚಿತೇ ಶುಭೇ ।
ಮಹಾದೇವೇನ ಲೋಕಾರ್ಥೇ ಭವಿಷ್ಯಂ ರಚಿತಂ ಶುಭಂ ॥ ೧೪ ॥

ತಾಮಸಾಃ ಷಟ್ ಸ್ಮೃತಾಃ ಪ್ರಾಜ್ಞೈಃ ಶಕ್ತಿಧರ್ಮಪರಾಯಣಾಃ ।
ಸರ್ವೇಷಾಂ ಚ ಪುರಾಣಾನಾಂ ಶ್ರೇಷ್ಠಂ ಭಾಗವತಂ ಸ್ಮೃತಂ ॥ ೧೫ ॥

ಘೋರೇ ಭುವಿ ಕಲೌ ಪ್ರಾಪ್ತೇ ವಿಕ್ರಮೋ ನಾಮ ಭೂಪತಿಃ ।
ಕೈಲಾಸಾದ್ಭುವಮಾಗತ್ಯ ಮುನೀನ್ಸರ್ವಾನ್ಸಮಾಹ್ವಯತ್ ॥ ೧೬ ॥

ತದಾ ತೇ ಮುನಯಃಸರ್ವೇ ನೈಮಿಷಾರಣ್ಯವಾಸಿನಃ ।
ಸೂತಂ ಸಂಚೋದಯಾಮಾಸುಸ್ತೇಷಾಂ ತಚ್ಛ್ರವಣಾಯ ಚ ।
ಪ್ರೋಕ್ತಾನ್ಯುಪಪುರಾಣಾನಿ ಸೂತೇನಾಷ್ಟದಶೈವ ಚ ॥ ೧೭ ॥

---

೧೪. ಶ್ರೇಷ್ಠವಾದ ಅಗ್ನಿಪುರಾಣವನ್ನು ಬೃಹಸ್ಪತ್ಯಾಚಾರ್ಯರು ರಚಿಸಿದರು. ಶುಭಕರವಾದ ಲಿಂಗಪುರಾಣ, ಬ್ರಹ್ಮಾಂಡ ಪುರಾಣ ಇವನ್ನು ಚಂಡಿಯು ರಚಿಸಿದನು. ಶುಭಕರವಾದ ಭವಿಷ್ಯಪುರಾಣವನ್ನು ಲೋಕಪ್ರಯೋಜನಾರ್ಥವಾಗಿ ಪರಮೇಶ್ವರನೇ ರಚಿಸಿದನು.

೧೫ ಈ ಆರೂ ಶಕ್ತಿಧರ್ಮವನ್ನು ತಿಳಿಸುವುವು. ಇವನ್ನು ತಾಮಸಪುರಾಣಗಳೆಂದು ಪ್ರಾಜ್ಞರು ಹೇಳುವರು. ಈ ಎಲ್ಲಾ ಪುರಾಣಗಳಲ್ಲಿ ಭಾಗವತವೇ ಶ್ರೇಷ್ಠವೆನಿಸಿದೆ.

೧೬. ಭೂಮಂಡಲದಲ್ಲಿ ಭಯಂಕರವಾದ ಕಲಿಯುಗ ಪ್ರಾಪ್ತವಾಗುತ್ತಲು ವಿಕ್ರಮನೆಂಬ ರಾಜನು ಕೈಲಾಸದಿಂದ ಭೂಮಿಗೆ ಬಂದು ಮಹರ್ಷಿಗಳನ್ನೆಲ್ಲಾ ಕರೆಯಿಸಿದನು.

೧೭. ಆಗ ನೈಮಿಶಾರಣ್ಯವಾಸಿಗಳಾದ ಆ ಮಹರ್ಷಿಗಳೆಲ್ಲರೂ ಸೂತನನ್ನು ಕುರಿತು ಪುರಾಣಗಳನ್ನು ವಾಚನಮಾಡಿ ತಮಗೆ ಶ್ರವಣಮಾಡಿಸುವಂತೆ ಪ್ರೇರಿಸಿದರು. ಆಗ ಸೂತಮಹರ್ಷಿಯು ಹದಿನೆಂಟು ಉಪಪುರಾಣಗಳನ್ನೂ ಹೇಳಿದನು" ಎಂದು ತಿಳಿಸಿದರು.

ಇತಿ ಶ್ರುತ್ವಾ ತು ವಚನಂ ಕೃಷ್ಣಾಂಶೋ ಧರ್ಮತತ್ಪರಃ ।
ಶ್ರುತ್ವಾ ಭಾಗವತಂ ಶಾಸ್ತ್ರಂ ಸಪ್ತಮೇಽಹ್ನಿ ಮಹೋತ್ತಮಂ ॥ ೧೮ ॥

ದದೌ ದಾನಾನಿ ವಿಪ್ರೇಭ್ಯೋ ಗೋಸುವರ್ಣಮಯಾನಿ ಚ ।
ಬ್ರಾಹ್ಮಣಾನ್ ಭೋಜಯಾಮಾಸ ಸಹಸ್ರಂ ವೇದತತ್ಪರಾನ್ ॥ ೧೯ ॥

ತದಾ ತು ಭಿಕ್ಷುಕೀ ಭೂತ್ವಾ ಶೋಭಾ ನಾಮ ಮದಾತುರಾ ।
ಮಾಯಾಂ ಕೃತವತೀ ಪ್ರಾಪ್ಯ ಕೃಷ್ಣಾಂಶೋ ಯತ್ರ ವೈ ಸ್ಥಿತಃ ॥ ೨೦ ॥

ಧ್ಯಾತ್ವಾ ಮಹಾಮದಂ ವೀರಂ ಪೈಶಾಚಂ ರುದ್ರಕಿಂಕರಂ ।
ಮಾಯಾಂ ಸಾ ಜನಯಾಮಾಸ ಸರ್ವಪಾಷಾಣಕಾರಿಣೀಂ ॥ ೨೧ ॥

ದೃಷ್ಟ್ವಾ ಸ್ವರ್ಣವತೀ ದೇವೀ ತಾಂ ಮಾಯಾಂ ಶೋಭಯೋದ್ಭವಾಂ ।
ಛಿತ್ವಾ ಚಾಹ್ಲಾದ್ಯ ವಾಮಾಂಗೀ ಸ್ವಗೇಹಂ ಗಂತುಮುದ್ಯತಾ ॥ ೨೨ ॥

---

೧೮-೧೯. ಈರೀತಿ ವಿದ್ವಾಂಸರು ಹೇಳಿದ ಮಾತನ್ನು ಕೇಳಿ, ಧರ್ಮತತ್ಪರನಾದ ಕೃಷ್ಣಾಂಶನು ಮಹಾಶ್ರೇಷ್ಠವಾದ ಭಾಗವತವನ್ನು ಬ್ರಾಹ್ಮಣೋತ್ತಮರಿಂದ ಓದಿಸಿ ಕೇಳುತ್ತಿರಲು ಏಳನೆಯದಿನ ಅದು ಸಂಪೂರ್ಣವಾಯಿತು. ಆದಿನ ಬ್ರಾಹ್ಮಣರಿಗೆ ಗೋದಾನ ಸುವರ್ಣದಾನಾದಿಗಳನ್ನು ಕೊಟ್ಟನು. ಅಲ್ಲದೆ ವೇದಪಾರಂಗತರಾದ ಸಾವಿರ ಬ್ರಾಹ್ಮಣರಿಗೆ ಭೋಜನಮಾಡಿಸಿದನು.

೨೦. ಆ ಸಮಯ ನೋಡಿ ಶೋಭಾ ಎಂಬ ವೇಶ್ಯೆಯು ಕಾಮಾತುರಳಾಗಿ ಭಿಕ್ಷುಕಿಯ ವೇಷವನ್ನು ಧರಿಸಿ ಕೃಷ್ಣಾಂಶನಿದ್ದೆಡೆಗೆ ಬಂದಳು.

೨೧. ಅನಂತರ ಅವಳು ವೀರನೂ, ಪಿಶಾಚಾಧಿಪತಿಯೂ, ರುದ್ರಕಿಂಕರನೂ ಆದ, ಮಹಾಮದನೆಂಬವನನ್ನು ತನ್ನ ಮನದಲ್ಲಿ ಧ್ಯಾನಿಸಿ ಎಲ್ಲರನ್ನೂ ಶಿಲೆಯಾಗಿ ಮಾಡುವ ಮಾಯೆಯನ್ನು ಬೀರಿದಳು.

೨೨. ಶೋಭಾವೇಶ್ಯೆಯು ಮಾಡಿದ ಈ ಪ್ರಕಾರದ ಮಾಯೆಯನ್ನು ವಾಮಾಚಾರನ್ನು ಬಲ್ಲ ಸ್ವರ್ಣವತೀದೇವಿಯು ನೋಡಿ, ತನ್ನ ನಿವಾಸಕ್ಷೇತ್ರದಿಂದ ದೂರ ಬಂದು ಆ ಮಾಯೆಯನ್ನು ಧ್ವಂಸಮಾಡಿ ಅನಂತರ ಸಂತೋಷದಿಂದ ತನ್ನ ನಿವಾಸಕ್ಕೆ ಹೋಗಲುದ್ಯುಕ್ತಳಾದಳು.

ಸಾ ವೇಶ್ಯಾ ತು ಶುಚಾವಿಷ್ಟಾ ತಸ್ಯಾಃ ಶೃಂಗಾರಮುತ್ತಮಂ ।
ಸ್ವರ್ಣಯಂತ್ರಸ್ಥಿತಂ ರಮ್ಯಂ ಲಕ್ಷದ್ರವ್ಯೋಪಮೂಲ್ಯಕಂ ।
ಸಂಹೃತ್ಯ ಮಾಯಯಾ ಧೂರ್ತಾ ದೇಶಂ ಬಾಹ್ಲೀಕಮಾಯಯೌ॥ ೨೩ ॥

ಕಲ್ಪಕ್ಷೇತ್ರಮುಪಾಗಮ್ಯ ನೇತ್ರಸಿಂಹಸಮುದ್ಭವಾ ।
ವೇಶ್ಯಯಾ ಮಮ ಶೃಂಗಾರಂ ಹೃತಂ ಜ್ಞಾತ್ವಾ ಸುದುಃಖಿತಾ ॥ ೨೪ ॥

ಕೃಷ್ಣಾಂಶಂ ವಚನಂ ಪ್ರಾಹ ಗಚ್ಛಗಚ್ಛ ಮಹಾಬಲ ।
ಗೃಹೀತ್ವಾ ಮಮ ಶೃಂಗಾರಂ ಶೀಘ್ರಮಾಗಚ್ಛ ಮಾಂ ಪ್ರತಿ ॥ ೨೫ ॥

ಗುಟಿಕೇಯಂ ಮಯಾ ವೀರ ರಚಿತಾ ತಾಂ ಮುಖೇನ ಚ ।
ಧೂರ್ತಮಾಯಾವಿನಾಶಾಯ ತವ ಮಂಗಲಹೇತವೇ ॥ ೨೬ ॥

---

೨೩. ಆಗ ವಂಚಕಿಯಾದ ಶೋಭಾವೇಶ್ಯೆಯು ತನ್ನ ಮಾಯೆಯು ವ್ಯರ್ಥವಾದುದನ್ನು ನೋಡಿ ದುಃಖಿತೆಯಾಗಿ, ಆ ಸುವರ್ಣವತಿಯ ಉತ್ತಮವೂ ಮನೋಹರವೂ ಆದ ಒಂದುಲಕ್ಷ ದ್ರವ್ಯ ಬೆಲೆಬಾಳುವ ಚಿನ್ನದಿಂದ ಮಾಡಿದ ಆಭರಣಗಳುಳ್ಳ ಒಂದು ಮನೋಹರ ಯಂತ್ರವನ್ನು ತನ್ನ ಮಾಯೆಯಿಂದ ಅಪಹರಿಸಿಕೊಂಡು ಬಾಹ್ಲೀಕ ದೇಶಕ್ಕೆ ಹೊರಡಲು ನಿಶ್ಚಯಿಸಿದಳು.

೨೪. ಆಗ ನೇತ್ರಸಿಂಹನ ಕುಮಾರಿಯಾದ ಸ್ವರ್ಣವತಿಯು ಈ ಕಲ್ಪವೆಂಬ ಪುಣ್ಯಕ್ಷೇತ್ರಕ್ಕೆ ಬಂದ ಮೇಲೆ ತನ್ನ ಆಭರಣಗಳನ್ನು ವೇಶ್ಯೆಯಾದ ಆ ಶೋಭೆಯು ಅಪಹರಿಸಿರುವುದನ್ನು ತಿಳಿದು ಬಹುವಾಗಿ ದುಃಖಿಸಿದಳು.

೨೫. ಬಳಿಕ ಅವಳು ಕೃಷ್ಣಾಂಶನನ್ನು ಕುರಿತು "ಎಲೈ ಮಹಾಬಲಶಾಲಿಯೇ! ಶೋಭೆಯು ನನ್ನ ಆಭರಣಗಳನ್ನು ಅಪಹರಿಸಿಕೊಂಡು ಹೊರಟು ಹೋಗಿರುವಳು ನೀನು ಜಾಗ್ರತೆಯಾಗಿ ಹೋಗಿ ಆ ನನ್ನ ಆಭರಣಗಳನ್ನು ತೆಗೆದುಕೊಂಡು ಬಾ."

೨೬. "ಧೂರ್ತರ ಮಾಯೆಯನ್ನು ನಾಶಪಡಿಸುವುದಕ್ಕೂ ನಿನಗೆ ಮಂಗಳವಾಗುವುದಕ್ಕೋಸ್ಕರವೂ ನಾನು ಈ ಗುಳಿಗೆಯನ್ನು ಮಾಡಿರುವೆನು. ಇದನ್ನು ನೀನು ಬಾಯಲ್ಲಿಟ್ಟುಕೊಂಡು ಅಲ್ಲಿಗೆ ಹೋಗಿ ಬಾ " ಎಂದಳು.

ಇತಿ ಶ್ರುತ್ವಾ ತಥಾ ಕೃತ್ವಾ ಕೃಷ್ಣಾಂಶಸ್ಸರ್ವಮೋಹನಃ ।
ಶೂಕರಕ್ಷೇತ್ರಮಾಗಮ್ಯ ತತ್ರ ವೇಶ್ಯಾಂ ದದರ್ಶ ಹ ॥ ೨೭ ॥

ಸಾ ತು ವೇಶ್ಯಾ ಚ ತಂ ವೀರಂ ದೃಷ್ಟ್ವಾ ಕಂದರ್ಪಕಾರಿಣಂ ।
ರಚಯಿತ್ವಾ ಪುನರ್ಮಾಯಾಂ ತದಂತಿಕಮುಪಾಗತಾ ॥ ೨೮ ॥

ತದಾ ಸಾ ನಿಷ್ಫಲೀಭೂಯ ರುರೋದ ಕರುಣಂ ಬಹು ।
ರುದತೀಂ ತಾಂ ಸಮಾಲೋಕ್ಯ ದಯಾಲುಸ್ಸ ಪ್ರಸನ್ನಧೀಃ ॥ ೨೯ ॥

ಗೃಹೀತ್ವಾ ಸರ್ವಶೃಂಗಾರಂ ವಚನಂ ಪ್ರಾಹ ನಿರ್ಭಯಃ ।
ಕಿಂ ರೋದಿಷಿ ಮಹಾಭಾಗೇ ಸತ್ಯಂ ಕಥಯ ಮಾ ಚಿರಂ ॥ ೩೦ ॥

---

೨೭. ಸರ್ವಮೋಹನನಾದ ಕೃಷ್ಣಾಂಶನು ಸ್ವರ್ಣವತಿಯ ಈ ಮಾತನ್ನು ಕೇಳಿ, ಅದೇ ಪ್ರಕಾರ ಗುಳಿಗೆಯ ಸಹಿತ ಅಲ್ಲಿಂದ ಹೊರಟು ಶೂಕರಕ್ಷೇತ್ರಕ್ಕೆ ಬಂದು ಅಲ್ಲಿ ಶೋಭಾ ವೇಶ್ಯೆಯಿದ್ದುದನ್ನು ನೋಡಿದನು.

೨೮. ಆ ವೇಶ್ಯೆಯೂ ಸಹ ತನಗೆ ಕಾಮೋದ್ರೇಕವನ್ನುಂಟುಮಾಡುವ ವೀರನಾದ ಕೃಷ್ಣಾಂಶನನ್ನು ನೋಡಿ ಪುನಃ ತನ್ನ ಮಾಯೆಯನ್ನು ಬೀರಿ ಅವನ ಬಳಿಗೆ ಬಂದಳು.

೨೯. ಕೃಷ್ಣಾಂಶನ ಬಳಿ ಇದ್ದ ಗುಳಿಗೆಯ ಮಹಿಮೆಯಿಂದ ಆಗ ಅವಳ ಮಾಯೆಯು ವ್ಯರ್ಥವಾಗಲು, ಆ ವೇಶ್ಯೆಯು ದೀನಧ್ವನಿಯಿಂದ ತುಂಬಾ ರೋದಿಸ ತೊಡಗಿದಳು. ಈರೀತಿ ರೋದನಮಾಡುತ್ತಿರುವ ಆ ವೇಶ್ಯೆಯನ್ನು ನೋಡಿ ದಯಾಳುವೂ ನಿರ್ಮಲಹೃದಯನೂ ಆದ ಕೃಷ್ಣಾಂಶನು ಅವಳ ಬಳಿಗೆ ಹೋದನು.

೩೦. ಹಾಗೆ ಹೋಗಿ ಅವಳ ವಶದಲ್ಲಿದ್ದ ಆ ಎಲ್ಲ ಆಭರಣಗಳನ್ನೂ ತೆಗೆದು ಕೊಂಡು ನಿರ್ಭಯನಾಗಿ ಅವಳನ್ನು ಕುರಿತು "ಮಹಾಭಾಗಳೇ! ಏತಕ್ಕಾಗಿ ರೋದಿಸುತ್ತೀ ? ನಿಜಾಂಶವನ್ನು ಜಾಗ್ರತೆ ಹೇಳು" ಎಂದು ಕೇಳಿದನು.

ಸಾಹ ಮೇ ಸಹರೋ ನಾಮ ಭ್ರಾತಾ ಪ್ರಾಣಸಮಪ್ರಿಯಃ ।
ನಾಟ್ಯೈಶ್ಚ ಪಂಚಸಾಹಸ್ರೈಃ ಸಹಿತೋ ಮರಣಂ ಗತಃ ॥ ೩೧ ॥

ಅತೋ ರೌಮಿ ಮಹಾಭಾಗ ಸಂಪ್ರಾಪ್ತಾ ಶರಣಂ ತ್ವಯಿ ।
ಇತ್ಯುಕ್ತ್ವಾ ಮಾಯಯಾ ಧೂರ್ತಾ ಕೃತ್ವಾ ಶವಮಯಾಂತ್ಯಜಾನ್ ॥೩೨॥

ತಸ್ಮೈ ಪ್ರದರ್ಶಯಾಮಾಸ ನಿಜಕಾರ್ಯಪರಾಯಣಾ ।
ರುದಿತ್ವಾ ಚ ಪುನಸ್ತತ್ರ ಪ್ರಾಣಾಂಸ್ತ್ಯಕ್ತುಂ ಸಮುದ್ಯತಾ ॥ ೩೩ ॥

ದಯಾಲುಸ್ಸ ಚ ಕೃಷ್ಣಾಂಶಸ್ತಾಮಾಹ ಕರುಣಂ ವಚಃ ।
ಕಥಂ ತೇ ಜೀವಯಿಷ್ಯಂತಿ ಶೋಭನೇ ಕಥಯಾಶು ಮೇ ॥ ೩೪ ॥

ಸಾಹ ವೀರ ತವಾಸ್ಯೇ ತು ಸಂಸ್ಥಿತಾ ಗುಟಿಕಾ ಶುಭಾ ।
ದೇಹಿ ಮೇ ಕೃಪಯಾ ವೀರ ಜೀವಯಿಷ್ಯಂತಿ ತೇ ತಯಾ ॥ ೩೫ ॥

---

೩೧. ಇದನ್ನು ಕೇಳಿ ಆ ವೇಶ್ಯೆಯು "ಎಲೈ ವೀರನೇ! ನನ್ನ ಪ್ರಾಣಕ್ಕೆ ಸಮಾನನಾದ ಸಹರನೆಂಬ ನನ್ನ ಸಹೋದರನಿದ್ದನು. ಅವನು ಐದುಸಾವಿರ ನಟರೊಡನೆ ಈಗ ಮರಣಹೊಂದಿದನು."

೩೨. ಆದುದರಿಂದ ಅದನ್ನು ಸಹಿಸಲಾರದೆ ನಾನು ರೋದಿಸುತ್ತಿರುವೆನು. ಈಗ ನಾನು ಅನಾಥೆಯು, ನಿನ್ನನ್ನೇ ಮರೆಹೊಕ್ಕಿರುವೆನು" ಎಂದು ಹೇಳಿದಳು.

೩೩. ಧೂರ್ತಳೂ ತನ್ನ ಕಾರ್ಯ ನೆರವೇರಿಸಿಕೊಳ್ಳುವುದರಲ್ಲಿ ಚತುರೆಯೂ ಆದ ಆ ವೇಶ್ಯೆಯು ಐದುಸಾವಿರ ಮೇಚ್ಛರ ಶವಗಳನ್ನು ಮಾಯೆಯಿಂದ ನಿರ್ಮಿಸಿ ಅವನ ಕಣ್ಣಿಗೆ ಕಾಣುವಂತೆ ಮಾಡಿ ಮತ್ತೆ ಪುನಃ ರೋದಿಸುತ್ತಾ ಪ್ರಾಣತ್ಯಾಗಕ್ಕೂ ಸನ್ನದ್ಧಳಾದಳು.

೩೪. ಆಗ ದಯಾಳುವಾದ ಆ ಕೃಷ್ಣಾಂಶನು ಆ ವೇಶ್ಯೆಯನ್ನು ಕುರಿತು ಕರುಣೆಯಿಂದ, "ಶೋಭನಾಂಗಿ! ಏನುಮಾಡಿದರೆ ನಿನ್ನ ಸಹೋದರರೇ ಮೊದಲಾದ ಇವರೆಲ್ಲರೂ ಜೀವಿಸುವರು? ಎಂಬುದನ್ನು ನನಗೆ ಜಾಗ್ರತೆ ತಿಳಿಸು" ಎಂದು ಹೇಳಿದನು.

೩೫. ಆಗ ವೇಶ್ಯೆಯು "ಎಲೈ ವೀರನೇ! ನಿನ್ನ ಬಾಯಿಯಲ್ಲಿರುವ ಮಂಗಳಕರವಾದ ಗುಳಿಗೆಗಳನ್ನು ನನಗೆ ಕೊಡು. ಆ ಗುಳಿಗೆಯಿಂದ ಇವರು ಬದುಕುವರು" ಎಂದು ನುಡಿದಳು.

ಇತ್ಯುಕ್ತಸ್ತು ತಯಾ ವೀರೋ ದದೌ ತಸ್ಯೈ ಚ ತದ್ವಸು ।
ತದಾ ಪ್ರಸನ್ನಾ ಸಾ ಧೂರ್ತಾ ಕೃತ್ವಾ ಶುಕಮಯಂ ವಪುಃ ।
ಪಂಜರಸ್ಥಮುಪಾದಾಯ ಕೃಷ್ಣಾಂಶಂ ಕಾಮವಿಹ್ವಲಾ ॥ ೩೬ ॥

ವಾಹ್ಲೀಕದೇಶಮಾಗಮ್ಯ ಸಾರಟ್ಟನಗರಂ ಶುಭಂ ।
ಉವಾಸ ಚ ಸ್ವಯಂ ಗೇಹೇ ಕೃತ್ವಾ ದಿವ್ಯಮಯಂ ವಪುಃ ॥ ೩೭ ॥

ನಿಶೀಥೇ ಸಮನುಪ್ರಾಪ್ತೇ ಕೃತ್ವಾ ತಂ ನರರೂಪಿಣಂ ।
ಆಲಿಲಿಂಗ ಹಿ ಕಾಮಾರ್ತಾ ಕೃಷ್ಣಾಂಶಂ ಧರ್ಮಕೋವಿದಂ ॥ ೩೮ ॥

ದೃಷ್ಟ್ವಾ ತಾಂ ಸ ತಥಾಭೂತಾಂ ಕೃಷ್ಣಾಂಶೋ ಜಗದಂಬಿಕಾಂ ।
ತುಷ್ಟಾವ ಮನಸಾ ಧೀರೋ ರಾತ್ರಿಸೂಕ್ತೇನ ನಮ್ರಧೀಃ ॥ ೩೯ ॥

---

೩೬. ಆ ವೇಶ್ಯೆಯು ಈರೀತಿಯಾಗಿ ಹೇಳಲು ವೀರನಾದ ಕೃಷ್ಣಾಂಶನು ಆವಳ ಮೋಸವನ್ನರಿಯದೆ, ಆ ವೇಶ್ಯೆಗೆ ತನ್ನ ಬಾಯಿಯಲ್ಲಿದ್ದ ಅಮೂಲ್ಯವಾದ ಗುಳಿಗೆಯನ್ನು ಕೊಟ್ಟನು. ಆಗ ಧೂರ್ತಳಾದ ಆ ವೇಶ್ಯೆಯು ಪ್ರಸನ್ನೆಯಾಗಿ ತನ್ನ ಮಾಯೆಯಿಂದ ಆ ಕೃಷ್ಣಾಂಶನನ್ನು ಗಿಣಿಯಾಗಿ ಮಾಡಿ ಪಂಜರದಲ್ಲಿರಿಸಿಕೊಂಡು ಹೊರಟಳು.

೩೭. ಅನಂತರ ಕಾಮವಿಹ್ವಲೆಯಾದ ಆ ಶೋಭಾವೇಶ್ಯೆಯು ಬಾಹ್ಲೀಕ ದೇಶದಲ್ಲಿರುವ ಮಂಗಳಕರವಾದ ಸಾರಟ್ಟನಗರಕ್ಕೆ ಬಂದು ದಿವ್ಯವಾಗಿ ದೇಹವನ್ನು ಶೃಂಗರಿಸಿ ತನ್ನ ಮನೆಯಲ್ಲಿ ವಾಸಿಸುತ್ತಾ ಇದ್ದಳು.

೩೮. ರಾತ್ರಿಯಾಗುತ್ತಲೆ ಆಕೆ, ಕೃಷ್ಣಾಂಶನನ್ನು ಮನುಷ್ಯನನ್ನಾಗಿ ಮಾಡಿ ಆ ಧರ್ಮಜ್ಞನನ್ನು ಕಾಮಾತುರತೆಯಿಂದ ಆಲಿಂಗಿಸಿದಳು.

೩೯. ಆ ವೇಶ್ಯೆಯು ಈರೀತಿ ಮಾಡುತ್ತಿರುವುದನ್ನು ನೋಡಿ ಧೀರನಾದ ಕೃಷ್ಣಾಂಶನು ವಿನಯದಿಂದ ಮನಸ್ಸಿನಲ್ಲಿಯೇ ರಾತ್ರಿ ಸೂಕ್ತವನ್ನು ಪಠಿಸುತ್ತಾ ಜಗದಂಬಿಕೆಯನ್ನು ಸ್ತೋತ್ರಮಾಡಿದನು.

ತದಾ ಸಾ ಸ್ವೇಡಿನೀ ಭೂತ್ವಾ ತ್ಯಕ್ತ್ವಾ ಕೃಷ್ಣಾಂಶಮುತ್ತಮಂ ।
ಪುನಃ ಶುಕಮಯಂ ಕೃತ್ವಾ ಚಿಂಚಿಣೀವೃಕ್ಷಮಾರುಹತ್ ॥ ೪೦ ॥

ತದಾ ಸ್ವರ್ಣವತೀ ದೇವೀ ಬೋಧಿತಾ ವಿಷ್ಣುಮಾಯಯಾ ।
ಕೃತ್ವಾ ಶ್ಯೇನೀಮಯಂ ರೂಪಂ ತತ್ರ ಗತ್ವಾ ಮುದಾನ್ವಿತಾ ।
ದದರ್ಶ ಶುಕಭೂತಂ ಚ ಕೃಷ್ಣಾಂಶಂ ಯೋಗತತ್ಪರಂ ॥ ೪೧ ॥

ಏತಸ್ಮಿನ್ನಂತರೇ ವೇಶ್ಯಾ ಪುನಃ ಕೃತ್ವಾ ಶುಭಂ ವಪುಃ ।
ನರಭೂತಂ ಚ ಕೃಷ್ಣಾಂಶಂ ವಚನಂ ಪ್ರಾಹ ನಮ್ರಧೀಃ ॥ ೪೨ ॥

ಅಯೇ ಪ್ರಾಣಪ್ರಿಯಸ್ವಾಮಿನ್ ಭಜ ಮಾಂ ಕಾಮವಿಹ್ವಲಾಂ ।
ಪಾಹಿ ಮಾಂ ರತಿದಾನೇನ ಧರ್ಮಜ್ಞೋಽಸಿ ಭವಾನ್ ಸದಾ ॥ ೪೩ ॥

ಇತ್ಯುಕ್ತಸ್ಸ ತು ತಾಮಾಹ ವಚನಂ ಶೃಣು ಶೋಭನೇ ।
ಆರ್ಯಾವರ್ತ್ಮಸ್ಥಿತೋಽಹಂ ವೈ ವೇದಮಾರ್ಗಪರಾಯಣಃ ॥ ೪೪ ॥

---

೪೦. ಆಗ ಆ ವೇಶ್ಯೆಯು ಶ್ರೇಷ್ಠನಾದ ಕೃಷ್ಣಾಂಶನನ್ನು ಬಿಟ್ಟು ತಾನು ಸ್ವೇಡಿನೀ ರೂಪವನ್ನು ಧರಿಸಿ, ಅವನನ್ನು ಪುನಃ ಗಿಣಿಯನ್ನಾಗಿ ಮಾಡಿ ತಾನು ಒಂದು ಹುಣಿಸೆಯ ಮರವನ್ನೇರಿ ಕುಳಿತುಕೊಂಡು ಬಿಟ್ಟಳು.

೪೧. ಆಗ ಸ್ವರ್ಣವತೀದೇವಿಯು ವಿಷ್ಣುಮಾಯೆಯಿಂದ ಎಚ್ಚೆತ್ತು ಸಂತೋಷ ದಿಂದ ತಾನು ಹೆಣ್ಣುಹದ್ದಿನ ರೂಪವನ್ನು ಧರಿಸಿ ಅಲ್ಲಿಗೆ ಬಂದು ಯೋಗತತ್ಪರನಾದ ಕೃಷ್ಣಾಂಶನು ಗಿಣಿಯಾಗಿ ಮಾರ್ಪಟ್ಟಿರುವುದನ್ನು ಕಂಡಳು.

೪೨. ಇಷ್ಟರೊಳಗೆ ಆ ವೇಶ್ಯೆಯು ತಾನು ಸುಂದರರೂಪವನ್ನು ಧರಿಸಿ ಕೃಷ್ಣಾಂಶನನ್ನು ಪುನಃ ಮನುಷ್ಯನನ್ನಾಗಿ ಮಾಡಿ ಅವನನ್ನು ಕುರಿತು ವಿನಯದಿಂದ ಹೀಗೆಂದಳು.

೪೩. "ಎಲೈ ಪ್ರಾಣಪ್ರಿಯನಾದ ಸ್ವಾಮಿಯೇ! ಕಾಮವಿಹ್ವಲೆಯಾದ ನನ್ನೊಡನೆ ಭೋಗಿಸು. ನನ್ನ ಜೊತೆಯಲ್ಲಿ ರತಿಕ್ರೀಡೆಯಾಡಿ ನನ್ನನ್ನು ರಕ್ಷಿಸು. ಪೂಜ್ಯನಾದ ನೀನು ಯಾವಾಗಲೂ ಧರ್ಮಜ್ಞನಲ್ಲವೆ?" ಎಂದು ಪ್ರಾರ್ಥಿಸಿದಳು.

೪೪. ಹಾಗೆ ಪ್ರಾರ್ಥಿಸಿದ ಆ ವೇಶ್ಯೆಯನ್ನು ಕುರಿತು ಕೃಷ್ಣಾಂಶನು "ಶೋಭನಾಂಗೀ! ನಾನು ಆರ್ಯದೇಶನಿವಾಸಿ; ವೇದಮಾರ್ಗದಲ್ಲಿ ತತ್ಪರನಾಗಿರುವೆನು."

ವಿವಾಹಿತಾಂ ಶುಭಾಂ ನಾರೀಂ ಯೋಂ ಭಜೇತ ಋತೌ ನ ಹಿ ।
ಸ ಪಾಪೀ ನರಕಂ ಯಾತಿ ತಿರ್ಯಗ್ಯೋನಿಮಯಂ ಸ್ಮೃತಂ ॥ ೪೫ ॥

ಅತಃ ಪರಸ್ತ್ರಿಯಾ ಭೋಗೋ ಜ್ಞೇಯೋ ವೈ ನಿರಯಪ್ರದಃ ।
ಇತಿ ಶ್ರುತ್ವಾ ತು ಸಾ ಪ್ರಾಹ ವಿಶ್ವಾಮಿತ್ರೇಣ ಧೀಮತಾ ।
ಶೃಂಗಿಣಾ ಚ ಮಹಾಪ್ರಾಜ್ಞ ವೇಶ್ಯಾಸಂಗಃ ಕೃತಃ ಪುರಾ ॥ ೪೬ ॥

ನ ಕೋಽಪಿ ನರಕಂ ಪ್ರಾಪ್ತಸ್ತಸ್ಮಾನ್ಮಾಂ ಭಜ ಕಾಮಿನೀಂ ।
ಪುನಶ್ಚಾಽಽಹ ಸ ಕೃಷ್ಣಾಂಶಃ ಕೃತ್ತಂ ಪಾಪಂ ತಪೋಬಲಾತ್ ।
ತಾಭ್ಯಾಂ ಚ ಮುನಿಯುಗ್ಮಾಭ್ಯಾಮಸಮರ್ಥೋ ಹಿ ಸಾಂಪ್ರತಂ ॥ ೪೭ ॥

---

೪೫. "ಯಾರು ತಾನು ಮದುವೆಯಾಗಿರುವ ಶೋಭನಾಂಗಿಯನ್ನು ಋತುಸ್ನಾನಾನಂತರ ಭೋಗಿಸುವುದಿಲ್ಲವೋ ಅವನು ಪಾಪಿಯೆನಿಸಿ ನರಕಭಾಜನನಾಗುವುದಲ್ಲದೆ ತಿರ್ಯಕ್ ಪ್ರಾಣಿಗಳ ಯೋನಿಯಲ್ಲಿ ಜನಿಸುವನೆಂದು ಹೇಳಿದೆ. ಆದುದರಿಂದ ಪರಸ್ತ್ರೀಯನ್ನು ಭೋಗಿಸುವುದು ನರಕಪ್ರಾಪ್ತಿಗೆ ಕಾರಣ" ಎಂದನು.

೪೬. ಕೃಷ್ಣಾಂಶನು ಹೀಗೆ ಹೇಳಲು ಅದನ್ನು ಕೇಳಿ ಆ ವೇಶ್ಯೆಯು "ಎಲೈ ಪ್ರಾಜ್ಞನೇ ! ಹಿಂದೆ ಮೇಧಾವಿಯಾದ ವಿಶ್ವಾಮಿತ್ರನೂ, ಋಷ್ಯಶೃಂಗಮಹರ್ಷಿಯೂ ಸಹ ವೇಶ್ಯಾಸಹವಾಸ ಮಾಡಿರುವರು. ಹಾಗಿದ್ದರೂ ಅವರಿಗೆ ಯಾರಿಗೂ ನರಕ ಪ್ರಾಪ್ತಿಯೇನೂ ಆಗಲಿಲ್ಲ. ಆದುದರಿಂದ ವೇಶ್ಯೆಯೂ, ಕಾಮಾತುರೆಯೂ ಆದ ನನ್ನಲ್ಲಿ ನೀನು ಭೋಗಿಸುವುದರಿಂದ ಯಾವ ನರಕಕ್ಕೂ ಭಾಗಿಯಾಗುವುದಿಲ್ಲ" ಎಂದು ಹೇಳಿದಳು.

೪೭. ಪುನಃ ಕೃಷ್ಣಾಂಶನು ಆ ವೇಶ್ಯೆಯನ್ನು ಕುರಿತು "ನೀನು ಹೇಳಿದ ವಿಶ್ವಾಮಿತ್ರ ಮತ್ತು ಋಷ್ಯಶೃಂಗರು ತಮ್ಮ ತಪಶ್ಶಕ್ತಿಯಿಂದ ಪಾಪವನ್ನು ಕಳೆದು ಕೊಂಡರು. ಆದ್ದರಿಂದ ಆ ಮಹರ್ಷಿಗಳಿಗೆ ನರಕಪ್ರಾಪ್ತಿಯಾಗಲಿಲ್ಲ. ಈಗ ನಾನು ಅಂಥ ತಪಸ್ಸನ್ನುಮಾಡಲು ಅಸಮರ್ಥನಾಗಿರುವೆನು."

ಅರ್ಧಾಂಗಂ ಪುರುಷಸ್ಯ ಸ್ತ್ರೀ ಮೈಥುನೇ ಚ ವಿಶೇಷತಃ ।
ಅಹಮಾರ್ಯಶ್ಚ ಭವತೀ ವೇಶ್ಯಾ ಚ ಬಹುಭೋಗಿನೀ ॥ ೪೮ ॥

ಋಚಿ ಶಬ್ದಶ್ಚ ಪೂರ್ವಾಸ್ಯಾಜ್ಜಾತ ಋಗ್ವಸ್ಸನಾತನಃ ।
ಯೋಗಜಶ್ಚೈವ ಯಃ ಶಬ್ದೋ ದಕ್ಷಿಣಾಸ್ಯಾದ್ಯಜುರ್ಭವಃ ॥ ೪೯ ॥

ತದ್ಧಿತಾಂತಶ್ಚ ಯಶ್ಶಬ್ದಃ ಪಶ್ಚಿಮಾಸ್ಯಾಚ್ಚ ಸಾಮಜಃ ।
ಛಂದೋಭೂತಾಶ್ಚ ಯೇ ಶಬ್ದಾಸ್ತೇ ಸರ್ವೇ ಬ್ರಾಹ್ಮಣಪ್ರಿಯಾಃ ।
ಕೇವಲೋ ವರ್ಣಮಾತ್ರಶ್ಚ ಸ ಶಬ್ದೋಽಥರ್ವಜಃ ಸ್ಮೃತಃ ॥ ೫೦ ॥

ಪಂಚಮಾಸ್ಯಾಚ್ಚ ಯೇ ಜಾತಾಃ ಶಬ್ದಾಃ ಸಂಸಾರಕಾರಿಣಃ ।
ತೇ ಸರ್ವೇ ಪ್ರಾಕೃತಾ ಜ್ಞೇಯಾಶ್ಚತುರ್ಲಕ್ಷವಿಭೇದಿನಃ ॥ ೫೧ ॥

---

೪೮. "ಸ್ತ್ರೀಯು ಪುರುಷನ ಅರ್ಧಶರೀರವು; ಮೈಥುನದ ವಿಷಯದಲ್ಲಿ ಈ ವಿಷಯವು ವಿಶೇಷವಾಗಿ ಅನ್ವಯಿಸುವುದು. ನಾನು ಆರ್ಯವಂಶೋದ್ಭವನು. ನೀನಾದರೋ ಅನೇಕರಿಂದ ಉಪಭುಕ್ತಳಾದ ವೇಶ್ಯಾಸ್ತ್ರೀ. ಹೀಗಿರುವಾಗ ನಿನ್ನೊಡನೆ ನಾನು ಹೇಗೆ ಉಪಭೋಗಾರ್ಹನಾಗುವೆನು?"

೪೯. "ಋಕ್ ಸಂಬಂಧವಾದ ಶಬ್ದವು ಬ್ರಹ್ಮನ ಪೂರ್ವದಿಕ್ಕಿನ ಮುಖದಿಂದ ಜನಿಸಿ ಸನಾತನವಾದ ಋಗ್ವೇದವೆನಿಸಿತು. ಯೋಗಮಹಿಮೆಯಿಂದ ಕೂಡಿ ಬ್ರಹ್ಮನ ದಕ್ಷಿಣದಿಕ್ಕಿನ ಮುಖದಿಂದ ಉದ್ಭವಿಸಿದ ಶಬ್ದಮಯವೇ ಯಜುರ್ವೇದವಾಯಿತು.

೫೦. "ಬ್ರಹ್ಮನ ಪಶ್ಚಿಮ ಮುಖದಿಂದ ಜನಿಸಿದ ತದ್ಧಿತಾಂತ ಶಬ್ದವೇ ಸಾಮ ವೇದವೆನಿಸಿತು. ಈರೀತಿ ಛಂದೋಮಯವಾದ ಈ ಎಲ್ಲಾ ಶಬ್ದಗಳೂ ಬ್ರಾಹ್ಮಣರಿಗೆ ಇಷ್ಟವಾದುವುಗಳೆನಿಸುವುವು. ಕೇವಲ ವರ್ಣಮಾತ್ರಸ್ವರೂಪವಾದ ಶಬ್ದವೇ ಅಥರ್ವಣವೇದವೆನಿಸಿತು. ಅದು ಬ್ರಹ್ಮನ ಉತ್ತರದ ಕಡೆಯ ಮುಖದಿಂದ ಜನಿಸಿತು.

೫೧. "ಬ್ರಹ್ಮನ ಐದನೇ ಮುಖದಿಂದ ವ್ಯವಹಾರೋಪಯೋಗಿಗಳೆನಿಸಿದ ಶಬ್ದಗಳು ಜನಿಸಿ ಆ ಶಬ್ದಗಳೆಲ್ಲವೂ ಪ್ರಾಕೃತವೆಂಬ ಹೆಸರಿನಿಂದ ಕೂಡಿ ಸಂಸಾರ ರೂಪವಾದ ಪ್ರಪಂಚದಲ್ಲಿ ಹೆಚ್ಚು ರೂಢಿಗೆ ಬಂದಿವೆ. ಇವು ನಾಲ್ಕುಲಕ್ಷ ಒಳಭೇದಗಳುಳ್ಳದಾಗಿರುವುದು.

ಹಿತ್ವಾ ತಾನ್ಯೋ ಹಿ ಶುದ್ಧಾತ್ಮಾ ಚತುರ್ವೇದಪರಾಯಣಃ ।
ಸ ವೈ ಭವಾಟವೀಂ ತ್ಯಕ್ತ್ವಾ ಪದಂ ಗಚ್ಛತ್ಯನಾಮಯಂ ॥ ೫೨ ॥

ನ ವದೇದ್ಯಾವನೀಂ ಭಾಷಾಂ ಪ್ರಾಣೈಃ ಕಂಠಗತೈರಪಿ ।
ಗಜೈರಾಪೀಡ್ಯಮಾನೋಽಪಿ ನ ಗಚ್ಛೇಜ್ಜೈನಮಂದಿರಂ ॥ ೫೩ ॥

ಇತ್ಯೇವಂ ಸ್ಮೃತಿವಾಕ್ಯಾನಿ ಮುನಿನಾ ಪಠಿತಾನಿ ವೈ ।
ಕಥಂ ತ್ಯಾಜ್ಯೋ ಮಯಾ ಧರ್ಮಸ್ಸರ್ವಲೋಕಸುಖಪ್ರದಃ ॥ ೫೪ ॥

ಇತಿ ಶ್ರುತ್ವಾ ತು ಸಾ ವೇಶ್ಯಾ ಮ್ಲೇಚ್ಛಾಯಾಶ್ಚಾಂಶಸಂಭವಾ ।
ಶೋಭನಾ ನಾಮ ರಂಭೋರೂರ್ಮಹಾಕ್ರೋಧಮುಪಾಯಯೌ ॥ ೫೫ ॥

---

೫೨. "ಪರಿಶುದ್ಧಾಂತಃಕರಣವುಳ್ಳವನೂ ಚತುರ್ವೇದಪರಾಯಣನೂ ಆದ ಪುರುಷನು ಈ ಸಂಸಾರ ಬಂಧನ ನಿಮಿತ್ತವಾದ ಈ ಪ್ರಾಕೃತ ಶಬ್ದಗಳನ್ನು ಬಿಟ್ಟು ನಡೆದರೆ ಅವನು ಸಂಸಾರಮಹಾರಣ್ಯವನ್ನು ದಾಟಿ ಪರಮಶ್ರೇಷ್ಠವೂ, ನಿರುಪದ್ರವವೂ ಆದ ಪರಮಪದವನ್ನು ಹೊಂದುವನು.

೫೩. "ಪ್ರಾಣಹೋಗುವಂತಹ ಕಷ್ಟಕಾಲವೊದಗಿದರೂ ಸಹ ಯವನ ಭಾಷೆಯನ್ನು ಉಚ್ಚರಿಸಬಾರದು. ಆನೆಗಳು ನಮ್ಮನ್ನು ಶಿಗಿದುಹಾಕಲು ಅಟ್ಟಿಸಿಕೊಂಡು ಬಂದರೂ ಆಶ್ರಯಕ್ಕಾಗಿ ಜೈನ ಬಸದಿಯನ್ನು ಪ್ರವೇಶಿಸಬಾರದು.

೫೪. "ಹೀಗೆಂದು ಮಹರ್ಷಿಗಳು ಸ್ಮೃತಿ ವಾಕ್ಯಗಳನ್ನು ಹೇಳಿದಾರೆ. ಹೀಗಿರುವಾಗ ಎಲ್ಲ ಲೋಕಗಳಲ್ಲೂ ಸುಖವುಂಟುಮಾಡುವ ಆರ್ಯಧರ್ಮವನ್ನು ಬಿಟ್ಟು ನಾನು ಹೇಗೆತಾನೇ ಮ್ಲೇಚ್ಛಳಾದ ನಿನ್ನೊಡನೆ ಉಪಭೋಗಾರ್ಹನಾದೇನು?" ಎಂದು ಹೇಳಿದನು.

೫೫. ಮ್ಲೇಚ್ಛವಂಶಸಂಭೂತಳೂ, ಬಾಳೆಯ ಕಂಬದಂತೆ ತೊಡೆಯುಳ್ಳ ಸುಂದರಾಂಗಿಯೂ ಆದ ಆ ವೇಶ್ಯೆಯು ಕೃಷ್ಣಾಂಶನು ಈರೀತಿ ಹೇಳಿದುದನ್ನು ಕೇಳಿ ತುಂಬ ಕೋಪಗೊಂಡಳು.

ವೇತಸೈಸ್ತಾಡಯಿತ್ವಾ ತಂ ಪುನಃ ಕೃತ್ವಾ ಶುಕಂ ಸ್ವಯಂ ।
ನ ದದೌ ಭೋಜನಂ ತಸ್ಮೈ ಫಲಾಹಾರಂ ಶುಕಾಯ ವೈ ॥ ೫೬ ॥

ತದಾ ಸ್ವರ್ಣವತೀ ದೇವೀ ಕೃತ್ವಾ ನಾರೀಮಯಂ ವಪುಃ ।
ಮಶಕೀಕೃತ್ಯ ತಂ ವೀರಂ ತತ್ರೈವಾಂತರ್ದಧೇ ತು ಸಾ ॥ ೫೭ ॥

ಪುನಃ ಶ್ಯೇನೀವಪುಃ ಕೃತ್ವಾ ತದ್ದೇಶಾದ್ಯಾತುಮುದ್ಯತಾ ।
ಪೃಷ್ಠಮಾರೋಪ್ಯ ಮಶಕಂ ಮಯೂರನಗರಂ ಯಯೌ ॥ ೫೮ ॥

ಮಕರಂದಸ್ತು ತಾಂ ದೃಷ್ಟ್ವಾ ಕೃಷ್ಣಾಂಶೇನ ಸಮನ್ವಿತಾಂ ।
ನೇತ್ರಪಾಲಸ್ಯ ತನಯಾಂ ನಾಮ್ನಾ ಸ್ವರ್ಣವತೀಂ ಬಲೀ ।
ಚರಣಾವುಪಸಂಗೃಹ್ಯ ಸ್ವಗೇಹೇ ತಾವವಾಸಯತ್ ॥ ೫೯ ॥

---

೫೬. ಮತ್ತು ಅವನನ್ನು ಜೊಂಡುಗಳಿಂದ ಹೊಡೆದು ಪುನಃ ಗಿಣಿಯ ರೂಪವನ್ನು ವಹಿಸುವಂತೆ ಮಾಡಿ, ಅದಕ್ಕೆ ಹಣ್ಣು, ಹಾಲು ಮುಂತಾದ ಆಹಾರವೇನನ್ನೂ ಕೊಡಲಿಲ್ಲ.

೫೭. ಆಗ ಸ್ವರ್ಣವತೀ ದೇವಿಯು ತಾನು ಧರಿಸಿದ್ದ ಹದ್ದಿನ ರೂಪವನ್ನು ಬಿಟ್ಟು, ಸ್ತ್ರೀವೇಷವನ್ನು ಧರಿಸಿ ಬಂದು, ಗಿಣಿಯಾಗಿದ್ದ ವೀರನಾದ ಕೃಷ್ಣಾಂಶನನ್ನು ಸೊಳ್ಳೆಯ ರೂಪವಾಗಿ ಮಾರ್ಪಡಿಸಿ ಅಲ್ಲೇ ಅದೃಶ್ಯವಾದಳು.

೫೮. ಆಕೆ ಪುನಃ ಹಿಂದಿನಂತೆ ಹದ್ದಿನ ರೂಪವನ್ನು ಧರಿಸಿ ಕೃಷ್ಣಾಂಶ ಸ್ವರೂಪವಾದ ಆ ಸೊಳ್ಳೆಯನ್ನು ಬೆನ್ನಿನ ಮೇಲೆ ಕೂರಿಸಿಕೊಂಡು ಮಯೂರನಗರಕ್ಕೆ ಬಂದಳು.

೫೯. ಆಗ ಸ್ವರ್ಣವತೀ ಸಹೋದರನೂ ಬಲಶಾಲಿಯೂ ಆದ ಮಕರಂದನು ಕೃಷ್ಣಾಂಶನ ಸಮೇತ ಬಂದ ನೇತ್ರಪಾಲಕುಮಾರಿ ಸ್ವರ್ಣವತಿಯನ್ನು ನೋಡಿ ಅವರಿಗೆ ಸಾಷ್ಟಾಂಗವಾಗಿ ವಂದಿಸಿ ತನ್ನ ಮನೆಯಲ್ಲಿ ಇರಿಸಿಕೊಂಡನು.

ಶೋಭನಾಽಪಿ ಚ ಸಂಬುಧ್ಯ ಪಂಜರಾಂತಮುಪಸ್ಥಿತಾ ।
ನ ದದರ್ಶ ಶುಕಂ ರಮ್ಯಂ ಮೂರ್ಛಿತಾ ಚಾಽಪತದ್ಭುವಿ ॥ ೬೦ ॥

ಕಿಂ ಕರೋಮಿ ಕ್ವ ಗಚ್ಛಾಮಿ ವಿನಾ ತಂ ರಮಣಂ ಪರಂ ।
ಇತ್ಯೇವ ಬಹುಧಾಲಪ್ಯ ಮದಹೀನಪುರಂ ಯಯೌ ॥ ೬೧ ॥

ತತ್ರ ಸ್ಥಿತಂ ಚ ಪೈಶಾಚಂ ಮಾಯಾಮದವಿಶಾರದಂ ।
ಮಹಾಮದಂ ಚ ಸಂಪೂಜ್ಯ ಸ್ವದೇಹಂ ತ್ಯಕ್ತುಮುದ್ಯತಾ ॥ ೬೨ ॥

ಮಹಾಮದಸ್ತು ಸಂತುಷ್ಟೋ ಗತ್ವಾ ವೈ ಶಿವಮಂದಿರಂ ।
ಮರುಸ್ಥಲೇಶ್ವರಂ ಲಿಂಗಂ ತುಷ್ಟಾವಾರ್ಷಭಭಾಷಯಾ ॥ ೬೩ ॥

ತದಾ ಪ್ರಸನ್ನೋ ಭಗವಾನ್ ವಚನಂ ಪ್ರಾಹ ಸೇವಕಂ ।
ತದಾ ಪ್ರಸನ್ನೋ ಭಗವಾನ್ ವಚನಂ ಪ್ರಾಹ ಸೇವಕಂ ।
ಸ್ವರ್ಣವತ್ಯಾ ಹೃತೋ ವೀರಃ ಕೃಷ್ಣಾಂಶಶ್ಚಾರ್ಯಧರ್ಮಗಃ ॥ ೬೪ ॥

---

೬೦. ಆದಿನ ರಾತ್ರಿಯಾಗುತ್ತಲು ಶೋಭಾ ವೇಶ್ಯೆಯು ಎದ್ದು ಪಂಜರದ ಬಳಿಗೆ ಬಂದು ನೋಡಲು ಅಲ್ಲಿ ಮನೋಹರವಾದ ಗಿಳಿಯು ಇರಲೇ ಇಲ್ಲ. ಇದನ್ನು ಕಂಡು ಅವಳು ಮೂರ್ಛೆಗೊಂಡು ನೆಲದಮೇಲೆ ಬಿದ್ದಳು.

೬೧. ಅನಂತರ ಎಚ್ಚೆತ್ತು "ಆಹಾ! ಶ್ರೇಷ್ಠವಾದ ನನ್ನ ಆ ರಮಣನಿಲ್ಲವಲ್ಲಾ! ಈಗ ಏನು ಮಾಡಲಿ ! ಎಲ್ಲಿಗೆ ಹೋಗಲಿ !" ಎಂದು ಅನೇಕ ಪ್ರಕಾರ ಆಲಾಪ ಮಾಡುತ್ತಾ ಮದಹೀನ (ಮದೀನ) ಪುರಕ್ಕೆ ಹೋದಳು.

೬೨. ಮಾಯೆಯಲ್ಲೂ ಮದದಲ್ಲೂ ನಿಪುಣನೂ, ಪಿಶಾಚಾಧಿಪನೂ ಆದ ಮಹಾಮದನನ್ನು ಅಲ್ಲಿ ಪೂಜಿಸಿ ಪ್ರಾಣತ್ಯಾಗಮಾಡಲು ಉದ್ಯುಕ್ತೆಯಾದಳು.

೬೩. ಆ ಪೂಜೆಗೆ ಸಂತುಷ್ಟನಾದ ಮಹಾಮದನು ಮರುಸ್ಥಲೇಶ್ವರಪುರಕ್ಕೆ ಹೋಗಿ ಶಿವಾಲಯದಲ್ಲಿ ಲಿಂಗವನ್ನು ಪೂಜಿಸಿ ಆರ್ಷಭ (ವೃಷಭಸಂಬಂಧಿ) ಭಾಷೆ ಯಿಂದ ಅವನನ್ನು ಸ್ತೋತ್ರಮಾಡಿದನು.

೬೪. ಆಗ ಭಗವಂತನಾದ ಪರಶಿವನು ಪ್ರಸನ್ನನಾಗಿ ತನ್ನ ಸೇವಕನಾದ ಮಹಾಮದನನ್ನು ಕುರಿತು "ಭದ್ರನೇ! ಆರ್ಯಧರ್ಮಾನುಯಾಯಿಯೂ, ವೀರನೂ ಆದ ಕೃಷ್ಣಾಂಶನನ್ನು ಸ್ವರ್ಣವತಿಯು ಅಪಹರಿಸಿ ಕರೆದೊಯ್ದಿರುವಳು. ಆದುದ ರಿಂದ ಈಗ ನೀನು ನನ್ನೊಡನೆ ಮಯೂರನಗರಕ್ಕೆ ಹೊರಡು" ಎಂದು ಹೇಳಿದನು.

ಮಯಾ ಸಹ ಸಮಾಗಚ್ಛ ಮಯೂರನಗರಂ ಪ್ರತಿ ।
ಇತ್ಯುಕ್ತಸ್ತೇನ ಪೈಶಾಚೋ ನಟೈಃ ಪಂಚಸಹಸ್ರಕೈಃ ।
ತಯಾ ಸಹ ಯಯೌ ತೂರ್ಣಂ ಸಹುರೇಣ ಸಮನ್ವಿತಃ　　॥ ೬೫ ॥

ಇಂದುಲಶ್ಚ ತಥಾಽಽಹ್ಲಾದೋ ಬೋಧಿತೋ ವಿಷ್ಣುಮಾಯಯಾ ।
ತ್ರಿಲಕ್ಷಬಲಸಂಯುಕ್ತೋ ದೇವಸಿಂಹೇನ ಸಂಯುತಃ ।
ಮಯೂರನಗರಂ ಪ್ರಾಪ್ಯ ಮಕರಂದಮುಪಾಯಯೌ　　॥ ೬೬ ॥

ತದಾ ತು ಶೋಭನಾ ವೇಶ್ಯಾ ಸಹುರೇಣ ಬಲೈಸ್ಸಹ ।
ಚಕಾರ ಭೈರವೀಂ ಮಾಯಾಂ ಸರ್ವಶತ್ರುಭಯಂಕರೀಂ　　॥ ೬೭ ॥

ಸರ್ವತಶ್ಚೋತ್ಥಿತೋ ವಾತೋ ಮಹಾಮೇಘಸಮನ್ವಿತಃ ।
ಪತಂತಿ ಬಹುಧಾ ಚೋಲ್ಕಾಃ ಶರ್ಕರಾವರ್ಷಣೇ ರತಾಃ　　॥ ೬೮ ॥

---

೬೫. ಅನಂತರ ಪಿಶಾಚಾಧಿಪನಾದ ಮಹಾಮದನು ಪರಶಿವನ ಅಪ್ಪಣೆಯಂತೆ ಐದುಸಾವಿರ ನಟರು ಶೋಭಾವೇಶ್ಯೆ ಮತ್ತು ಸಹುರ ಇವರುಗಳೊಡನೆ ಹೊರಟು ಜಾಗ್ರತೆ ಮಯೂರನಗರಕ್ಕೆ ಬಂದು ಸೇರಿದನು.

೬೬. ಅದೇ ಸಮಯಕ್ಕೆ ಸರಿಯಾಗಿ ಇಂದುಲನೂ, ಆಹ್ಲಾದನೂ ಸಹ ವಿಷ್ಣುಮಾಯೆಯಿಂದ ಬೋಧಿತರಾಗಿ ಮೂರುಲಕ್ಷ ಸೇನೆಯೊಡನೆ ದೇವಸಿಂಹನನ್ನು ಜೊತೆಯಲ್ಲಿ ಕರೆದುಕೊಂಡು ಮಾಯೂರನಗರದಲ್ಲಿದ್ದ ಮಕರಂದನ ಬಳಿಗೆ ಬಂದು ಸೇರಿದರು.

೬೭. ಆಗ ಆ ವೇಶ್ಯೆಯು ಸಹುರ ಮತ್ತು ಅವನ ನಟಸೇನೆಯೊಡನೆ ಬಂದು ಸಕಲಶತ್ರುಗಳಿಗೂ ಭಯವನ್ನುಂಟುಮಾಡುವ ಭೈರವೀ ಮಾಯೆಯನ್ನು ಹರಡಿದಳು.

೬೮. ಈ ಮಾಯಾಪ್ರಭಾವದಿಂದ ಎಲ್ಲ ದಿಕ್ಕುಗಳಲ್ಲಿಯೂ ಬಿರುಗಾಳಿಯು ಎದ್ದು, ದೊಡ್ಡ ಮೇಘಗಳೊಡನೆ ಗರ್ಜಿಸುತ್ತಾ ಅನೇಕ ಉಲ್ಕಾಪಾತಗಳನ್ನೂ ಅನೇಕ ಬೆಣಚುಕಲ್ಲುಗಳ ಮಳೆಯನ್ನೂ ಸುರಿಸತೊಡಗಿತು.

ದೃಷ್ಟ್ವಾ ತಾಂ ಭೈರವೀಂ ಮಾಯಾಂ ತಮೋಭೂತಾಂ ಸಮಂತತಃ ।
ಮಕರಂದಶ್ಚ ಬಲವಾನ್ ರಥಸ್ಥಃ ಸ್ವಯಮಾಯಯೌ ॥ ೧೯ ॥

ಶನಿಭಲ್ಲೇನ ತಾಂ ಮಾಯಾಂ ಭಸ್ಮ ಕೃತ್ವಾ ಮಹಾಬಲಃ ।
ಗೃಹೀತ್ವಾ ಸಹುರಂ ಧೂರ್ತಂ ಸಬಲಂ ಗೇಹಮಾಪ್ತವಾನ್ ॥ ೨೦ ॥

ತದಾ ತು ಶೋಭನಾ ನಾರೀ ಕಾಮಮಾಯಾಂ ಚಕಾರ ಹ ।
ಬಹುಲಾಸ್ಸಂಸ್ಥಿತಾ ವೇಶ್ಯಾ ಗೀತನೃತ್ಯವಿಶಾರದಾಃ ॥ ೨೧ ॥

ಮೋಹಿತಾಃ ಕ್ಷತ್ರಿಯಾಃ ಸರ್ವೇ ಮುಮುಹುರ್ಲಾಸ್ಯದರ್ಶನಾತ್ ।
ದೇವಸಿಂಹಾಚ್ಚ ಕೃಷ್ಣಾಂಶಾದೃತೇ ತೇ ಜಡತಾಂ ಗತಾಃ ॥ ೨೨ ॥

---

೧೯. ಆಗ ಬಲಶಾಲಿಯಾದ ಮಕರಂದನು ಸರ್ವತ್ರ ಅಂಧಕಾರಮಯ ವಾಗಿರುವ ಈ ಭೈರವೀ ಮಾಯೆಯನ್ನು ನೋಡಿ, ತಾನೇ ರಥವನ್ನೇರಿಕೊಂಡು ಬಂದನು.

೨೦. ಮಹಾಬಲನಾದ ಅವನು ತನ್ನ ಶನಿಭಲ್ಲಿಯಿಂದ ಆ ಭೈರವೀ ಮಾಯೆ ಯನ್ನು ಭಸ್ಮಮಾಡಿ, ಧೂರ್ತನಾದ ಸಹುರನನ್ನು ಅವನ ಪರಿವಾರದೊಡನೆ ಬಂಧಿಸಿ ಹಿಡಿದುಕೊಂಡು ತನ್ನ ಮನೆಗೆ ಬಂದುಬಿಟ್ಟನು.

೨೧. ಆಗ ಆ ಶೋಭಾವೇಶ್ಯೆಯು ತಾನು ಪ್ರಯೋಗಿಸಿದ ಭೈರವೀ ಮಾಯೆಯು ನಾಶವಾದುದನ್ನು ನೋಡಿ ಪುನಃ ಕಾಮಮಾಯೆಯನ್ನು ಏರ್ಪಡಿಸಿದಳು. ಇದರಿಂದ ಸಂಗೀತ ನಾಟ್ಯಗಳಲ್ಲಿ ನಿಪುಣೆಯರಾದ ಅನೇಕ ವೇಶ್ಯೆಯರು ಉದ್ಭವಿಸಿದರು.

೨೨. ಆ ವೇಶ್ಯೆಯರೆಲ್ಲರೂ ಗೀತ ನರ್ತನಾದಿಗಳನ್ನು ಮಾಡುತ್ತಿರಲು ಮಕರಂದನ ಕಡೆಯ ಕ್ಷತ್ರಿಯರೆಲ್ಲರೂ ಅವರ ನಾಟ್ಯಚಾತುರ್ಯವನ್ನು ನೋಡತೊಡ ಗಿದರು. ಅವರಲ್ಲಿ ದೇವಸಿಂಹ, ಕೃಷ್ಣಾಂಶ ಇವರಿಬ್ಬರನ್ನು ಬಿಟ್ಟು ಮಿಕ್ಕವರೆಲ್ಲರೂ ನಾಟ್ಯಕ್ಕೆ ಮರುಳಾಗಿ ಜಡರಾಗಿ ನಿಂತರು.

ತದಾ ಸ್ವರ್ಣವತೀ ದೇವೀ ಕಾಮಾಕ್ಷೀಧ್ಯಾನತತ್ಪರಾ ।
ಪುನರುತ್ಥಾಪ್ಯ ತಾನ್ ಸರ್ವಾನ್ ಗೃಹೀತ್ವಾ ಶೋಭನಾಂ ಪುನಃ ।
ಮಯೂರಧ್ವಜಮಾಗಮ್ಯ ನಿಗಡೈಸ್ತಾನ್ಸಬಂಧ ಹ ॥ ೭೩ ॥

ಮಹಾಮದಸ್ತು ತಜ್ಜ್ಞಾತ್ವಾ ರುದ್ರಧ್ಯಾನಪರಾಯಣಃ ।
ಚಕಾರ ಶಾಂಬರೀಂ ಮಾಯಾಂ ನಾನಾಸತ್ತ್ವವಿಧಾಯಿನೀಂ ॥ ೭೪ ॥

ವ್ಯಾಘ್ರಾಃ ಸಿಂಹಾ ವರಾಹಾಶ್ಚ ವಾನರಾ ದಂಶಕಾ ನರಾಃ ।
ಸರ್ಪಾ ಗೃಧ್ರಾಸ್ತಥಾ ಕಾಕಾ ಭಕ್ಷಯಂತಿ ಸಮಂತತಃ ॥ ೭೫ ॥

ತದಾ ಸ್ವರ್ಣವತೀ ದೇವೀ ಕಾಮಾಕ್ಷೀಧ್ಯಾನತತ್ಪರಾ ।
ಸಸರ್ಜ ಸ್ಮರಜಾಂ ಮಾಯಾಂ ತನ್ಮಾಯಾಧ್ವಂಸಿನೀಂ ರಣೇ ॥ ೭೬ ॥

---

೭೩. ಆಗ ಸ್ವರ್ಣವತೀದೇವಿಯು ಕಾಮಾಕ್ಷೀದೇವಿಯ ಧ್ಯಾನಮಗ್ನಳಾಗಿ ಆ ದೇವಿಯ ಪ್ರಸಾದದಿಂದ ಜಡರಾಗಿದ್ದ ತನ್ನ ಕಡೆಯವರೆನ್ನೆಲ್ಲಾ ಪುನಃ ಎಚ್ಚರಗೊಳಿಸಿ, ಆ ಶೋಭಾವೇಶ್ಯೆಯನ್ನು ಪುನಃ ಸೆರೆಹಿಡಿದುಕೊಂಡು ಮಯೂರನ ಸಮೀಪಕ್ಕೆ ಕರೆತಂದು ಅವಳನ್ನು ಸಂಕೋಲೆಗಳಿಂದ ಬಂಧಿಸಿದಳು.

೭೪. ಆಗ ರುದ್ರಧ್ಯಾನಾಸಕ್ತನಾದ ಮಹಾಮದನು ಈ ವೃತ್ತಾಂತವನ್ನು ತಿಳಿದು ಅನೇಕ ಕ್ರೂರ ಮೃಗಗಳನ್ನು ಉತ್ಪತ್ತಿಮಾಡುವ ಶಾಂಬರೀ ಮಾಯೆಯನ್ನು ಪ್ರಯೋಗ ಮಾಡಿದನು.

೭೫. ಅದರಿಂದ ಹುಲಿ, ಸಿಂಹ, ಕಾಡುಹಂದಿ, ಕಚ್ಚುವನೊಣ, ಕಾಡುಮನುಷ್ಯರು, ಕ್ರೂರವಾದ ಸರ್ಪ, ಹದ್ದು ಮತ್ತು ಕಾಗೆ ಮುಂತಾದ ದುಷ್ಟಜಂತುಗಳು ಉದ್ಭವಿಸಿ ಎಲ್ಲರನ್ನೂ ಭಕ್ಷಣೆಮಾಡತೊಡಗಿದುವು.

೭೬. ಆಗ ಪುನಃ ಸ್ವರ್ಣವತೀದೇವಿಯು ಕಾಮಾಕ್ಷೀದೇವಿಯನ್ನು ಧ್ಯಾನ ಮಾಡಿ ಶಾಂಬರೀ ಮಾಯಾಧ್ವಂಸಕವಾದ ಸ್ಮರಜಾ ಎಂಬ ಮಾಯೆಯನ್ನು ತತ್ಕ್ಷಣವೇ ಪ್ರಯೋಗ ಮಾಡಿದಳು.

ತಯಾ ತಾಕ್ಷ್ಯಾಸ್ಸಮುತ್ಪನ್ನಾಃ ಶರಭಾಶ್ಚ ಮಹಾಬಲಾಃ ।
ಸಿಂಹಾದೀನ್ ಭಕ್ಷಯಾಮಾಸುರ್ಜಘ್ನುಶ್ಚೈವ ಸಹಸ್ರಶಃ ॥ ೭೭ ॥

ಹಾಹಾಭೂತೇ ಚ ತತ್ಸೈನ್ಯೇ ದಿಕ್ಷು ವಿದ್ರಾವಿತೇ ಸತಿ ।
ಶೋಭನಾ ಚಾಭ್ಯಭವದ್ದಾಸೀ ಸ್ವರ್ಣವತ್ಯಾಶ್ಚ ಮಾಯಿನೀ ॥ ೭೮ ॥

ಸಹುರಸ್ತೈರ್ನಟೈಸ್ಸಾರ್ಧಂ ಚಾಹ್ಲಾದೇನೈವ ಚೂರ್ಣಿತಃ ।
ತೇಷಾಂ ರುಧಿರಕುಂಭಾಶ್ಚ ಭೂಮಿಮಧ್ಯೇ ಸಮಾರುಹನ್ ॥ ೭೯ ॥

ಏವಂ ಚ ಮುನಿಶಾರ್ದೂಲ ಚತುರ್ಮಾಸ್ಯಭವದ್ರಣಃ ।
ವೈಶಾಖೇ ಮಾಸಿ ಸಂಪ್ರಾಪ್ತೇ ತೇ ವೀರಾ ಗೇಹಮಾಯಯುಃ ।
ಇತಿ ತೇ ಕಥಿತಂ ವಿಪ್ರ ಚಾನ್ಯತ್ಕಿಂ ಶ್ರೋತುಮಿಚ್ಛಸಿ ॥ ೮೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಅಷ್ಟಾವಿಂಶೋಽಧ್ಯಾಯಃ

---

೭೭. ಈ ಮಾಯೆಯಿಂದ ಗಂಡಭೇರುಂಡಗಳು, ಶರಭಗಳು, ಹುಟ್ಟಿ ಸಿಂಹ ಮೊದಲಾದ ಸಾವಿರಾರು ಕ್ರೂರಮೃಗಗಳನ್ನೆಲ್ಲಾ ಕೊಂದು ತಿಂದುಹಾಕತೊಡಗಿದುವು.

೭೮. ಹೀಗೆ ಮಹಾಮದನ ಸೇನೆಯೆಲ್ಲವೂ ಹಾಹಾಕಾರಹೊಂದಿ ದಿಕ್ಕುಕ ದಿಕ್ಕಿಗೆ ಓಡಿಹೋಗುತ್ತಿರಲು ಮಾಯಾವಿಯಾದ ಶೋಭಾವೇಶ್ಯೆಯು ಸ್ವರ್ಣವತಿಗೆ ಶರಣುಹೊಕ್ಕು ದಾಸಿಯಾದಳು.

೭೯. ಆ ಸಹುರನನ್ನೂ ನಟರುಗಳನ್ನೂ ಆಹ್ಲಾದನು ಧ್ವಂಸಮಾಡಿಬಿಟ್ಟನು. ಇವರುಗಳ ರಕ್ತಪ್ರವಾಹವು ಭೂಮಿಯಲ್ಲೆಲ್ಲಾ ಚೆಲ್ಲಾಡಿತು.

೮೦. ಎಲೈ ಮುನಿಶ್ರೇಷ್ಠನಾದ ಶೌನಕನೇ! ಈರೀತಿಯಾಗಿ ನಾಲ್ಕುತಿಂಗಳ ಕಾಲ ಯುದ್ಧನಡೆದು ವೈಶಾಖಮಾಸವು ಪ್ರಾಪ್ತವಾಯಿತು. ಆಹ್ಲಾದ ಮೊದಲಾದ ವೀರರು ತಮ್ಮ ತಮ್ಮ ಮನೆಗೆ ಹೋದರು. " ಎಲೈ ವಿಪ್ರನೇ! ಈರೀತಿ ಕೃಷ್ಣಾಂಶನ ಚರಿತ್ರೆಯನ್ನು ನಿನಗೆ ಹೇಳಿದುದಾಯಿತು. ಇದಲ್ಲದೆ ಇನ್ನೇನನ್ನು ಕೇಳಬೇಕೆಂದು ನಿನಗೆ ಅಭಿಲಾಷೆಯಿದೆ? ಹೇಳು. ಅದನ್ನು ತಿಳಿಸುವೆನು " ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಇಪ್ಪತ್ತೆಂಟನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ಏಕೋನತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ಕಿನ್ನರೀ ನಾಮ ಯಾ ಕನ್ಯಾ ತ್ವಯಾ ಪ್ರೋಕ್ತಾ ಮಹಾಮುನೇ ।
ಕುತ್ರ ಸ್ಥಾನೇ ಕಥಂ ಜಾತಾ ತತ್ಸರ್ವಂ ಕೃಪಯಾ ವದ ॥ ೧ ॥

॥ ಸೂತ ಉವಾಚ ॥

ಪುರಾ ಚೈತ್ರರಥೇ ದೇಶೇ ನಾನಾಜನನಿಷೇವಿತೇ ।
ವಸಂತಸಮಯೇ ಪ್ರಾಪ್ತೇ ಕ್ರೀಡಂತ್ಯತ್ರ ದಿವೌಕಸಃ ॥ ೨ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯ

೧. ಋಷಿಗಳು ಪ್ರಶ್ನೆ ಮಾಡುತ್ತಾರೆ—"ಎಲೈ ಸೂತಮಹರ್ಷಿಯೇ! ನೀನು ಹೇಳಿದ ಕಿನ್ನರಿಎಂಬ ಕನ್ಯೆಯು ಯಾರು? ಅವಳು ಎಲ್ಲಿ ಹುಟ್ಟಿದಳು.? ಅವಳ ಉತ್ಪತ್ತಿಗೆ ಕಾರಣವೇನು? ಇವೆಲ್ಲವನ್ನೂ ದಯೆಯಿಟ್ಟು ನಮಗೆ ತಿಳಿಸು" ಎಂದು ಕೇಳಿದರು.

೨. ಸೂತಮುನಿವರ್ಯನು ಹೇಳುತ್ತಾನೆ.—ಸದಾ ಅನೇಕಜನನಿಬಿಡವಾದ ಚೈತ್ರರಥವೆಂಬ ಉದ್ಯಾನಪ್ರದೇಶದಲ್ಲಿ ವಸಂತಸಮಯ ಪ್ರಾಪ್ತವಾದಾಗ ದೇವತೆಗಳು ವಿಹಾರ ಮಾಡುತ್ತಿದ್ದರು.

ಮಂಜುಘೋಷಾ ಚ ಸ್ವರ್ವೇಶ್ಯಾ ಶುಕಸ್ಥಾನೇ ಸಮಾಗತಾ ।
ದೃಷ್ಟ್ವಾ ತಂ ಸುಂದರಂ ಬಾಲಂ ಮೋಹನಾಯ ಸಮುದ್ಯತಾ ॥ ೩ ॥

ಗೀತನೃತ್ಯಾದಿರಾಗಾಂಶ್ಚ ಕೃತ್ವಾ ಸಾ ಕಾಮವಿಹ್ವಲಾ ।
ಪ್ರಾಂಜಲಿಂ ಪ್ರಣತಾ ಬದ್ಧ್ವಾ ಪುನಸ್ತುಷ್ಟಾವ ತಂ ಮುನಿಂ ॥ ೪ ॥

ತದಾ ಶುಕಸ್ತು ಭಗವಾನ್ ಪದ್ಯಂ ಸ್ತುತಿಮಯಂ ಶುಭಂ ।
ಶ್ರುತ್ವಾ ಪ್ರಸನ್ನಹೃದಯೋ ವರಂ ಬ್ರೂಹೀತಿ ಸೋಽಬ್ರವೀತ್ ॥ ೫ ॥

ಸಾ ತು ಶ್ರುತ್ವಾ ಶುಭಂ ವಾಕ್ಯಂ ಪ್ರೋವಾಚ ಶ್ಲಕ್ಷ್ಣಯಾ ಗಿರಾ ।
ಪತಿರ್ಮೇ ಭವ ಹೇ ನಾಥ ಶರಣಾಗತವತ್ಸಲ ॥ ೬ ॥

ಇತಿ ಶ್ರುತ್ವಾ ತು ವಚನಂ ತಥಾ ಕೃತ್ವಾ ತಯಾ ಸಹ ।
ಸ ರೇಮೇ ಮುನಿಶಾರ್ದೂಲಃ ಶುಕೋ ವಿಜ್ಞಾನಕೋವಿದಃ ॥ ೭ ॥

---

೩. ಆಗ ಮಂಜುಘೋಷೆಯೆಂಬ ಅಪ್ಸರಸೆಯು ಶುಕಮಹರ್ಷಿಗಳಿದ್ದ ಸ್ಥಳಕ್ಕೆ ಬಂದು ಸುಂದರನೂ, ಬಾಲಸ್ವರೂಪನೂ ಆದ ಅವನನ್ನು ನೋಡಿ ಮೋಹಗೊಂಡು ಅವನ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದಳು.

೪. ಅನೇಕ ರಾಗಗಳಿಂದ ಅಭಿನಯಿಸುವ ಗೀತ ನರ್ತನ ಮೊದಲಾದುವುಗಳಿಂದ ಕೂಡಿ ಕಾಮವಿಹ್ವಲೆಯಾದ ಆ ಮಂಜುಘೋಷೆಯು ಶುಕಮಹರ್ಷಿಯ ಮುಂದೆ ಕೈಮುಗಿದು ನಮಸ್ಕರಿಸಿ ಬಾರಿಬಾರಿಗೂ ಅವನನ್ನು ಸ್ತುತಿಸಿದಳು.

೫. ಆಗ ಭಗವಂತನಾದ ಶುಕಮಹರ್ಷಿಯು ಪದ್ಯರೂಪವೂ, ಸ್ತೋತ್ರಮಯವೂ, ಮಂಗಳಕರವೂ ಆದ ಅವಳ ಮಾತನ್ನು ಕೇಳಿ ಪ್ರಸನ್ನಹೃದಯನಾಗಿ ಬೇಕಾದ ವರವನ್ನು ಕೇಳೆಂದು ಅವಳಿಗೆ ಹೇಳಿದನು.

೬. ಶುಕಮಹರ್ಷಿಯ ಶುಭಕರವಾದ ಈ ಮಾತನ್ನು ಕೇಳಿ ಮಂಜುಘೋಷೆಯು, ಶುಕಮಹರ್ಷಿಯನ್ನು ಕುರಿತು ಮೃದುವಾದ ಮಾತುಗಳಿಂದ "ಶರಣಾಗತವತ್ಸಲನಾದ ಸ್ವಾಮಿಯೇ ! ನೀನೇ ನನಗೆ ಪತಿಯಾಗು " ಎಂದು ಕೇಳಿದಳು.

೭. ಮುನಿಶ್ರೇಷ್ಠನೂ, ಜ್ಞಾನಿಗಳಲ್ಲಿ ನಿಪುಣನೂ ಆದ ಶುಕಮಹರ್ಷಿಯು ಈ ಮಾತನ್ನು ಕೇಳಿ "ಹಾಗೆಯೇ ಆಗಲಿ" ಎಂದು ಹೇಳಿ ಆಕೆಯೊಡನೆ ಕ್ರೀಡಿಸಿದನು.

ತಯೋಸ್ಸಕಾಶಾತ್ಸಂಜಜ್ಞೇ ಮುನಿರ್ನಾಮ ಸುತೋಽನಯೋಃ ।
ತಪಶ್ಚಕಾರ ಬಲವಾನ್ ದ್ವಾದಶಾಬ್ದಂ ಪ್ರಯತ್ನತಃ ॥ ೮ ॥

ತಸ್ಮೈ ದದೌ ತದಾ ಪತ್ನೀಂ ಸ್ವರ್ಣದೇವಸ್ಯ ವೈ ಸುತಾಂ ।
ಕುಬೇರೋ ರುದ್ರಸಹಿತಃ ಸಮುನಿಸ್ತು ಮುದಾನ್ವಿತಃ ॥ ೯ ॥

ತಯಾ ರೇಮೇ ಪ್ರಸನ್ನಾತ್ಮಾ ತಯೋರ್ಜಾತಾ ಸುತೋತ್ತಮಾ ।
ಕಿನ್ನರೀ ನಾಮ ವಿಖ್ಯಾತಾ ಹಿಮತುಂಗೇ ಸಮುದ್ಭವಾ ।
ತಪಶ್ಚಕಾರ ಸಾ ದೇವೀ ರೂಪಯೌವನಶಾಲಿನೀ ॥ ೧೦ ॥

ತದಾ ಪ್ರಸನ್ನೋ ಭಗವಾಞ್ಛಂಕರೋ ಲೋಕಶಂಕರಃ ।
ಮಕರಂದಾಯ ಧೀರಾಯ ದದೌ ತಾಂ ರುಚಿರಾನನಾಂ ॥ ೧೧ ॥

---

೮. ಇವರ ಸಮಾಗಮದಿಂದ ಮುನಿಯೆಂಬ ಹೆಸರುಳ್ಳ ಒಬ್ಬ ಮಗನು ಜನಿಸಿದನು. ಆ ಮಗನು ಬಲಶಾಲಿಯಾಗಿ ಹನ್ನೆರಡು ವರ್ಷಕಾಲ ಪ್ರಯತ್ನ ಪೂರ್ವಕವಾಗಿ ತಪಸ್ಸುಮಾಡಿದನು

೯. ಅನಂತರ ಕುಬೇರನು ಈಶಾನನೊಡನೆ ಬಂದು ಸ್ವರ್ಣದೇವನ ಮಗಳನ್ನು ಆ ಮುನಿಯ ಪತ್ನಿಯನ್ನಾಗಿಸಲು ವಿವಾಹಮಾಡಿದನು. ಅದರಿಂದ ಮುನಿಯು ಸಂತೋಷಗೊಂಡನು.

೧೦. ಬಳಿಕ ನಿರ್ಮಲಾಂತಃಕರಣನಾದ ಆ ಮುನಿಯು ತನ್ನ ಪತ್ನಿಯೊಡನೆ ಹಿಮತುಂಗ ಎಂಬ ಸ್ಥಳದಲ್ಲಿ ವಿಹರಿಸುತ್ತಿದ್ದನು ಈ ದಂಪತಿಗಳಿಗೆ ಕಿನ್ನರಿಯೆಂಬ ಹೆಸರಿನಿಂದ ಪ್ರಸಿದ್ಧಳೂ ಉತ್ತಮಳೂ ಆದ ಮಗಳು ಹುಟ್ಟಿದಳು. ರೂಪಯೌವನ ಶಾಲಿನಿಯಾದ ಈ ಕಿನ್ನರಿಯು ಅನಂತರ ತಪಸ್ಸುಮಾಡತೊಡಗಿದಳು.

೧೧. ಆಗ ಲೋಕಕಲ್ಯಾಣಕಾರಕನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಪರಮೇಶ್ವರನು ಆಕೆಗೆ ಪ್ರಸನ್ನನಾಗಿ ತೇಜಸ್ವಿನಿಯಾದ ಆ ಕಿನ್ನರಿಯನ್ನು ವೀರನಾದ ಮಕರಂದನಿಗೆ ವಿವಾಹಮಾಡಿಕೊಟ್ಟನು.

ಮುನಿಸ್ತು ಶಂಕರಂ ಪ್ರಾಹ ದೇವದೇವ ನಮೋಽಸ್ತು ತೇ ।
ಮತ್ಸುತಾಯೈ ವರಂ ದೇಹಿ ರಾಷ್ಟ್ರವರ್ಧನಮುತ್ತಮಂ ॥ ೧೨ ॥

ಇತಿ ಶ್ರುತ್ವಾ ಶಿವಃ ಪ್ರಾಹ ಗುರುಂಡಾಂತೇ ಚ ಭೂತಲೇ ।
ಮಧ್ಯದೇಶೇ ಚ ತೇ ರಾಷ್ಟ್ರಂ ಭವಿಷ್ಯತಿ ಸುಖಪ್ರದಂ ॥ ೧೩ ॥

ತ್ರಿಂಶದಬ್ದಪ್ರಮಾಣೇನ ತತ್ಪಶ್ಚಾತ್ ಕ್ಷಯಮೇಷ್ಯತಿ ।
ಇತಿ ಶ್ರುತ್ವಾ ತು ಸ ಮುನಿಃ ಹಿಮತುಂಗನಿವಾಸಕಃ ।
ಮಕರಂದೇನ ಸಹಿತಃ ತತ್ರ ವಾಸಮಕಾರಯತ್ ॥ ೧೪ ॥

ಇತಿ ತೇ ಕಥಿತಂ ವಿಪ್ರ ಪುನಃ ಶೃಣು ಕಥಾಂ ಶುಭಾಂ ।
ಊನತ್ರಿಂಶಾಬ್ಧಕಂ ಪ್ರಾಪ್ತೇ ಕೃಷ್ಣಾಂಶೇ ರಣಕಾರಣಂ ॥ ೧೫ ॥

---

೧೨. ಅದೇ ಸಮಯದಲ್ಲಿ ಮುನಿಯು ಪರಮೇಶ್ವರನನ್ನು ಕುರಿತು "ಎಲೈ ದೇವದೇವನೇ! ನಿನಗೆ ನಮಸ್ಕಾರ. ನಮ್ಮ ಮಗಳಾದ ಕಿನ್ನರಿಗೆ ರಾಜ್ಯವನ್ನು ವಿಸ್ತರಿಸುವ ಸಾಮರ್ಥ್ಯವುಳ್ಳ ಶ್ರೇಷ್ಠವಾದ ವರನನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿದನು.

೧೩. ಈ ಮಾತನ್ನು ಕೇಳಿ ಪರಮೇಶ್ವರನು ಆ ಮುನಿಯನ್ನು ಕುರಿತು "ಎಲೈ ಮುನಿಯೇ! ಗುರುಂಡ ಎಂಬ ದೇಶದ ಕೊನೆಯಲ್ಲಿರುವ ಮಧ್ಯದೇಶಗಳಲ್ಲಿ ನಿನಗೆ ಸುಖಕರವಾದ ರಾಜ್ಯವು ಏರ್ಪಡುವುದು."

೧೪. ಆ ರಾಜ್ಯವು ಮೂವತ್ತು ವರ್ಷಗಳಕಾಲ ನಿನ್ನ ಅಧೀನದಲ್ಲಿದ್ದು ಬಳಿಕ ನಾಶಹೊಂದುವುದು" ಎಂದು ಹೇಳಿದನು. ಈ ಮಾತನ್ನು ಕೇಳಿ ಹಿಮತುಂಗದಲ್ಲಿ ವಾಸಿಸುತ್ತಿದ್ದ ಆ ಮುನಿಯು ತನ್ನ ಅಳಿಯನಾದ ಮಕರಂದನೊಡನೆ ಹೊರಟು ಆ ಮಧ್ಯದೇಶಕ್ಕೆ ಬಂದು ಅಲ್ಲಿ ವಾಸಮಾಡತೊಡಗಿದನು.

೧೫. ಎಲೈ ಬ್ರಾಹ್ಮಣನೇ! ಈರೀತಿ ಕಿನ್ನರಿಯ ಕಥೆಯನ್ನು ನಿನಗೆ ಹೇಳಿದುದಾಯಿತು. ಕೃಷ್ಣಾಂಶನಿಗೆ ಇಪ್ಪತ್ತೊಂಬತ್ತು ವರ್ಷವಾಗುತ್ತಲೇ ಪುನಃ ಯುದ್ಧ ಮಾಡಬೇಕಾಗಿ ಬಂದ ಕಾರಣದ ವಿಚಾರವನ್ನು ತಿಳಿಸುವೆನು; ಎಂದು ಮುಂದೆ ಹೇಳುವಂತೆ ಹೇಳಿದನು.

ನೇತ್ರಪಾಲಸ್ಯ ನಗರಂ ನಾನಾಧಾತುವಿಚಿತ್ರಿತಂ ।
ಮತ್ವಾ ನ್ಯೂನಪತಿರ್ಬೌದ್ಧೋ ರುರೋಧ ನಗರಂ ಶುಭಂ ॥ ೧೬ ॥

ಸಪ್ತಲಕ್ಷಯುತೋ ರಾಜಾ ಬೌದ್ಧಸಿಂಹೋ ಮಹಾಬಲಃ ।
ತ್ರಿಲಕ್ಷಬಲಸಂಯುಕ್ತೈಸ್ಸಾರ್ಧಂ ಯುದ್ಧಮಚೀಕರತ್ ॥ ೧೭ ॥

ಸಪ್ತಾಽಹೋರಾತ್ರಮಭವತ್ಸೇನಾಯುದ್ಧಂ ಭಯಾನಕಂ ।
ಯೋಗಸಿಂಹೋ ಭೋಗಸಿಂಹೋ ವಿಜಯಶ್ಚ ಮಹಾಬಲಃ ॥ ೧೮ ॥

ಜಘಾನ ಶಾತ್ರವೀಂ ಸೇನಾಂ ಬೌದ್ಧಸಿಂಹೇನ ಪಾಲಿತಾಂ ।
ಏತಸ್ಮಿನ್ನಂತರೇ ಪ್ರಾಪ್ತಾಃ ಶ್ಯಾಮಜಾಪಕದೇಶಗಾಃ ॥ ೧೯ ॥

ಬೌದ್ಧಾ ಮಾಯಾವಿನಸ್ಸರ್ವೇ ಲೋಕಮಾನ್ಯಪ್ರಪೂಜಕಾಃ ।
ಪುನರ್ಜಾತಂ ಮಹದ್ಯುದ್ಧಂ ಮಾಸಮೇಕಂ ತಯೋಸ್ತದಾ ॥ ೨೦ ॥

---

೧೬. ನೇತ್ರಪಾಲರಾಜನ ರಾಜಧಾನಿಯು ಅನೇಕ ಧಾತುವಸ್ತುಗಳಿಂದ ಚಿತ್ರ ವಿಚಿತ್ರವಾಗಿರುವುದೆಂದು ತಿಳಿದು ಸುಂದರವಾದ ಆ ಪಟ್ಟಣವನ್ನು ನ್ಯೂನಪತಿಯೆಂಬ ಬೌದ್ಧನು ಬಂದು ಮುತ್ತಿದನು.

೧೭. ಮಹಾಬಲನೂ, ಬೌದ್ಧಶ್ರೇಷ್ಠನೂ ಆದ ನ್ಯೂನಪತಿರಾಜನು ತನ್ನ ಏಳುಲಕ್ಷ ಸೈನ್ಯದೊಡನೆ ಬಂದು ನೇತ್ರಸಿಂಹನ ಮೂರುಲಕ್ಷ ಸೇನೆಯನ್ನು ಎದುರಿಸಿ ಯುದ್ಧಮಾಡಿದನು.

೧೮. ಹೀಗೆ ಎರಡು ಕಡೆಯ ಸೇನೆಯವರಿಗೂ ಏಳುದಿನ ಹಗಲೂ, ರಾತ್ರೆ ಎಡೆಬಿಡದೆ ಭಯಂಕರವಾದ ಯುದ್ಧ ನಡೆಯಿತು. ಈ ಯೋಗಸಿಂಹನೂ, ಭೋಗಸಿಂಹನೂ ಮಹಾಬಲಶಾಲಿಯಾದ ವಿಜಯನೂ ಸಹ ಬೌದ್ಧಶ್ರೇಷ್ಠನಾದ ನ್ಯೂನಪತಿಯ ರಕ್ಷಣೆಯಲ್ಲಿದ್ದ ಸೈನ್ಯವನ್ನು ಧ್ವಂಸಮಾಡಿದರು.

೧೯-೨೦. ಇಷ್ಟರೊಳಗೆ ಲೋಕಮಾನ್ಯ ಪದಾರಾಧಕರೂ ಮತ್ತು ಮಾಯಾವಿಗಳೂ ಆದ ಶಾಮ (ಸಯಾಂ) ಜಾಪಕ (ಜಪಾನ್) ದೇಶದ ಎಲ್ಲಾ ಬೌದ್ಧರೂ ಬೌದ್ಧ ಭೂಪನ ಸಹಾಯಕ್ಕೆ ಬಂದು ಪುನಃ ಒಂದುತಿಂಗಳಕಾಲ ಘೋರಯುದ್ಧಮಾಡಿದರು.

ನೇತ್ರಪಾಲಾಜ್ಞಯಾ ಸರ್ವೇ ಕೃಷ್ಣಾಂಶಾದ್ಯಾಃ ಸಮಾಗತಾಃ ।
ಕೃಷ್ಣಾಂಶೋ ಬಿಂದುಲಾರೂಢೋ ದೇವಃ ಸ್ವಹಯಸಂಸ್ಥಿತಃ ॥ ೨೦ ॥

ಇಂದುಲಶ್ಚ ಕರಾಲಾಶ್ವೇ ಮಂಡಲೀಕೋ ಗಜೇ ಸ್ಥಿತಃ ।
ಗೌತಮಶ್ಚ ಸಮಾಯಾತೋ ಹರಿನಾಗರಸಂಸ್ಥಿತಃ ॥ ೨೨ ॥

ತಾಲನಶ್ಚ ಸಮಾಯಾತಃ ಸಿಂಹಿನ್ಯುಪರಿ ಸಂಸ್ಥಿತಃ ।
ಧಾನ್ಯಪಾಲಸ್ತ್ರೈಲ್ಯಕಾರೋ ಯುಯುತ್ಸೋರಂಶಸಂಭವಃ ॥ ೨೩ ॥

ಲಲ್ಲಸಿಂಹಶ್ಚ ಬಲವಾನ್ ಕುಂತಿಭೋಜಾಂಶಸಂಭವಃ ।
ತಾಂಬೂಲೀಯಕಜಾತೀಯೋ ಲಕ್ಷಣಾನುಜ್ಞಯಾ ಯಯೌ ॥ ೨೪ ॥

ತದಾ ತು ನೇತ್ರಸಿಂಹಶ್ಚ ಸಪ್ತಲಕ್ಷಬಲೈರ್ವೃತಃ ।
ಪಾಲಿತಶ್ಚಾಷ್ಟಭಿರ್ವೀರೈಸ್ತೇಷಾಂ ನಾಶಾಯ ಚಾಯಯೌ ॥ ೨೫ ॥

---

೨೧ ಇತ್ತ ನೇತ್ರಪಾಲ ಮಹಾರಾಜನ ಆಶಯದಂತೆ ಕೃಷ್ಣಾಂಶ ಮೊದಲಾದವರೆಲ್ಲರೂ ಆ ಯುದ್ಧಕ್ಕೆ ಬಂದಿದ್ದರು. ಆಗ ಕೃಷ್ಣಾಂಶನು ಬಿಂದುಲವೆಂಬ ಅಶ್ವವನ್ನೇರಿದನು. ದೇವಸಿಂಹನು ತನ್ನ ಕುದುರೆಯ ಮೇಲೆ ಏರಿದನು.

೨೨. ಇಂದುಲನು ಕರಾಲವೆಂಬ ಅಶ್ವವನ್ನೂ, ಮಂಡಲೀಕನು ತನ್ನ ಆನೆಯನ್ನೂ ಏರಿದರು. ಗೌತಮವಂಶಜನಾದ ಜನನಾಯಕನು ಹರಿನಾಗರದ ಮೇಲೆ ಕುಳಿತು ಬಂದನು.

೨೩. ತಾಲನನು ಸಿಂಹಿನಿಯ ಮೇಲೆ ಕುಳಿತು ಬಂದಿದ್ದನು. ಯುಯುತ್ಸುವಿನ ಅಂಶಸಂಭೂತನೂ ತ್ರೈಲ್ಯಕಾರವಂಶಜನೂ ಆದ ಧಾನ್ಯಪಾಲನೂ ಇವನ ಸಹಾಯಕ್ಕೆ ಬಂದಿದ್ದನು.

೨೪. ತಾಂಬೂಲೀಯಕಜಾತೀಯನೂ ಬಲಶಾಲಿಯೂ ಕುಂತಿಭೋಜಾಂಶಸಂಭೂತನೂ ಆದ ಲಲ್ಲಸಿಂಹನು ಲಕ್ಷಣನ ಅಪ್ಪಣೆಯ ಪ್ರಕಾರ ಆ ಯುದ್ಧಕ್ಕೆ ಬಂದಿದ್ದನು.

೨೫. ಆಗ ನೇತ್ರಸಿಂಹನು ಒಟ್ಟು ಏಳುಲಕ್ಷ ಸೈನ್ಯದಿಂದ ಪರಿವೃತನಾಗಿ ಕೃಷ್ಣಾಂಶ ಮೊದಲಾದ ಎಂಟುಮಂದಿ ವೀರರಾದ ಅಂಗರಕ್ಷಕರಿಂದ ರಕ್ಷಣೆಹೊಂದುತ್ತಾ ಆ ಬೌದ್ಧರನ್ನು ಧ್ವಂಸ ಮಾಡುವುದಕ್ಕಾಗಿ ಹೊರಟನು.

ಭಯಭೀತಾಶ್ಚ ತೇ ಬೌದ್ಧಾಸ್ತ್ಯಕ್ತ್ವಾ ದೇಶಂ ಸಮಂತತಃ ।
ಚೀನದೇಶಮುಪಾಗಮ್ಯ ಯುದ್ಧಭೂಮಿಮಕಾರಯನ್ ॥ ೨೬ ॥

ತದನು ಪ್ರಯಯುಸ್ತೇ ವೈ ಹೂಹಾನದಮುಪಸ್ಥಿತಾಃ ।
ಮಾಘಮಾಸೇ ತು ಸಂಪ್ರಾಪ್ತೇ ಪುನರ್ಯುದ್ಧಮವರ್ತತ ॥ ೨೭ ॥

ಶ್ಯಾಮದೇಶೋದ್ಭವಾ ಲಕ್ಷಂ ತಥಾ ಲಕ್ಷಂ ಚ ಜಾಪಕಾಃ ।
ದಶಲಕ್ಷಾಶ್ಚೀನದೇಶ್ಯಾ ಯುದ್ಧಾಯ ಸಮುಪಸ್ಥಿತಾಃ ॥ ೨೮ ॥

ಕೃಷ್ಣಾಂಶೋ ಲಕ್ಷಸೇನಾಢ್ಯೋ ದೇವೋ ಲಕ್ಷಸಮನ್ವಿತಃ ।
ನೇತ್ರಪಾಲಶ್ಚ ಲಕ್ಷಾಢ್ಯೋ ಯೋಗಭೋಗಸಮನ್ವಿತಃ ॥ ೨೯ ॥

ಮಂಡಲೀಕಶ್ಚೇಂದುಲೇನ ಲಕ್ಷಸೈನ್ಯಸಮನ್ವಿತಃ ।
ಧಾನ್ಯಪಾಲೋ ಲಲ್ಲಸಿಂಹೋ ಲಕ್ಷಸೈನ್ಯಾನ್ವಿತಃ ಸ್ಥಿತಃ ॥ ೩೦ ॥

---

೨೬ ಇದನ್ನು ನೋಡಿ ಆ ಬೌದ್ಧರೆಲ್ಲರೂ ಭಯದಿಂದ ಹೆದರಿ ಈ ದೇಶವನ್ನು ಬಿಟ್ಟು ಚೀನಾದೇಶಕ್ಕೆ ಓಡಿಹೋಗಿ ಅಲ್ಲಿ ಯುದ್ಧಮಾಡಲು ಉಪಕ್ರಮಿಸಿದರು.

೨೭ ಈ ನೇತ್ರಪಾಲನ ಕಡೆಯವರೂ ಸಹ ಅವರನ್ನು ಬೆನ್ನಟ್ಟಿಕೊಂಡು ಹೂಹಾ (ಈಗಿನ ಹೊಯಾಂಗ್‌ಹೋ ಇರಬಹುದು) ನದದ ಸಮೀಪಕ್ಕೆ ಹೋದರು. ಮಾಘ ಮಾಸದಲ್ಲಿ ಪುನಃ ಎರಡು ಪಕ್ಷದವರಿಗೂ ಘೋರಯುದ್ಧವು ಉಪಕ್ರಮವಾಯಿತು.

೨೮. ಆಕಡೆ ಬೌದ್ಧರಾಜ ನ್ಯೂಸಪತಿಯ ಸಹಾಯಕ್ಕೆ ಸಯಾಮದೇಶೀಯರಾದ ಒಂದುಲಕ್ಷ ಸೈನಿಕರೂ ಒಂದುಲಕ್ಷ ಜಾಪಾಕ್ ಸೈನಿಕರೂ ಮತ್ತು ಹತ್ತುಲಕ್ಷ ಚೈನಾ ಸೈನಿಕರೂ ಸಹ ಯುದ್ಧಕ್ಕೆ ಬಂದಿದ್ದರು.

೨೯. ಇತ್ತ ಕೃಷ್ಣಾಂಶನು ಒಂದುಲಕ್ಷ ಸೇನೆಗೆ ಅಧಿಪತಿಯಾಗಿ ನಿಂತು ನಡೆಯಿಸಿದನು. ದೇವಸಿಂಹನು ಒಂದುಲಕ್ಷ ಸೇನೆಗೆ ಅಧಿಪತಿಯಾಗಿ ಸಾಗಿದನು. ನೇತ್ರಪಾಲ ಮಹಾರಾಜನು ತಾನೇ ಒಂದುಲಕ್ಷ ಸೇನೆಯ ಆಧಿಪತ್ಯವನ್ನು ವಹಿಸಿ ಯೋಗಸಿಂಹ, ಭೋಗಸಿಂಹ ಇವರ ಸಮೇತನಾಗಿ ಯುದ್ಧಕ್ಕೆ ಬಂದಿದ್ದನು.

೩೦. ಮಂಡಲಿಕನೆಂಬುವನು ಇಂದುಲನ ಜೊತೆಯಲ್ಲಿರುತ್ತಾ ಲಕ್ಷಸೇನೆಯ ಆಧಿಪತ್ಯ ವಹಿಸಿದ್ದನು. ಧಾನ್ಯಪಾಲನೂ ಲಲ್ಲಸಿಂಹನೂ ಒಂದೊಂದುಲಕ್ಷ ಸೈನ್ಯವನ್ನು ನಡೆಸುತ್ತಿದ್ದರು.

ಜನನಾಯಕ ಏವಾಪಿ ಲಕ್ಷಸೈನ್ಯಯುತಃ ಸ್ಥಿತಃ ।
ತಾಲನೋ ಲಕ್ಷಸೇನಾಢ್ಯೋ ಯುದ್ಧಾಯ ಸಮುಪಾಗತಃ ॥ ೩೧ ॥

ತತ್ರ ಯುದ್ಧಮಭೂದ್ಘೋರಂ ಬೌದ್ಧಾನಾಮಾರ್ಯಕೈಃ ಸಹ ।
ಪಕ್ಷಮಾತ್ರಂ ಮುನಿಶ್ರೇಷ್ಠ ಯಮಲೋಕವಿವರ್ಧನಂ ॥ ೩೨ ॥

ಸಪ್ತ ಲಕ್ಷಂ ಹತಾ ಬೌದ್ಧಾ ದ್ವಿಲಕ್ಷಂ ಚಾರ್ಯದೇಶಜಾಃ ।
ತತಸ್ತೇ ಭಯಭೀತಾಶ್ಚ ತ್ಯಕ್ತ್ವಾ ಯುದ್ಧಂ ಗೃಹಂ ಯಯುಃ ॥ ೩೩ ॥

ಕೃತ್ವಾ ದಾರುಮಯೀಂ ಸೇನಾಂ ಕಲಯಂತ್ರಪ್ರಭಾವತಃ ।
ಗಜಾಶ್ಚ ದಶಸಾಹಸ್ರಾಃ ಸಶೂರಾಃ ಕಾಷ್ಠನಿರ್ಮಿತಾಃ ॥ ೩೪ ॥

ಏಕಲಕ್ಷಂ ಹಯಾರೂಢಾ ದಾರುಪಾಶ್ಚ ರಣೋನ್ಮುಖಾಃ ।
ಸಹಸ್ರಂ ಮಹಿಷಾರೂಢಾಸ್ಸಹಸ್ರಂ ಕೋಲಪೃಷ್ಠಗಾಃ ॥ ೩೫ ॥

---

೩೧. ಜನನಾಯಕನೂ ಸಹ ಒಂದುಲಕ್ಷ ಸೇನೆಯಸಮೇತ ಬಂದಿದ್ದನು. ಸೇನಾಪತಿಯಾದ ತಾಲನನೂ ಸಹ ಒಂದುಲಕ್ಷ ಸೇನೆಗೆ ಅಧಿಪತಿಯಾಗಿ ಯುದ್ಧಕ್ಕೆ ಬಂದಿದ್ದನು.

೩೨ ಆ ಚೀನಾದೇಶದಲ್ಲಿ ಬೌದ್ಧರಿಗೂ ಆರ್ಯದೇಶೀಯರಿಗೂ ಹದಿನೈದು ದಿನಗಳಕಾಲ ಘೋರವಾದ ಯುದ್ಧ ನಡೆಯಿತು. ಎಲೈ ಮುನಿಶ್ರೇಷ್ಠನೇ! ಈ ಯುದ್ಧ ದಿಂದ ಯಮಲೋಕವು ತುಂಬಿಹೋಯಿತು.

೩೩. ಈ ಯುದ್ಧದಲ್ಲಿ ಏಳುಲಕ್ಷ ಬೌದ್ಧರು ಹತರಾದರು. ಎರಡುಲಕ್ಷ ಆರ್ಯರು ಮೃತರಾದರು. ಅನಂತರ ಆ ಬೌದ್ಧರು ಭಯದಿಂದ ಕಂಗೆಟ್ಟು ಯುದ್ಧ ರಂಗವನ್ನು ಬಿಟ್ಟು ಪಲಾಯನಮಾಡಿ ತಮ್ಮ ಮನೆಗಳಿಗೆ ಹೋಗಿ ಸೇರಿಕೊಂಡರು.

೩೪. ಆಮೇಲೆ ಬೌದ್ಧರು ಕೀಲುಯಂತ್ರದ ಸಹಾಯದಿಂದ ಚಲಿಸುವ ಮರದಬೊಂಬೆಯ ಸೇನೆಗಳನ್ನು ರಚಿಸಿ ಹತ್ತುಸಾವಿರ ಸವಾರ ಬೊಂಬೆಗಳ ಸಮೇತ ವಾದ ಆನೆಗಳು,

೩೫. ಮತ್ತು ಒಂದುಲಕ್ಷ ರಣಧೀರರಾದ ಕುದುರೆ ಸವಾರ ಬೊಂಬೆಗಳ ಸಮೇತ ಕುದುರೆಗಳು, ಸಾವಿರಮಂದಿ ಕೋಣದ ಸವಾರ ಬೊಂಬೆಗಳೂ ಸಾವಿರಮಂದಿ ಹಂದಿಯ ಸವಾರ ಬೊಂಬೆಗಳೂ,

ಸಿಂಹಾರೂಢಾಸ್ಸಹಸ್ರಂ ಚ ಸಹಸ್ರಂ ಹಂಸವಾಹನಾಃ ।
ಕಂಕಗೋಮಾಯುಗೃಧ್ರಾಣಾಂ ಶ್ಯಾಮಾರೂಢಾಃ ಪೃಥಕ್ತಥಾ ॥ ೩೬ ॥

ಉಷ್ಟ್ರಾಃ ಸಪ್ತಸಹಸ್ರಾಣಿ ಸಶೂರಾಶ್ಚ ರಣೋನ್ಮುಖಾಃ ।
ಏವಂ ಸಪಾದಲಕ್ಷೈಶ್ಚ ಕಾಷ್ಠಸೈನ್ಯೈಶ್ಚ ಮಾನುಷಾಃ ॥ ೩೭ ॥

ದ್ವಿಲಕ್ಷಾಣಿ ಕ್ಷಯಂ ಜಗ್ಮುಃ ಕೃಷ್ಣಾಂಶಾದ್ಯೈಃ ಸುರಕ್ಷಿತಾಃ ।
ತತೋ ಹಾಹಾಕೃತಂ ಸೈನ್ಯಂ ಚಾರ್ಯಾಣಾಂ ಚ ನನಾಶ ತತ್ ॥ ೩೮ ॥

ದೃಷ್ಟ್ವಾ ತತ್ಕೌತುಕಂ ರಮ್ಯಂ ಜಯಂತೋ ಯುದ್ಧಕೋವಿದಃ ।
ಆಗ್ನೇಯಂ ಶರಮಾದಾಯ ಕಾಷ್ಠಸೈನ್ಯೇಷು ಚಾಕ್ಷಿಪತ್ ॥ ೩೯ ॥

ಭಸ್ಮೀಭೂತಾಶ್ಚ ತೇ ಸರ್ವೇ ತತ್ರೈವ ವಿಲಯಂ ಗತಾಃ ।
ತ್ರಿಲಕ್ಷಂ ಕ್ಷತ್ರಿಯಾಃ ಶೇಷಾ ಜಯಂತಂ ರಣಕೋವಿದಂ ।
ಚಕ್ರುರ್ಜಯರವಂ ತತ್ರ ತುಷ್ಟುವುಶ್ಚ ಪುನಃ ಪುನಃ ॥ ೪೦ ॥

---

೩೬. ಸಾವಿರಮಂದಿ ಸಿಂಹದ ಸವಾರ ಬೊಂಬೆಗಳೂ ಸಾವಿರಮಂದಿ ಹಂಸ ವಾಹನ ಬೊಂಬೆಗಳೂ ಹೀಗೆಯೇ ರಣಹದ್ದು, ಹದ್ದು ನರಿ ಶ್ಯಾಮಮೃಗ ಇವುಗಳನ್ನೇರಿರುವ ಮರದ ಬೊಂಬೆ ಸವಾರರು ಸಾವಿರಸಾವಿರಮಂದಿ ಪ್ರತ್ಯೇಕಪ್ರತ್ಯೇಕವಾಗಿಯೂ,

೩೭-೩೮. ವೀರರಾದ ಒಂಟೆ ಸವಾರ ಬೊಂಬೆಗಳು ಏಳುಸಾವಿರಮಂದಿಯೂ ಎಲ್ಲವೂ ಒಟ್ಟು ಒಂದೂಕಾಲುಲಕ್ಷ ಸಂಖ್ಯೆಯ ಮರದ ಕೀಲುಬೊಂಬೆಯ ಸೈನ್ಯವು ಯುದ್ಧಕ್ಕೆ ಸಿದ್ಧವಾಗಿ ಹೋರಾಡಿತು. ಕೃಷ್ಣಾಂಶಾದಿಗಳ ಕಡೆಯ ಎರಡುಲಕ್ಷ ಸೈನಿಕರು ಹತವಾದರು. ಹೀಗೆ ಆರ್ಯರ ಸೇನೆಯು ಹಾಹಾಕಾರಮಾಡುತ್ತಾ ನಾಶಹೊಂದಿತು.

೩೯. ಈ ಪ್ರಕಾರ ಮನೋಹರವೂ ಆಶ್ಚರ್ಯಯುಕ್ತವೂ ಆದ ಮರದ ಸೈನ್ಯವನ್ನು ನೋಡಿ ಯುದ್ಧವಿಶಾರದನಾದ ಇಂದುಲನು ಮರದ ಬೊಂಬೆಯ ಸೇನೆಗಳ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು.

೪೦. ಈ ಅಸ್ತ್ರದ ಮಹಿಮೆಯಿಂದ ಬೌದ್ಧರ ಕೃತಕಸೈನ್ಯವೆಲ್ಲವೂ ನಾಶವಾಯಿತು. ಕೃಷ್ಣಾಂಶಾದಿಗಳ ಕಡೆಯ ಉಳಿದ ಮೂರುಲಕ್ಷ ಕ್ಷತ್ರಿಯರು ಯುದ್ಧನಿಪುಣನಾದ ಇಂದುಲನ ಸಮೀಪಕ್ಕೆ ಬಂದು ಜಯಧ್ವನಿಮಾಡುತ್ತಾ ಅವನನ್ನು ಬಾರಿಬಾರಿಗೂ ಸ್ತುತಿಸಿದರು.

ತದಾ ತು ಚೀನಜಾ ಬೌದ್ಧಾಃ ಕೃತ್ವಾ ವಿಂಶತ್ಸಹಸ್ರಕಾನ್ ।
ಹಯಾರೂಢಾನ್ ಲೋಹಮಯಾನ್ ಪ್ರೇಷಯಾಮಾಸುರೂರ್ಜಿತಾನ್ ॥

ಯೋಗಸಿಂಹೋ ಗಜಾರೂಢೋ ಧನುರ್ಬಾಣಧರೋ ಬಲೀ ।
ಕಂಠೇಷು ಲೋಹಜಾನ್ವೀರಾಂಸ್ತಾಡಯಾಮಾಸ ವೈ ತದಾ ॥ ೪೨ ॥

ಮೃತಾಸ್ತೇ ಪಂಚಸಾಹಸ್ರಾ ಯೋಗಸಿಂಹಶರಾರ್ದಿತಾಃ ।
ಬೌದ್ಧಸಿಂಹಸ್ತದಾ ಶೂರೋ ದೃಷ್ಟ್ವಾ ತಸ್ಯ ಪರಾಕ್ರಮಂ ।
ಕೃತ್ವಾ ಲೋಹಮಯಂ ಸಿಂಹಂ ಯೋಗಸಿಂಹಮಪೇಷಯತ್ ॥ ೪೩ ॥

ಪಾತೇನ ತಸ್ಯ ಸಿಂಹಸ್ಯ ಸ ವೀರೋ ಮರಣಂ ಗತಃ ।
ತದಾ ತು ಭೋಗಸಿಂಹಶ್ಚ ಹಯಾರೂಢೋ ಜಗಾಮ ಹ ।
ಸ್ವಭಲ್ಲೇನ ಚ ತಂ ಸಿಂಹಂ ಹತ್ವಾ ತತ್ರ ಜಗರ್ಜ ವೈ ॥ ೪೪ ॥

---

೪೧. ಹೀಗೆ ತಮ್ಮ ಮರೆದ ಸೇನೆಯು ನಷ್ಟವಾಗಲಾಗಿ ಬೌದ್ಧರು ಪುನಃ ಇಪ್ಪತ್ತುಸಾವಿರ ಅಶ್ವಾರೋಹಿ ಕೀಲುಬೊಂಬೆಗಳನ್ನು ಲೋಹದಿಂದ ನಿರ್ಮಿಸಿ ಅವನ್ನು ಶತ್ರುಗಳ ಸೇನೆಯ ಮೇಲೆ ಪ್ರಯೋಗಿಸಿದರು.

೪೨. ಆಗ ಬಲಶಾಲಿಯಾದ ಯೋಗಸಿಂಹನು ಆನೆಯನ್ನು ಏರಿಕೊಂಡು ಧನುಸ್ಸಿನಲ್ಲಿ ಬಾಣಗಳನ್ನು ಪ್ರಯೋಗಿಸಿ ಲೋಹನಿರ್ಮಿತವಾದ ವೀರಬೊಂಬೆಗಳ ಕಂಠಕ್ಕೆ ಸರಿಯಾಗಿ ಹೊಡೆದನು.

೪೩. ಈರೀತಿ ಯೋಗಸಿಂಹನ ಬಾಣದಿಂದ ಐದುಸಾವಿರಮಂದಿ ಲೋಹ ವೀರರು ಹತರಾದರು. ಆಗ ಬೌದ್ಧರಾಜನು ಯೋಗಸಿಂಹನ ಪರಾಕ್ರಮವನ್ನು ಕಂಡು ಲೋಹನಿರ್ಮಿತನಾದ ಕೀಲುಸಿಂಹವನ್ನು ರಭಸದಿಂದ ನುಗ್ಗಿಸಿದನು.

೪೪ ಈ ಸಿಂಹದ ಆಕ್ರಮಣದಿಂದ ವೀರನಾದ ಯೋಗಸಿಂಹನು ಮೃತನಾದನು. ಆಗ ಭೋಗಸಿಂಹನು ತನ್ನ ಕುದುರೆಯನ್ನೇರಿ ಭಲ್ಲೆಯದಿಂದ ಲೋಹದ ಕೀಲುಸಿಂಹವನ್ನು ಚೂರುಚೂರುಮಾಡಿ ಸಿಂಹನಾದ ಮಾಡಿದನು.

ತದಾ ತು ಬೌದ್ಧಸಿಂಹೇನ ಶಾರ್ದೂಲಸ್ತತ್ರ ಚೋದಿತಃ ।
ಸಹಯೋ ಭೋಗಸಿಂಹಶ್ಚ ತೇನೈವ ಮರಣಂ ಗತಃ ॥ ೪೫ ॥

ಮಾತುಲೌ ಮೃತ್ಯುವಶಗೌ ದೃಷ್ಟ್ವಾ ಸ್ವರ್ಣವತೀಸುತಃ ।
ಕರಾಲಂ ಹಯಮಾರುಹ್ಯ ಬೌದ್ಧಸಿಂಹಮುಪಾಯಯೌ ॥ ೪೬ ॥

ಶರಮಾದಾಯ ವೈ ಶೀಘ್ರಂ ನಾಮ್ನಾ ಸಂಮೋಹನಂ ಶುಭಂ ।
ಮೋಹಯಿತ್ವಾ ರಿಪುಬಲಂ ಬೌದ್ಧಸಿಂಹಸಮನ್ವಿತಂ ॥ ೪೭ ॥

ಬದ್ಧ್ವಾ ತಾನ್ ಬೌದ್ಧಸಿಂಹಾದೀನ್ ನೃಪಾನ್ ದಶಸಹಸ್ರಕಂ ।
ಕಲಿಯಂತ್ರಂ ಚ ಸಂಚೂರ್ಣ್ಯ ಕೃಷ್ಣಾಂಶಾಂತಿಕಮಾಯಯೌ ॥ ೪೮ ॥

ತದಾ ತೇ ಹರ್ಷಿತಾಸ್ಸರ್ವೇ ಪ್ರವೇಶ್ಯ ನಗರಂ ಯಯುಃ ।
ತದ್ವೇಶ್ಮ ಯೋಜನಾಯಾಮಂ ಸರ್ವಸಂಪತ್ಸಮನ್ವಿತಂ ।
ಲುಂಠಯಿತ್ವಾ ಬಲಾತ್ಸರ್ವೇ ನೃಪದುರ್ಗಮುಪಾಯಯುಃ ॥ ೪೯ ॥

---

೪೫. ಹಾಗೆ ತನ್ನ ಕೀಲುಸಿಂಹವು ನಷ್ಟವಾಗಲು ಆಗ ಬೌದ್ಧರಾಜನು ಲೋಹದ ಕೀಲುಹುಲಿಯನ್ನು ನಿರ್ಮಿಸಿ ಅದನ್ನು ಭೋಗಸಿಂಹನ ಮೇಲೆ ನುಗ್ಗಿಸಿದನು. ಇದರಿಂದ ಭೋಗಸಿಂಹನು ತನ್ನ ಕುದುರೆಯಸಮೇತ ಮೃತನಾಗಿಹೋದನು.

೪೬. ಹೀಗೆ ತನ್ನ ಸೋದರಮಾವಂದಿರಾದ ಯೋಗಸಿಂಹ ಭೋಗಸಿಂಹರಿಬ್ಬರೂ ಮೃತರಾದುದನ್ನು ಸ್ವರ್ಣವತೀಕುಮಾರನಾದ ಇಂದುಲನು ನೋಡಿ ಕರಾಲವೆಂಬ ತನ್ನ ಕುದುರೆಯನ್ನೇರಿ ಬೌದ್ಧರಾಜನನ್ನು ಎದುರಿಸಹೋದನು

೪೭. ಬಳಿಕ ಇಂದುಲನು ಸಂಮೋಹನಾಸ್ತ್ರವನ್ನು ಪ್ರಯೋಗಿಸಿ ಅದರಿಂದ ಬೌದ್ಧರಾಜನ ಸಮೇತ ಶತ್ರುಸೈನ್ಯವನ್ನೆಲ್ಲಾ ಮೂರ್ಛೆಗೊಳಿಸಿದನು

೪೮. ಅನಂತರ ಬೌದ್ಧರಾಜನೇ ಮೊದಲಾದ ಹತ್ತುಸಾವಿರ ವೀರರನ್ನೂ ಬಂಧಿಸಿ ಅವರ ಕೀಲುಯಂತ್ರವನ್ನು ಪುಡಿಮಾಡಿ ಕೃಷ್ಣಾಂಶನಿದ್ದಲ್ಲಿಗೆ ಬಂದನು.

೪೯. ಆಗ ಕೃಷ್ಣಾಂಶಾದಿಗಳೆಲ್ಲರೂ ಸಂತೋಷಹೊಂದಿ ಆ ಬೌದ್ಧರ ಪಟ್ಟಣವನ್ನೆಲ್ಲಾ ನಾಶಗೊಳಿಸಿದುದಲ್ಲದೆ ಒಂದುಯೋಜನ ವಿಸ್ತಾರವುಳ್ಳದೂ ಸಕಲಸಂಪತ್ತಿನಿಂದ ಭರಿತವೂ ಆಗಿದ್ದ ಆ ಉಗ್ರಾಣದ ಮನೆಯನ್ನು ಬಲಾತ್ಕಾರದಿಂದ ನುಗ್ಗಿ ಲೂಟಿಮಾಡಿ ರಾಜನ ದುರ್ಗಕ್ಕೆ ಪ್ರವೇಶಿಸಿ ಬಿಟ್ಟರು.

ಬೌದ್ಧಸಿಂಹಸ್ತದಾಗತ್ಯ ಜಯಂತೇನ ವಿಮೋಚಿತಃ ।
ಸುತಾಂ ಸ್ವಾಂ ಪದ್ಮಜಾಂ ನಾಮ್ನಾ ಜಯಂತಾಯ ದದೌ ಮುದಾ॥ ೫೦ ॥

ದಶಕೋಟೀಃ ಸುವರ್ಣಸ್ಯ ಚಾಹ್ಲಾದಾಯ ತದಾ ಧನಂ ।
ಸರ್ವೈಶ್ಚ ಬೌದ್ಧವೃಂದೈಶ್ಚ ತತ್ರೈವ ಶಪಥಃ ಕೃತಃ ॥ ೫೧ ॥

ಆರ್ಯದೇಶಂ ನ ಯಾಸ್ಯಾಮಃ ಕದಾಚಿದ್ರಾಷ್ಟ್ರಹೇತವೇ ।
ಇತ್ಯುಕ್ತ್ವಾ ತಾನ್ಪ್ರಣಮ್ಯಾಶು ಸಂಪ್ರಸ್ಥಾನಮಕಾರಯನ್ ॥ ೫೨ ॥

ತ್ರಿಲಕ್ಷೈಶ್ಚ ಯುತಾಸ್ತೇ ವೈ ನೇತ್ರಪಾಲಗೃಹಂ ಗತಾಃ ।

॥ ಋಷಯ ಊಚುಃ ॥

ಇಂದುಲೇನ ಕಥಂ ಸೂತ ತತ್ರ ಪ್ರಾಣೀಕೃತಾ ನ ಹಿ ।
ಸುಪ್ರಿಯಾ ಯೋಗಸಿಂಹಾದ್ಯಾಸ್ತನ್ನೋ ವದ ವಿಚಕ್ಷಣ ॥ ೫೩ ॥

---

೫೦. ಆಗ ಬೌದ್ಧಸಿಂಹನು ಇಂದುಲನ ಕೃಪೆಯಿಂದ ಬಿಡುಗಡೆಹೊಂದಿ ತನ್ನ ಮನೆಗೆ ಬಂದು ತನ್ನ ಮಗಳಾದ ಪದ್ಮಜಾ ಎಂಬವಳನ್ನು ಸಂತೋಷದಿಂದ ಇಂದುಲನಿಗೆ ಕೊಟ್ಟನು.

೫೧. ಮತ್ತು ಆಹ್ಲಾದನಿಗೆ ಹತ್ತುಕೋಟಿ ಸುವರ್ಣ ನಾಣ್ಯಗಳನ್ನು ಕಾಣಿಕೆಯಾಗಿ ಕೊಟ್ಟುದಲ್ಲದೆ ತನ್ನ ಎಲ್ಲಾ ಬೌದ್ಧವೃಂದದೊಡನೆ ಬಂದು ಅವರುಗಳ ಸಮ್ಮುಖದಲ್ಲಿ " ನಾವು ಇನ್ನು ಮುಂದೆ ನಮ್ಮ ರಾಜ್ಯಾಭಿವೃದ್ಧಿಗೋಸ್ಕರ ಆರ್ಯದೇಶಕ್ಕೆ ಬರುವುದಿಲ್ಲ " ಎಂದು ಪ್ರತಿಜ್ಞೆಮಾಡಿದರು.

೫೨. ಬೌದ್ಧರು ಅವರಿಗೆಲ್ಲಾ ನಮಸ್ಕಾರಮಾಡಿ ಅವರನ್ನು ಸುಖಪ್ರಯಾಣ ಬೆಳೆಸಲು ಸಾಗಕಳುಹಿಸಿದನು. ಬಳಿಕ ಅವರೆಲ್ಲ ಮೂರುಲಕ್ಷ ಸೇನೆಯೊಡನೆ ಹೊರಟು ನೇತ್ರಪಾಲರಾಜನ ಮನೆಗೆ ಬಂದು ಸೇರಿದರು.

೫೩. ಋಷಿಗಳು ಕೇಳುತ್ತಾರೆ—" ಎಲೈ ಸೂತನೇ! ಇಂದುಲನು ತನಗೆ ಅತ್ಯಂತ ಪ್ರೀತಿಪಾತ್ರರಾದ ಯೋಗಸಿಂಹ ಮೊದಲಾದವರನ್ನು ಪುನಃ ಏಕೆ ಬದುಕಿಸಿಕೊಳ್ಳಲಿಲ್ಲ? ಇದರ ರಹಸ್ಯವನ್ನು ನಮಗೆ ತಿಳಿಸು " ಎಂದು ಪ್ರಶ್ನಿಸಿದರು.

॥ ಸೂತ ಉವಾಚ ॥

ಆಗತಾ ಯಮಲೋಕಾದ್ವೈ ಕತಿಚಿತ್ಪ್ರಾಣಿನೋ ಭುವಿ ।
ತದಾ ತು ದುಃಖಿತೋ ದೇವೋ ಮಹೇಂದ್ರಾಂತಮುಪಾಯಯೌ ॥ ೫೪ ॥

ದೇವರಾಜ ನಮಸ್ತುಭ್ಯಂ ಸರ್ವದೇವಪ್ರಿಯಂಕರ ।
ಜಯಂತೋ ಜಗತೀಂ ಪ್ರಾಪ್ಯ ಮೃತಾಞ್ಜೀವಯತಿ ಸ್ವಯಂ ॥ ೫೫ ॥

ಅತೋ ವೈ ಲೋಕಮರ್ಯಾದಾ ವಿರುದ್ಧಾ ದೃಶ್ಯತೇ ಭುವಿ ।
ಇತಿ ಶ್ರುತ್ವಾ ತು ವಚನಂ ಮಹೇಂದ್ರೋ ದೇವಮಾಯಯಾ ।
ವಡವಾಮೃತಮಾಹೃತ್ಯ ತಥಾ ವೈ ಸ್ವರ್ಗಗಾಂ ಗತಿಂ ॥ ೫೬ ॥

ಜಯಂತಸ್ಯ ಸ್ವಪುತ್ರಸ್ಯ ಮುಮೋದ ಸ ಸುರೈಃ ಸಹ ।
ಇಂದುಲಶ್ಚ ತದಾ ದುಃಖೀ ಶಾರದಾಂ ಸರ್ವಮಂಗಲಾಂ ।
ಪೂಜಯಿತ್ವಾ ವಿಧಾನೇನ ಯೋಗಧ್ಯಾನಪರೋಽಭವತ್ ॥ ೫೭ ॥

---

೫೪. ಸೂತಮುನಿವರ್ಯನು ಹೇಳುತ್ತಾನೆ—"ಎಲೈ ಋಷಿಗಳಿರಾ! ಇಂದುಲನ ಮೃತಸಂಜೀವಿನೀ ವಿದ್ಯೆಯ ಪ್ರಭಾವದಿಂದ ಯಮಲೋಕವನ್ನೈದಿದ್ದ ಕೆಲವು ಪ್ರಾಣಿಗಳು ಭೂಲೋಕಕ್ಕೆ ಮತ್ತೆ ಬಂದುವು. ಆಗ ಯಮನು ದುಃಖಿತನಾಗಿ ಮಹೇಂದ್ರನ ಸಮೀಪಕ್ಕೆ ಬಂದು ಈ ಪ್ರಕಾರ ಹೇಳತೊಡಗಿದನು.

೫೫. "ಸಕಲ ದೇವತೆಗಳಿಗೂ ಪ್ರಿಯವುಂಟುಮಾಡುವ ಎಲೈ ದೇವರಾಜನೇ! ನಿನಗೆ ನಮಸ್ಕಾರ. ನಿನ್ನ ಪುತ್ರ ಜಯಂತನು ಭೂಲೋಕದಲ್ಲಿ ಅವತರಿಸಿದಾನೆ. ಅಲ್ಲಿ ಮೃತರಾಗಿ ಯಮಲೋಕಕ್ಕೆ ಬಂದವರನ್ನು ಪುನಃ ಬದುಕಿಸುತ್ತಿರುವನು.

೫೬. ಇದರಿಂದ ಭೂಲೋಕದಲ್ಲಿ ಲೋಕಮರ್ಯಾದೆಯೇ ಕೆಟ್ಟು ತಲೆಕೆಳಕಾಗುತ್ತಿದೆ" ಎಂದು ಹೇಳಿದನು. ಆಗ ಮಹೇಂದ್ರನು ಯಮನ ಮಾತನ್ನು ಕೇಳಿ ದೇವಮಾಯೆಯಿಂದ ನಿರ್ಮಿತವಾದ ವಡಬಾಮೃತವೆಂಬ ಇಂದುಲನ ಕುದುರೆಯನ್ನೂ, ಮತ್ತು ಇಂದುಲನಿಗೆ ಕರುಣಿಸಿ ಕೊಟ್ಟಿದ್ದ ಸ್ವರ್ಗಗಮನಶಕ್ತಿಯನ್ನೂ ಹಿಂದಕ್ಕೆ ತೆಗೆದುಕೊಂಡನು.

೫೭. ಬಳಿಕ ಇಂದ್ರನು ದೇವತೆಗಳೊಡನೆ ಸಂತೋಷದಿಂದಿರುತ್ತಿದ್ದನು. ಇತ್ತ ಇಂದುಲನು ದುಃಖದಿಂದ ಸರ್ವಮಂಗಳೆಯಾದ ಶಾರದಾದೇವಿಯನ್ನು ನಿಯಮದಿಂದ ಪೂಜಿಸಿ ಯೋಗಧ್ಯಾನತತ್ಪರನಾದನು.

ಇತಿ ತೇ ಕಥಿತಂ ವಿಪ್ರ ಪುನಃ ಶೃಣು ಕಥಾಂ ಶುಭಾಂ ।
ನೇತ್ರಪಾಲಶ್ಚ ಬಲವಾನ್ಬಹುಪುತ್ರಃ ಶುಚಾನ್ವಿತಃ ।
ದಶಕೋಟಿಮಿತಂ ಸ್ವರ್ಣಂ ತೇಭ್ಯೋ ದತ್ವಾ ಸಮಂ ಸಮಂ ॥ ೫೮ ॥

ಪ್ರಸ್ಥಾನಂ ಕಾರಯಾಮಾಸ ಚಾಷ್ಟಾನಾಂ ಬಲಶಾಲಿನಾಂ ।
ತೇ ವೈ ದ್ವಿಲಕ್ಷಸೈನ್ಯಾಢ್ಯಾಃ ಸ್ವಗೇಹಾಯ ಯಯುರ್ಮುದಾ ॥ ೫೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಏಕೋನತ್ರಿಂಶೋಽಧ್ಯಾಯಃ



---

೫೮. ಎಲೈ ಬ್ರಾಹ್ಮಣೋತ್ತಮನೇ! ಈರೀತಿ ನಿನಗೆ ಪುಣ್ಯಕರವಾದ ಈ ಕಥೆಯನ್ನು ಹೇಳಿದೆನು. ಪುನಃ ಒಂದು ಶುಭಕರವಾದ ಕಥೆಯನ್ನು ಹೇಳುವೆನು. ಬಲಶಾಲಿಯೂ, ಬಹು ಪುತ್ರವಂತನೂ ಆದ ನೇತ್ರಪಾಲನು ಈ ವೀರರ ಅಗಲಿಕೆಗಾಗಿ ದುಃಖಾಕ್ರಾಂತನಾಗಿ ಕೃಷ್ಣಾಂಶಾದಿಗಳಿಗೆ ಪ್ರತಿಯೊಬ್ಬರಿಗೂ ಸಮನಾಗಿ ಹತ್ತುಕೋಟಿ ಸುವರ್ಣ ನಾಣ್ಯಗಳನ್ನು ಕೊಟ್ಟನು.

೫೯. ಬಳಿಕ ಬಲಶಾಲಿಗಳಾದ ಆ ಎಂಟುಮಂದಿ ವೀರರನ್ನೂ ಪ್ರಯಾಣಕ್ಕೆ ಅಣಿಮಾಡಿ ಸಾಗಕಳುಹಿಸಿದನು. ಅವರೆಲ್ಲರೂ ಎರಡುಲಕ್ಷ ಸೇನೆಯೊಡನೆ ತಮ್ಮ ತಮ್ಮ ನಿವಾಸಕ್ಕೆ ಸಂತೋಷದಿಂದ ಹಿಂದಿರುಗಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುಚ್ಚಯದಲ್ಲಿ
ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಯದಾ ತೇ ಚೀನದೇಶಸ್ಥಾಸ್ತದಾಹೂತೋ ನೃಪೇಣ ವೈ ।
ಕಾಮಪಾಲೇನ ಭೋ ವಿಪ್ರ ಲಕ್ಷಣೋ ನಕುಲಾಂಶಕಃ ॥ ೧ ॥

ಜಯಚಂದ್ರ ಮಹಾಭಾಗ ಸಾವಧಾನಂ ವಚಃ ಶೃಣು ।
ವೈಶಾಖಶುಕ್ಲಸಪ್ತಮ್ಯಾಂ ಮುಹೂರ್ತೋಽಯಂ ದಿನಾಗಮೇ ॥ ೨ ॥

ಅತೋ ವೈ ಲಕ್ಷಣೋ ವೀರಶ್ಚೈಕಾಕೀ ಮಾಂ ಸಮಾಪ್ನುಯಾತ್ ।
ಗೃಹೀತ್ವಾ ಮತ್ಸುತಾಂ ದೋಲಾಂ ಗಮಿಷ್ಯತಿ ತವಾಂತಿಕಂ ॥ ೩ ॥

---

### ಮೂವತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಅಯ್ಯಾ ವಿಪ್ರವರ್ಯನೇ! ಆ ಚೈನಾಸೈನಿಕರು ಯುದ್ಧಮಾಡಲು ಬಂದಿದ್ದಾಗ ಬಿಂದುಗಡದ ಕಾಮಪಾಲರಾಜನು ನಕುಲಾಂಶನಾದ ಲಕ್ಷಣನನ್ನು ತನ್ನ ಕಡೆಗೆ ಬರಬೇಕೆಂದು ಆಹ್ವಾನಿಸಿದ್ದನು.

೨. ಆದಾದ ಕೆಲವು ದಿನದಮೇಲೆ ಕಾಮಪಾಲರಾಜನು ಜಯಚಂದ್ರ ಮಹಾರಾಜನನ್ನು ಕುರಿತು "ಮಹಾಭಾಗನಾದ ಜಯಚಂದ್ರನೇ! ನಾನು ಹೇಳುವುದನ್ನು ಸಾವಧಾನವಾಗಿ ಲಾಲಿಸು. ವೈಶಾಖ ಶುಕ್ಲ ಸಪ್ತಮಿಯದಿನ ಪ್ರಾತಃಕಾಲ ಶುಭ ಮುಹೂರ್ತವಾಗಿದೆ."

೩. "ಆ ದಿವಸ ಲಕ್ಷಣನು ಏಕಾಕಿಯಾಗಿ ನನ್ನ ಮನೆಗೆ ಬಂದು ನನ್ನ ಮಗಳು ಪದ್ಮಿನಿಯನ್ನು ಮೇನೆಯಲ್ಲಿ ಕೂರಿಸಿ ಕರೆದುಕೊಂಡು ನಿಮ್ಮ ಬಳಿಗೆ ಬಂದು ಬಿಡಲಿ."

ಸೇನಾನ್ವಿತಂ ಚ ತಂ ಜ್ಞಾತ್ವಾ ಮಹೀರಾಜೋ ಮಹಾಬಲಃ ।
ಗ್ರಹೀಷ್ಯತಿ ಪರಾಜಿತ್ಯ ತಸ್ಮಾದ್ಯೋಗಂ ವಚೋ ಮಮ ॥ ೪ ॥

ಇತಿ ತತ್ರತ್ಯವಚನಂ ಮತ್ವಾ ರಾಜಾ ಪ್ರಸನ್ನಧೀಃ ।
ಲಕ್ಷಣಂ ಹಸ್ತಿನೀಸಂಸ್ಥಂ ಶತಶೂರಸಮನ್ವಿತಂ ॥ ೫ ॥

ಆಹೂಯ ಪ್ರೇಷಯಾಮಾಸ ಕಾಮಪಾಲಾಯ ಧೀಮತೇ ।
ಮಾರ್ಗೇ ಪಂಚದಿನಂ ವೀರ ಉಷಿತ್ವಾ ತದ್ಗೃಹಂ ಯಯೌ ॥ ೬ ॥

ತದಾ ಪದ್ಮಾಕರಃ ಶ್ಯಾಲೋ ಜ್ಞಾತ್ವಾ ಲಕ್ಷಣಮಾಗತಂ ।
ಭೂಮಿರಾಜಂ ಸಮಾಹೂಯ ತೇನ ಯುದ್ಧಮಚೀಕರತ್ ॥ ೭ ॥

---

೪. "ಹಾಗೆ ಬಾರದೆ ಅವನು ಸೇನಾಸಮೇತನಾಗಿ ಬಂದಿರುವನೆಂದು ತಿಳಿದರೆ ಮಹಾಬಲಶಾಲಿಯಾದ ಪೃಥ್ವೀರಾಜನು ಅವನನ್ನು ಸೋಲಿಸಿ ನನ್ನ ಮಗಳನ್ನು ವಶಪಡಿಸಿಕೊಳ್ಳುವನು. ಆದುದರಿಂದ (ಏಕಾಕಿಯಾಗಿ ಬರಲಿ ಎಂದು) ನಾನು ಹೇಳಿ ಕಳುಹಿಸಿರುವ ಮಾತು ಯುಕ್ತವಾದುದು" ಎಂದು ಹೇಳಿಕಳುಹಿಸಿದ್ದನು.

೫. ಈ ಸಮಾಚಾರವನ್ನು ತಿಳಿದು ಜಯಚಂದ್ರನು ಸಂತುಷ್ಟಾಂತರಂಗನಾಗಿ ಲಕ್ಷಣನನ್ನು ಹಸ್ತಿನಿಯೆಂಬ ಆನೆಯ ಮೇಲೆ ಕೂರಿಸಿ, ಅವನ ಜತೆಯಲ್ಲಿ ಹೋಗುವಂತೆ ನೂರ್ವರು ಶೂರರನ್ನು ಹೊರಡಿಸಿದನು.

೬. ಈರೀತಿಯಾಗಿ ಅವನನ್ನು ಕಾಮಪಾಲಮಹಾರಾಜನ ಬಳಿಗೆ ಕಳುಹಿಸಿಕೊಟ್ಟನು. ವೀರನಾದ ಲಕ್ಷಣನು ಐದುದಿನಗಳು ದಾರಿ ನಡೆದು ಕಾಮಪಾಲನಗರಿಗೆ ಹೋಗಿ ಸೇರಿದನು.

೭. ಆಗ ಈ ಲಕ್ಷಣನ ಭಾವಮೈದುನನಾದ ಪದ್ಮಾಕರನು, ಲಕ್ಷಣನು ಬಂದಿರುವುದನ್ನು ತಿಳಿದು ಪೃಥ್ವೀರಾಜನನ್ನು ಕರೆಯಿಸಿ ಆ ಲಕ್ಷಣನೊಡನೆ ಯುದ್ಧಮಾಡುವಂತೆ ತಿಳಿಸಿದನು. ಪೃಥ್ವೀರಾಜನು ಹಾಗೆಯೇ ಮಾಡಲು ಒಪ್ಪಿದನು.

ಲಕ್ಷಣೋ ನಕುಲಾಂಶಶ್ಚ ದೃಷ್ಟ್ವಾ ಶತ್ರುಮುಪಸ್ಥಿತಂ ।
ಸ್ವಶರೈಸ್ತರ್ಪಯಾಮಾಸ ರಾಜರಾಜಂ ಮಹಾಬಲಂ ॥ ೮ ॥

ಮೂರ್ಛಯಿತ್ವಾ ಮಹೀರಾಜಂ ಹತ್ವಾ ಪಂಚಶತಂ ಬಲೀ ।
ಕಾಮಪಾಲಂ ಸಮಾಗಮ್ಯ ನತ್ವಾ ವಾಸಮಕಾರಯತ್ ॥ ೯ ॥

ಉತ್ಥಿತಶ್ಚ ಮಹೀರಾಜೋ ಗತ್ವಾ ಪದ್ಮಾಕರಂ ಪ್ರತಿ ।
ವಚನಂ ಪ್ರಾಹ ಕಾರ್ಯಾರ್ಥೀ ಶೃಣು ಮಿತ್ರ ವಚೋ ಮಮ ॥ ೧೦ ॥

ಲಕ್ಷಣೋ ಮೇ ಮಹಾಞ್ಛತ್ರುಸ್ಸ ಚ ತ್ವದ್ಗೇಹಮಾಗತಃ ।
ಯದಿ ದಾಸ್ಯಸಿ ತಂ ಬದ್ಧ್ವಾ ತ್ವಾಂ ಮದಂಗಂ ಕರೋಮ್ಯಹಂ ॥ ೧೧ ॥

---

೮. ಆಗ ನಕುಲಾಂಶಸಂಭೂತನಾದ ಲಕ್ಷಣನು ಶತ್ರುವಾದ ಪೃಥ್ವೀರಾಜನು ಯುದ್ಧಕ್ಕೆ ಬಂದಿರುವುದನ್ನು ನೋಡಿ ಮಹಾಬಲನೂ ಮಂಡಲೇಶ್ವರನೂ ಆದ ಪೃಥ್ವೀರಾಜನು ಮೆಚ್ಚುವಂತೆ ತನ್ನ ಬಾಣಗಳಿಂದ ಯುದ್ಧಮಾಡಿ ತೃಪ್ತಿಗೊಳಿಸಿದನು.

೯. ಈ ಲಕ್ಷಣನು ತನ್ನ ಬಾಣದಿಂದ ಪೃಥ್ವೀರಾಜನನ್ನು ಮೂರ್ಛೆಗೊಳಿಸಿ ಅವನ ಕಡೆಯ ಐನೂರುಮಂದಿ ವೀರರನ್ನೂ ಕೊಂದುಹಾಕಿದನು. ಬಳಿಕ ಕಾಮಪಾಲನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿ ಕೆಲವುದಿನ ಅಲ್ಲೇ ನಿಂತನು.

೧೦. ಅತ್ತ ಪೃಥ್ವೀರಾಜನು ಮೂರ್ಛೆಯಿಂದ ಎಚ್ಚೆತ್ತು ಪದ್ಮಾಕರನ ಸಮೀಪಕ್ಕೆ ಬಂದು, ತನ್ನ ಕಾರ್ಯಸಾಧನೆಗೋಸ್ಕರ ಅವನನ್ನು ಪ್ರಾರ್ಥಿಸುವನಾಗಿ "ಮಿತ್ರ ಪದ್ಮಾಕರ! ನೀನು ನನ್ನ ಮಾತುಗಳನ್ನು ನಡಸಿಕೊಡು."

೧೧. "ಲಕ್ಷಣನು ನನಗೆ ಪರಮಶತ್ರು. ಅವನು ಈಗ ನಿನ್ನ ಮನೆಗೆ ಬಂದಿರುವನು. ಅವನನ್ನು ನೀನು ಸೆರೆಹಿಡಿದು ನನ್ನ ವಶಕ್ಕೆ ಒಪ್ಪಿಸುವುದಾದರೆ ನಿನ್ನನ್ನು ನನ್ನ ಅತ್ಯಂತ ಪ್ರಿಯನೆಂದು ಭಾವಿಸಿ ನಿನ್ನನ್ನು ಸಾಮಂತನನ್ನಾಗಿ ಮಾಡಿಕೊಳ್ಳುವೆನು" ಎಂದನು

ಇತಿ ಶ್ರುತ್ವಾ ಸ ಲೋಭಾತ್ಮಾ ದತ್ವಾ ಹಾಲಾಹಲಂ ವಿಷಂ ।
ಬದ್ಧ್ವಾ ತಂ ಲಕ್ಷಣಂ ವೀರಂ ಮಹೀರಾಜಾಯ ಚಾರ್ಪಯತ್ ॥ ೧೨ ॥

ಹತ್ವಾ ತಾಞ್ಛತಶೂರಾಂಶ್ಚ ಗುಪ್ತವಾರ್ತಾಮಕಾರಯನ್ ।
ಜ್ಞಾತ್ವಾ ತತ್ಪದ್ಮಿನೀ ನಾರೀ ದುಃಖಿತಾಲಪ್ಯ ವೈ ಭೃಶಂ ।
ಚಂಡಿಕಾಂ ಪೂಜಯಾಮಾಸ ಪತಿಮಂಗಲಹೇತವೇ ॥ ೧೩ ॥

ತದಾ ಪ್ರಸನ್ನಾ ಸಾ ದೇವೀ ವರದಾ ಸರ್ವಮಂಗಲಾ ।
ಆಶ್ವಾಸ್ಯ ಪದ್ಮಿನೀಂ ನಾರೀಂ ಲಕ್ಷಣಾಂತಮುಪಾಯಯೌ ॥ ೧೪ ॥

ಸ್ವಪ್ನೇ ತಮಾಹ ಸಾ ದೇವೀ ಹ್ರೀಂ ಫಟ್ ಘೇಘೇ ಜಪಂ ಕುರು ।
ಅಸ್ಯ ಮಂತ್ರಪ್ರಭಾವಾಚ್ಚ ಸರ್ವವಿಘ್ನಾಃ ಪ್ರಣಶ್ಯತಿ ॥ ೧೫ ॥

---

೧೨. ಇದನ್ನು ಕೇಳಿ ಲೋಭಿಯಾದ ಆ ಪದ್ಮಾಕರನು ಲಕ್ಷಣನಿಗೆ ಮೋಸದಿಂದ ಹಾಲಾಹಲ ವಿಷವನ್ನು ನುಂಗಿಸಿ ಅದರ ತಾಪದಿಂದ ಅವನು ಮೂರ್ಛೆ ಬಿದ್ದಾಗ ವೀರನಾದ ಅವನನ್ನು ಬಂಧಿಸಿ ಪೃಥ್ವೀರಾಜನ ವಶಪಡಿಸಿದನು. ಅಲ್ಲದೆ ಆ ಲಕ್ಷಣನ ಕಡೆಯ ನೂರುಮಂದಿ ವೀರರನ್ನೂ ಕೊಂದುಹಾಕಿ ಈ ವಿಚಾರವನ್ನು ಬಹು ರಹಸ್ಯವಾಗಿಟ್ಟನು.

೧೩. ಲಕ್ಷಣನ ಪತ್ನಿಯಾದ ಪದ್ಮಿನೀಕುಮಾರಿಯು ಈ ಸಮಾಚಾರವನ್ನು ತಿಳಿದು ದುಃಖದಿಂದ ಬಹುವಾಗಿ ವಿಲಪಿಸಿ ತನ್ನ ಪತಿಗೆ ಮಂಗಳವಾಗುವುದಕ್ಕೋಸ್ಕರ ಚಂಡಿಕಾದೇವಿಯನ್ನು ಪೂಜಿಸಿದಳು.

೧೪. ಸರ್ವಮಂಗಳೆಯೂ ವರಪ್ರದೆಯೂ ಆದ ಆ ಚಂಡಿಕೆಯು ಪ್ರಸನ್ನೆಯಾಗಿ ಆ ಪದ್ಮಿನೀ ಕುಮಾರಿಯನ್ನು ಸಮಾಧಾನಗೊಳಿಸಿ ಲಕ್ಷಣನ ಕಳೇಬರದ ಸಮೀಪಕ್ಕೆ ಬಂದಳು.

೧೫ ಅಲ್ಲಿ ಆ ಲಕ್ಷಣನಿಗೆ ಸ್ವಪ್ನದಲ್ಲಿ ಚಂಡಿಕಾದೇವಿಯು ದರ್ಶನಕೊಟ್ಟು “ ಎಲೈ ವೀರನೇ ನೀನು ಹ್ರೀಂ ಫಟ್, ಘೇ, ಘೇ ಎಂಬ ಮಂತ್ರ ಜಪವನ್ನು ಮಾಡು. ಈ ಮಂತ್ರ ಜಪ ಪ್ರಭಾವದಿಂದ ನಿನಗೆ ಉಂಟಾಗಿರುವ ಸಕಲ ದೋಷಗಳೂ ವಿಘ್ನಗಳೂ ಪರಿಹಾರವಾಗುವುವು ” ಎಂದು ಹೇಳಿದಳು.

ಸ ಬುದ್ಧ್ವಾ ಲಕ್ಷಣೋ ವೀರಸ್ತಂ ಮಂತ್ರಂ ಚ ಜಜಾಪ ಹ ।
ಅಷಾಢೇ ಮಾಸಿ ಸಂಪ್ರಾಪ್ತೇ ಕೃಷ್ಣಾಂಶಾದ್ಯಾ ಗೃಹಂ ಯಯುಃ ॥ ೧೬ ॥

ತಾಲನಶ್ಚ ಯುತಸ್ತಾಭ್ಯಾಂ ಕಾನ್ಯಕುಬ್ಜಮುಪಾಯಯೌ ।
ನ ದೃಷ್ಟ್ವೋ ಲಕ್ಷಣೋ ವೀರೋ ಜಯಚಂದ್ರಪ್ರಿಯಂಕರಃ ॥ ೧೭ ॥
ಜ್ಞಾತ್ವಾ ತತ್ಕಾರಣಂ ತೈಶ್ಚ ಕೃತಂ ಯೋಗಮಯಂ ವಪುಃ ।

ಧಾನ್ಯಪಾಲಃ ಕಾಂಸ್ಯಧಾರೀ ವೀಣಾಧಾರೀ ಚ ತಾಲನಃ ।
ಲಲ್ಲಸಿಂಹೋ ಮೃದಂಗಾಂಕೋ ಯಯುಸ್ತೇ ವೈ ಮಹಾವತೀಂ ॥ ೧೮ ॥

ಸಭಾಂ ಪರಿಮಲಸ್ಯೈವ ಗತ್ವಾ ತೇ ಯೋಗರೂಪಿಣಃ ।
ಚಕ್ರುರ್ಗಾನಂ ಮುದಾ ಯುಕ್ತಾಃ ಸರ್ವೇ ತೇ ಮೋಹಮಾಗತಾಃ ॥ ೧೯ ॥

---

೧೬. ಅನಂತರ ವೀರನಾದ ಲಕ್ಷ್ಣಣನು ಎಚ್ಚೆತ್ತು ದೇವಿಯು ಹೇಳಿದಂತೆ ಆ ಮಂತ್ರವನ್ನು ಜಪಿಸುತ್ತಿದ್ದನು. ಇತ್ತ ಆಷಾಢಮಾಸ ಹುಟ್ಟುವ ವೇಳೆಗೆ ಕೃಷ್ಣಾಂಶ ಮೊದಲಾದವರೆಲ್ಲರೂ ತಮ್ಮ ಅನುಚರರೊಡನೆ ತಮ್ಮ ಊರಿಗೆ ಬಂದು ಸೇರಿದರು.

೧೭. ತಾಲನನು ಅವರೀರ್ವರು ಸಹೋದರರೊಡನೆ ಕನ್ಯಕುಬ್ಜ ಪಟ್ಟಣಕ್ಕೆ ಬಂದನು. ಅಲ್ಲಿ ಜಯಚಂದ್ರನ ಪ್ರಿಯಕುಮಾರನೂ, ವೀರನೂ ಆದ ಲಕ್ಷ್ಣಣಕುಮಾರನನ್ನು ಎಲ್ಲೂ ಕಾಣಲಿಲ್ಲ. ಹೀಗಾಗಲು ಕಾರಣವನ್ನು ವಿಚಾರಿಸಿ ತಿಳಿದು ಎಲ್ಲರೂ ಯೋಗಿಗಳ ವೇಷವನ್ನು ಧರಿಸಿದರು.

೧೮. ಧಾನ್ಯಪಾಲನು ಕೈಯಲ್ಲಿ ತಾಳವನ್ನು ಧರಿಸಿದನು. ತಾಲನನು ವೈಣಿಕನಾದನು. ಲಲ್ಲಸಿಂಹನು ಮೃದಂಗವಾದಕನಾದನು. ಹೀಗೆ ವೇಷಧಾರಿಗಳಾದ ಅವರೆಲ್ಲರೂ ಮಹಾವತೀ ನಗರಕ್ಕೆ ಬಂದರು.

೧೯. ಅಲ್ಲಿ ಇವರು ಪರಿಮಳರಾಜನ ಸಭೆಗೆ ಹೋಗಿ ಸಂತೋಷದಿಂದ ಸಂಗೀತಾದಿಗಳಲ್ಲಿ ಕೌಶಲವನ್ನು ತೋರಿಸಿದರು. ಇದರಿಂದ ರಾಜನೇ ಆದಿಯಾಗಿ ಸರ್ವರೂ ಸಂತೋಷಗೊಂಡರು.

ಪ್ರಸನ್ನಶ್ಚ ತದಾ ರಾಜಾ ಮುಕ್ತಾಮಾಲಾಂ ಸ್ವಕಂಠಗಾಂ ।
ತಾಲನಾಯ ದದೌ ಪ್ರೀತ್ಯಾ ತಾಭ್ಯಾಂ ಸ್ವರ್ಣಾಂಗುಲೀಯಕೇ ॥ ೨೦ ॥

ತದಾ ತೇ ಹರ್ಷಿತಾಃ ಸರ್ವೇ ಕೃಷ್ಣಾಂಶಂ ಪ್ರತಿ ಚಾಯಯುಃ ।
ಜ್ಞಾತ್ವಾ ಕೃಷ್ಣಾಂಶ ಏವಾಪಿ ಧೃತ್ವಾ ಯೋಗಮಯಂ ವಪುಃ ।
ಯಯೌ ಬಿಂದುಗಢಂ ವೀರಸ್ತಾಲನಾದ್ಯೈಸ್ಸಮನ್ವಿತಃ ॥ ೨೧ ॥

ಹಟ್ಟಮಧ್ಯೇ ಸಮಾಗಮ್ಯ ಕೃತ್ವಾ ರಾಸೋತ್ಸವಂ ಶುಭಂ ।
ಗೇಹಂ ಪದ್ಮಾಕರಸ್ಯೈವ ಗತ್ವಾ ತೇ ನನೃತುರ್ಮುದಾ ॥ ೨೨ ॥

ಏತಸ್ಮಿನ್ನಂತರೇ ಸರ್ವಾ ಯೋಷಿತಸ್ತತ್ರ ಚಾ ಗತಾಃ ।
ವೇಣುವಾದ್ಯನ್ವಿತಂ ವೀರಂ ಕೃಷ್ಣಾಂಶಂ ದದೃಶುರ್ಮುಹುಃ ।
ಮೋಹಿತಾಸ್ತಸ್ಯ ಗಾನೇನ ಜಡೀಭೂತಾ ಧನಂ ದದುಃ ॥ ೨೩ ॥

---

೨೦. ಆಗ ಪರಿಮಳರಾಜನು ಪ್ರಸನ್ನನಾಗಿ ತನ್ನ ಕಂಠದಲ್ಲಿದ್ದ ಮುಕ್ತಾ ಹಾರವನ್ನು ತಾಲನನಿಗೂ, ಧಾನ್ಯಪಾಲ ಲಲ್ಲಸಿಂಹರಿಗೆ ರತ್ನದ ಉಂಗುರಗಳನ್ನೂ ಸಹ, ಪ್ರೀತಿಯಿಂದ ಬಹುಮಾನ ಕೊಟ್ಟನು.

೨೧. ಆಗ ಇವರೆಲ್ಲರೂ ಸಂತೋಷಗೊಂಡು ಕೃಷ್ಣಾಂಶನ ಸಮೀಪಕ್ಕೆ ಬಂದರು. ಕೃಷ್ಣಾಂಶನು ಇವರು ಬಂದಿರುವ ಸಮಾಚಾರವನ್ನು ತಿಳಿದು ತಾನೂ ಯೋಗಿವೇಷವನ್ನು ಧರಿಸಿ ತಾಲನಾದಿಗಳೊಡನೆ ಹೊರಟು ಬಿಂದುಗಡಕ್ಕೆ ಬಂದನು.

೨೨. ಆ ಊರಿನ ರಂಗಸ್ಥಳಕ್ಕೆ ಬಂದು ಅಲ್ಲಿ ಮಂಗಳಕರವಾದ ರಾಸೋತ್ಸವದ ನರ್ತನ ಕೌಶಲವನ್ನು ತೋರಿಸಿ ಬಳಿಕ ಪದ್ಮಾಕರನ ಮನೆಗೂ ಬಂದು ಅಲ್ಲೂ ಸಂತೋಷದಿಂದ ನರ್ತನ ಮಾಡಿದರು.

೨೩. ಇಷ್ಟರಲ್ಲಿ ಪದ್ಮಾಕರನ ಮನೆಗೆ ಬಂದಿದ್ದ ಸ್ತ್ರೀಯರೆಲ್ಲರೂ ವೇಣುವಾದನದಿಂದ ಸಂತೋಷಗೊಳಿಸುತ್ತಿರುವ ಆ ವೀರನಾದ ಕೃಷ್ಣಾಂಶನನ್ನು ಬಾರಿ ಬಾರಿಗೂ ನೋಡಿ ಅವನ ಗಾನದಿಂದ ಮೋಹಿತರೂ ಮುಗ್ಧರೂ ಸ್ತಂಭಿತರೂ ಆಗಿ ಅವನಿಗೆ ಬೇಕಾದಷ್ಟು ದ್ರವ್ಯವನ್ನು ಕೊಟ್ಟರು.

ತದಾ ತು ಪದ್ಮಿನೀ ನಾರೀ ಸರ್ವಲಕ್ಷಣಸಂಯುತಾ ।
ಜ್ಞಾತ್ವಾ ಕೃಷ್ಣಾಂಶಮೇವಾಪಿ ರುರೋದ ಚಿರಮಾತುರಾ ॥ ೨೪ ॥

ಉವಾಚ ಚ ವಿಲಪ್ಯಾಶು ಮತ್ಪತಿರ್ಲಕ್ಷಣೋ ಬಲೀ ।
ಮಹೀರಾಜೇನ ಶೂರೇಣ ಕಾರಾಗಾರೇ ಬಲಾತ್ಕೃತಃ ॥ ೨೫ ॥

ಅಹಂ ಯೋಷಾ ಭವಾನ್ಯೋಗೀ ಕಥಂ ಕಾರ್ಯಂ ಭವಿಷ್ಯತಿ ।
ಇತಿ ಶ್ರುತ್ವಾ ತು ಸ ನೃಪೋ ಭುಜಮುತ್ಥಾಪ್ಯ ಸತ್ವರಂ ।
ಆಶ್ವಾಸ್ಯ ಪದ್ಮಿನೀಂ ನಾರೀಂ ಯಯುಸ್ತೇ ದೇಹಲೀಂ ಪ್ರತಿ ।
ರಾಜದ್ವಾರಮುಪಾಗಮ್ಯ ಕೃಷ್ಣಾಂಶಸ್ಸ ನನರ್ತ ಹ ॥ ೨೬ ॥

ಮಹೀರಾಜಸ್ತು ಬಲವಾನ್ ಪ್ರಸನ್ನಸ್ತಸ್ಯ ಲೀಲಯಾ ।
ವಾಂಛಿತಂ ಬ್ರೂಹಿ ಶೀಘ್ರಂ ತೇ ಸರ್ವಂ ಯೋಗಿನ್ ದದಾಮ್ಯಹಂ ॥ ೨೭ ॥

---

೨೪. ಆಗ ಸರ್ವಲಕ್ಷಣಸಂಪನ್ನೆಯಾದ ರಾಜಪುತ್ರಿ ಪದ್ಮಿನೀದೇವಿಯು ಈ ಗಾಯಕನು ಕೃಷ್ಣಾಂಶನೇ ಸರಿ ಎಂದು ತಿಳಿದು ಅವನ ಸಮೀಪಕ್ಕೆ ಬಂದು ಕಾತರಳಾಗಿ ಬಹುವಾಗಿ ರೋದಿಸತೊಡಗಿದಳು.

೨೫. ಆರೀತಿ ಬಹುವಾಗಿ ವಿಲಪಿಸಿ ಕೃಷ್ಣಾಂಶನನ್ನು ಕುರಿತು "ನನ್ನ ಪತಿಯೂ ಬಲಶಾಲಿಯೂ ಆದ ಲಕ್ಷಣನನ್ನು ಶೂರನಾದ ಪೃಥ್ವೀರಾಜನು ಬಲಾತ್ಕಾರವಾಗಿ ಸೆರೆಯಲ್ಲಿಟ್ಟಿದ್ದಾನೆ. ನಾನು ಅಬಲೆಯಾದ ಸ್ತ್ರೀ. ನೀನಾದರೋ ಈಗ ಯೋಗಿಯಾಗಿರುವೆ. ಹೀಗಿರುವಾಗ ಈಗ ಇದಕ್ಕೆ ಪ್ರತೀಕಾರಮಾಡಲು ಹೇಗೆತಾನೇ ಸಾಧ್ಯವಾದೀತು."

೨೬. ಹೀಗೆಂದು ಪದ್ಮಿನಿಯು ಸಾಭಿಪ್ರಾಯವಾಗಿ ಹೇಳಲು ಈ ಮಾತನ್ನು ಕೇಳಿ ಕೃಷ್ಣಾಂಶನು ಜಾಗ್ರತೆಯಾಗಿ ತನ್ನ ಭುಜಗಳನ್ನು ಕುಣಿಸುತ್ತಾ ಪದ್ಮಿನೀದೇವಿಯನ್ನು ಸಮಾಧಾನಪಡಿಸಿ ಎಲ್ಲರೂ ದೆಹಲಿಗೆ ಹೋದರು. ಅಲ್ಲಿ ಅರಮನೆಯ ಬಾಗಿಲಿಗೆ ಬಂದು ಕೃಷ್ಣಾಂಶನು ನರ್ತನ ಮಾಡಿದನು.

೨೭. ಬಲಶಾಲಿಯಾದ ಪೃಥ್ವೀರಾಜನು ಆ ಕೃಷ್ಣಾಂಶನ ನರ್ತನಲೀಲೆಯಿಂದ ಸಂತೋಷಗೊಂಡು "ಎಲೈ ಯೋಗಿಶ್ರೇಷ್ಠನೇ ನಿನಗೆ! ಬೇಕಾದುದನ್ನು ಕೇಳು; ಕೊಡುವೆನು" ಎಂದನು.

ಇತಿ ಶ್ರುತ್ವಾ ಭೂಪವಚೋ ವಿಹಸ್ಯೋವಾಚ ತಂ ಪ್ರತಿ ।
ಕಾರಾಗಾರಂ ಲೋಹಮಯಂ ನೃಪಯೋಗ್ಯಂ ಚ ಮೇ ನೃಪ ।
ದರ್ಶಯಾಶು ಸ್ವಕೀಯಂ ವೈ ಭವಾನ್ನೃಪಶಿರೋಮಣಿಃ ॥ ೨೮ ॥

ಇತಿ ಶ್ರುತ್ವಾ ಸ ನೃಪತಿರ್ಮೋಹಿತಃ ಕೃಷ್ಣಲೀಲಯಾ ।
ದರ್ಶಯಿತ್ವಾ ಚ ವೈ ಶೀಘ್ರಂ ಪುನಸ್ತೇಭ್ಯೋ ದದೌ ಧನಂ ॥ ೨೯ ॥

ತತಸ್ತೇ ಯೋಗಿನಸ್ಸರ್ವೇ ಸಂಪ್ರಾಪ್ಯ ಚ ಮಹಾವತೀಂ ।
ಗತ್ವಾ ಪರಿಮಲಂ ಭೂಪಂ ಗದಿತ್ವಾ ಸರ್ವಕಾರಣಂ ॥ ೩೦ ॥

ಸ್ವಸೇನಾಂ ಸಜ್ಜಯಾಮಾಸ ಚಾಹ್ಲಾದಶ್ಚ ನೃಪಾಜ್ಞಯಾ ।
ಪಂಚಲಕ್ಷಂ ಮಹಾವತ್ಯಾ ಹಯಾರೂಢಾಸ್ಸಮಾಸ್ಥಿತಾಃ ॥ ೩೧ ॥

---

೨೮. ಆಗ ಪೃಥ್ವೀರಾಜನ ಈ ಮಾತನ್ನು ಕೇಳಿ ಕೃಷ್ಣಾಂಶನು ಸ್ವಲ್ಪ ನಕ್ಕು ಅವನನ್ನು ಕುರಿತು "ಎಲೈ ರಾಜಶಿರೋಮಣಿಯೇ! ನೃಪಶ್ರೇಷ್ಠನಾದ ನೀನು ನಿನ್ನ ಶತ್ರುರಾಜರನ್ನು ಇಡಲು ಯೋಗ್ಯವಾಗಿ ಮಾಡಿಸಿರುವ ಲೋಹಮಯವಾದ ಸ್ವಕೀಯವಾದ ಸೆರೆಮನೆಯನ್ನು ನನಗೆ ಶೀಘ್ರವಾಗಿ ತೋರಿಸು" ಎಂದು ಕೇಳಿದನು.

೨೯. ಇದನ್ನು ಕೇಳಿ ಕೃಷ್ಣಾಂಶನ ನರ್ತನದಿಂದ ಮೋಹಗೊಂಡಿದ್ದ ಪೃಥ್ವೀರಾಜನು ಅವರಿಗೆ ಜಾಗ್ರತೆಯಾಗಿ ಆ ಕಾರಾಗೃಹವನ್ನು ತೋರಿಸಿ ಪುನಃ ದ್ರವ್ಯವನ್ನು ಕೊಟ್ಟು ಕಳುಹಿಸಿದನು.

೩೦-೩೧. ಅನಂತರ ಯೋಗಿಗಳಾದ ಕೃಷ್ಣಾಂಶ ಮೊದಲಾದವರೆಲ್ಲರೂ ಅಲ್ಲಿಂದ ಮಹಾವತೀನಗರಕ್ಕೆ ಬಂದು ಪರಿಮಳರಾಜನಿಗೆ ನಮಸ್ಕರಿಸಿ ಲಕ್ಷಣನು ಸೆರೆ ಸಿಕ್ಕಿದ್ದಕ್ಕೆ ಕಾರಣವೆಲ್ಲವನ್ನೂ ಅವನಿಗೆ ತಿಳಿಸಿದನು. ಆಗ ಮಹಾಮತಿಯಾದ ಆಹ್ಲಾದನು ರಾಜನ ಅಪ್ಪಣೆಯಂತೆ ತನ್ನ ಸೇನೆಯನ್ನು ಸಿದ್ಧಗೊಳಿಸಿದನು. ಅಲ್ಲಿ ಐದುಲಕ್ಷ ಅಶ್ವಸೇನೆಯು ಸನ್ನದ್ಧವಾಯಿತು.

ತಾಲನಸ್ಸಪ್ತ ಲಕ್ಷಾಣಿ ಸೈನ್ಯಾನ್ಯಾಹೂಯ ಚಾಗತಃ ।
ಏವಂ ದ್ವಾದಶಲಕ್ಷಾಣಿ ಕ್ಷತ್ರಿಯಾ ರಣದುರ್ಮದಾಃ ।
ದೇಹಲೀಂ ಚ ಸಮಾಜಗ್ಮುಸ್ಸರ್ವಶಸ್ತ್ರಸಮನ್ವಿತಾಃ ॥ ೩೨ ॥

ಏತಸ್ಮಿನ್ನಂತರೇ ಮಂತ್ರೀ ಚಂದ್ರಭಟ್ಟೋ ವಿಶಾರದಃ ।
ಸರ್ವಶಾಸ್ತ್ರಾರ್ಥಕುಶಲೋ ವೈಷ್ಣವೀಶಕ್ತಿಪೂಜಕಃ ॥ ೩೩ ॥

ಮಹೀರಾಜಂ ಸಮಾಗಮ್ಯ ವಚಃ ಪ್ರಾಹ ಶೃಣುಷ್ವ ಭೋಃ ।
ಮಯಾ ವೈ ಚ ರಹಃ ಕ್ರೀಡಾ ದೃಷ್ಟಾ ದೇವೀಪ್ರಸಾದತಃ ॥ ೩೪ ॥

ತತ್ರೋದಯಶ್ಚ ಕೃಷ್ಣಾಂಶಃ ಪೂರ್ಣಬ್ರಹ್ಮಾಣಮಾಗಮತ್ ।
ವಚಃ ಪ್ರಾಹ ಪ್ರಸನ್ನಾತ್ಮಾ ಶೃಣು ತ್ವಂ ಸತ್ವವಿಗ್ರಹ ॥ ೩೫ ॥

ಅಗ್ನಿವಂಶವಿನಾಶಾಯ ಚಾದ್ಯ ಯಾಸ್ಯಾಮಿ ದೇಹಲೀಂ ।
ಹತ್ವಾಹಂ ಕೌರವಾಂಶಾಂಶ್ಚ ಸ್ಥಾಪಯಿತ್ವಾ ಕಲಿಂ ಭುವಿ ॥ ೩೬ ॥

---

೩೨. ತಾಲನನು ತನ್ನ ಏಳುಲಕ್ಷ ಸೇನೆಯೊಡನೆ ಬಂದನು. ಈರೀತಿ ಹನ್ನೆರಡುಲಕ್ಷ ರಣಮತ್ತರಾದ ಕ್ಷತ್ರಿಯರು ಸಕಲ ಶಸ್ತ್ರಾಸ್ತ್ರಸನ್ನದ್ಧರಾಗಿ ದೆಹಲಿಗೆ ಬಂದರು.

೩೩-೩೪. ಈ ಸಂದರ್ಭದಲ್ಲಿ ಪೃಥ್ವೀರಾಜನ ಮಂತ್ರಿಯೂ ಪಂಡಿತನೂ ಸಕಲ ಶಾಸ್ತ್ರಾರ್ಥನಿಪುಣನೂ ವೈಷ್ಣವೀ ಶಕ್ತ್ಯಾರಾಧಕನೂ ಆದ ಚಂದ್ರಭಟ್ಟನು ಪೃಥ್ವೀರಾಜನ ಸಮೀಪಕ್ಕೆ ಬಂದು ಅವನನ್ನು ಕುರಿತು "ಮಹಾರಾಜನೇ! ನಾನು ಹೇಳುವುದನ್ನು ಕೇಳು. ನಾನು ದೇವಿಯ ಅನುಗ್ರಹದಿಂದ ಪರಮಾತ್ಮನ ಅಂತರಂಗ ಕ್ರೀಡೆಯನ್ನು ನೋಡಿದೆನು."

೩೫. "ಆ ರಹಸ್ಯವಾದ ಕ್ರೀಡೆಯಲ್ಲಿ ಉದಯನೆಂಬ ಹೆಸರುಳ್ಳ ಕೃಷ್ಣಾಂಶನು ಪರಿಪೂರ್ಣಪರಬ್ರಹ್ಮನ ಸಮೀಪಕ್ಕೆ ಬಂದು ಸಂತೋಷದಿಂದ ಪರಮಾತ್ಮನನ್ನು ಕುರಿತು ಹೇಳತೊಡಗಿ,

೩೬. "ಎಲೈ ಸತ್ಯಸ್ವರೂಪನೇ! ಕೇಳು. ಈಗ ನಾನು ಅಗ್ನಿವಂಶವನ್ನು ನಾಶಮಾಡುವುದಕ್ಕಾಗಿ ದೆಹಲಿಗೆ ಹೋಗುವೆನು. ಅಲ್ಲಿ ಕೌರವಾಂಶಸಂಭೂತರಾದ ರಾಜರನ್ನೆಲ್ಲಾ ಧ್ವಂಸಮಾಡಿ ಭೂಮಿಯಲ್ಲಿ ಕಲಿಧರ್ಮವನ್ನು ಸ್ಥಾಪಿಸುವೆನು."

ಪುನಸ್ತ್ವಾಮಾಂತಿಕಂ ಪ್ರಾಪ್ಯ ರಹಃ ಕ್ರೀಡಾಂ ಕರೋಮ್ಯಹಂ ।
ಇತ್ಯುಕ್ತ್ವಾ ಬಿಂದುಲಾರೂಢಃ ಸ ವೀರಸ್ತ್ವಾಮುಪಸ್ಥಿತಃ ।
ಇತ್ಯಹಂ ದೃಷ್ಟವಾನ್ಭೂಪ ಕೃಷ್ಣಾಂಶಂ ಯೋಗನಿದ್ರಯಾ ॥ ೩೭ ॥

ಇತಿ ತಸ್ಯ ವಚಃ ಶ್ರುತ್ವಾ ಸ ಭೂಪೋ ವಿಸ್ಮಯಾನ್ವಿತಃ ।
ಭಯಭೀತಃ ಸಹಸ್ರಾಣಿ ಶೂರಾನಾಹೂಯ ಸತ್ವರಂ ।
ತೇಭ್ಯಶ್ಚ ಲಕ್ಷಣಂ ದತ್ವಾ ವಚನಂ ಪ್ರಾಹ ತಾನ್‌ಪ್ರತಿ ॥ ೩೮ ॥

ಪದ್ಮಾಕರಾಯ ಭೂಪಾಯ ಗತ್ವಾ ದತ್ವಾಶು ಲಕ್ಷಣಂ ।
ಮಮಾಂತಿಕಮುಪಾಗಮ್ಯ ಕಾರಣಂ ವದತಾಶು ತತ್ ॥ ೩೯ ॥

ಇತಿ ಶ್ರುತ್ವಾ ತು ತೇ ಸರ್ವೇ ವಹ್ನಿವಂಶ್ಯಾ ಮಹಾಬಲಾಃ ।
ಗತ್ವಾ ತತ್ರ ತಥಾ ಕೃತ್ವಾ ಮಹೀರಾಜಮುಪಾಗಮನ್ ॥ ೪೦ ॥

---

೩೭. "ಬಳಿಕ ಪುನಃ ನಿನ್ನ ಸಮೀಪಕ್ಕೆ ಬಂದು ರಹಃಕ್ರೀಡಾನಿರತನಾಗುವೆನು ಎಂದು ಹೇಳಿ ವೀರನಾದ ಆ ಕೃಷ್ಣಾಂಶನು ತನ್ನ ಬಿಂದುಲಾಶ್ವವನ್ನೇರಿ ನಿನ್ನ ಸಮೀಪಕ್ಕೆ ಬಂದನು. ನಾನು ಈ ದೃಶ್ಯವನ್ನು ಯೋಗನಿದ್ರೆಯಲ್ಲಿದ್ದಾಗ ನೋಡಿದೆನು" ಎಂದು ಹೇಳಿದನು.

೩೮. ಈರೀತಿ ಮಂತ್ರಿಯಾದ ಚಂದ್ರಭಟ್ಟನು ಹೇಳಿದುದನ್ನು ಕೇಳಿ ಆ ಪೃಥ್ವೀರಾಜನು ಆಶ್ಚರ್ಯಪಟ್ಟರೂ ಗಾಬರಿಗೊಂಡು ದಿಗಿಲುಬಿದ್ದು ಸಾವಿರಜನ ಶೂರರನ್ನು ಕರೆಯಿಸಿ ಅವರ ವಶಕ್ಕೆ ಲಕ್ಷಣನನ್ನು ಒಪ್ಪಿಸಿ ಅವರನ್ನು ಕುರಿತು ಇಂತೆಂದನು.

೩೯. "ನೀವೆಲ್ಲಾ ಪದ್ಮಾಕರರಾಜನ ಸಮೀಪಕ್ಕೆ ಹೋಗಿ ಲಕ್ಷಣನನ್ನು ಅವನ ವಶಪಡಿಸಿ ಇಲ್ಲಿ ನಡೆದ ವರ್ತಮಾನವನ್ನು ಸಕಾರಣವಾಗಿ ತಿಳಿಸಿ ಹಿಂದಿರುಗಿ ಬನ್ನಿ" ಎಂದು ಆಜ್ಞಾಪಿಸಿದನು.

೪೦. ಆಗ ಅಗ್ನಿವಂಶಸಂಭೂತರೂ, ಮಹಾಬಲಶಾಲಿಗಳೂ ಆದ ಪೃಥ್ವೀರಾಜನ ಕಡೆಯವರು ರಾಜನ ಮಾತನ್ನು ಲಾಲಿಸಿ ಆದರಂತೆ ನಡೆಸಿ ಪುನಃ ಪೃಥ್ವೀರಾಜನಲ್ಲಿಗೆ ಬಂದರು.

ಭಗದಂತಶ್ಚ ತೇಷಾಂ ತು ಸಹಸ್ರಾಣಾಂ ಚ ನಾಯಕಃ ।
ಮಹೀರಾಜಂ ವಚಃ ಪ್ರಾಹ ಶೃಣು ತನ್ನೃಪಭಾಷಿತಂ ॥ ೪೧ ॥

ಪದ್ಮಿನೀ ಮೇ ಸ್ವಸಾ ರಾಜನ್ ಗುಪ್ತವಿದ್ಯಾವಿಶಾರದಾ ।
ತಯಾ ಯಜ್ಞಪತಿರ್ದೇವಃ ಸಮ್ಯಗಾರಾಧಿತಃ ಪುರಾ ॥ ೪೨ ॥

ದತ್ತಸ್ತೇನ ವರೋ ರಮ್ಯೋ ಹ್ಯಂತರ್ಧಾನಮಯಃ ಪರಃ ।
ಸಾ ತು ತಂ ಲಕ್ಷಣಂ ಕಾಂತಮಂತರ್ಧಾನಂ ಕರಿಷ್ಯತಿ ।
ಇತಿ ಶ್ರುತ್ವಾ ಸ ನೃಪತಿಃ ಪರಮಾನಂದಮಾಪ್ತವಾನ್ ॥ ೪೩ ॥

ಏತಸ್ಮಿನ್ನಂತರೇ ಪ್ರಾಪ್ತಾಃ ಕೃಷ್ಣಾಂಶಾದ್ಯಾ ಮಹಾಬಲಾಃ ।
ರುರುಧುರ್ದೇಹಲೀಂ ಸರ್ವಾಂ ಮಹೀರಾಜೇನ ಪಾಲಿತಾಂ ॥ ೪೪ ॥

ಸ ತದಾ ಪೃಥಿವೀರಾಜೋ ಗೃಹೀತ್ವಾ ಬಹುಭೂಷಣಂ ।
ಸರ್ವೇಭ್ಯಶ್ಚ ದದೌ ಪ್ರೇಮ್ಣಾ ವಚನಂ ಪ್ರಾಹ ನಮ್ರಧೀಃ ॥ ೪೫ ॥

---

೪೧. ಆ ಸಾವಿರಜನ ಶೂರರಿಗೆ ನಾಯಕನಾದ ಭಗದಂತನೆಂಬಾತನು ಪೃಥ್ವೀರಾಜನನ್ನು ಕುರಿತು "ಪದ್ಮಾಕರನು ಹೇಳಿಕಳುಹಿಸಿದ ಮಾತನ್ನು ನಿನಗೆ ಹೇಳುವೆನು ಕೇಳು" ಎಂದು ಹೇಳತೊಡಗಿದನು.

೪೨. "ಎಲೈ ರಾಜನೇ! ಪದ್ಮಿನಿಯು ನನ್ನ ತಂಗಿ. ರಹಸ್ಯವಿದ್ಯೆಯಲ್ಲಿ ನಿಪುಣೆಯು. ಪೂರ್ವದಲ್ಲಿ ಇವಳು ಯಜ್ಞೇಶ್ವರನನ್ನು ಚೆನ್ನಾಗಿ ಪೂಜಸಿದ್ದಳು."

೪೩. "ಅದರಿಂದ ಸಂತುಷ್ಟನಾದ ಯಜ್ಞೇಶ್ವರನು ಅವಳಿಗೆ ಅಂತರ್ಧಾನ ಮಾಡುವ ಶ್ರೇಷ್ಠವಾದ ವರವನ್ನು ಕರುಣಿಸಿರುವನು. ಅವಳು ಈಗ ತನ್ನ ಪತಿಯಾದ ಲಕ್ಷಣನನ್ನು ಅಂತರ್ಧಾನ ಮಾಡುವಳು." (ಅದರಿಂದ ನಮಗೆ ಅಪರಾಧದ ಭಯ ವಿಲ್ಲ) ಎಂದು ಹೇಳಿದನು. ಪೃಥ್ವೀರಾಜನು ಈ ಮಾತನ್ನು ಕೇಳಿ ತುಂಬಾ ಸಂತೋಷಹೊಂದಿದನು.

೪೪. ಇಷ್ಟರೊಳಗೆ ಮಹಾಬಲಶಾಲಿಗಳಾದ ಕೃಷ್ಣಾಂಶಾದಿಗಳು ದೆಹಲಿಗೆ ಬಂದು ಪೃಥ್ವೀರಾಜನಿಂದ ರಕ್ಷಿತವಾದ ಆ ಪಟ್ಟಣಕ್ಕೆ ಮುತ್ತಿಗೆ ಹಾಕಿದರು.

೪೫. ಆಗ ಆ ಪೃಥ್ವೀರಾಜನು ತುಂಬ ಆಭರಣಗಳನ್ನು ತೆಗೆದುಕೊಂಡು ಆ ಕೃಷ್ಣಾಂಶಾದಿಗಳ ಸಮೀಪಕ್ಕೆ ಹೋಗಿ ಅವರೆಲ್ಲರಿಗೂ ಪ್ರೀತಿಪೂರ್ವಕವಾಗಿ ಅದನ್ನು ಸಮರ್ಪಿಸಿ ವಿನಯದಿಂದ ಅವರನ್ನು ಕುರಿತು ಹೀಗೆ ಹೇಳಿದನು.

ಲಕ್ಷಣೋ ನಾಮ ತೇ ರಾಜಾ ಕಾರಾಗಾರೇ ನ ವೈ ಮಮ ।
ಯದಿ ಮನ್ನಗರೇ ಚಾಸ್ತಿ ತರ್ಹಿ ತೇ ರೋಷ ಈದೃಶಃ ॥ ೪೬ ॥

ಇತ್ಯುಕ್ತ್ವಾ ತಂ ಚ ಕೃಷ್ಣಾಂಶಂ ದರ್ಶಯಾಮಾಸ ವೈ ಗೃಹಂ ।
ಮಹಾದೇವಸ್ಯ ಶಪಥಂ ಕೃತವಾನ್ಭೂಪತಿರ್ಭಯಾತ್ ॥ ೪೭ ॥

ತದೋದಯೋ ಭೂಪವಚಃ ಸತ್ಯಂ ಮತ್ವಾ ಸುದುಃಖಿತಃ ।
ಸ್ವಕೀಯೈಃ ಸಹ ಸಂಪ್ರಾಪ್ತೋ ಗ್ರಾಮಂ ಬಿಂದುಗಢಂ ಶುಭಂ ॥ ೪೮ ॥

ಕಾಮಪಾಲಸ್ತು ತಚ್ಛ್ರುತ್ವಾ ಕೃಷ್ಣಾಂಶಾಗಮನಂ ಬಲೀ ।
ಬಲಿಂ ಬಹು ಗೃಹೀತ್ವಾಶು ಕೃಷ್ಣಾಂಶಂ ಶರಣಂ ಯಯೌ ।
ಪ್ರಾಂಜಲಿಃ ಪ್ರಣತೋ ಭೂತ್ವಾ ವಚನಂ ಪ್ರಾಹ ಭೀರುಕಃ ॥ ೪೯ ॥

---

೪೬. "ಎಲೈ ವೀರರಿರಾ! ನಿಮ್ಮ ರಾಜನಾದ ಲಕ್ಷಣನು ನನ್ನ ಸೆರೆಮನೆಯಲ್ಲಿಲ್ಲ. ನನ್ನ ಪಟ್ಟಣದಲ್ಲಿ ಅವನಿದ್ದದ್ದೇ ಆದರೆ ನೀವು ಹೀಗೆ ಕೋಪಮಾಡುವುದು ನ್ಯಾಯ."

೪೭. "ನಿಷ್ಕಾರಣವಾಗಿ ಸುಮ್ಮನೆ ಏಕೆ ಕೋಪಗೊಳ್ಳುತ್ತೀರಿ." ಎಂದು ಹೇಳಿ ಕೃಷ್ಣಾಂಶಾದಿಗಳನ್ನು ಜತೆಯಲ್ಲಿ ಕರೆದೊಯ್ದು ತನ್ನ ಮನೆಯ ಎಲ್ಲ ಭಾಗಗಳನ್ನೂ ತೋರಿಸಿದನು. ಮತ್ತು ಹೆದರಿಕೆಯಿಂದ ಆ ಪೃಥ್ವೀರಾಜನು ಪರಮೇಶ್ವರನ ಮೇಲೆ ಆಣೆಯಿಟ್ಟು ಪ್ರಮಾಣಮಾಡಿ ಹೇಳಿದನು.

೪೮. ಆಗ ಉದಯನು (ಕೃಷ್ಣಾಂಶನು) ಪೃಥ್ವೀರಾಜನಾಡಿದ ಮಾತನ್ನು ನಿಜವೆಂದು ತಿಳಿದು ಬಹಳ ದುಃಖದಿಂದ ಕೂಡಿದವನಾಗಿ ತನ್ನ ಸೈನ್ಯಗಳೊಡನೆ ಅಲ್ಲಿಂದ ಹೊರಟು ಸುಂದರವಾದ ಬಿಂದುಗಡಗ್ರಾಮಕ್ಕೆ ಬಂದನು.

೪೯. ಅಲ್ಲಿನ ರಾಜನೂ ಬಲಶಾಲಿಯೂ ಆದ ಕಾಮಪಾಲನು ಕೃಷ್ಣಾಂಶನು ಬಂದಿರುವುದನ್ನು ತಿಳಿದು, ಅವನನ್ನು ಗೌರವಿಸುವುದಕ್ಕಾಗಿ ಹೊರಟು ತುಂಬಾ ಕಾಣಿಕೆಯ ವಸ್ತುಗಳೊಡನೆ ಕೃಷ್ಣಾಂಶನ ಸಮೀಪಕ್ಕೆ ಬಂದು ಅವನನ್ನು ಮರೆಹೊಕ್ಕು ಕೈಮುಗಿದುಕೊಂಡು ಹೆದರಿಕೆಯಿಂದ ಅವನನ್ನು ಕುರಿತು ಈರೀತಿ ಹೇಳಿದನು.

ಸುತಾ ಮೇ ಪದ್ಮಿನೀ ನಾರೀ ಲಕ್ಷಣೇನ ಸಮನ್ವಿತಾ ।
ನ ಜ್ಞಾತಾ ಕ್ವ ಗತಾಽಸ್ಮಾಭಿಸ್ಸತ್ಯಂ ಸತ್ಯಂ ಬ್ರವೀಮ್ಯಹಂ ॥ ೫೦ ॥

ಇತಿ ತದ್ವಚನಂ ಶ್ರುತ್ವಾ ಕೃಷ್ಣಾಂಶಃ ಸ್ವಬಲೈ ಸ್ಸಹ ।
ಕಾನ್ಯಕುಬ್ಜಂ ಸಮಾಗತ್ಯ ಜಯಚಂದ್ರಮುವಾಚ ಹ ॥ ೫೧ ॥

ಭ್ರಾತೃಜಸ್ತವ ಭೂಪಾಲ ಪದ್ಮಿನ್ಯಾ ಲಕ್ಷಣೋಽನ್ವಿತಃ ।
ಕಾಮಪಾಲಗೃಹೇ ನಾಸ್ತಿ ನಿಶ್ಚಿತೋ ಬಹುಧಾ ಮಯಾ ॥ ೫೨ ॥

ನ ಜಾನೇ ಕ್ವ ಗತೋ ರಾಜಾ ಮಮ ಪ್ರಾಣಸಮೋ ಭುವಿ ।
ಯದಿ ಭೂಪ ನ ಪಶ್ಯಾಮಿ ಸತ್ಯಂ ಪ್ರಾಣಾಂಸ್ತ್ಯಜಾಮ್ಯಹಂ ॥ ೫೩ ॥

ಹಾ ರತ್ನಭಾನುತನಯ ವಿಷ್ಣುಭಕ್ತ ಶುಭಂಕರ ।
ಸ್ವಮಿತ್ರಂ ಮಾಂ ಪರಿತ್ಯಜ್ಯ ಕಾಂ ದಿಶಂ ಗತವಾನ್ನೃಪಾನ್ ।
ಇತ್ಯುಕ್ತ್ವಾ ಮೂರ್ಛಿತಶ್ಚಾಸೀತ್ಕೃಷ್ಣಾಂಶೋ ವೈಷ್ಣವಪ್ರಿಯಃ ॥ ೫೪ ॥

---

೫೦. "ಎಲೈ ವೀರನೇ! ನನ್ನ ಮಗಳಾದ ಪದ್ಮಿನಿಯು ಲಕ್ಷಣನೊಡನೆ ಇಲ್ಲಿಂದ ಹೊರಟು ಎಲ್ಲಿ ಹೋದಳೋ ನನಗೆ ತಿಳಿಯದು. ಸತ್ಯವಾಗಿಯೂ ನಾನು ನಿನಗೆ, ಇದ್ದ ಸಂಗತಿಯನ್ನು ಮರೆಮಾಚದೆ ತಿಳಿಸುತ್ತಿದ್ದೇನೆ" ಎಂದು ಹೇಳಿದನು.

೫೧. ಕೃಷ್ಣಾಂಶನು ಆ ಕಾಮಪಾಲನು ಹೇಳಿದ ಮಾತನ್ನು ಕೇಳಿ ನಿರಾಶನಾಗಿ ಅಲ್ಲಿಂದ ತನ್ನ ಸೇನೆಯೊಡನೆ ಹಿಂದಿರುಗಿ ಕನ್ಯಕುಬ್ಜಕ್ಕೆ ಬಂದು ಜಯಚಂದ್ರನನ್ನು ಕುರಿತು ಇಂತೆಂದನು.

೫೨. "ಎಲೈ ಮಹಾರಾಜನೇ! ನಿನ್ನ ತಮ್ಮನ ಮಗನಾದ ಲಕ್ಷಣನು ತನ್ನ ಪ್ರಿಯೆಯಾದ ಪತ್ನಿಯೊಡನೆ ಎಲ್ಲೋ ಅದೃಶ್ಯನಾದನು. ನಾನು ಅವನನ್ನು ಬಹುವಾಗಿ ಶೋಧಿಸಿದರೂ ಕಾಮಪಾಲನ ಮನೆಯಲ್ಲಿ ಕಾಣಲಿಲ್ಲ.

೫೩. "ನನಗೆ ಪ್ರಾಣಪ್ರಿಯನಾದ ರಾಜಕುಮಾರ ಲಕ್ಷಣನು ಭೂಮಂಡಲದಲ್ಲಿ ಎಲ್ಲಿ ಅಡಗಿಕೊಂಡಿರುವನೋ ತಿಳಿಯದು. ಅಯ್ಯಾ ರಾಜನೇ! ಅವನನ್ನು ನಾನು ಕಾಣದೆಹೋದರೆ ನಿಜವಾಗಿ ನಾನೂ ಪ್ರಾಣತ್ಯಾಗ ಮಾಡುವೆನು."

೫೪. "ರತ್ನಭಾನುಪುತ್ರನೂ, ವಿಷ್ಣುಭಕ್ತನೂ, ಶುಭಕರನೂ ಆದ ಎಲೈ ಲಕ್ಷಣನೇ! ನಿನ್ನ ಪ್ರಿಯಮಿತ್ರನಾದ ನನ್ನನ್ನು ಬಿಟ್ಟು ಯಾವ ದಿಕ್ಕಿಗೆ ಹೋಗಿರುವೆ" ಎಂದು ರೋದನಮಾಡುತ್ತಾ ವೈಷ್ಣವಪ್ರಿಯನಾದ ಕೃಷ್ಣಾಂಶನು ಮೂರ್ಛಿತನಾದನು.

ತದಾ ಸ್ವರ್ಣವತೀ ದೇವೀ ಸ್ವದಾಸ್ಯಾ ಶೋಭಯಾ ಸಹ ।
ಧೃತ್ವಾ ಶುಕಮಯಂ ರೂಪಂ ತತ್ರಾಗತ್ಯ ಸ್ವಮೂರ್ತಿಗಾ ॥ ೫೫ ॥

ತಯಾ ಸಂಪ್ರೇಷಿತಾ ಶೋಭಾ ಮ್ಲೇಚ್ಛಮಾಯಾವಿಶಾರದಾ ।
ಜಯಚಂದ್ರಮುಪಾಗಮ್ಯ ಧೃತ್ವಾ ದಿವ್ಯಮಯಂ ವಪುಃ ॥ ೫೬ ॥

ಉವಾಚ ವಚನಂ ತತ್ರ ಶೃಣು ಭೂಪಶಿರೋಮಣೇ ।
ಮಾಯಾವಿನೀಂ ಚ ಮಾಂ ವಿದ್ಧಿ ಶೋಭನಾಂ ನಾಮ ವಿಶ್ರುತಾಂ ॥ ೫೭ ||

ದಂಪತೀ ತವ ಭೂಪಾಲ ಸಂಹೃತೌ ಯೇನ ಯತ್ರ ವೈ ।
ತತ್ರಾಹಂ ಚ ಗಮಿಷ್ಯಾಮಿ ಮಹಾಮದಸಮನ್ವಿತಾ ॥ ೫೮ ॥

ಆಹ್ಲಾದಶ್ಚೇಂದುಲೋ ವೀರೋ ದೇವೋ ವೈ ತಾಲನೋ ಬಲೀ ।
ಕೃಷ್ಣಾಂಶಪಾಲಿತಾಸ್ಸರ್ವೇ ಯಾಸ್ಯಾಮೋ ಭೂಪತೇ ವಯಂ || ೫೯ ॥

---

೫೫. ಆಗ ಸ್ವರ್ಣವತೀದೇವಿಯು ತನ್ನ ದಾಸಿಯಾದ ಶೋಭಾವೇಶ್ಯೆಯೊಡನೆ ಗಿಣಿಯ ರೂಪವನ್ನು ಧರಿಸಿ ಹೊರಟು ಕೃಷ್ಣಾಂಶನಿದ್ದೆಡೆಗೆ ಬಂದು ಅಲ್ಲಿ ತನ್ನ ನಿಜವಾದ ರೂಪವನ್ನು ಧರಿಸಿಕೊಂಡಳು.

೫೬. ಅನಂತರ ಆ ಸ್ವರ್ಣವತಿಯು ಮ್ಲೇಚ್ಛಮಾಯಾವಿಶಾರದೆಯಾದ ಶೋಭಾವೇಶ್ಯೆಯನ್ನು ಜಯಚಂದ್ರನ ಬಳಿಗೆ ಕಳುಹಿಸಲಾಗಿ, ಆಕೆ ದಿವ್ಯಸುಂದರವಾದ ರೂಪವನ್ನು ಧರಿಸಿ ಜಯಚಂದ್ರರಾಜನನ್ನು ಕುರಿತು ಹೀಗೆ ಹೇಳತೊಡಗಿದಳು.

೫೭. "ಎಲೈ ರಾಜಶ್ರೇಷ್ಠನೇ! ನಾನು ಮಾಯಾವಿನಿ. ನನ್ನ ಹೆಸರು ಶೋಭನಾ ಎಂದು ಪ್ರಸಿದ್ಧವಾಗಿರುವುದು.

೫೮-೫೯. ನಿನ್ನ ಮಗನನ್ನೂ, ಸೊಸೆಯನ್ನೂ ಯಾರು ಅಪಹರಿಸಿ ಎಲ್ಲಿಟ್ಟಿರುವರೋ ಅಲ್ಲಿಗೆ (ನನ್ನ ಗುರುವಾದ) ಮಹಾಮದನೊಡನೆ ಹೊರಡುವೆನು. ಜತೆಯಲ್ಲಿ ಆಹ್ಲಾದನೂ, ವೀರನಾದ ಇಂದುಲನೂ, ದೇವಸಿಂಹನೂ, ಬಲಶಾಲಿಯಾದ ತಾಲನನೂ ಎಲ್ಲರೂ ಕೃಷ್ಣಾಂಶನ ಬೆಂಬಲದಿಂದ ಕೂಡಿ ಹೊರಡುವೆವು. ಎಂಬದಾಗಿ ಹೇಳಿದಳು.

ಇತ್ಯುಕ್ತ್ವಾ ಶೋಭನಾ ವೇಶ್ಯಾ ಕೃತ್ವಾ ಯೋಗಮಯಂ ವಪುಃ ।
ಮಹಾಮದಂ ಸಮಾರುಹ್ಯ ಪೈಶಾಚಂ ರುದ್ರಕಿಂಕರಂ ।
ಪ್ರಯಯೌ ತಾನ್ ಪುರಸ್ಕೃತ್ಯ ಯೋಗಿವೇಷಾನ್ ಮಹಾಬಲಾನ್॥ ೬೦ ॥

ಆಹ್ಲಾದೋ ಗಜಸಂಸ್ಥೋ ವೈ ಕರಾಲಾರೂಢ ಇಂದುಲಃ ।
ತಾಲನಃ ಸಿಂಹಿನೀಸಂಸ್ಥೋ ದೇವಸಿಂಹೋ ಮನೋರಥೇ　　॥ ೬೧ ॥

ಕೃಷ್ಣಾಂಶೋ ಬಿಂದುಲಾರೂಢೋ ನರ್ತಯಾಮಾಸ ತಂ ಹಯಂ ।
ಕಾಮರೂಪಮಯಂ ದೇಶಂ ಶತಯೋಜನಗಾಮಿನಃ ।
ಬಲವಂತಶ್ಚ ಸಂಪ್ರಾಪ್ತಾ ಗೇಹೇಗೇಹೇ ಜನೇಜನೇ ।
ಲಕ್ಷಣಂ ಶೋಧಯಾಮಾಸುರ್ನ ಪ್ರಾಪ್ತಾಸ್ತತ್ರ ತಂ ನೃಪಂ　　॥ ೬೨ ॥

ಪುನರ್ಮಯೂರನಗರಂ ಶೋಭನಾ ತೈಃ ಸಮನ್ವಿತಾ ।
ಚಿನ್ವತೀ ತಂ ಮನುಷ್ಯೇಷು ನ ಪ್ರಾಪ್ತಾ ತತ್ರ ವೈ ನೃಪಂ　　॥ ೬೩ ॥

---

೬೦ ಶೋಭಾವೇಶ್ಯೆಯು ಹೀಗೆ ಹೇಳಿ, ಅನಂತರ ತಾನೂ ಯೋಗಮಯವಾದ ಶರೀರವನ್ನು ಧರಿಸಿ ರುದ್ರಕಿಂಕರನೂ ಪಿಶಾಚಾಧಿಪತಿಯೂ ಆದ ಮಹಾಮದನ ಮೇಲೆ ಕುಳಿತು ಮಹಾಬಲಶಾಲಿಗಳಾಗಿ ಯೋಗಿವೇಷಧರಿಸಿದ ಕೃಷ್ಣಾಂಶ ಮೊದಲಾದವರನ್ನು ಮುಂದುಮಾಡಿಕೊಂಡು ಹೊರಟಳು.

೬೧. ಆಗ ಆಹ್ಲಾದನು ತನ್ನ ಆನೆಯನ್ನೇರಿದನು. ಇಂದುಲನು ಕರಾಲಾಶ್ವವನ್ನೂ, ತಾಲನನು ಸಿಂಹಿನೀಕುದುರೆಯನ್ನೂ ಏರಿ ಕುಳಿತುಕೊಂಡಿದ್ದರು.

೬೨. ಮತ್ತು ಕೃಷ್ಣಾಂಶನು ತನ್ನ ಬಿಂದುಲಾಶ್ವವನ್ನೇರಿ ಆ ಕುದುರೆಯನ್ನು ಕುಣಿಯಿಸುತ್ತಾ ಸಾಗಿದನು. ಬಲಶಾಲಿಗಳಾದ ಅವರು ನೂರುಯೋಜನದಾರಿ ನಡೆದು ಕಾಮರೂಪದೇಶವನ್ನು ತಲಪಿ ಆ ದೇಶದಲ್ಲಿ ಮನೆಮನೆಯಲ್ಲಿಯೂ ಪ್ರಜಾಸಮೂಹದ ಮಧ್ಯದಲ್ಲೂ ಲಕ್ಷಣನನ್ನು ಹುಡುಕಿದರು. ಆದರೆ ಅಲ್ಲೆಲ್ಲಿಯೂ ರಾಜಕುಮಾರ ಲಕ್ಷಣನು ಗೋಚರನಾಗಲಿಲ್ಲ.

೬೩. ಪುನಃ ಶೋಭಾವೇಶ್ಯೆಯು ಅವರೆಲ್ಲರೊಡನೆ ತಾನೂ ಮಯೂರನಗರದಲ್ಲಿ ಎಲ್ಲಾ ಕಡೆಗಳಲ್ಲಿಯೂ ಜನಸಮೂಹದಲ್ಲೆಲ್ಲಾ ಹುಡುಕಿ ಎಲ್ಲಿಯೂ ಅವನನ್ನು ಕಾಣಲಿಲ್ಲ.

ಪುನರಿನ್ನಗಢಗ್ರಾಮಂ ಶೋಭನಾ ಚ ಜನೇಜನೇ ।
ಲಕ್ಷಣಂ ಮೃಗಯಾಮಾಸ ನ ಪ್ರಾಪ ತತ್ರ ಲಕ್ಷಣಂ ॥ ೬೪ ॥

ಗತ್ವಾ ಬಾಹ್ಲೀಕನಗರಂ ಶೋಭನಾ ತೈಸ್ಸಮನ್ವಿತಾ ।
ಲಕ್ಷಣಂ ಚ ನೃಪಶ್ರೇಷ್ಠಂ ನಾಪಶ್ಯತ್ತತ್ರ ದುಃಖಿತಾ ॥ ೬೫ ॥

ಪುನಃ ಸ್ವದೇಶಮಾಗಮ್ಯ ಬಾಹ್ಲೀಕಂ ಮ್ಲೇಚ್ಛವಾಸಿನಂ ।
ಮರ್ಕಟೇಶ್ವರಮೀಶಾನಂ ತತ್ರಾಹ ವನವಾಸಿನಂ ।
ಪೂಜಯಿತ್ವಾ ಚ ಸಾ ವೇಶ್ಯಾ ಗಾನನೃತ್ಯಪರಾಭವತ್ ॥ ೬೬ ॥

ಸ ದೇವೋ ಭೂಮಿಮಧ್ಯಾತ್ತು ಸಮಾಗಮ್ಯ ಮುದಾನ್ವಿತಃ ।
ಕೃಷ್ಣಾಂಶಂ ಪ್ರಣತೋ ಭೂತ್ವಾಽಬ್ರವೀನ್ಮ್ಲೇಚ್ಛಪ್ರಪೂಜಿತಃ ॥ ೬೭ ॥

---

೬೪. ಪುನಃ ಅಲ್ಲಿಂದ ಹೊರಟು ಇನ್ನಗಡಗ್ರಾಮಕ್ಕೆ ಬಂದು ಶೋಭಾ ವೇಶ್ಯೆಯು ಅಲ್ಲಿ ಜನವೃಂದದಲ್ಲೂ ಪ್ರತಿಯೊಂದು ಮನೆಯಲ್ಲೂ ಲಕ್ಷಣನನ್ನು ಹುಡುಕಿಸಿದಳು. ಆದರೂ ಆ ಲಕ್ಷಣನು ಎಲ್ಲಿಯೂ ದೊರಕಲಿಲ್ಲ.

೬೫. ಅನಂತರ ಆ ಶೋಭಾವೇಶ್ಯೆಯು ಅಲ್ಲಿಂದ ಅವರೆಲ್ಲರೊಡನೆ ಹೊರಟು ಬಾಹ್ಲೀನಗರಕ್ಕೆ ಬಂದು ಅಲ್ಲಿಯೂ ರಾಜಶ್ರೇಷ್ಠನಾದ ಲಕ್ಷಣನನ್ನು ಹುಡುಕಿಸಿ ಕೊನೆಗೆ ಎಲ್ಲಿಯೂ ಕಾಣದೆ ಅತಿ ದುಃಖಿತೆಯಾದಳು.

೬೬. ಆಮೇಲೆ ಪುನಃ ಮ್ಲೇಚ್ಛರ ನಿವಾಸವಾದ ತಮ್ಮ ಬಾಹ್ಲೀಕದೇಶಕ್ಕೆ ಬಂದು ಅರಣ್ಯದಲ್ಲಿ ಉದ್ಭವವಾದ ಮರ್ಕಟೇಶ್ವರಲಿಂಗದ ಸಮೀಪಕ್ಕೆ ಬಂದು ಅಲ್ಲಿ ಪರಮೇಶ್ವರನನ್ನು ಪೂಜಿಸಿ ಆ ಪರಶಿವನ ಸನ್ಮುಖದಲ್ಲಿ ಆ ವೇಶ್ಯೆಯು ಸಂಗೀತ ನರ್ತನ ಇವುಗಳಿಂದ ಸ್ವಲ್ಪಹೊತ್ತು ಸೇವೆಮಾಡಿದಳು.

೬೭. ಆಗ ಮ್ಲೇಚ್ಛರಿಂದ ಪೂಜೆಯನ್ನು ಹೊಂದುವವನಾದ ಮರ್ಕಟೇಶ್ವರ ರೂಪಿ ಪರಶಿವನು ಭೂಮಧ್ಯದಿಂದ ಮೇಲಕ್ಕೆ ಉದ್ಭವಿಸಿ ಸಂತೋಷದಿಂದ ಕೃಷ್ಣಾಂಶನಿಗೆ ನಮಸ್ಕರಿಸಿ ಹೀಗೆ ಹೇಳತೊಡಗಿದನು.

ಅಹಂ ಕಾಲಾಗ್ನಿರುದ್ರೇಣ ಭೂಮಿಗರ್ತೇ ಸುರೋಪಿತಃ ।
ಅಸಮರ್ಥಂ ಚ ಮಾಂ ವಿದ್ಧಿ ಗಚ್ಛ ವೀರ ಯಥಾಸುಖಂ ॥ ೬೮ ॥

ಇತಿ ಶ್ರುತ್ವಾ ಚ ಸಾ ಶೋಭಾ ನಿರಾಶಾಭೂತ್ತದಾ ಸ್ವಯಂ ॥ ೬೯ ॥

ಪುನಃ ಸ್ವರ್ಣವತೀಂ ಪ್ರಾಪ್ಯ ಸರ್ವಮೇವಾದಿತೋಽಬ್ರವೀತ್ ।
ತ್ರಿಂಶದಬ್ದೈಶ್ಚ ಕೃಷ್ಣಾಂಶೇ ಚೈತ್ರಶುಕ್ಲೇ ಸಮಾಗತೇ ॥ ೭೦ ॥

ತಾನಾಶ್ವಾಸ್ಯ ಸುವರ್ಣಾಂಗೀ ಪೂಜಯಾಮಾಸ ಚಂಡಿಕಾಂ ।
ನವರಾತ್ರಂ ಗತಂ ತಸ್ಯಾ ಭೋಜನಾಚ್ಛಾದನಂ ವಿನಾ ।
ನಿಶೀಥಾಂತೇ ತಮಃ ಪ್ರಾಪ್ತೇ ಗತ್ವಾಹ ಜಗದಂಬಿಕಾ ॥ ೭೧ ॥

---

೬೮. "ಎಲೈ ವೀರನೇ! ಕಾಲಾಗ್ನಿರುದ್ರನು ನನ್ನನ್ನು ಭೂಮಿಮಧ್ಯದಲ್ಲಿ ಚೆನ್ನಾಗಿ ಹೂಳಿಟ್ಟಿದ್ದಾನೆ. ಇದರಿಂದ ಈಗ ನಿನಗೆ ಸಹಾಯಮಾಡಲು ನಾನು ಅಸಮರ್ಥನಾಗಿರುವೆನು. ತಿಳಿಯಿತೆ? ಆದ್ದರಿಂದ ನಿನ್ನ ಇಚ್ಛೆಬಂದ ಮಾರ್ಗದಲ್ಲಿ ಹೋಗಬಹುದು." ಎಂದು ಹೇಳಿದನು.

೬೯. ಆಗ ಆ ಶೋಭಾವೇಶ್ಯೆಯು ಮರ್ಕಟೇಶ್ವರನು ಹೇಳಿದ ಮಾತನ್ನು ಕೇಳಿ ನಿರಾಶಳಾದಳು.

೭೦. ಅನಂತರ ಆವಳು ಅಲ್ಲಿಂದ ಹೊರಟು ಸ್ವರ್ಣವತಿಯ ಸಮೀಪಕ್ಕೆ ಬಂದು ಮೊದಲಿಂದ ಕೊನೆಯವರೆಗೂ ನಡೆದ ವೃತ್ತಾಂತವನ್ನೆಲ್ಲಾ ಆವಳಿಗೆ ವಿವರವಾಗಿ ತಿಳಿಸಿದಳು.

೭೧. ಈ ವೇಳೆಗೆ ಕೃಷ್ಣಾಂಶನಿಗೆ ಮೂವತ್ತುವರ್ಷವಾಯಿತು. ಬಂಗಾರದಂತೆ ಹೊಂಬಣ್ಣದ ದೇಹವುಳ್ಳ ಸ್ವರ್ಣವತಿಯು ಅವರೆಲ್ಲರನ್ನೂ ಸಮಾಧಾನಮಾಡಿ ಚೈತ್ರಮಾಸದ ಶುಕ್ಲಪಕ್ಷದಲ್ಲಿ ಚಂಡಿಕಾದೇವಿಯನ್ನು ಒಂಬತ್ತುದಿನಗಳ ಕಾಲ ಆಹಾರನಿದ್ರಾದಿಗಳನ್ನು ತ್ಯಜಿಸಿ ಭಕ್ತಿಯಿಂದ ಆರಾಧಿಸಿದಳು. ಆ ದಿನ ಅರ್ಧರಾತ್ರಿಯಾದ ಮೇಲೆ ಜಗದಂಬಿಕೆಯಾದ ಚಂಡಿಕೆಯು ಸ್ವರ್ಣವತಿಯ ಸಮೀಪಕ್ಕೆ ಬಂದು ಹೀಗೆಂದಳು.

ಪದ್ಮಿನೀ ನಾಮ ಯಾ ನಾರೀ ಮಣಿದೇವಸ್ಯ ವೈ ಪ್ರಿಯಾ ।
ಜಾತಾ ಸಾ ಕಾಮಪಾಲಸ್ಯ ಗೃಹೇ ಯಜ್ಞಾವಮಾನಿತಾ ॥ ೭೨ ॥

ಸೇನಾಪತಿಃ ಕುಬೇರಸ್ಯ ಮಣಿದೇವೋ ಹಿ ಸ ಸ್ಮೃತಃ ।
ಪೂರ್ವಂ ಹಿ ಭೀಮಸೇನೇನ ಯಕ್ಷಯುದ್ಧೇಷು ಘಾತಿತಃ ॥ ೭೩ ॥

ತದಾ ತತ್ಪದ್ಮಿನೀ ನಾರೀ ದೇವದೇವಮುಮಾಪತಿಂ ।
ತುಷ್ಟಾವ ಚ ನಿರಾಹಾರಾ ಮತ್ಪತಿಂ ದೇಹಿ ಶಂಕರ ॥ ೭೪ ॥

ಶತವರ್ಷಾಂತರೇ ದೇವೋ ಮಹಾದೇವ ಉವಾಚ ತಾಂ ।
ಕಲೌ ವಿಕ್ರಮಕಾಲೇ ಹಿ ಶತದ್ವಾದಶಕೇಽಂತಿಕೇ ॥ ೭೫ ॥

ನಕುಲಾಂಶಂ ಚ ಸಂಪ್ರಾಪ್ಯ ಭುಂಕ್ತ್ವಾ ತೇನ ಮಹತ್ಸುಖಂ ।
ತದ್ವಿಯೋಗೇನ ಸಂತ್ಯಜ್ಯ ದೇಹಂ ಪದ್ಮಾನುವಾಸಿತಂ ।
ಸ್ವಪತಿಂ ಚ ತದಾ ಪ್ರಾಪ್ಯ ಕೈಲಾಸಂ ಪುನರೇಷ್ಯಸಿ ॥ ೭೬ ॥

---

೭೨. ಪೂರ್ವದಲ್ಲಿ ಮಣಿದೇವನಿಗೆ ಪ್ರೀತಿಪಾತ್ರಳಾಗಿದ್ದ ಅವನ ಪ್ರಿಯೆ ಪದ್ಮಿನಿಯು ಯಜ್ಞದಲ್ಲಿ ಅವಮಾನಹೊಂದಿ ಈಗ ಕಾಮಪಾಲನ ಮನೆಯಲ್ಲಿ ಹುಟ್ಟಿರುವಳು.

೭೩. ಆ ಮಣಿದೇವನು ಕುಬೇರನ ಸೇನಾಪತಿ. ಹಿಂದೆ ಭೀಮಸೇನನು ಯಕ್ಷರೊಡನೆ ಯುದ್ಧಮಾಡುತ್ತಿದ್ದಾಗ ಆ ಮಣಿದೇವನು ಅವನಿಂದ ಹತನಾದನು.

೭೪. ಅನಂತರ ಕುಮಾರಿ ಪದ್ಮಿನೀದೇವಿಯು ದೇವಾದಿದೇವನಾದ ಪಾರ್ವತೀಪ್ರಿಯನನ್ನು ಉಪವಾಸವ್ರತ ನಿಯಮದಿಂದ ಆರಾಧಿಸಿ " ಹೇ ಕರುಣಾನಿಧಿಯಾದ ಶಂಕರಾ ! ನನಗೆ ಪತಿದಾನಮಾಡು " ಎಂದು ಸ್ತೋತ್ರಮಾಡಿದಳು.

೭೫-೭೬. ಹೀಗೆ ನೂರುವರ್ಷ ಕಳೆಯಲು ಮಹಾದೇವನು ಪ್ರಸನ್ನನಾಗಿ ಆ ಪದ್ಮಿನಿಯನ್ನು ಕುರಿತು " ಕಲಿಯುಗದಲ್ಲಿ ಸಾವಿರದ ಇನ್ನೂರುವರ್ಷದ ಕೊನೆಯಲ್ಲಿ ವಿಕ್ರಮನ ಕಾಲದಲ್ಲಿ ನೀನು ನಕುಲಾಂಶಸಂಭೂತನಾದವನನ್ನು ವರಿಸಿ ತುಂಬಾ ಸುಖವನ್ನನುಭವಿಸಿ ಅವನ ವಿಯೋಗದಲ್ಲಿ ಪದ್ಮದಂತೆ ಸುವಾಸನಾಭರಿತವಾದ ನಿನ್ನ ದೇಹವನ್ನು ತ್ಯಾಗಮಾಡಿ, ಅನಂತರ ನಿನ್ನ ನಿಜಪತಿಯನ್ನು ಸೇರಿ ಕೈಲಾಸಕ್ಕೆ ಹೋಗುವೆ."

ಮಹಾವತೀಂ ಪುರೀಂ ರಮ್ಯಾಂ ರಾಷ್ಟ್ರಪಾಲಾಯ ಶಾರದಾ ।
ಕರಿಷ್ಯತಿ ತದಾ ದೇವೀ ಮಣಿದೇವಸ್ತು ತ್ವತ್ಪತಿಃ ॥ ೭೭ ॥

ತಯಾ ವಿರಚಿತೋ ಭೂಮೌ ಗ್ರಾಮರಕ್ಷಾರ್ಥಮುದ್ಯತಃ ।
ಪ್ರಾಪ್ತಸ್ತ್ವಾಂ ಪದ್ಮಿನೀಂ ನಾರೀಂ ಕೈಲಾಸಂ ಪುನರೇಷ್ಯತಿ ॥ ೭೮ ॥

ಅತಃ ಸ್ವರ್ಣವತಿ ತ್ವಂ ವೈ ಕೈಲಾಸಂ ಗುಹ್ಯಕಾಲಯಂ ।
ಗತ್ವಾಶು ಪದ್ಮಿನೀಂ ತತ್ರ ಬೋಧಯಾಶು ವಚಃ ಕುರು ॥ ೭೯ ॥

ಇತಿ ಶ್ರುತ್ವಾ ಸ್ವರ್ಣವತೀ ಪದ್ಮಿನೀಂ ಪ್ರತಿ ಚಾಗಮತ್ ।
ವೃತ್ತಾಂತಂ ಕಥಯಿತ್ವಾಗ್ರೇ ಪದ್ಮಿನೀ ತು ದಯಾತುರಾ ॥ ೮೦ ॥

ಕಾಮಪಾಲಗೃಹಂ ಪ್ರಾಪ್ಯ ತತ್ರ ವಾಸಮಕಾರಯತ್ ।
ಸ್ವರ್ಣವತ್ಯಪಿ ಸಂಪ್ರಾಪ್ತಾ ತದಾ ಶೀಘ್ರಂ ಮಹಾವತೀಂ ॥ ೮೧ ॥

---

೭೭-೭೮. "ಅಲ್ಲದೆ ಶಾರದಾದೇವಿಯು ಸುಂದರವಾದ ಮಹಾವತೀಪಟ್ಟಣವನ್ನು ರಾಷ್ಟ್ರಪಾಲನಿಗೋಸ್ಕರ ನಿರ್ಮಿಸುವಳು. ನಿನ್ನ ಪತಿಯಾದ ಮಣಿದೇವನು ಆ ದೇವಿಯಿಂದ ನಿರ್ಮಿತವಾದ ಮಹಾವತೀನಗರದಲ್ಲಿರುತ್ತಾ ಭೂಮಂಡಲದ ರಾಜರಕ್ಷಣೆಗೋಸ್ಕರ ಪ್ರಯತ್ನಿಸುವನು. ಅನಂತರ ಪದ್ಮಿನೀದೇವಿಯನ್ನು ಕೂಡಿ ಪುನಃ ಕೈಲಾಸಕ್ಕೆ ಹೊಗುವನು."

೭೯. "ಆದುದರಿಂದ ಸ್ವರ್ಣವತೀದೇವಿಯೇ! ನೀನು ಗುಹ್ಯಕರ ವಾಸಸ್ಥಾನವಾದ ಕೈಲಾಸಕ್ಕೆ ಜಾಗ್ರತೆ ಹೋಗಿ, ಅಲ್ಲಿರುವ ಪದ್ಮಿನೀದೇವಿಗೆ ಬೋಧನೆಮಾಡಿ ನಾನು ಹೇಳಿದಂತೆ ನಡೆಯಿಸು." ಎಂದು ಹೇಳಿದಳು.

೮೦. ಶಾರದಾದೇವಿಯು ಹೀಗೆ ಹೇಳಿದ್ದನ್ನು ಸ್ವರ್ಣವತೀದೇವಿಯು ಕೇಳಿ, ಪದ್ಮಿನೀದೇವಿಯಿದ್ದ ಸ್ಥಳಕ್ಕೆ ಹೋಗಿ, ಅವಳ ಮುಂದೆ ಎಲ್ಲ ವೃತ್ತಾಂತವನ್ನೂ ತಿಳಿಸಿದಳು.

೮೧. ಆಗ ದಯಾಶೀಲಳಾದ ಪದ್ಮಿನೀದೇವಿಯು ಕಾಮಪಾಲನ ಮನೆಗೆ ಬಂದು ಅಲ್ಲಿ ವಾಸಮಾಡತೊಡಗಿದಳು. ಸ್ವರ್ಣವತೀದೇವಿಯೂ ಸಹ ಶೀಘ್ರವಾಗಿ ಮಹಾವತಿಗೆ ಬಂದುಬಿಟ್ಟಳು

ತಸ್ಯಾಂ ಗತಾಯಾಂ ಗೇಹೇ ವೈ ಪದ್ಮಿನ್ಯಾ ಲಿಖಿತಂ ಶುಭಂ ।
ಪತ್ರಂ ಪರಿಮಲೋ ರಾಜಾ ವರ್ತಯಾಮಾಸ ಹರ್ಷಿತಃ ॥ ೮೨ ॥

ಆಗಚ್ಛ ಸೇನಯಾ ಸಾರ್ಧಂ ಕೃಷ್ಣಾಂಶ ಬಲವತ್ತರ ।
ಜಿತ್ವಾ ಪದ್ಮಾಕರಂ ಬಂಧುಂ ಮತ್ಪತಿಂ ಮೋಚಯಾಶು ವೈ ।
ಭೂತಲೇ ಲಕ್ಷಣೋ ರಾಜಾ ಸ್ಥಿತಃ ಪದ್ಮಾಕರಾರ್ತಿಗಃ ॥ ೮೩ ॥

ಇತಿ ಜ್ಞಾತ್ವಾ ಚ ಕೃಷ್ಣಾಂಶೋ ಲಕ್ಷದ್ವಾದಶಸೇನಯಾ ।
ರುರೋಧ ನಗರೀಂ ಸರ್ವಾಂ ಕಾಮಪಾಲೇನ ರಕ್ಷಿತಾಂ ॥ ೮೪ ॥

ಕಾಮಪಾಲಸ್ತು ಬಲವಾಂಸ್ತ್ರಿಲಕ್ಷಬಲಸಂಯುತಃ ।
ಸುತಾಜ್ಞಯಾ ಯಯೌ ಯುದ್ಧಂ ಸಾರ್ಧಂ ಪದ್ಮಾಕರೇಣ ವೈ ॥ ೮೫ ॥

---

೮೨. ಈರೀತಿ ಸ್ವರ್ಣವತಿಯು ಮಹಾವತೀನಗರಕ್ಕೆ ಬಂದು ಅರಮನೆಯನ್ನು ಪ್ರವೇಶಿಸಲು ಮಹಾರಾಜನಾದ ಪರಿಮಳನು ಪದ್ಮಿನಿಯೇ ಬರೆದಿದ್ದ ಶುಭಲೇಖನವನ್ನು ನೋಡಿ ಸಂತೋಷದಿಂದ ಹಿಗ್ಗಿಹೋದನು.

೮೩. ಆ ಪತ್ರದಲ್ಲಿ "ಎಲೈ ಬಲಶಾಲಿಯಾದ ಕೃಷ್ಣಾಂಶನೇ! ನೀನು ಸೈನ್ಯದೊಡನೆ ಇಲ್ಲಿಗೆ ಬಂದು, ನನ್ನ ಸಹೋದರನಾದ ಪದ್ಮಾಕರನನ್ನು ಜಯಿಸಿ ನನ್ನ ಪತಿಯನ್ನು ಜಾಗ್ರತೆ ಸೆರೆಯಿಂದ ಬಿಡುಗಡೆಮಾಡು. ರಾಜನಾದ ಲಕ್ಷಣನು ಇಲ್ಲಿ ಪದ್ಮಾಕರನ ಹಿಂಸೆಗೆ ಗುರಿಯಾಗಿ ಬಾಧೆ ಪಡುತ್ತಿರುವನು." ಎಂದು ಬರೆದಿದ್ದಿತು.

೮೪. ಆ ಪತ್ರದಲ್ಲಿ ಬರೆದಿದ್ದ ವಿಚಾರವನ್ನು ಓದಿಕೊಂಡು ಕೃಷ್ಣಾಂಶನು ಹನ್ನೆರಡುಲಕ್ಷ ಸೇನೆಯೊಡನೆ ಹೊರಟು ಕಾಮಪಾಲನ ರಕ್ಷಣೆಯಲ್ಲಿದ್ದ ಆ ಬಿಂದುಗಡ ನಗರದ ಸುತ್ತಲೂ ಮುತ್ತಿಗೆಯನ್ನು ಹಾಕಿದನು.

೮೫ ತನ್ನ ಮೂರುಲಕ್ಷ ಸೇನೆಯೊಡಗೂಡಿ ಬಲಶಾಲಿಯಾದ ಕಾಮಪಾಲನು ಮಗನಾದ ಪದ್ಮಾಕರನ ಅಪ್ಪಣೆ ಮೇರೆ ಅವನ ಬೆಂಗಾವಲಿನೊಡನೆ ಯುದ್ಧಕ್ಕೆ ಬಂದನು.

ತಯೋಶ್ಚಾಸೀನ್ಮಹದ್ಯುದ್ಧಂ ಸೇನಯೋರುಭಯೋಸ್ತದಾ ।
ಅಹೋರಾತ್ರಪ್ರಮಾಣೇನ ಭೂಪಸೇನಾ ಪರಾಜಿತಾ ॥ ೮೬ ॥

ಪದ್ಮಿನೀಂ ಶರಣಂ ಪ್ರಾಪ್ಯ ತದಾ ಭ್ರಾತಾ ಪಿತಾ ಸ್ಥಿತಃ ।
ತಯೋರ್ವಿಜಯಮೇವಾಶು ಯಥಾಪ್ರಾಪ್ತಂ ಚಕಾರ ಸಾ ।
ಅಂತರ್ಧಾನಮಯಂ ಪತ್ರಂ ತಯೋರರ್ಥೇ ಚ ಸಾ ದದೌ ॥ ೮೭ ॥

ತೌ ತತ್ರಾಂತರ್ಹಿತೌ ಭೂತ್ವಾ ಸ್ವಖಡ್ಗೇನ ರಿಪೋರ್ಬಲಂ ।
ಅಯುತಂ ಜಘ್ನತುರ್ಮತ್ತೌ ತದಾ ತೇ ವಿಸ್ಮಯಂ ಗತಾಃ ॥ ೮೮ ॥

ತಾಲನಾದ್ಯಾ ರಣಂ ತ್ಯಕ್ತ್ವಾ ಕೃಷ್ಣಾಂಶಂ ಶರಣಂ ಯಯುಃ ।
ಕೃಷ್ಣಾಂಶೋಽಪಿ ತದಾ ದುಃಖೀ ಧ್ಯಾತ್ವಾ ಸರ್ವಮಯೀಂ ಶಿವಾಂ ॥೮೯॥

---

೮೬. ಆಗ ಎರಡುಪಕ್ಷದ ಸೇನೆಗಳಿಗೂ ಹಗಲೂ ರಾತ್ರಿಯೂ ಅವಿಚ್ಛಿನ್ನವಾಗಿ ಘೋರಯುದ್ಧ ನಡೆಯಿತು. ಕೊನೆಗೆ ಕಾಮಪಾಲರಾಜನ ಸೈನ್ಯ ಸೋತು ಹೋಯಿತು.

೮೭. ಆಗ ಪದ್ಮಿನಿಯ ತಂದೆಯಾದ ಕಾಮಪಾಲನೂ, ಸಹೋದರನಾದ ಪದ್ಮಾಕರನೂ ಸಹ ಪದ್ಮಿನೀದೇವಿಯನ್ನೇ ಮರೆಹೊಕ್ಕರು. ಆಗ ದೇವಿಯ ಭಕ್ತೆಯಾದ ಆ ಪದ್ಮಿನಿಯು ತನ್ನ ಮಾಯೆಯಿಂದ, ಅವರುಗಳಿಗೆ ವಿಜಯಲಭಿಸಬೇಕಾದರೆ ಹೇಗೆ ಮಾಡುವುದು ಆವಶ್ಯಕವೋ ಆರೀತಿ ಜಾಗ್ರತೆ ಮಾಡಬಯಸಿ ಅವರಿಬ್ಬರಿಗೂ ಅಂತರ್ಧಾನಮಯವಾದ ಪತ್ರವನ್ನು ಕೊಟ್ಟಳು.

೮೮. ಆ ಪತ್ರದ ಪ್ರಭಾವದಿಂದ ತಂದೆಮಕ್ಕಳಿಬ್ಬರೂ ತಾವು ಅದೃಶ್ಯರಾಗಿದ್ದು ಕೊಂಡೇ ಮತ್ತರಾಗಿ ತಮ್ಮ ಖಡ್ಗಗಳಿಂದ ಶತ್ರುಬಲವನ್ನು ಧ್ವಂಸಮಾಡುತ್ತಾ ಶತ್ರು ಪಕ್ಷದ ಹತ್ತುಸಾವಿರ ಸೇನೆಯನ್ನು ಕೊಂದುಹಾಕಿದರು. ಇದನ್ನು ನೋಡಿ ಶತ್ರು ಪಕ್ಷದವರಿಗೆ ಆಶ್ಚರ್ಯವಾಯಿತು.

೮೯. ಆಗ ತಾಲನ ಮೊದಲಾದವರೆಲ್ಲರೂ ಯುದ್ಧಮಾಡುವುದನ್ನು ಬಿಟ್ಟು ಕೃಷ್ಣಾಂಶನನ್ನು ಮರೆಹೊಕ್ಕರು. ಕೃಷ್ಣಾಂಶನು ಕೂಡ ತಾನು ಏನುಮಾಡುವುದಕ್ಕೂ ಅಸಮರ್ಥನಾಗಿ ದುಃಖದಿಂದ ಸರ್ವವ್ಯಾಪಕಳಾದ ಜಗದಂಬಿಕೆಯನ್ನು ಧ್ಯಾನಿಸಿದನು.

ದಿವ್ಯದೃಷ್ಟಿಸ್ತತೋ ಜಾತಃ ಸಂಪ್ರಾಪ್ಯ ತಮಯುಧ್ಯತ ।
ನಭೋಗತಂ ಕಾಮಪಾಲಂ ತಥಾ ಪದ್ಮಾಕರಂ ನೃಪಂ ॥ ೯೦ ॥

ಬದ್ಧ್ವಾ ತತ್ರ ಮುದಾವಿಷ್ಟೋ ಲಕ್ಷಣಂ ಪ್ರಾಪ್ಯ ನಿರ್ಭಯಃ ।
ದೋಲಾಮಾರೋಪ್ಯ ತಾಂ ದೇವೀಂ ಸ್ವಗೇಹಾಯ ಮುದಾ ಯಯೌ ॥೯೧॥

ಜಯಚಂದ್ರಾಯ ಭೂಪಾಯ ದತ್ವಾ ವೈ ತೌ ಚ ದಂಪತೀ ।
ಲಕ್ಷಣಂ ಪದ್ಮಿನೀಂ ಚೈವ ಕೃತಕೃತ್ಯಸ್ತದಾಽಭವತ್ ॥ ೯೨ ॥

ಜಯಚಂದ್ರೋಽಪಿ ಬಲವಾನ್ ದೃಷ್ಟ್ವಾ ಗೇಹೇ ಸ್ವದಂಪತೀ ।
ದದೌ ದಾನಂ ದ್ವಿಜಾತಿಭ್ಯೋ ಭೂಪತಿಂ ಸಮಮೋಚಯತ್ ॥ ೯೩ ॥

---

೯೦. ದೇವಿಯ ಪ್ರಭಾವದಿಂದ ಅವರಿಗೆ ದಿವ್ಯದೃಷ್ಟಿಯುಂಟಾಯ್ತು. ಅದರಿಂದ ಅದೃಶ್ಯರಾಗಿ ಅಂತರಿಕ್ಷದಲ್ಲಿ ನಿಂತು ಯುದ್ಧಮಾಡುತ್ತಿದ್ದ ಕಾಮಪಾಲ ಮತ್ತು ಪದ್ಮಾಕರ ಇವರನ್ನು ಎದುರಿಸಿ ಯುದ್ಧಮಾಡಿದನು.

೯೧. ಹೀಗೆ ಯುದ್ಧಮಾಡಿ ಅವರಿಬ್ಬರನ್ನೂ ಬಂಧಿಸಿ ಸಂತೋಷದಿಂದ ಲಕ್ಷಣನು ಇದ್ದಕಡೆ ಬಂದು, ನಿರ್ಭಯನಾಗಿ ಲಕ್ಷಣನ ಪತ್ನಿಯಾದ ಪದ್ಮಿನೀದೇವಿಯನ್ನು ಮೇನೆಯಲ್ಲಿ ಕೂರಿಸಿಕೊಂಡು ಪರಿವಾರದೊಡನೆ ಸಂತೋಷದಿಂದ ತನ್ನ ಮನೆಗೆ ಹಿಂದಿರುಗಿದನು.

೯೨. ಆಮೇಲೆ ಜಯಚಂದ್ರಮಹಾರಾಜನಿಗೆ ದಂಪತಿಗಳಾದ ಲಕ್ಷಣ ಮತ್ತು ಪದ್ಮಿನಿ ಇವರನ್ನು ಸಮರ್ಪಿಸಿ ಕೃತಕೃತ್ಯನಾದನು.

೯೩. ಬಲಶಾಲಿಯಾದ ಜಯಚಂದ್ರನೂ ಸಹ ತನ್ನ ಮನೆಗೆ ಬಂದಿರುವ ಆ ದಂಪತಿಗಳನ್ನು ನೋಡಿ ಆ ಸಮಯದಲ್ಲಿ ಸಂತೋಷದಿಂದ ಬ್ರಾಹ್ಮಣರಿಗೆ ಅನೇಕವಾಗಿ ದಾನಮಾಡಿದನು. ಮತ್ತು ಸೆರೆಯಾಗಿದ್ದ ಕಾಮಪಾಲನನ್ನು ಸೆರೆಯಿಂದ ಬಿಡಿಸಿದನು. ಹೀಗೆ ಜ್ಯೇಷ್ಠಮಾಸದ ಶುಕ್ಲಪಕ್ಷದಲ್ಲಿ ಕೃಷ್ಣಾಂಶನು ತನ್ನ ಕಾರ್ಯಗಳನ್ನೆಲ್ಲಾ ಸಮಗ್ರವಾಗಿ ನೆರವೇರಿಸಿ ತನ್ನ ಮನೆಗೆ ಬಂದು ಸೇರಿದನು.

**ಜ್ಯೇಷ್ಠ ಮಾಸಿ ಸಿತೇ ಪಕ್ಷೇ ಕೃಷ್ಣಾಂಶೋ ಗೇಹಮಾಗತಃ ।**
**ಇತಿ ತೇ ಕಥಿತಂ ವಿಪ್ರ ಕೃಷ್ಣಾಂಶಚರಿತಂ ಶುಭಂ ।**
**ಪುನಸ್ತೇ ಕಥಯಿಷ್ಯಾಮಿ ದೃಷ್ಟಂ ಯೋಗಬಲೇನ ವೈ ॥ ೯೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ತ್ರಿಂಶೋಽಧ್ಯಾಯಃ**

---

೯೪. "ಎಲೈ ಶೌನಕನೇ! ಈರೀತಿ ಮಂಗಳಕರವಾದ ಕೃಷ್ಣಾಂಶ ಚರಿತ್ರವನ್ನು ನಿನಗೆ ಹೇಳಿದುದಾಯಿತು. ಪುನಃ ನಾನು ಯೋಗದೃಷ್ಟಿಯಿಂದ ಕಾಣುವುದನ್ನು ತಿಳಿಸುವೆನು. ಕೇಳು" ಎಂದು ಸೂತನು ತಿಳಿಸಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಮೂವತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ತೃತೀಯಖಂಡೇ

## ಏಕತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಶೃಣು ವಿಪ್ರ ಮಹಾಭಾಗ ಚಂದ್ರಭಟ್ಟಸ್ತದಾ ಸ್ವಯಂ ।
ಮಹೀರಾಜಂ ಸದಃಸ್ಥಂ ತಂ ಚಂದ್ರತುಲ್ಯಸ್ಸಮಾಗತಃ ॥ ೧ ॥

ತಮಾಗತಂ ಸಮಾಲೋಕ್ಯ ಸ ರಾಜಾ ಶೋಕತತ್ಪರಃ ।
ಉವಾಚ ವಚನಂ ರಮ್ಯಂ ಶೃಣು ಮಂತ್ರಿವರ ಪ್ರಭೋ ॥ ೨ ॥

ಕೃಷ್ಣಾಂಶಾದ್ಯೈರ್ಮಹಾಶೂರೈರ್ಮದ್ರಾಷ್ಟ್ರೇ ಭಯಮಾಗತಂ ।
ಕದಾ ತೇ ಚ ಮರಿಷ್ಯಂತಿ ಕಂಟಕಾ ಮಮ ದಾರುಣಾಃ ॥ ೩ ॥

---

### ಮೂವತ್ತೊಂದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಎಲೈ ಮಹಾಭಾಗನಾದ ಶೌನಕನೇ! ಕೇಳು; ಆಗ ಚಂದ್ರನಿಗೆ ಸಮಾನನಾದ ಚಂದ್ರಭಟ್ಟನೆಂಬ ಪೃಥ್ವೀರಾಜನ ಅಮಾತ್ಯನು ಸಭಾಮಧ್ಯದಲ್ಲಿರುವ ಪೃಥ್ವೀರಾಜನ ಸಮೀಪಕ್ಕೆ ತಾನಾಗಿ ಬಂದನು.

೨. ಹೀಗೆ ಬಂದ ಚಂದ್ರಭಟ್ಟನನ್ನು ನೋಡಿ ಆ ಪೃಥ್ವೀರಾಜನು ಶೋಕತತ್ಪರನಾಗಿ ಅವನನ್ನು ಕುರಿತು ಹೀಗೆಂದನು.

೩. "ಸ್ವಾಮೀ ಅಮಾತ್ಯಶ್ರೇಷ್ಠನೇ! ಕೃಷ್ಣಾಂಶನೇ ಮೊದಲಾದ ಮಹಾವೀರರಿಂದ ನನ್ನ ರಾಷ್ಟ್ರಕ್ಕೆ ತುಂಬಾ ಭಯವುಂಟಾಗಿದೆ. ನನಗೆ ಭಯಂಕರರೂ ಕಂಟಕಪ್ರಾಯರೂ ಆದ ಅವರು ಯಾವಾಗ ಮೃತರಾದಾರೋ ಹೇಳಲಾರೆಯಾ?" ಎಂದು ಪ್ರಶ್ನಿಸಿದನು.

ಇತ್ಯುಕ್ತಸ್ಸತು ಶುದ್ಧಾತ್ಮಾ ಧ್ಯಾತ್ವಾ ಸರ್ವಮಯೀಂ ಶಿವಾಂ ।
ವಚನಂ ಪ್ರಾಹ ರಾಜಾನಂ ಶೃಣು ಭೂಪಶಿರೋಮಣೇ ॥ ೪ ॥

ಜಿಷ್ಣೋರಂಶಾತ್ಸಮುದ್ಭೂತೋ ಬ್ರಹ್ಮಾನಂದೋ ಮಹಾಮತೀಂ ।
ಸ ಕೃಷ್ಣಾಂಶಸಖಃ ಶ್ರೇಷ್ಠಃ ಸರ್ವದಾ ತತ್ಪ್ರಿಯೇ ರತಃ ॥ ೫ ॥

ಯದಾ ಚ ಮಲನಾಪುತ್ರೋ ದೇಹಂ ತ್ಯಕ್ತ್ವಾ ಗಮಿಷ್ಯತಿ ।
ತದಾ ತೇ ಸರ್ವದೇವಾಂಶಾಃ ಗಮಿಷ್ಯಂತಿ ಯತೋ ಗತಾಃ ॥ ೬ ॥

ಇತ್ಯೇವಂವಾದಿನಂ ಧೀರಮಮಾತ್ಯಂ ಚ ಮಹೀಪತಿಃ ।
ವಚನಂ ಪ್ರಾಹ ನಮ್ರಾತ್ಮಾ ಕೋಽಪ್ಯರ್ಥಶ್ಚಿಂತಿತೋ ಮಯಾ ॥ ೭ ॥

---

೪. ಪೃಥ್ವೀರಾಜನು ಈರೀತಿ ಪ್ರಶ್ನಿಸುತ್ತಲೇ ಪರಿಶುದ್ಧಾಂತಃಕರಣವುಳ್ಳ ಆ ಚಂದ್ರಭಟ್ಟಮಂತ್ರಿಯು ಸರ್ವವ್ಯಾಪಕಳಾದ ಪರಮೇಶ್ವರಿಯನ್ನು ಧ್ಯಾನಮಾಡಿ ಪೃಥ್ವೀರಾಜನನ್ನು ಕುರಿತು ಹೀಗೆ ಹೇಳತೊಡಗಿದನು.

೫. "ಎಲೈ ರಾಜಶ್ರೇಷ್ಠನೇ! ಅರ್ಜುನನ ಅಂಶದವನಾದ ಬ್ರಹ್ಮಾನಂದನು ಆ ಕೃಷ್ಣಾಂಶನಿಗೆ ತುಂಬಾ ಆಪ್ತಸ್ನೇಹಿತನಾಗಿರುವನು. ಆ ಕೃಷ್ಣಾಂಶನಾದರೋ ಯಾವಾಗಲೂ ಅವನಿಗೆ ಪ್ರಿಯವನ್ನೇ ಕೋರುತ್ತಿರುವನು."

೬. "ಮಲನಾದೇವಿಯ ಮಗನಾದ ಆ ಬ್ರಹ್ಮಾನಂದನು ಶರೀರತ್ಯಾಗಮಾಡಿ ಯಾವಾಗ ಮೃತನಾಗುವನೋ ಆಗ ಸಕಲ ದೇವಾಂಶಸಂಭೂತರಾದ ಕೃಷ್ಣಾಂಶ ಮೊದಲಾದವರೆಲ್ಲರೂ ಅವನನ್ನೇ ಅನುಸರಿಸಿ ಮೃತರಾಗುವರು." ಎಂದು ಹೇಳಿದನು.

೭-೮. ವೀರನೂ ಮಂತ್ರಿಶ್ರೇಷ್ಠನೂ ಆದ ಚಂದ್ರಭಟ್ಟನು ಈರೀತಿ ಹೇಳಿದುದನ್ನು ಕೇಳಿ ಮಹೀಪತಿರಾಜನು ಅವನನ್ನು ಕುರಿತು "ವಿನಯದಿಂದ ಇದಕ್ಕೋಸ್ಕರ ನಾನು ಯಾವುದೋ ಒಂದು ಉಪಾಯವನ್ನು ಹುಡುಕಿರುವೆನು. ರಾಜಶ್ರೇಷ್ಠನೂ ಮಹಾಶೂರನೂ ಆದ ಬ್ರಹ್ಮಾನಂದನು ತನ್ನ ಹೆಂಡತಿಯನ್ನು ಕರೆದುಕೊಂಡು

ಏಕಾಕಿನಂ ಮಹಾಶೂರಂ ಬ್ರಹ್ಮಾನಂದಂ ನೃಪೋತ್ತಮಂ ।
ಸಮಾಹೂಯ ಮಹೀರಾಜೋ ದಾರಾನಯನ ಹೇತವೇ ॥
ಛದ್ಮನಾ ಘಾತಯಿತ್ವಾ ತಂ ಕೃತಕೃತ್ಯೋ ಭವಿಷ್ಯತಿ ॥ ೮ ॥

ಇತ್ಯುಕ್ತಂ ನೃಪತಿಂ ಪ್ರಾಹ ಮಹೀರಾಜಃ ಪ್ರಸನ್ನಧೀಃ ।
ವಚನಂ ಶೃಣು ಭೋ ಮಿತ್ರ ಗಚ್ಛ ಶೀಘ್ರಂ ಮಹಾವತೀಂ ॥ ೯ ॥

ಮಲನಾಂ ಚ ಸಮಾಗತ್ಯ ಭೋಧಯಿತ್ವಾ ತು ತಾಂ ಸ್ವಯಂ ।
ಮಮಾಂತಿಕಮುಪಾಗಮ್ಯ ಚಿರಂ ಜೀವ ಸುಖೀ ಭವ ॥ ೧೦ ॥

ಇತಿ ಶ್ರುತ್ವಾ ತು ವಚನಂ ನತ್ವಾ ತಂ ಚ ಮಹೀಪತಿಃ ।
ರಾತ್ರೌ ಘೋರಂ ಮುನಿಶ್ರೇಷ್ಠ ಮಲನಾಂ ಪ್ರಾಹ ನಿರ್ಭಯಃ ॥ ೧೧ ॥

---

ಹೋಗುವ ನೆಪದಿಂದ ಪೃಥ್ವೀರಾಜನು ಇಲ್ಲಿಗೆ ಕರೆಯಿಸಿ ಮೋಸದಿಂದ ಅವನನ್ನು ಕೊಂದು ಕೃತಕೃತ್ಯನಾಗಬಹುದು." ಎಂದು ಹೇಳಿದನು.

೯. ಈರೀತಿ ಹೇಳಿದ ಮಹೀಪತಿಯ ಮಾತನ್ನು ಕೇಳಿ ಪೃಥ್ವೀರಾಜನು ಬಹಳ ಸಂತೋಷದಿಂದ ಆ ಮಹೀಪತಿಯನ್ನು ಕುರಿತು "ಎಲೈ ಮಿತ್ರನೇ! ಹಾಗಾದರೆ ನಾನು ಹೇಳುವ ಮಾತನ್ನು ಕೇಳು; ಜಾಗ್ರತೆಯಾಗಿ ಮಹಾವತೀನಗರಕ್ಕೆ ಹೊರಡು."

೧೦. "ಅಲ್ಲಿ ನಿನ್ನ ಸಹೋದರಿಯಾದ ಮಲನಾದೇವಿಯ ಸಮೀಪಕ್ಕೆ ಹೋಗಿ ಅವಳಿಗೆ ಚೆನ್ನಾಗಿ ಬೋಧನೆಮಾಡಿ ನೀನು ಹೇಳಿದ ಕಾರ್ಯವು ನಡೆಯು ವಂತೆ ಏರ್ಪಡಿಸು. ಇಷ್ಟು ಮಾಡಿದರೆ ನೀನು ನನ್ನ ಸಮೀಪದಲ್ಲೇ ಬಹುಕಾಲ ಸುಖವಾಗಿ ಇರಬಹುದು." ಎಂದು ಹೇಳಿದನು.

೧೧. ಪೃಥ್ವೀರಾಜನು ಈರೀತಿ ಹೇಳಿದ ಮಾತನ್ನು ಆ ಮಹೀಪತಿಯು ಕೇಳಿ ಅವನಿಗೆ ನಮಸ್ಕಾರಮಾಡಿ ಅನುಜ್ಞೆ ಪಡೆದು ಹೊರಟು ಮಹಾವತೀನಗರಕ್ಕೆ ಹೋದನು.

ವಧೂಸ್ತ್ವವ ಮಹಾರಾಜ್ಞಿ ವೇಲಾ ನಾಮ ಸುರೂಪಿಣೀ ।
ಸಂಪ್ರಾಪ್ತಾ ಯೌವನವತೀ ಪತಿಯೋಗ್ಯಾ ಶುಭಾನನಾ ॥ ೧೨ ॥

ಕುಜಾತಿಶ್ಚೈವ ಕೃಷ್ಣಾಂಶಃ ಶ್ರುತೋ ರಾಜ್ಞಾ ಮಹಾತ್ಮನಾ ।
ಅತೋ ನ ಪ್ರೇಷಿತಾ ಪುತ್ರೀ ತವ ಪುತ್ರಾಯ ಧೀಮತೇ ॥
ಅತೋ ಮದ್ವಚನಂ ಮತ್ವಾ ಕುರು ಕಾರ್ಯಂ ತವ ಪ್ರಿಯಂ ॥ ೧೩ ॥

ಮಯಾ ಸಾರ್ಧಂ ತವ ಸುತೋ ಬ್ರಹ್ಮಾನಂದೋ ಮಹಾಬಲಃ ।
ಉರ್ವೀಯಾಂ ನಗರೀಂ ಪ್ರಾಪ್ಯ ತದಾ ಮತ್ಸೈನ್ಯಸಂಯುತಃ ॥ ೧೪ ॥

ಮಹೀರಾಜಮುಪಾಗಮ್ಯ ಪತ್ನೀಂ ಶೀಘ್ರಮವಾಪ್ಸ್ಯತಿ ।
ನೋ ಚೇನ್ಮಮಾಜ್ಞಯಾ ವೇಲಾ ತ್ಯಕ್ತ್ವಾ ಕಾಂತಂ ಮರಿಷ್ಯತಿ ॥ ೧೫ ॥

---

೧೨. ಅಲ್ಲಿ ಘೋರವಾದ ರಾತ್ರಿಯವೇಳೆ ತನ್ನ ಸಹೋದರಿಯಾದ ಮಲನಾದೇವಿಯಿದ್ದ ಅರಮನೆಗೆ ಹೋಗಿ "ಎಲೌ ಮಹಾರಾಣಿಯೇ! ನಿನ್ನ ಸೊಸೆಯೂ, ಸುಂದರಿಯೂ ಆದ ವೇಲಾದೇವಿಯು ಈಗ ಪತಿಸುಖಕ್ಕೆ ಯೋಗ್ಯವಾದ ಯೌವನವತಿಯಾಗಿರುವಳು."

೧೩. "ಕೃಷ್ಣಾಂಶನು ಹೀನಜಾತಿಯಲ್ಲಿ ಹುಟ್ಟಿದವನೆಂದು ತಿಳಿದು ಮಹಾರಾಜನಾದ ಪೃಥ್ವೀರಾಜನು ತನ್ನ ಸುಕುಮಾರಿಯಾದ ಪುತ್ರಿಯನ್ನು ನಿನ್ನ ಕುಮಾರನೂ ಮೇಧಾವಿಯೂ ಆದ ಬ್ರಹ್ಮಾನಂದನ ಬಳಿಗೆ ಕರೆದೊಯ್ಯಲು ಅವನೊಡನೆ ಕಳುಹಿಸಿ ಕೊಡಲಿಲ್ಲ. ಆದುದರಿಂದ ನಿನ್ನ ಹಿತಕ್ಶ್ಯೋಸ್ಕರ ನಾನು ಈಗ ಹೇಳುವಂತೆ ನೀನು ನಡೆದುಕೊ."

೧೪. "ನಿನ್ನ ಮಗನಾದ ಮಹಾಬಲಶಾಲಿ ಬ್ರಹ್ಮಾನಂದನು ನನ್ನೊಡನೆ ಹೊರಟು ಭೂಮಿಗ್ರಾಮ (ಉರ್ವೀಯನಗರ)ಕ್ಕೆ ಬಂದು ಅಲ್ಲಿ ನನ್ನ ಸೇನೆಯೊಡಗೂಡಿ ಹೊರಡಲಿ."

೧೫. ಅವನು ಅಲ್ಲಿಂದ ಹೊರಟು ಪೃಥ್ವೀರಾಜನ ಬಳಿಗೆ ಹೋದರೆ ಶೀಘ್ರವಾಗಿ ತನ್ನ ಪತ್ನಿಯನ್ನು ಕರೆದುಕೊಂಡು ಬರಬಹುದು. ಇಲ್ಲದಿದ್ದರೆ "ಎಷ್ಟು ದಿನವಾದರೂ ನಿನ್ನ ಪತಿಯು ಬಾರದಿರುವುದರಿಂದ ಪ್ರಾಣತ್ಯಾಗಮಾಡೆಂ" ದು ನಿನ್ನ ಸೊಸೆಯಾದ ವೇಲೆಗೆ ನಾನು ಹೇಳಿಕೊಡುತ್ತೇನೆ. ಅವಳು ಅದರಂತೆಯೇ ಮರಣ ಹೊಂದುದವಳು" ಎಂದು ಹೇಳಿದನು.

ಇತಿ ಶ್ರುತ್ವಾ ತು ಸಾ ರಾಜ್ಞೀ ಮೋಹಿತಾ ದೇವಮಾಯಯಾ ।
ರಾಜಾನಂ ಸಮುಪಾಗಮ್ಯ ಭ್ರಾತುರ್ವಚನಮುತ್ತಮಂ ॥
ಕಥಯಾಮಾಸ ವೈ ಸರ್ವಂ ಶ್ರುತ್ವಾ ಭೂಪೋಽಬ್ರವೀದಿದಂ ॥ ೧೬ ॥

ಮಹೀಪತಿರ್ಮಹಾಧೂರ್ತೋ ಮದ್ವಿನಾಶಾಯ ಚೋದ್ಯತಃ ।
ತಸ್ಯ ವಾರ್ತಾ ನ ಮೇ ರಮ್ಯಾ ಕಪಟಸ್ತೇನ ನಿರ್ಮಿತಃ ॥ ೧೭ ॥

ಇತಿ ಶ್ರುತ್ವಾ ಚ ಮಲನಾ ರಾಜಾನಂ ಕೋಪಸಂಯುತಂ ।
ವಚನಂ ಪ್ರಾಹ ಭೋ ರಾಜನ್ ಯಥಾಬಂಧುಸ್ತಥಾಹ್ಯಹಂ ॥
ವಚನಂ ಕುರು ಮೇ ರಾಜನ್ನೋಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥ ೧೮ ॥

ಇತ್ಯುಕ್ತ್ವಾದಿನೀಂ ರಾತ್ರೌ ತದಾ ಪರಿಮಲೋ ನೃಪಃ ।
ಬ್ರಹ್ಮಾನಂದಂ ದದೌ ತಸ್ಮೈ ಸ ಸುತೋ ಮಾತೃವತ್ಸಲಃ ॥ ೧೯ ॥

---

೧೬. ದೇವಮಾಯೆಯಿಂದ ಬುದ್ಧಿಮೂಢೆಯಾದ ಆ ಮಲನಾದೇವಿಯು ಪರಿಮಳರಾಜನ ಸಮೀಪಕ್ಕೆ ಬಂದು ತನ್ನ ಅಣ್ಣನು ತನ್ನಕೈಲಿ ಹೇಳಿದ ಈ ಪ್ರಾಮುಖ್ಯವಾದ ಮಾತುಗಳನ್ನೆಲ್ಲಾ ತಿಳಿಸಿದಳು. ಪರಿಮಳರಾಜನು ಅದನ್ನೆಲ್ಲಾ ನಿಧಾನವಾಗಿ ಕೇಳಿ ಇಂತೆಂದನು.

೧೭. " ಈ ಮಹೀಪತಿರಾಜನು ಮಹಾಕೇಡಿಗನು. ನನ್ನನ್ನು ನಾಶಮಾಡಲು ಪ್ರಯತ್ನಮಾಡುತ್ತಿದ್ದಾನೆ. ಅವನ ಮಾತುಗಳೆಂದರೆ ನನಗೆ ಅಸಹ್ಯ. ಅವನು ಮಾಡುವುದೆಲ್ಲ ಮೋಸದ ವ್ಯಾಪಾರವೇ " ಎಂದನು.

೧೮. ತನ್ನ ಗಂಡನು ರೋಷಾವೇಶಯುಕ್ತನಾಗಿ ಹೀಗೆಂದುದನ್ನು ಕೇಳಿ ಮಲನಾದೇವಿಯು ತನ್ನ ಪತಿಯಾದ ಪರಿಮಳರಾಜನನ್ನು ಕುರಿತು " ಈಗ ನನ್ನ ಮಾತಿನಂತೆ ನಡೆಯಿಸಿಕೊಟ್ಟರೆ ಸರಿ. ಇಲ್ಲದಿದ್ದರೆ ನಾನು ಪ್ರಾಣತ್ಯಾಗ ಮಾಡುತ್ತೇನೆ " ಎಂದು ಹೇಳಿದಳು

೧೯. ಸಮರಾತ್ರಿಯಲ್ಲಿ ತನ್ನ ಪತ್ನಿಯು ತನ್ನೊಡನೆ ಹೀಗೆ ಕಠಿಣವಾಗಿ ಮಾತನಾಡಿದುದನ್ನು ಕೇಳಿ ಪರಿಮಳರಾಜನು " ಏನಾದರೂ ಮಾಡಿಕೊಳ್ಳಿ" ಎಂದು ಬ್ರಹ್ಮಾನಂದನನ್ನು ಮಹೀಪತಿರಾಜನ ವಶಕ್ಕೆ ಅರ್ಪಿಸಿದನು.

ಮಾತುರಾಜ್ಞಾಂ ಪುರಸ್ಕೃತ್ಯ ಮಾತುಲೇನ ಸಮನ್ವಿತಃ ।
ರಾತ್ರೌ ಚ ಮಾತುಲಗ್ರಾಮಂ ಸಂಪ್ರಾಪ್ಯ ಮುದಿತೋಽಭವತ್ ॥ ೨೦ ॥

ಪ್ರಾತಃಕಾಲೇ ಚ ಸಂಪ್ರಾಪ್ತೇ ಹರಿನಾಗರಮಾಸ್ಥಿತಃ ।
ಏಕಾಕೀ ದೇಹಲೀಂ ರಮ್ಯಾಂ ಪ್ರಯಯೌ ದೈವಮೋಹಿತಃ ॥ ೨೧ ॥

ಸಾಯಂಕಾಲೇ ತು ಸಂಪ್ರಾಪ್ತೇ ಮಹೀರಾಜಸ್ಯ ಮಂದಿರೇ ।
ಅಗಮಾಂ ದರ್ಶಯಾಮಾಸ ಸುರೂಪಾಂ ದಿವ್ಯವಿಗ್ರಹಾಂ ॥ ೨೨ ॥

ಅಗಮಾ ಚ ಸಮಾಲೋಕ್ಯ ಪರಂ ಹರ್ಷಮುಪಾಯಯೌ ।
ಮಾಘಶುಕ್ಲಸ್ಯ ಚಾಷ್ಟಮ್ಯಾಂ ಬ್ರಹ್ಮಾನಂದಶ್ಚ ನಿರ್ಭಯಃ ॥
ಶ್ಯಾಲಾನಾಂ ಯೋಷಿತಃ ಸಪ್ತ ದದರ್ಶ ರುಚಿರಾನನಾಃ ॥ ೨೩ ॥

---

೨೦. ತಾಯಿಯಲ್ಲಿ ಅತ್ಯಂತ ವಿಶ್ವಾಸವುಳ್ಳ ಆ ಬ್ರಹ್ಮಾನಂದನು ತಾಯಿಯ ಅಪ್ಪಣೆಯನ್ನು ಶಿರಸಾವಹಿಸಿ ಸೋದರಮಾವನಾದ ಮಹೀಪತಿರಾಜನೊಡನೆ ಆಗಲೇ ಹೊರಟು ಆ ರಾತ್ರಿಯೇ ಪ್ರಯಾಣಮಾಡಿ ಮಹೀಪತಿರಾಜನ ನಗರವನ್ನು ಸೇರಿ ಅತ್ಯಂತ ಹರ್ಷಯುಕ್ತನಾದನು.

೨೧. ಬೆಳಗಾಗುತ್ತಲೇ ದೈವಮಾಯೆಯಿಂದ ದಿಙ್ಮೂಢನಾಗಿ ಒಬ್ಬಂಟಿಗನಾಗಿ ಹರಿನಾಗರ ಕುದುರೆಯನ್ನೇರಿ ಸುಂದರವಾದ ದೆಹಲೀನಗರಕ್ಕೆ ಪ್ರಯಾಣ ಹೊರಟನು.

೨೨. ಹೀಗೆ ಹೊರಟು ಆದಿನ ಹಗಲೆಲ್ಲಾ ಪ್ರಯಾಣಮಾಡಿಕೊಂಡು ಸಂಜೆಯಹೊತ್ತಿಗೆ ಪೃಥ್ವೀರಾಜನ ಅರಮನೆಯನ್ನು ಸೇರಿ ಒಳ್ಳೆಯ ರೂಪವತಿಯೂ, ಶ್ರೇಷ್ಠವಾದ ಆಕಾರಸಂಪನ್ನೆಯೂ ಆದ ಅಗಮಾದೇವಿಯನ್ನು ನೋಡಿದನು.

೨೩. ಅಗಮಾದೇವಿಯು ಈ ಬ್ರಹ್ಮಾನಂದನನ್ನು ಕಂಡು ತುಂಬಾ ಸಂತೋಷ ಹೊಂದಿದಳು. ಮಾಘಶುಕ್ಲ ಅಷ್ಟಮಿಯದಿನ ಬ್ರಹ್ಮಾನಂದನು ನಿರ್ಭಯನಾಗಿ ತನ್ನ ಏಳುಮಂದಿ ಭಾವಮೈದಂದಿರ ಸುಂದರಿಯರಾದ ಪತ್ನಿಯರನ್ನೂ ನೋಡಿದನು.

ತಿಸ್ರೋ ನಾರ್ಯಶ್ಚ ವಿಧವಾಶ್ಚತಸ್ರೋ ಧವಸಂಯುತಾಃ ।
ಬ್ರಹ್ಮಾನಂದಂ ಚಾರುಮಯಂ ವಾಕ್ಯಮೂಚುರ್ಮುದಾನ್ವಿತಾಃ ॥ ೨೪ ॥

ಬ್ರಹ್ಮಾನಂದ ಮಹಾಭಾಗ ಸಾವಧಾನಂ ವಚಃ ಶೃಣು ।
ತವ ಪತ್ನೀ ಸ್ವಯಂ ಕಾಲೀ ವೇಲಾ ಕಲಹರೂಪಿಣೀ ॥
ಸಂಜಹಾರ ಧವಾನೇವ ನೋ ವಯಂ ತು ಸುದುಃಖಿತಾಃ ॥ ೨೫ ॥

ಸಾಪತ್ನ್ಯಮಸ್ತು ತತ್ರಸ್ಯಾ ಗೃಹಾಣಾಸ್ಮಾನ್ಮನೋಹರ ।
ಧವಾನ್ವಿದೇಹಿ ನೋ ವೀರ ಪತಿರ್ಭವ ಮುದಾನ್ವಿತಃ ॥ ೨೬ ॥

ಇತಿ ಶ್ರುತ್ವಾ ವಚಸ್ತಾಸಾಂ ಬ್ರಹ್ಮಾನಂದೋ ಮಹಾಬಲಃ ।
ಉವಾಚ ಮಧುರಂ ವಾಕ್ಯಂ ಶ್ರುತಿಸ್ಮೃತಿಸಮನ್ವಿತಂ ॥ ೨೭ ॥

---

೨೪. ಅವರಲ್ಲಿ ಮೂವರು ಸ್ತ್ರೀಯರು ಪತಿಹೀನೆಯರು. ಇನ್ನು ನಾಲ್ವರು ಸುಮಂಗಲಿಯರು ಆದರೂ ಅವರು ಮನೋಹರನಾದ ಬ್ರಹ್ಮಾನಂದನನ್ನು ಕಂಡು ಸಂತೋಷದಿಂದ ಅವನನ್ನು ಮಾತನಾಡಿಸತೊಡಗಿದರು.

೨೫. "ಅಯ್ಯಾ ಮಹಾಭಾಗನಾದ ಬ್ರಹ್ಮಾನಂದನೇ! ನಮ್ಮ ಮಾತನ್ನು ಸಾವಧಾನದಿಂದ ಲಾಲಿಸು. ನಿನ್ನ ಪತ್ನಿಯಾದ ವೇಲೆಯು ಮಹಾಜಗಳಗಂಟಿಯು. ಕಾಳೀಸ್ವರೂಪಳು. ನಮ್ಮ ಪತಿಗಳನ್ನೆಲ್ಲಾ ನಾಶಮಾಡಿಸಿದಳು. ನಾವು ಬಹು ದುಃಖಕ್ಕೆ ಗುರಿಯಾದೆವು."

೨೬ "ಎಲೈ ಮನೋಹರಾಕಾರನಾದ ಬ್ರಹ್ಮಾನಂದನೇ! ಅವಳಿಗೆ ಸವತಿ ಪ್ರಾಪ್ತಿಯ ಕ್ಲೇಶವಾದರೂ ಸಂಭವಿಸಲಿ. ನಮ್ಮನ್ನು ಪತ್ನಿಯರನ್ನಾಗಿ ಸ್ವೀಕರಿಸು. ನಮಗೆ ಪತಿಸುಖವುಂಟಾಗುವಂತೆ ಮಾಡು. ಅಯ್ಯಾ ವೀರನೇ! ಸಂತೋಷದಿಂದ ನಮಗೆ ನೀನೇ ಪತಿಯಾಗು" ಎಂದರು.

೨೭. ಮಹಾಬಲಶಾಲಿಯಾದ ಬ್ರಹ್ಮಾನಂದನು ಅವರು ಆರೀತಿ ಹೇಳಿದ್ದನ್ನು ಕೇಳಿ; ಶಾಸ್ತ್ರ, ಶ್ರುತಿ, ಸ್ಮೃತಿಗಳ ಉಕ್ತಿಗಳ ಆಧಾರಪೂರ್ವಕ ನಯವಾದ ನುಡಿಗಳಿಂದ ಈರೀತಿ ಹೇಳಿದನು.

ಪುರಾ ಸತ್ಯಯುಗೇ ನಾರೀ ಚೋತ್ತಮಾ ಚ ಪತಿವ್ರತಾ ।
ತ್ರೇತಾಯಾಂ ಮಧ್ಯಮಾ ಜಾತಾ ನಿಕೃಷ್ಟಾ ದ್ವಾಪರೇ ಪುನಃ　　॥ ೨೮ ॥

ಅಧಮಾ ಹಿ ಕಲೌ ನಾರೀ ಪರಪುಂಸೋಪಭೋಗಿನೀ ।
ಅತಸ್ತು ಕಲಿಕಾಲೇ ವೈ ವಿವಾಹೋ ವಿಧವಾಸ್ತ್ರಿಯಾಃ ॥
ದೇವಲೇನ ಶುಭಃ ಪ್ರೋಕ್ತಶ್ಚಾಸಿತೇನ ಸ್ವಯಂ ಸ್ಮೃತೌ　　॥ ೨೯ ॥

ಸತೀ ಸತ್ಯೇ ತು ಸಾ ಪ್ರೋಕ್ತಾ ತ್ರೇತಾಯಾಂ ಪತಿಭಸ್ಮಗಾ　　॥ ೩೦ ॥

ಸತೀ ಸಾ ಮಧ್ಯಮಾ ಪ್ರೋಕ್ತಾ ದ್ವಾಪರೇ ವಿಧವಾ ಸತೀ ।
ಬ್ರಹ್ಮಚರ್ಯಪರಾ ಜ್ಞೇಯಾ ಕಲೌ ನಾಸ್ತಿ ಸತೀವ್ರತಂ　　॥ ೩೧ ॥

---

೨೮. " ಪೂರ್ವದಲ್ಲಿ ಸತ್ಯಯುಗ (ಕೃತಯುಗ) ದಲ್ಲಿ ಹೆಂಗಸು ಪತಿವ್ರತೆಯಾಗಿ ಶ್ರೇಷ್ಠಳೆನಿಸಿದ್ದಳು. ತ್ರೇತಾಯುಗದಲ್ಲಿ ಅವರ ನಡವಳಿಕೆಯು ಮಧ್ಯಮ ವರ್ಗದ್ದಾಯಿತು. ದ್ವಾಪರಯುಗದಲ್ಲಿ ಬರುತ್ತಬರುತ್ತಾ ನಿಕೃಷ್ಟವಾಗಿ ಪರಿಣಮಿಸಿತು. ಕಲಿಯುಗದಲ್ಲಿ ಅದು ಕೇವಲ ಅಧಮವಾಗಿ ಪರಿಣಮಿಸಿದೆ. "

೨೯. "ಪರಪುರುಷರು ಎಂಬ ವಿವೇಕವಿಲ್ಲದೆ ಕೇವಲ ಉಪಭೋಗ ಲಾಲಸೆಯೇ ಮುಂದುವರಿಯುತ್ತಿದೆ. ಆದರಿಂದ ಈ ಕಲಿಗಾಲದಲ್ಲಿ ವಿಧವೆಯರಿಗೆ ಪುನಃ ವಿವಾಹ ಮಾಡುವುದು ಶುಭಕರವೆಂಬದಾಗಿ ದೇವಲನೂ ಅಸಿತನೂ ಸ್ಮೃತಿಯಲ್ಲಿ ಹೇಳಿದ್ದಾರೆ."

೩೦ "ಸ್ತ್ರೀಯು ಸತ್ಯಯುಗದಲ್ಲಿ ಮಹಾಪತಿವ್ರತೆಯೆನಿಸಿ ತೇಜಸ್ವಿನಿಯಾಗಿರುತ್ತಿದ್ದಳು ತ್ರೇತಾಯುಗದಲ್ಲಿ ಗಂಡನೊಡನೆ ಸಹಗಮನಮಾಡಿ ಮೃತಳಾಗಿ ಸುಟ್ಟು ಬೂದಿಯಾಗುತ್ತಿದ್ದಳು. ಅವಳು ಮಧ್ಯಮ ಅಂತಸ್ತಿನ ಪತಿವ್ರತೆಯೆನಿಸಿಕೊಂಡಳು."

೩೧. " ದ್ವಾಪರಯುಗದಲ್ಲಿ ಪತಿಯು ಮೃತನಾದ ಮೇಲೆ ವಿಧವೆಯೆನಿಸಿಕೊಂಡರೂ ಸತಿಯಾಗಿದ್ದು ಇಂದ್ರಿಯವನ್ನು ನಿಗ್ರಹಿಸಿ ಬ್ರಹ್ಮಚರ್ಯವನ್ನು ಪಾಲಿಸುತ್ತಿದ್ದರು. ಕಲಿಯುಗದಲ್ಲಿ ಸತೀವ್ರತವೆಂಬುದೇ ಇಲ್ಲವಾಗಿದೆ."

ಅತೋ ಯೂಯಂ ಮಯಾ ಸಾರ್ಧಂ ಭುಂಕ್ಷಧ್ವಮಮಲಂ ಸುಖಂ ।
ಇತಿ ಶ್ರುತ್ವಾ ಪ್ರಿಯಂ ವಾಕ್ಯಂ ತಿಸ್ರಸ್ತಾ ವಿಧವಾಃ ಸ್ತ್ರಿಯಃ ॥ ೩೨ ॥

ಕೃತ್ವಾ ಶೃಂಗಾರರೂಪಾಣಿ ಭೂಷಣಾನಿ ಚ ಸರ್ವಶಃ ।
ಬ್ರಹ್ಮಾನಂದಮುಪಾಗಮ್ಯ ಸಮಾಲಿಂಗನತತ್ಪರಾಃ ॥ ೩೩ ॥

ತಾ ದೃಷ್ಟ್ವಾ ಮಲನಾಪುತ್ರೋ ವಚನಂ ಪ್ರಾಹ ನಿರ್ಭಯಃ ॥ ೩೪ ॥

ಯುಷ್ಮಾಭಿಃ ಪತಯೋ ಮುಕ್ತಾ ಯೇ ಚ ಮದ್ಬಂಧುನಾ ಹತಾಃ ॥ ೩೫ ॥

ಯುಷ್ಮಾನತೋ ನ ಗೃಹ್ಣೀಯಾಂ ಸತ್ಯಂಸತ್ಯಂ ಬ್ರವೀಮ್ಯಹಂ ।
ಇತಿ ಶ್ರುತ್ವಾ ವಚೋ ಘೋರಂ ಹಾಸ್ಯಯುಕ್ತಂ ಚ ಯೋಷಿತಃ ॥ ೩೬ ॥

---

೩೨. "ಆದಕಾರಣ ನೀವು ನನ್ನೊಡನೆಕೂಡಿ ಆರೀತಿ ಪರಿಶುದ್ಧಸುಖವನ್ನೂ ಆನಂದವನ್ನೂ ಅನುಭವಿಸಿ" ಎಂದನು. ಬ್ರಹ್ಮಾನಂದನು ಈರೀತಿ ತಮ್ಮ ಮನಃ ಪ್ರಿಯವಾಗುವಂತೆ ಆಡಿದ ಮಾತನ್ನು ವಿಧವೆಯರಾದ ಆ ಮೂವರು ಸ್ತ್ರೀಯರು ಆಲಿಸಿದರು.

೩೩. ಕೂಡಲೆ ಆ ಮೂವರೂ ಅನರ್ಘ್ಯವಾದ ವಸ್ತ್ರಗಳನ್ನುಟ್ಟು ಸಮಸ್ತ ಆಭರಣಗಳಿಂದ ಸರ್ವಪ್ರಕಾರದಿಂದಲೂ ಅಲಂಕೃತೆಯರಾಗಿ ಬ್ರಹ್ಮಾನಂದನನ್ನು ಆಲಿಂಗಿಸಿ ಸುಖಿಸಲು ಆಸಕ್ತೆಯರಾಗಿ ಅವನ ಬಳಿಗೆ ಬಂದರು

೩೪. ಮಲನಾದೇವಿಯ ಮಗನಾದ ಬ್ರಹ್ಮಾನಂದನು ಭೋಗಲಾಲಸೆಯಿಂದ ಆರೀತಿ ಬಂದ ಅವರನ್ನು ನೋಡಿ ನಿರ್ಭಯವಾಗಿ ಇಂತೆಂದನು.

೩೫. "ನಿಮ್ಮನ್ನಗಲಿ ಹೋದ ಆ ನಿಮ್ಮ ಗಂಡದಿರ ನಾಶಕ್ಕೆ ನನ್ನ ಬಂಧುವಾದ ಕೃಷ್ಣಾಂಶನೇ ಕಾರಣನಾಗಿದ್ದಾನೆ (ತಮ್ಮನು ಶತ್ರುವಾದ ಮೇಲೆ ಅವರ ಅಣ್ಣನೂ ಶತ್ರುವಲ್ಲವೆ? ಎಂದುಭಾವ.) ಆದಕಾರಣ ನಿಮ್ಮನ್ನು ನಾನು ಸತ್ಯವಾಗಿಯೂ ಪರಿಗ್ರಹಿಸುವುದಿಲ್ಲ. ಇದುಸತ್ಯ" ಎಂದನು.

೩೬. ಕೇಳುವುದಕ್ಕೆ ಘೋರವಾಗಿಯೂ ಹಾಸ್ಯಯುಕ್ತವಾಗಿಯೂ ಇದ್ದ ಮಾತನ್ನು ಕೇಳಿ, ಆ ಹೆಂಗಸರು ಪೃಥ್ವೀರಾಜನ ಬಳಿಗೆ ಬಂದು ಬಹುವಾಗಿ ದುಃಖಿಸುತ್ತಾ ಗೋಳಾಡಿದರು.

ಮಹೀರಾಜಾಂತಮಾಗಮ್ಯ ರುರುದುರ್ಭರ್ತೃಶದುಃಖಿತಾಃ ।
ರಾಜನ್ ವೇಲಾಪತಿರ್ಧೂರ್ತೋ ಮಮ ಧರ್ಮಂ ಜಹಾತಿ ವೈ ॥
ದಂಡಂ ದೇಹಿ ಚ ಧೂರ್ತಾಯ ನೋ ಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥೩೭॥

ಇತಿ ಶ್ರುತ್ವಾ ಮಹೀರಾಜೋ ಬ್ರಹ್ಮಾನಂದಂ ಮಹಾಬಲಂ ।
ಸಮಾಹೂಯ ವಚಃ ಪ್ರಾಹ ಭವಾನ್ ಭೂಪಕುಲಾಧಮಃ ॥ ೩೮ ॥

ಪರಸ್ತ್ರಿಯಂ ಚ ಯೋ ಭುಂಕ್ತೇ ಸ ಯಾತಿ ಯಮಮಂದಿರಂ ।
ಅದ್ಯೈವ ತ್ವಂ ಸುತಾಕಾಂತ ಕಾರಾಗೃಹಮವಾಪ್ನುಯಾಃ ॥ ೩೯ ॥

ಇತಿ ಶ್ರುತ್ವಾ ವಚೋ ಘೋರಂ ಬ್ರಹ್ಮಾನಂದೋ ಮಹಾಬಲಃ ।
ಸತ್ಸರೋಃ ಖಡ್ಗಮುತ್ಸೃಜ್ಯ ಮಹೀರಾಜಮಧಾವತ ॥ ೪೦ ॥

---

೩೭. ಅಷ್ಟೇ ಅಲ್ಲದೆ " ಪ್ರಭುವೇ! ಈ ವೇಲಾದೇವಿಯ ಗಂಡನಾದ ಬ್ರಹ್ಮಾನಂದನು ಮಹಾಮೋಸಗಾರನು. ನಮ್ಮ ಧರ್ಮವನ್ನು ಹಳಿಯುತ್ತಾನೆ. ಆ ಧೂರ್ತನಿಗೆ ತಕ್ಕ ಶಿಕ್ಷೆ ವಿಧಿಸಬೇಕು. ನೀನು ಹಾಗೆ ಮಾಡದೆಹೋದರೆ ನಾವು ಪ್ರಾಣತ್ಯಾಗ ಮಾಡುತ್ತೇವೆ " ಎಂದರು.

೩೮. ಆ ಸ್ತ್ರೀಯರು ಹೀಗೆ ಹೇಳಿದ್ದನ್ನು ಕೇಳಿ ಪೃಥ್ವೀರಾಜನು ಮಹಾಬಲಶಾಲಿಯಾದ ಬ್ರಹ್ಮಾನಂದನನ್ನು ತನ್ನ ಬಳಿಗೆ ಕರೆಯಿಸಿ " ನೀನು ಕ್ಷತ್ರಿಯವಂಶದಲ್ಲಿ ಅಧಮ. "

೩೯. " ಪರಸ್ತ್ರೀಯರೊಡನೆ ಭೋಗಿಸಿದ ಮನುಷ್ಯನಿಗೆ ಯಮಲೋಕ ಪ್ರಾಪ್ತಿಯಾಗುವುದು. ಇದು ನಿಜ. ಅಯ್ಯಾ! ನೀನು ನನ್ನ ಮಗಳ ಗಂಡನಾದರೂ ಹೀನವಾದ ಆಶಯವುಳ್ಳ ನಿನಗೆ ಈಗಲೇ ಕಾರಾಗಾರವಾಸವನ್ನು ವಿಧಿಸುವೆನು. " ಎಂದನು.

೪೦. ಪೃಥ್ವೀರಾಜನು ಹೇಳಿದ ಈ ಕಠೋರವಾಕ್ಯನ್ನು ಕೇಳಿ ಮಹಾಬಲಶಾಲಿಯಾದ ಬ್ರಹ್ಮಾನಂದನು ಒರೆಯಿಂದ ಖಡ್ಗವನ್ನು ಹಿರಿದುಕೊಂಡು ಪೃಥ್ವೀರಾಜನ ಬಳಿಗೆ ಓಡಿಬಂದನು.

ದೃಷ್ಟ್ವಾ ಭಯಾತುರೋ ರಾಜಾ ಚಾಮುಂಡಾಂತಮುಪಾಯಯೌ ।
ಕಪಾಟಂ ದೃಢಮಾಚ್ಛಾದ್ಯ ತತ್ರ ವಾಸಮಕಾರಯತ್ ॥ ೪೧ ॥

॥ ಋಷಯ ಊಚುಃ ॥

ತಾಸಾಂ ಕಥಂ ವಿವಾಹಾಃ ಸ್ಯುಃ ತತ್ವಂ ನೋ ಬ್ರೂಹಿ ವಿಸ್ತರಾತ್ ।
ಕುತ್ರತ್ಯಾಸ್ತಾಃ ಕಿಮಂಶಾಶ್ಚ ದೃಷ್ಟ್ವಾ ಯೋಗೇನ ವೈ ತ್ವಯಾ ॥ ೪೨ ॥

॥ ಸೂತ ಉವಾಚ ॥

ಅಂಗದೇಶೇ ಮುನಿಶ್ರೇಷ್ಠ ಮಾಯಾವರ್ಮಾನೃಪೋಽಭವತ್ ।
ತಾಮಸೀಂ ಪೂಜಯಿತ್ವಾ ವೈ ಶಕ್ತಿಂ ಸರ್ವವಿಮೋಹಿನೀಂ ॥ ೪೩ ॥

ವರ್ಮೋತ್ತಮಂ ತಯಾ ದತ್ತಂ ಸರ್ವಸತ್ವಭಯಂಕರಂ ।
ಗೃಹೀತ್ವಾ ಸ ತು ಭೂಪಾಲಃ ಪ್ರಸ್ಥಿತೋಽಭೂನ್ಮಹೀತಲೇ ॥ ೪೪ ॥

---

೪೧. ಇದನ್ನು ನೋಡಿ ಪೃಥ್ವೀರಾಜನು ದಿಗಿಲುಬಿದ್ದು ಆಪ್ತನಾದ ಚಾಮುಂಡನ ಬಿಡಾರಕ್ಕೆ ಓಡಿಹೋಗಿ ಬಾಗಿಲನ್ನು ಭದ್ರಪಡಿಸಿ ಅಲ್ಲಿಯೇ ಅಡಗಿಕೊಂಡು ಬಿಟ್ಟನು.

೪೨. ಋಷಿಗಳು ಕೇಳುತ್ತಾರೆ.—"ಎಲೈ ಸೂತನೇ ! ಆ ಸ್ತ್ರೀಯರು ಯಾವ ದೇಶದವರು ? ಯಾರ ಅಂಶಸಂಭೂತರು ? ಪೃಥ್ವೀರಾಜನ ಕುಮಾರರೊಡನೆ ಅವರಿಗೆ ಮದುವೆಯಾದ ಬಗೆಹೇಗೆ? ನೀನು ಯೋಗದೃಷ್ಟಿಯಿಂದ ತತ್ವಾಂಶವನ್ನು ತಿಳಿದು ಇದನ್ನೆಲ್ಲಾ ವಿಸ್ತಾರವಾಗಿ ನಮಗೆ ಹೇಳು " ಎಂದು ಕೇಳಿದರು.

೪೩. ಆ ಸ್ತ್ರೀಯರು ವಿವಾಹವಾದ ಪ್ರಕಾರವನ್ನು ಸೂತಮುನಿವರ್ಯನು ಹೇಳುತ್ತಾನೆ—"ಎಲೈ ಮುನಿಶ್ರೇಷ್ಠರೇ ! ಅಂಗದೇಶದಲ್ಲಿ ಮಾಯಾವರ್ಮನೆಂಬ ರಾಜನಿದ್ದನು. ಅವನಿಗೆ ಪ್ರಮದೆಯೆಂಬ ಹೆಂಡತಿಯಿದ್ದಳು. ಅವನು ಸರ್ವರನ್ನೂ ಮೋಹಮೂರ್ಛೆಗೊಳಿಸುವ ತಾಮಸೀ ಎಂಬ ಶಕ್ತಿದೇವತೆಯನ್ನು ಆರಾಧಿಸುತ್ತಿದ್ದನು."

೪೪. "ಇವನ ಆರಾಧನೆಗೆ ಮೆಚ್ಚಿದ ದೇವಿಯು ಸರ್ವಪ್ರಾಣಿಗಳಿಗೂ ಭಯವನ್ನುಂಟುಮಾಡುವ ಶ್ರೇಷ್ಠವಾದ ಒಂದು ಕವಚವನ್ನು ಅವನಿಗೆ ಕೊಟ್ಟಳು. ಆ ರಾಜನು ಅದನ್ನು ಧರಿಸಿಕೊಂಡು ಭೂಮಂಡಲವನ್ನು ಸುತ್ತಲು ಹೊರಟನು.

ಪ್ರಮದಾ ನಾಮ ತತ್ಪತ್ನೀ ದಶಪುತ್ರಾನಸೂಷುವತ್ ।
ಕೌರವಾಂಶಾನ್ ಮಹಾಭಾಗ ವರ್ಷಾಂತೇ ನಾಮ ಮೇ ಶೃಣು ॥ ೪೫ ॥

ಮತ್ತಃ ಪ್ರಮತ್ತ ಉನ್ಮತ್ತಃ ಸುಮತ್ತೋ ದುರ್ಮದಸ್ತಥಾ ।
ದುರ್ಮುಖೋ ದುರ್ಧರೋ ಬಾಹುಃ ಸುರಥೋ ವಿರಥಃ ಕ್ರಮಾತ್ ॥
ತೇಷಾಂ ಸ್ವಸಾನುಜಾ ಚಾಸೀತ್ ಸುನಾಮ್ನಾ ಮದಿರೇಕ್ಷಣಾ ॥ ೪೬ ॥

ತಸ್ಯಾ ವೈ ಸುಂದರಂ ರೂಪಂ ಮದಾಘೂರ್ಣಿತಲೋಚನಂ ।
ಕಿತವೋ ನಾಮ ವೈ ದೈತ್ಯೋ ದೃಷ್ಟ್ವಾ ಮೋಹಮುಪಾಗತಃ ॥ ೪೭ ॥

ಮಾಯಾವರ್ಮಾಣಮಾಗತ್ಯ ವಚನಂ ಪ್ರಾಹ ನಮ್ರಧೀಃ ।
ಯದಿ ತ್ವಂ ಮೇ ಸ್ವತನಯಾಂ ದೇಹಿ ಕಾಮಾತುರಾಯ ಚ ॥ ೪೮ ॥

ತರ್ಹಿ ತೇ ಸಕಲಂ ಕಾರ್ಯಂ ಕರಿಷ್ಯಾಮಿ ನ ಸಂಶಯಃ ।
ಇತಿ ಶ್ರುತ್ವಾ ತದಾ ಭೂಪೋ ದದೌ ತಸ್ಮೈ ಸ್ವಕನ್ಯಕಾಂ ॥ ೪೯ ॥

---

೪೫. ಅಯ್ಯಾ ಮಹಾಭಾಗರೇ! ಬಳಿಕ ವರ್ಷದ ಕೊನೆಯಲ್ಲಿ ಅವನ ಪತ್ನಿಯಾದ ಪ್ರಮದೆಯು ಕೌರವಾಂಶಸಂಭೂತರಾದ ಹತ್ತುಮಂದಿ ಪುತ್ರರನ್ನು ಪ್ರಸುವಿಸಿದಳು. ಅವರ ಹೆಸರನ್ನು ಹೇಳುವೆನು ಕೇಳಿ.

೪೬. ಮತ್ತ, ಪ್ರಮತ್ತ, ಉನ್ಮತ್ತ, ದುರ್ಮದ, ಸುಮತ್ತ, ದುರ್ಮುಖ, ದುರ್ಧರ, ಬಾಹು, ಸುರಥ, ವಿರಥ ಎಂಬವರೇ ಈ ಹತ್ತುಮಂದಿಗಳು. ಅವರಿಗೆ ಮದಿರೇಕ್ಷಣೆಯೆಂಬ ಒಬ್ಬಳು ತಂಗಿ ಇದ್ದಳು.

೪೭. ಮದದಿಂದ ಚಂಚಲವಾಗಿ ಕಣ್ಗೊಳಿಸುವ ಅವಳ ಕಣ್ಣುಗಳನ್ನೂ ಸುಂದರರೂಪನ್ನೂ ನೋಡಿ ಕಿತವನೆಂಬ ದೈತ್ಯನು ಅವಳನ್ನು ಮೋಹಿಸಿದನು.

೪೮. ಆ ದೈತ್ಯನು ನಮ್ರಬುದ್ಧಿಯುಳ್ಳವನಾಗಿ ಮಾಯಾವರ್ಮನನ್ನು ಕರೆದು ಈ ಮಾತನ್ನು ಹೇಳಿದನು. "ಕಾಮಾತುರನಾದ ನನಗೆ ನಿನ್ನ ಮಗಳನ್ನು ಕೊಡು "

೪೯. "ಹೀಗೆ ನೀನು ಕೊಟ್ಟರೆ ನಿನ್ನ ಕೆಲಸಗಳನ್ನು ಸಫಲ ಮಾಡಿಕೊಡುವೆನು" ಎಂದನು. ರಾಜನು ಈ ಮಾತನ್ನು ಕೇಳಿ ತನ್ನ ಮಗಳನ್ನು ಅವನಿಗೆ ಕೊಟ್ಟು ಬಿಟ್ಟನು.

ಕಿತವೋ ಗಹ್ವರಾವಾಸೀ ರಾತ್ರೌ ಘೋರೇ ತಮೋವೃತೇ ।
ನೃಪಗೇಹಮುಪಾಗಮ್ಯ ಬುಭುಜೇ ಸ್ಮರವಿಹ್ವಲಃ ॥
ಪ್ರಾತಃಕಾಲೇ ತು ತಾಂ ತ್ಯಕ್ತ್ವಾ ಕಂದರಾಂತಮುಪಾಯಯೌ ॥ ೫೦ ॥

ವರ್ಮದೇವಸುತೇ ಜಾತೇ ತತೋ ರಾಜಾ ಮದಾತುರಃ ।
ಪುರೋಹಿತಂ ಸಮಾಹೂಯ ಲಕ್ಷದ್ರವ್ಯಸಮನ್ವಿತಂ ॥
ಮಹೀರಾಜಾಯ ಸಂಪ್ರೇಷ್ಯ ತಾರಕಂ ಸ ಸಮಾವೃಣೋತ್ ॥ ೫೧ ॥

ಮಹೀರಾಜಸ್ತು ಬಲವಾನ್ ಲಕ್ಷಷೋಡಶಸೈನ್ಯಪಃ ।
ಸಂಯುತಃ ಶತಭೂಪಾಲೈರ್ಮಾಸಾಂತೇ ಸಮುಪಾಗಮತ್ ॥ ೫೨ ॥

ಕೃಷ್ಣಾಂಶೇ ಪಂಚದಶಕೇ ಸಂಪ್ರಾಪ್ತೇ ವ್ರತತತ್ಪರೇ ।
ತಾರಕಶ್ಚ ವಿವಾಹಾಯ ಬಹುಭೂಪೋಽಂಗಮಾನಯತ್ ॥ ೫೩ ॥

---

೫೦. ಗುಹೆಯಲ್ಲಿ ವಾಸಿಸುತ್ತಿದ್ದ ಆ ಕಿತವನು ರಾತ್ರಿ ಭಯಂಕರವಾದ ಕಗ್ಗತ್ತಲು ಕವಿದಿರುವಾಗ ಮದನಾತುರನಾಗಿ ಅರಮನೆಗೆ ಹೋಗಿ, ಆಕೆಯನ್ನು ಭೋಗಿಸುತ್ತಿದ್ದನು. ಬೆಳಗಾಗುತ್ತಲೇ ಅವಳ ಸಹವಾಸವನ್ನು 'ಬಿಟ್ಟು, ಗುಹೆಗೇ ಹೋಗಿ ಇರುತ್ತಿದ್ದನು.

೫೧. ಹೀಗಿರುತ್ತಿರುವಲ್ಲಿ ಮಾಯಾವರ್ಮನಿಗೆ, ಪುತ್ರಿಯ ವಿವಾಹ ಮಾಡ ಬೇಕೆಂಬ ಅಭಿಪ್ರಾಯ ಹುಟ್ಟುತ್ತಲೇ, ರಾಜನಾದ ಅವನು ಮದೋದ್ರೇಕದಿಂದ ಕೂಡಿದವನಾಗಿ ಪುರೋಹಿತನನ್ನು ಕರೆಯಿಸಿ, ಅವನ ಕೈಲಿ ಒಂದುಲಕ್ಷ ದ್ರವ್ಯವನ್ನು ಕೊಟ್ಟು, ಪೃಥ್ವೀರಾಜನ ಬಳಿಗೆ ಕಳುಹಿಸಿ ಅವನ ಪುತ್ರನಾದ ತಾರಕನನ್ನು ವರನನ್ನಾಗಿ ನಿಷ್ಕರ್ಷೆ ಮಾಡಿದನು.

೫೨. ಬಲಶಾಲಿಯೂ ಹದಿನಾರುಲಕ್ಷ ಸೈನ್ಯವುಳ್ಳವನೂ ಆದ ಪೃಥ್ವೀರಾಜನು ಒಂದು ತಿಂಗಳೊಳಗೆ ನೂರಾರು ಸಾಮಂತರಾಜರೊಡನೆ ಹೊರಟು ಆ ದೇಶಕ್ಕೆ ಬಂದನು.

೫೩. ವ್ರತತತ್ಪರನಾಗಿದ್ದ ಕೃಷ್ಣಾಂಶನಿಗೆ ಆಗ ಹದಿನೈದು ವರ್ಷವಾಗಿದ್ದಿತು ಪೃಥ್ವೀರಾಜನು ತಾರಕನ ವಿವಾಹಕ್ಕಾಗಿ ಬಹುರಾಜರು ಮತ್ತು ಅವರ ಸೈನ್ಯವೃಂದ ಸಮೇತನಾಗಿ ಬಂದನು.

ಮಾಯಾವರ್ಮಾ ಚ ತಂ ದೃಷ್ಟ್ವಾ ತಾರಕಂ ಭೂಪಸಂಯುತಂ ।
ವಚನಂ ಪ್ರಾಹ ಬಲವಾನ್ ರಾಜರಾಜ ವಚಃ ಶೃಣು ॥ ೫೪ ॥

ಕಿತವೋ ನಾಮ ಮೇಧಾವೀ ದೈತ್ಯವಂಶಯಶಸ್ಕರಃ ।
ತೇನ ಮೇ ಪೀಡಿತಾ ಬಾಲಾ ರಾತ್ರೌ ಘೋರತಮೋವೃತೇ ॥ ೫೫ ॥

ಹತಾ ಭೂಪಕುಮಾರಾಶ್ಚ ಮತ್ಸುತಾರ್ಥಂ ಸಮಾಗತಾಃ ।
ಭಕ್ಷಿತಾಸ್ತೇನ ದೈತ್ಯೇನ ಸಂಯಯುಸ್ತೇ ಯಮಾಲಯಂ ॥ ೫೬ ॥

ತೇಷಾಂ ಚ ಬಹುಧಾ ದ್ರವ್ಯಂ ಲುಂಠಯಿತ್ವಾ ಮದಾತುರಃ ।
ಮತ್ಸುತಾಯೈ ದದೌ ಸರ್ವಂ ತಸ್ಮಾತ್ತ್ವಂ ದಿತಿಜಂ ಜಹಿ ॥ ೫೭ ॥

ಇತಿ ಶ್ರುತ್ವಾ ಮಹೀರಾಜಃ ಸರ್ವಸೈನ್ಯಸಮನ್ವಿತಃ ।
ಕಿತವಂ ಚ ಸಮಾಹೂಯ ಮಹದ್ಯುದ್ಧಮಚೀಕರತ್ ॥ ೫೮ ॥

---

೫೪. ಹೀಗೆ ಬಂದುದನ್ನು ನೋಡಿ ಬಲಶಾಲಿಯಾದ ಮಾಯಾವರ್ಮನು ತಾರಕ ಸಮೇತನಾದ ಆ ರಾಜನನ್ನು ಕುರಿತು "ಅಯ್ಯಾ ಸಾರ್ವಭೌಮರೇ! ನನ್ನದೊಂದು ಮಾತನ್ನು ಲಾಲಿಸಿ."

೫೫. "ರಾಕ್ಷಸಕುಲಕ್ಕೆ ಯಶಸ್ಸನ್ನು ತರುವಷ್ಟು ಮಹಾಬುದ್ಧಿಶಾಲಿಯಾದ ಕಿತವನೆಂಬ ಹೆಸರುಳ್ಳ ರಾಕ್ಷಸನೊಬ್ಬನು, ಈ ನಗರದ ಸಮೀಪದಲ್ಲಿದ್ದಾನೆ. ರಾತ್ರಿ ಗಾಢಾಂಧಕಾರವಾವರಿಸಿದಮೇಲೆ ಅವನು ಬಂದು ನನ್ನ ಮಗಳನ್ನು ಹಿಂಸಿಸುತ್ತಾನೆ."

೫೬. "ನನ್ನ ಮಗಳನ್ನು ಮದುವೆಯಾಗಲಿಕ್ಕೆಂದು ಬಂದ ರಾಜಕುಮಾರರೆಲ್ಲಾ ಅವನಿಂದ ಹತರಾಗಿ ಹೋಗಿದ್ದಾರೆ ಆ ದುಷ್ಟದೈತ್ಯನು ಅವರನ್ನೆಲ್ಲಾ ತಿಂದು ತೇಗಿದ್ದರಿಂದ ಅವರೆಲ್ಲರೂ ಯಮನ ಪಟ್ಟಣವನ್ನು ಸೇರಿದರು."

೫೭. "ಅವರ ಅಪಾರ ದ್ರವ್ಯವನ್ನೆಲ್ಲಾ ಲೂಟಿ ಹೊಡೆದುಹೊಡೆದು ಮದಿಸಿ ಕೊಬ್ಬಿದ ಅವನು ಆ ಹಣವೆಲ್ಲವನ್ನೂ ನನ್ನ ಮಗಳಿಗೆ ತಂದುಕೊಟ್ಟಿದ್ದಾನೆ. ಪರಿಸ್ಥಿತಿ ಹೀಗಿರುವ ಕಾರಣ ನೀನು ಮೊದಲು ಆ ದೈತ್ಯನನ್ನು ಧ್ವಂಸಮಾಡು." ಎಂದು ಹೇಳಿದನು.

೫೮. ಪೃಥ್ವೀರಾಜನು ಈ ಮಾತನ್ನು ಕೇಳಿ ಸರ್ವಸೈನ್ಯಸಮೇತನಾಗಿ ಯುದ್ಧಸನ್ನದ್ಧನಾಗಿ ಕಿತವದೈತ್ಯನನ್ನು ಬರಮಾಡಿ ದೊಡ್ಡಯುದ್ಧವನ್ನೇ ಹೂಡಿದನು.

ಕಿತವಃ ಸ ತು ಮಾಯಾವೀ ಜಿತ್ವಾ ಸರ್ವಾನ್ ಮಹಾಬಲಾನ್ ।
ತಾರಕಂ ಚ ಸಮಾಹೃತ್ಯ ಗುಹಾಯಾಂ ಸಮುಪಾಗಮತ್ ॥ ೫೯ ॥

ತಾರಕಶ್ಚ ತದಾ ದುಃಖೀ ಧ್ಯಾತ್ವಾ ಶಂಕರಮುತ್ತಮಮ್ ।
ಪಾಷಾಣಭೂತೋ ಹ್ಯಗಮನ್ಮಹಾದೇವಪ್ರಸಾದತಃ ॥ ೬೦ ॥

ಏತಸ್ಮಿನ್ನಂತರೇ ಪ್ರಾಪ್ತಾ ಮಹಾವತಿನಿವಾಸಿನಃ ।
ಕ್ಷತ್ರಿಯಾ ದಶಸಾಹಸ್ರಾಃ ಕೃಷ್ಣಾಂಶಾದ್ಯೈಶ್ಚ ಪಾಲಿತಾಃ ॥ ೬೧ ॥

ಮಹೀರಾಜಸ್ತು ತಾನ್ ದೃಷ್ಟ್ವಾ ಬಲಖಾನಿಂ ಮಹಾಬಲಂ ।
ಉವಾಚ ವಚನಂ ಪ್ರೇಮ್ಣಾ ಪುತ್ರಶೋಕೇನ ದುಃಖಿತಃ ॥ ೬೨ ॥

ತಾರಕಃ ಕಿತವೇನೈವ ಸಂಹೃತೋ ದಿತಿಜೇನ ವೈ ।
ಯದಿ ತ್ವಂ ಮೇ ಸುತಂ ದೇಹಿ ಕೋಟಿಸ್ವರ್ಣಂ ದದಾಮಿ ತತ್ ॥ ೬೩ ॥

---

೫೯. ಮಾಯಾವಿಯಾದ ಆ ಕಿತವದೈತ್ಯನು ಮಹಾಬಲಶಾಲಿಗಳಾದ ಅವರೆಲ್ಲರನ್ನೂ ಸೋಲಿಸಿ, ರಾಜಕುಮಾರನಾದ ತಾರಕನನ್ನು ಅಪಹರಿಸಿ ತನ್ನ ಗುಹೆಗೆ ಎತ್ತಿಕೊಂಡು ಬಂದನು.

೬೦. ಹೀಗೆ ರಾಕ್ಷಸನ ಕೈಗೆ ಸಿಕ್ಕಿದ ತಾರಕನು ತುಂಬಾ ದುಃಖಭರಿತನಾಗಿ ಶಂಕರನನ್ನು ಧ್ಯಾನಮಾಡಿ ಆ ಮಹಾದೇವನ ಮಹಿಮಾವಿಶೇಷದಿಂದ ಕಲ್ಲಿನಂತೆ ಆಗಿಹೋದನು.

೬೧. ಇಷ್ಟರೊಳಗೆ ಮಹಾವತೀ ನಿವಾಸಿಗಳಾದ ಕೃಷ್ಣಾಂಶ ಮೊದಲಾದವರ ರಕ್ಷಣೆಯಲ್ಲಿ ಹತ್ತುಸಾವಿರಮಂದಿ ಕ್ಷತ್ರಿಯ ವೀರರು ಅಲ್ಲಿಗೆ ಬಂದರು.

೬೨. ಪುತ್ರನನ್ನು ಕಾಣದೆ ದುಃಖಿತನಾದ ಪೃಥ್ವೀರಾಜನು, ಅವರು ಬಂದದ್ದನ್ನು ನೋಡಿ ಮಹಾಶೂರನಾದ ಬಲಖಾನಿಯನ್ನು ಕುರಿತು ಪ್ರೇಮದಿಂದ ಮಾತಾಡಿಸತೊಡಗಿ,

೬೩. "ದೈತ್ಯನಾದ ಕಿತವನು ನಮ್ಮ ತಾರಕ ಕುಮಾರನನ್ನು ಅಪಹರಿಸಿಬಿಟ್ಟಿದ್ದಾನೆ. ನೀನು ನನ್ನ ಮಗನನ್ನು ಕರೆತಂದು ಕೊಟ್ಟರೆ ನಿನಗೆ ಒಂದುಕೋಟಿ ಚಿನ್ನದ ಮೊಹರಗಳನ್ನು ಕೊಡುತ್ತೇನೆ" ಎಂದನು.

ಇತಿ ಶ್ರುತ್ವಾ ತು ತೇ ಧೀರಾಃ ಕೃಷ್ಣಾಂಶೋ ದೇವಸಿಂಹಕಃ ।
ವತ್ಸಜೌ ಚ ತಥಾಗಮ್ಯ ಕಿತವಂ ರುರುಧುರ್ಬಲಾತ್ ॥ ೬೪ ॥

ಅಹೋರಾತ್ರಮಭೂದ್ಯುದ್ಧಂ ತೇಷಾಂ ತೇನ ಸಮನ್ವಿತಂ ।
ಕಿತವಸ್ತು ರುಷಾವಿಷ್ಟಃ ಕೃಷ್ಣಾಂಶಂ ದೇವಸಿಂಹಕಂ ॥ ೬೫ ॥

ಸುಖಖಾನಿಸ್ತದಾ ಶೂರಃ ಕಿತವಂ ಬಲವತ್ತರಂ ।
ಸ್ವಖಡ್ಗೇನ ಶಿರಸ್ತಸ್ಯ ಛಿತ್ವಾ ರಾಜಾನಮಾಗಮತ್ ॥ ೬೬ ॥

ತ್ರಯಸ್ತೇ ಸುಖಿನೋ ಭೂತ್ವಾ ಸುಖಖಾನಿಂ ಪ್ರಶಸ್ಯ ಚ ।
ಮಹೀರಾಜಾಯ ಚ ದದೌ ತಾರಕಂ ಕೈತವಂ ಶಿರಃ ॥ ೬೭ ॥

---

೬೪. ವತ್ಸರಾಜಪುತ್ರರಾವ ಬಲಖಾನಿ, ಸುಖಖಾನಿ, ಕೃಷ್ಣಾಂಶ, ದೇವಸಿಂಹ ಮುಂತಾದ ವೀರರು, ಪೃಥ್ವೀರಾಜನು ಹೇಳಿದ ಈ ಮಾತನ್ನು ಕೇಳಿ ಅಲ್ಲಿಂದ ಹೊರಟು ಗಹ್ವರಪ್ರಾಂತಕ್ಕೆ ಬಂದು ಕಿತವದೈತನ ನಿವಾಸವನ್ನು ಬಲವಾಗಿ ಮುತ್ತಿಗೆ ಹಾಕಿದರು.

೬೫. ದೇವಸಿಂಹಾದಿಗಳಿಗೆ ಅವನೊಡನೆ ಬಲವಾದ ಯುದ್ಧವಾಯಿತು. ಕಿತವನು ರೋಷದಿಂದ ಆವೇಶಗೊಂಡು ಕೃಷ್ಣಾಂಶ, ದೇವಸಿಂಹ, ಸುಖಖಾನಿ ಇವರನ್ನೆಲ್ಲಾ ಮೂರ್ಛೆಗೆಡವಿ ಮತ್ತೆಮತ್ತೆ ಸಿಂಹನಾದ ಮಾಡಿದನು.

೬೬. ಶೂರನಾದ ಸುಖಖಾನಿಯು ಮಹಾಬಲಶಾಲಿಯಾದ ಕಿತವದೈತ್ಯನನ್ನು ತನ್ನ ಖಡ್ಗದಿಂದ ಹೊಡೆದು ಅವನ ಶಿರಸ್ಸನ್ನು ಛೇದಿಸಿಹಾಕಿ ಅನಂತರ ಪೃಥ್ವೀರಾಜನ ಬಳಿಗೆ ಬಂದನು.

೬೭. ಕೃಷ್ಣಾಂಶ, ದೇವಸಿಂಹ, ಬಲಖಾನಿ ಈ ಮೂರುಮಂದಿಯೂ ಆ ರಾಕ್ಷಸನನ್ನು ಧ್ವಂಸಮಾಡಿದ್ದಕ್ಕೆ ಮನಸ್ಸು ನೆಮ್ಮದಿಯುಳ್ಳವರಾಗಿ ಸುಖಖಾನಿಯ ಸಾಹಸವನ್ನು ಕೊಂಡಾಡಿದರು. ಆಗ ಸುಖಖಾನಿಯು ತಾರಕ ಕುಮಾರನನ್ನೂ ಮತ್ತು ತಾನು ಛೇದಿಸಿದ ಕಿತವದೈತ್ಯನ ಶಿರಸ್ಸನ್ನೂ ತಂದು ಪೃಥ್ವೀರಾಜನಿಗೆ ಒಪ್ಪಿಸಿದನು.

ತದಾ ಭೂಪಸುತಾ ದೇವೀ ಸುಖಖಾನಿಂ ಸಮಾವೃಣೋತ್ ।
ಮಹೀಪತಿಸ್ತದಾಗತ್ಯ ತತ್ಸುತಾಂ ಮದಿರೇಕ್ಷಣಾಂ ॥ ॥ ೬೮ ॥

ಸಂಬೋಧ್ಯ ವಿವಿಧೈರ್ವಾಕ್ಯೈಃ ಭೂಮಿರಾಜಾಂತಮಾಗಮತ್ ।
ತಾರಕಸ್ಯ ತಯಾ ಸಾರ್ಧಂ ವಿವಾಹೋ ಮುದಿತೋಽಭವತ್ ॥ ೬೯ ॥

ಕೋಟಿಸ್ವರ್ಣಂ ನೃಪಾತ್ಪ್ರಾಪ್ಯ ಬಲಖಾನಿರ್ಮಹಾಬಲಃ ।
ಪ್ರಯಯೌ ಬಂಧುಭಿಃಸಾರ್ಧಂ ಶಿರೀಷಾಖ್ಯಪುರಂಶುಭಂ ॥ ೭೦ ॥

॥ ಸೂತ ಉವಾಚ ॥
ಗುರ್ಜರೇ ನೃಪತಿಶ್ಚಾಸೀನ್ಮೂಲವರ್ಮಾ ಮಹಾಬಲಃ ।
ಪ್ರಭಾವತೀ ತಸ್ಯ ಸುತಾ ದಶಪುತ್ರಾನುಜಾ ಭವತ್ ॥ ೭೧ ॥

ಬಲಶ್ಚ ಪ್ರಬಲಶ್ಚೈವ ಸುಬಲೋ ಬಲವಾನ್ ಬಲೀ ।
ಸುಮೂಲಶ್ಚ ಮಹಾಮೂಲೋ ದುರ್ಗೋ ಭೀಮೋ ಭಯಂಕರಃ॥ ೭೨ ॥

---

೬೮. ಆಗ ಮಾಯಾವರ್ಮರಾಜನ ಕುಮಾರಿಯಾದ ಮದಿರೇಕ್ಷಣೆಯು ಸುಖಖಾನಿಯನ್ನು ಮದುವೆಯಾಗಲು ಮನಸ್ಸುಮಾಡಿದಳು. ಆ ಸಮಯಕ್ಕೆ ಮಹೀಪತಿರಾಜನು ಅಲ್ಲಿಗೆ ಬಂದನು.

೬೯. ರಾಜಪುತ್ರಿಯಾದ ಮದಿರೇಕ್ಷಣೆಯನ್ನು ಕರೆದು ತಾರಕನನ್ನು ವರಿಸಲು ನಾನಾವಿಧವಾಗಿ ಬೋಧನೆಮಾಡಿ ಅಲ್ಲಿಂದ ಪೃಥ್ವೀರಾಜನ ಬಳಿಗೆ ಬಂದನು. ಬಳಿಕ ತಾರಕನಿಗೆ ಅವಳನ್ನು ಕೊಟ್ಟು ಸಂತೋಷದಿಂದ ವಿವಾಹವು ನೆರವೇರಿತು.

೭೦. ಮಹಾಬಲಶಾಲಿಯಾದ ಬಲಖಾನಿಗೆ ಪೃಥ್ವೀರಾಜನು ತನ್ನ ಮಾತಿನಂತೆ ಕೋಟಿ ಸ್ವರ್ಣವನ್ನು ಕೊಟ್ಟುಬಿಟ್ಟನು. ಬಲಖಾನಿಯು ಅದನ್ನು ತೆಗೆದುಕೊಂಡು ತನ್ನ ಕಡೆಯವರು ಮತ್ತು ಸಹೋದರರುಗಳೊಡನೆ ಶಿರೀಷನಗರಕ್ಕೆ ಬಂದನು.

೭೧-೭೨. ಸೂತಮುನಿವರ್ಯನು ಇನ್ನೊಬ್ಬ ಮಗನ ವಿವಾಹವಿಚಾರವನ್ನು ಹೇಳುತ್ತಾನೆ—ಗುರ್ಜರದೇಶದಲ್ಲಿ ಮಹಾಬಲಶಾಲಿಯಾದ ಮೂಲವರ್ಮನೆಂಬ ರಾಜನಿದ್ದನು. ಅವನಿಗೆ ಬಲ, ಪ್ರಬಲ, ಸುಬಲ, ಬಲವಾನ್, ಬಲೀ, ಸುಮೂಲ, ಮಹಾಮೂಲ, ದುರ್ಗ, ಭೀಮ, ಭಯಂಕರ ಎಂಬ ಹತ್ತುಜನ ಗಂಡುಮಕ್ಕಳೂ, ಬಳಿಕ ಪ್ರಭಾವತಿಯೆಂಬ ಕುಮಾರಿಯೂ ಜನಿಸಿದರು.

ಕರಭೋ ನಾಮ ವೈ ಯಕ್ಷೋ ಲಲ್ಲರಾಜಸ್ಯ ಸೇವಕಃ ।
ಪ್ರಭಾವತೀಂ ಸಮಾಲೋಕ್ಯ ಮುಮೋಹ ಮದವಿಹ್ವಲಃ ।
ಪಂಚವರ್ಷಾಂತರೇ ಜಾತೇ ತೇನ ಭುಕ್ತ್ವಾ ಕುಮಾರಿಕಾ ॥ ೭೩ ॥

ಮೂಲವರ್ಮಾ ಮಹೀರಾಜಂ ಸಮಾಹೂಯ ಸಸೈನ್ಯಕಂ ।
ವಚನಂ ಪ್ರಾಹ ನಮ್ರಾತ್ಮಾ ರಾಜರಾಜ ವಚಃ ಕುರು ॥ ೭೪ ॥

ಪ್ರಭಾವತೀಂ ಶುಭಾಂ ಕನ್ಯಾಂ ನೃಹರಾಯ ದದಾಮ್ಯಹಂ ।
ಇತ್ಯುಕ್ತ್ವಾ ನೃಹರಂ ಪುತ್ರಂ ಸಮಾಹೂಯ ಸ್ವಮಂದಿರೇ ।
ದದೌ ವೇದವಿಧಾನೇನ ಸುತಾಂ ಚ ನೃಹರಾಯ ವೈ ॥ ೭೫ ॥

ಪಕ್ಷಮಾತ್ರಾಂತರೇ ಯಕ್ಷಃ ಕರಭಸ್ತತ್ರ ಚಾಗತಃ ।
ದಂಪತೀ ಪೀಡಯಾಮಾಸ ಜಿತ್ವಾ ಸರ್ವಮಹೀಪತೀನ್ ॥ ೭೬ ॥

---

೭೩. ಲಲ್ಲನೆಂಬ ರಾಜನ ಸೇವಕನಾದ ಕರಭನೆಂಬ ಯಕ್ಷನೊಬ್ಬನು ಒಂದಾನೊಂದುದಿನ ಪ್ರಭಾವತಿಯನ್ನು ನೋಡಿ ಮದವಿಹ್ವಲನಾಗಿ ಮೋಹಿಸಿದನು. ಆ ಯಕ್ಷನು ಅದು ಮೊದಲುಗೊಂಡು ಐದುವರ್ಷಕಾಲ ಸಮಯಸಾಧಿಸಿ ಆ ಬಾಲೆಯನ್ನು ಭೋಗಿಸಿದನು

೭೪. ಆಗ ಮೂಲವರ್ಮನು ತನಗೆ ಸಹಾಯಮಾಡಲು ಪೃಥ್ವೀರಾಜನನ್ನು ಸೇನಾಸಮೇತನಾಗಿ ಬರಮಾಡಬೇಕೆಂದು ನಿಶ್ಚಯಿಸಿ ಅವನನ್ನು ಕುರಿತು ವಿನಯದಿಂದ, " ಸಾರ್ವಭೌಮರೇ ! ತಾವು ನನ್ನ ಪ್ರಾರ್ಥನೆಯನ್ನು ನಡೆಯಿಸಿ, ಕೊಡಿ. "

೭೫. " ನನ್ನ ಮಗಳೂ, ಶುಭಮುಖಿಯೂ ಆದ ಪ್ರಭಾವತಿ ಕುಮಾರಿಯನ್ನು ನಿಮ್ಮ ಕುಮಾರನಾದ ನೃಹರನಿಗೆ ಕೊಡುತ್ತೇನೆ. " ಎಂದು ಹೇಳಿ ನೃಹರಕುಮಾರನನ್ನು ತನ್ನ ಮನೆಗೆ ಕರೆತಂದು ವೇದೋಕ್ತಕ್ರಮದಿಂದ ತನ್ನ ಮಗಳನ್ನು ಅವನಿಗೆ ಕೊಟ್ಟು ವಿವಾಹ ಮಾಡಿದನು.

೭೬. ಇದಾದ ಒಂದು ಪಕ್ಷದೊಳಗೆ ಆ ಕರಭನು ಅಲ್ಲಿಗೆ ಬಂದನು. ಅಲ್ಲಿದ್ದ ರಾಜರುಗಳನ್ನೆಲ್ಲಾ ಜಯಿಸಿದುದಲ್ಲದೆ ನೂತನ ದಂಪತಿಗಳನ್ನೂ ಹಿಂಸಿಸಲಾರಂಭಿಸಿದನು.

ಮಹೀರಾಜಸ್ತದಾ ದುಃಖೀ ವತ್ಸಜೌ ಬಲವತ್ತರೌ ।
ಸಮಾಹೂಯ ಕಥಿತ್ವಾಗ್ರೇ ರುರೋದ ಬಲವಾನ್ ಬಲೀ ॥ ೭೭ ॥

ದಯಾಲೂ ವತ್ಸಜೌ ವೀರೌ ಕರಭಾಂತಮುಪೇಯತುಃ ।
ಕರಭಸ್ತೌ ಸಮಾಲೋಕ್ಯ ತತ್ರೈವಾಂತರ್ಧಿಮಾಗಮತ್ ।
ನಾಗಪಾಶೇನ ತೌ ಬದ್ಧ್ವಾ ಪೀಡಯಾಮಾಸ ದಂಪತೀ ॥ ೭೮ ॥

ಇತಿ ಶ್ರುತ್ವಾ ಸ ಕೃಷ್ಣಾಂಶಃ ಕರಭಂ ಯಕ್ಷಕಿಂಕರಂ ।
ಬದ್ಧ್ವಾ ಯೋಗಬಲೇನೈವ ಮೋಚಯಾಮಾಸ ದಂಪತೀ ॥ ೭೯ ॥

ಭ್ರಾತರೌ ತೌ ಸಮಾಗಮ್ಯ ನಾಗಪಾಶಂ ತು ಚಾಸಿನಾ ।
ಛಿತ್ವಾ ಮುಮೋದ ಬಲವಾನ್ ಕೋಟಿಸ್ವರ್ಣಂ ಗೃಹೀತವಾನ್ ।
ಭೂಮಿರಾಜಃ ಪ್ರಸನ್ನಾತ್ಮಾ ದೇಹಲೀಂ ಮುದಿತೋऽಗಮತ್ ॥ ೮೦ ॥

---

೭೭. ಆಗ ಇದನ್ನು ನೋಡಿ ದೃಢವಾದ ದೇಹಶಕ್ತಿಯುಳ್ಳ ಪೃಥ್ವೀರಾಜನು ಖೇದಯುಕ್ತನಾದನು. ಕೂಡಲೆ ವತ್ಸರಾಜಕುಮಾರರೆನಿಸಿ ಮಹತ್ತಾದ ಬುದ್ಧಿಬಲ ದೇಹಬಲ ಯುಕ್ತರಾದ ಬಲಖಾನಿ ಸುಖಖಾನಿ ಇಬ್ಬರನ್ನೂ ಕರೆಯಿಸಿ ಅವರ ಮುಂದೆ ಈ ವಿಚಾರವೆಲ್ಲವನ್ನೂ ಹೇಳಿಕೊಂಡು ಗೋಳಾಡಿದನು.

೭೮. ದಯಾಶೀಲರಾದ ಆ ವತ್ಸರಾಜಕುಮಾರರಿಬ್ಬರೂ ಇದನ್ನು ಕೇಳಿ ಒಡನೆ ಆ ಕರಭನಿದ್ದಲ್ಲಿಗೆ ಬಂದರು. ಆ ಮಾಯಾವಿಯು ಇವರಿಬ್ಬರೂ ಬಂದುದನ್ನು ನೋಡಿ ಅಲ್ಲೇ ಅದೃಶ್ಯನಾಗಿ ವತ್ಸರಾಜಪುತ್ರರಾದ ಬಲಖಾನಿ ಸುಖಖಾನಿ ಇವರಿಬ್ಬರನ್ನೂ ನಾಗಪಾಶದಿಂದ ಬಂಧಿಸಿ ಪುನಃ ಆ ನೂತನ ದಂಪತಿಗಳನ್ನು ಪೀಡಿಸತೊಡಗಿದನು.

೭೯. ಯಕ್ಷಕಿಂಕರನಾದ ಕರಭನು ನೂತನ ದಂಪತಿಗಳನ್ನು ಪೀಡಿಸುತ್ತಿರುವುದನ್ನು ಕೇಳಿ ಕೃಷ್ಣಾಂಶನು ಆ ಕರಭನನ್ನು ತನ್ನ ಯೋಗಬಲದಿಂದಲೇ ಬಂಧಿಸಿ ಕೆಡವಿ, ಆ ದಂಪತಿಗಳನ್ನು ಕಷ್ಟದಿಂದ ಬಿಡಿಸಿದನು.

೮೦. ಬಳಿಕ ಕೃಷ್ಣಾಂಶನು ಬಲಖಾನಿ ಸುಖಖಾನಿ ಈ ಸಹೋದರರ ಬಳಿಗೆ ಬಂದು ಅವರನ್ನು ಬಂಧಿಸಿದ್ದ ನಾಗಪಾಶವನ್ನು ತನ್ನ ಖಡ್ಗದಿಂದ ಭೇದಿಸಿ ಬಳಿಕ ಪೃಥ್ವೀರಾಜನು ಕೊಟ್ಟ ಕೋಟಿ ಸ್ವರ್ಣಮುದ್ರಿಕೆಯನ್ನು ಪರಿಗ್ರಹಿಸಿ ಸಂತೋಷದಿಂದ ಹಿಂದಿರುಗಿದನು. ಅನಂತರ ಪೃಥ್ವೀರಾಜನೂ ಶಾಂತಚಿತ್ತನಾಗಿ ಸಂತೋಷದಿಂದ ದೆಹಲಿಗೆ ಹೋದನು.

॥ ಸೂತ ಉವಾಚ ॥

ಕಾಶ್ಮೀರೇ ಚ ನೃಪಶ್ಚಾಸೀತ್ ಕೈಕಯೋ ನಾಮ ವಿಶ್ರುತಃ ।
ದಶಪುತ್ರಾಶ್ಚ ತಸ್ಯೈವ ಕನ್ಯಾ ಚ ಮದನಾವತೀ ॥ ೮೧ ॥

ಕಾಮಃ ಪ್ರಕಾಮಃ ಸಂಕಾಮೋ ನಿಷ್ಕಾಮೋ ನಿರಪತ್ರಪಃ ।
ಜಯಶ್ಚ ವಿಜಯಶ್ಚೈವ ಜಯಂತೋ ಜಯವಾನ್ ಜಯಃ ॥ ೮೨ ॥

ಸ ಭೂಪೋ ಭೂಮಿರಾಜಂ ಚ ಸಮಾಹೂಯ ವಚೋಽಬ್ರವೀತ್ ।
ಪುತ್ರಸ್ತೇ ವೈ ಸರದನೋ ಮತ್ಕನ್ಯಾಂ ಪ್ರಾಪ್ತುಮರ್ಹತಿ ॥ ೮೩ ॥

ಗಂಧರ್ವಸ್ಸುಕಲೋ ನಾಮ ಮತ್ಕನ್ಯಾಂ ಚ ಶುಭಾನನಾಂ ।
ಜ್ಯೋತ್ಸ್ನಾಯಾಂ ನಿಶಿ ಸಂಹೃತ್ಯ ತಯಾ ಸಾರ್ಧಂ ಹಿ ದೀವ್ಯತಿ ॥ ೮೪ ॥

ಪೂರ್ಣಿಮಾಯಾಂ ಚ ಸಂಪ್ರಾಪ್ತಃ ಸ ವೈ ಚಿತ್ರರಥಪ್ರಿಯಃ ।
ವೈಶಾಖಸ್ಯಾಽಸಿತೇ ಪಕ್ಷೇ ಚಾಽಷ್ಟಮೀ ಚಾದ್ಯ ಮಂಗಲಾ ।
ವಧಂ ಕುರು ನೃಪಶ್ರೇಷ್ಠ ದೇಹಲೀಂ ಗಂತುಮರ್ಹಸಿ ॥ ೮೫ ॥

---

೮೧-೮೨. ಸೂತಮುನಿವರ್ಯನು ಪೃಥ್ವೀರಾಜನ ಮತ್ತೊಬ್ಬ ಕುಮಾರನ ವಿವಾಹ ವೃತ್ತಾಂತವನ್ನು ಹೇಳುತ್ತಾನೆ.—ಪೂರ್ವದಲ್ಲಿ ಕಾಶ್ಮೀರದೇಶದಲ್ಲಿ ಕೇಕಯನೆಂಬ ಪ್ರಸಿದ್ಧನಾದ ರಾಜನಿದ್ದನು. ಅವನಿಗೆ ಕಾಮ, ಪ್ರಕಾಮ, ಸಂಕಾಮ, ನಿಷ್ಕಾಮ, ನಿರಪತ್ರಪ, ಜಯ, ವಿಜಯ, ಜಯಂತ, ಜಯವಾನ್, ಜಯ ಎಂಬ ಹತ್ತುಜನ ಪುತ್ರರೂ ಕೊನೆಯಲ್ಲಿ ಮದನಾವತೀ ಎಂಬ ಕನ್ಯೆಯೂ ಜನಿಸಿದರು.

೮೩. ಆ ಕೇಕಯರಾಜನು ಪೃಥ್ವೀರಾಜನೊಡನೆ ಸಮಾಲೋಚನೆ ನಡೆಸುವನಾಗಿ "ನಿಮ್ಮ ಮಗನಾದ ಸರದನನು ನನ್ನ ಮಗಳಿಗೆ ಅನುರೂಪನಾದ ವರನಾಗಿದ್ದಾನೆ ಈ ಸಂಬಂಧಕ್ಕೆ ತಾವು ಒಪ್ಪಬೇಕು."

೮೪. "ಸುಕಲನೆಂಬ ಗಂಧರ್ವನು ನಿತ್ಯವೂ ಬೆಳದಿಂಗಳಿನ ರಾತ್ರಿಯಲ್ಲಿ ಚೋರತನದಿಂದ ಬಂದು ಮಂಗಳಾಂಗಿಯಾದ ನನ್ನ ಮಗಳೊಡನೆ ಕ್ರೀಡಿಸುತ್ತಾನೆ"

೮೫. "ಅವನು ಚಿತ್ರರಥನಿಗೆ ಪ್ರಿಯನಾಗಿರುವನು. ಪೂರ್ಣಿಮೆಯದಿನ ತಪ್ಪದೆ ಇಲ್ಲಿಗೆ ಬರುತ್ತಾನೆ. ಈ ವೈಶಾಖ ಕೃಷ್ಣ ಅಷ್ಟಮಿಯದಿನ ಮಂಗಳ ಮಹೋತ್ಸವವನ್ನು ಏರ್ಪಡಿಸಿದೆ. ಎಲೈ ರಾಜಶ್ರೇಷ್ಠನೇ! ನೀನು ಇಲ್ಲಿಗೆ ಬಂದು ಆದಿನ ಅವನನ್ನು ಸಂಹರಿಸಿ ನಿಮ್ಮ ಪುತ್ರನ ವಿವಾಹವನ್ನು ನೆರವೇರಿಸಿಕೊಡು. ದೆಹಲಿಗೆ ದಯಮಾಡಿ" ಎಂದು ಆಹ್ವಾನ ಕೊಟ್ಟನು.

ಇತಿ ಶ್ರುತ್ವಾ ಮಹೀರಾಜೋ ಲಕ್ಷಸೈನ್ಯಸಮನ್ವಿತಃ ।
ಗೃಹೀತ್ವಾ ದಂಪತೀ ಶೀಘ್ರಂ ದೇಹಲೀನಗರಂ ಯಯೌ ॥ ೮೬ ॥

ವೈಶಾಖ್ಯಾಂ ಸುಖಜಾತಾಯಾಂ ಸುಕಲೋ ನಾಮ ವೀರ್ಯವಾನ್ ।
ಗಂಧರ್ವೋ ದಶಸಾಹಸ್ರೈರುರೋಧ ನಗರಂ ರುಷಾ ॥ ೮೭ ॥

ನಗರಾಚ್ಚ ಬಹಿರ್ಜಾತಾ ಯೇ ಶೂರಾ ಮದವಿಹ್ವಲಾಃ ।
ಹತ್ವಾ ತಾನ್ ಸುಕಲಃ ಶೀಘ್ರಂ ರಾಜ್ಞೋ ದುಃಖಂ ಚಕಾರ ಹ ॥ ೮೮ ॥

ಭಯಭೀತೋ ಮಹೀರಾಜೋ ಧ್ಯಾತ್ವಾ ಸರ್ವಮಯೀಂ ಶಿವಾಂ ।
ಸುಷ್ವಾಪ ನಿಶಿ ಶುದ್ಧಾತ್ಮಾ ತುಷ್ಟಾಭೂಜ್ಜಗದಂಬಿಕಾ ॥ ೮೯ ॥

ಕೃಷ್ಣಾಂಶಾದೀನ್ ಬೋಧಯಿತ್ವಾ ತೈಶ್ಚ ಸಾರ್ಧಂ ಸಮಾಗಮತ್ ।
ತೇಷಾಂ ಚಾಸೀನ್ಮಹದ್ಯುದ್ಧಂ ಗಂಧರ್ವೇಣ ತದಾಹ್ನಿಕಂ ॥ ೯೦ ॥

---

೮೬. ಪೃಥ್ವೀರಾಜನು ಇದನ್ನು ಕೇಳಿ ಒಂದುಲಕ್ಷ ಸೈನ್ಯವನ್ನು ಕರೆದು ಕೊಂಡು ಬಂದು, ಆ ಕನ್ಯೆಯನ್ನು ತನ್ನ ಮಗನಿಗೆ ವಿವಾಹಮಾಡಿಕೊಂಡು ಆ ದಂಪತಿಗಳನ್ನು ಕರೆದುಕೊಂಡು ಜಾಗ್ರತೆಯಲ್ಲಿ ದೆಹಲೀನಗರಕ್ಕೆ ಬಂದು ಬಿಟ್ಟನು.

೮೭. ಶೂರನಾದ ಸುಕಲಗಂಧರ್ವನು ಕೋಪಗೊಂಡು, ಹತ್ತುಸಾವಿರ ಸೇನೆಯೊಡನೆ ಬಂದು ಸುಖಪ್ರದವಾದ ವೈಶಾಖಮಾಸದಲ್ಲಿ ಆ ದೆಹಲೀನಗರವನ್ನೇ ಮುತ್ತಿದನು.

೮೮. ರಣಮದದಿಂದ ಕೊಬ್ಬಿ ಮುಂದುಗಾಣದ ಹಲವು ಶೂರರು ಇವರ ಮುತ್ತಿಗೆಯನ್ನು ಲಕ್ಷ್ಯಮಾಡದೆ ನಗರದ ಹೊರಕ್ಕೆ ಬರಲು, ಸುಕಲನು ಅವರುಗಳನ್ನೆಲ್ಲಾ ಕೊಂದುಹಾಕಿ ರಾಜನಿಗೆ ದುಃಖವುಂಟುಮಾಡಿದನು.

೮೯. ಇದರಿಂದ ಬಹು ದಿಗಿಲುಪಟ್ಟ ಪೃಥ್ವೀರಾಜನು ಸರ್ವವ್ಯಾಪಿನಿಯಾದ ದೇವಿಯನ್ನು ಆರಾಧಿಸಿ ಶುದ್ಧಾಂತಃಕರಣದಿಂದ ಧ್ಯಾನಿಸುತ್ತಾ ಆ ರಾತ್ರಿ ಮಲಗಿದನು. ಇದರಿಂದ ಜಗನ್ಮಾತೆಯಾದ ದೇವಿಯು ಸಂತುಷ್ಟಳಾದಳು.

೯೦. ಬಳಿಕ ದೇವಿಯು ಕೃಷ್ಣಾಂಶ ಮೊದಲಾದವರ ಮನಸ್ಸಿಗೆ ಪ್ರೇರೇಪಣೆ ಮಾಡಿ ಅವರು ಇಲ್ಲಿಗೆ ಬರುವಂತೆ ಮಾಡಿದಳು. ಹೀಗೆ ಬಂದ ಕೃಷ್ಣಾಂಶಾದಿಗಳಿಗೂ ಗಂಧರ್ವನಿಗೂ ಆ ಹಗಲು ಘೋರಯುದ್ಧ ನಡೆಯಿತು.

ಬಲಖಾನಿಶ್ಚ ಬಲವಾನ್ಪ್ರಾಪ್ತಗಂಧರ್ವಮುತ್ತಮಂ ।
ತ್ರಿದಿನಾಂತೇ ಚ ಸಂಹತ್ಯ ಸುಖಖಾನಿಸ್ತಥೈವ ಚ ॥ ೯೧ ॥

ಸುಕಲಶ್ಚ ತದಾ ಕ್ರುದ್ಧೋ ಗಾಂಧರ್ವೀಂ ಚ ಸಸರ್ಜ ಹ ।
ಬಹುಧಾ ತೇ ಹಿ ಗಂಧರ್ವಾಸ್ತೈಶ್ಚ ಸಾರ್ಧಂ ಸಮಾರುಧನ್ ॥ ೯೨ ॥

ಭಯಭೀತಾಸ್ತದಾ ಸರ್ವೇ ರಾಮಾಂಶಂ ಶರಣಂ ಯಯುಃ ।
ಆಹ್ಲಾದಶ್ಚ ಪ್ರಸನ್ನಾತ್ಮಾ ಶಾರದಾಂ ಸರ್ವಮಂಗಲಾಂ ॥ ೯೩ ॥

ದಿವಾಸೂಕ್ತೇನ ತುಷ್ಟಾವ ತದಾ ಪ್ರಾದುರಭೂಚ್ಛಿವಾ ।
ಗಂಧರ್ವಾನ್ ಮೋಹಯಿತ್ವಾಶು ದ್ರಾವಯಾಮಾಸ ಶಾರದಾ ॥ ೯೪ ॥

ಪರಾಜಿತೇ ಚ ಗಂಧರ್ವೇ ಕೃಷ್ಣಾಂಶೋ ಜನಮೋಹನಃ ।
ಮಹೀರಾಜಮುಪಾಗಮ್ಯ ಕೋಟಿಸ್ವರ್ಣಂ ಗೃಹೀತವಾನ್ ॥ ೯೫ ॥

---

೯೧. ಮಹಾಬಲಶಾಲಿಗಳಾದ ಬಲಖಾನಿಯೂ ಸುಖಖಾನಿಯೂ ಸಹ ಮೂರು ದಿನಗಳು ಅವಿಚ್ಛಿನ್ನವಾಗಿ ಯುದ್ಧಮಾಡಿ ಕೊನೆಯಲ್ಲಿ ಶ್ರೇಷ್ಠವಾದ ನೂರಾರು ಗಂಧರ್ವರನ್ನು ಸಂಹರಿಸಿದರು.

೯೨. ಆಗ ಸುಕಲನು ಮಹಾರೋಷದಿಂದ ಗಾಂಧರ್ವೀ ಅಸ್ತ್ರವನ್ನು ಪ್ರಯೋಗಿಸಿದನು. ಆಗ ಬಹುಮಂದಿ ಗಂಧರ್ವರು ಉತ್ಪನ್ನರಾಗಿ ಆ ಬಲಖಾನಿ ಮೊದಲಾದವರೊಡನೆ ಹೋರಾಡಿದರು.

೯೩. ಆಗ ಎಲ್ಲರೂ ಬಹು ಭಯದಿಂದ ದಿಗಿಲುಬಿದ್ದು (ರಾಮಾಂಶನನ್ನು) ಆಹ್ಲಾದನನ್ನು ಮರೆಹೊಕ್ಕರು. ಆಹ್ಲಾದನು ಪ್ರಸನ್ನಚಿತ್ತದಿಂದ ಸರ್ವಮಂಗಳೆಯಾದ ಶಾರದಾದೇವಿಯನ್ನು, ದಿವಾಸೂಕ್ತದಿಂದ ಸ್ತುತಿಸಿದನು.

೯೪. ಆ ಕೂಡಲೆ ಸರ್ವಮಂಗಳೆಯು ಪ್ರತ್ಯಕ್ಷಳಾಗಿ ಗಂಧರ್ವರಿಗೆಲ್ಲಾ ಮಂಕು ಕವಿಯುವಂತೆಮಾಡಿ, ಕೂಡಲೇ ಅವರು ತಾವಾಗಿಯೇ ಓಡುವಂತೆ ಮಾಡಿಸಿಬಿಟ್ಟಳು.

೯೫. ಗಂಧರ್ವರು ಹೀಗೆ ಸೋತು ಓಡಿಹೋಗಲಾಗಿ ಜನಮೋಹನಸ್ವರೂಪನಾದ ಕೃಷ್ಣಾಂಶನು ಪೃಥ್ವೀರಾಜನ ಬಳಿಗೆ ಬಂದು ಅವನು ಕೊಟ್ಟ ಒಂದುಕೋಟಿ ಸುವರ್ಣನಾಣ್ಯವನ್ನು ಸ್ವೀಕರಿಸಿದನು.

ಷೋಡಶಾಬ್ದೇ ಚ ಕೃಷ್ಣಾಂಶೇ ಸಂಪ್ರಾಪ್ತೇ ದೇವಿಪೂಜಕೇ ।
ಮಾರ್ಗಮಾಸಂ ತು ಸಂಪ್ರಾಪ್ತೇ ಮರ್ದನಶ್ಚ ವಿವಾಹಿತಃ ॥ ೯೬ ॥

॥ ಸೂತ ಉವಾಚ ॥

ಪುಂಡ್ರದೇಶೇ ಮಹಾರಾಜೋ ನಾಗವರ್ಮಾ ಮಹಾಬಲಃ ।
ಬಭೂವ ತಕ್ಷಕಪರೋ ಧರ್ಮವಾನ್ ಜಗತೀತಲೇ ॥ ೯೭ ॥

ಪತ್ನೀ ನಾಗವತೀ ತಸ್ಯ ತಕ್ಷಕಸ್ಯ ಸುತಾ ಶುಭಾ ।
ಪಿತುಃ ಶಾಪೇನ ಸಂಜಾತಾ ಕಲಿಂಗಾಧಿಪತೇಃ ಸುತಾ ॥ ೯೮ ॥

ದಶೈವ ತನಯಾಶ್ಚಾಸನ್ ಕನ್ಯಾ ತಸ್ಯ ಶುಭಾನನಾ ।
ಸುವೇಲಾ ನಾಮ ವಿಖ್ಯಾತಾ ರೂಪಯೌವನಶಾಲಿನೀ ॥ ೯೯ ॥

---

೯೬. ದೇವೀಪೂಜಾತತ್ಪರನಾದ ಕೃಷ್ಣಾಂಶನಿಗೆ ಹದಿನಾರು ವರ್ಷಗಳಾಗಲು ಆ ಮಾರ್ಗಶಿರಮಾಸದಲ್ಲಿ ಪೃಥ್ವೀರಾಜನ ಇನ್ನೊಬ್ಬ ಮಗನಾದ ಮರ್ದನನಿಗೆ ವಿವಾಹ ನಡೆಯುವುದಾಗಿ ಗೊತ್ತಾಯಿತು.

೯೭. ಸೂತಮುನಿವರ್ಯನು ಆ ಮರ್ದನನ ವಿವಾಹ ವೃತ್ತಾಂತವನ್ನು ಹೇಳುತ್ತಾನೆ —ಪುಂಡ್ರವೆಂಬ ಹೆಸರುಳ್ಳ ರಾಜ್ಯದಲ್ಲಿ ಮಹಾಬಲಶಾಲಿಯಾದ ನಾಗವರ್ಮನೆಂಬ ಮಹಾರಾಜನು ಆಳುತ್ತಿದ್ದನು. ಆತನು ಭೂಲೋಕದಲ್ಲಿ ಬಹು ಧರ್ಮಿಷ್ಠನಾಗಿಯೂ ತಕ್ಷಕರೆಂಬ ನಾಗರಲ್ಲಿ ವಿಶ್ವಾಸವುಳ್ಳವನಾಗಿಯೂ ಇದ್ದನು.

೯೮. ತಕ್ಷಕನ ಪುತ್ರಿಯಾದ ನಾಗವತೀ ಎಂಬ ಮಂಗಳಾಂಗಿಯು ಆ ನಾಗವರ್ಮನಿಗೆ ಪತ್ನಿಯಾಗಿದ್ದಳು. ಅವಳು ತಂದೆಯ ಶಾಪದಿಂದ ಕಳಿಂಗರಾಜನ ಮಗಳಾಗಿ ಜನಿಸಿದ್ದಳು.

೯೯. ಆ ಕಳಿಂಗರಾಜನಿಗೆ ಹತ್ತುಜನ ಗಂಡುಮಕ್ಕಳು ಜನಿಸಿದ ಮೇಲೆ ಕೊನೆಯಲ್ಲಿ ಶುಭಮುಖಿಯಾದ ಇವಳು ಸುವೇಲಾ ಎಂಬ ಹೆಸರಿನಿಂದ ಜನಿಸಿ, ರೂಪವತಿಯೂ ಯೌವನವತಿಯೂ ಆಗಿ ಪ್ರಖ್ಯಾತಳಾದಳು.

ಪುರೋಹಿತಂ ಸಮಾಹೂಯ ಮಹೀರಾಜಾಯ ಪ್ರೈಷಯತ್ ।
ಸ ಗತ್ವಾ ಕಥಯಿತ್ವಾಗ್ರೇ ಮರ್ದನೋ ವರಿತೋ ಮಯಾ　॥ ೧೦೦ ॥

ಮಹೀರಾಜಸ್ತು ತಚ್ಛ್ರುತ್ವಾ ತ್ರಿಲಕ್ಷಬಲಸಂಯುತಃ ।
ಮಂಗಲಂ ಕಾರಯಾಮಾಸ ಗತ್ವಾ ನಾಗಪುರೇ ಶುಭೇ　॥ ೧೦೧ ॥

ಸುವೇಲಾ ಪಿತರಂ ಪ್ರಾಹ ದೇಹಿ ಮೇ ನಾಗಭೂಷಣಂ ।
ವಿವಾಹಂ ಹಿ ಕರಿಷ್ಯಾಮಿ ನೋ ಚೇತ್ಪ್ರಾಣಾಂಸ್ತ್ಯಜಾಮ್ಯಹಂ ॥ ೧೦೨ ॥

ಇತಿ ಶ್ರುತ್ವಾ ನಾಗವರ್ಮಾ ಮಹೀರಾಜಾಂತಮಾಯಯೌ ।
ಸುವೇಲಾಯಾ ಅಭಿಪ್ರಾಯಂ ವರ್ಣಯಾಮಾಸ ವಿಸ್ತರಾತ್　॥ ೧೦೩ ॥

ಇತ್ಯುಕ್ತಃ ಸ ಮಹೀರಾಜೋ ವಿಸ್ಮಿತೋಽಭೂತ್ಸುದುಃಖಿತಃ ।
ಪ್ರೇಷಯಾಮಾಸ ವೈ ಪತ್ರಂ ಯತ್ರಾಹ್ಲಾದಾದಯಃ ಸ್ಥಿತಾಃ　॥ ೧೦೪ ॥

---

೧೦೦. ಕಳಿಂಗರಾಜನು ತನ್ನ ಪುರೋಹಿತನನ್ನು ಪೃಥ್ವೀರಾಜನ ಬಳಿಗೆ ಕಳು ಹಿಸಿ "ನಿನ್ನ ಪುತ್ರನಾದ ಮರ್ದನನಿಗೆ ನನ್ನ ಮಗಳನ್ನು ಕೊಡಲು ಉದ್ದೇಶಿಸಿದ್ದೇನೆ ಈ ಮದುವೆಗೆ ತಾವುಸಮ್ಮತಿಸಿ ದಯಮಾಡಬೇಕು" ಎಂದು ಹೇಳಿಕಳುಹಿಸಿದನು.

೧೦೧. ಪೃಥ್ವೀರಾಜನು ಈ ಮಾತನ್ನು ಕೇಳಿ ಮೂರುಲಕ್ಷ ಸೈನಿಕರನ್ನು ಜತೆಮಾಡಿಕೊಂಡು ಮಂಗಳಕರವಾದ ಆ ವಿವಾಹೋತ್ಸವವನ್ನು ನೆರವೇರಿಸುವುದ ಕ್ಕಾಗಿ ನಾಗಪುರಿಗೆ ಹೋದನು.

೧೦೨. ಆಗ ಸುವೇಲೆಯು ತನ್ನ ತಂದೆಯನ್ನು ಕುರಿತು "ಅಪ್ಪಾ! ನನಗೆ ನಾಗಾಭರಣವನ್ನು ತಂದುಕೊಟ್ಟರೆ ವಿವಾಹಮಾಡಿಕೊಳ್ಳುತ್ತೇನೆ. ಹಾಗಿಲ್ಲದೆಹೋದರೆ ಪ್ರಾಣತ್ಯಾಗ ಮಾಡುತ್ತೇನೆ." ಎಂದು ಹೇಳಿದಳು.

೧೦೩. ನಾಗವರ್ಮರಾಜನು ಆ ಮಾತನ್ನು ಕೇಳಿ ಪೃಥ್ವೀರಾಜನ ಸಮೀಪಕ್ಕೆ ಬಂದು ಸುವೇಲೆಯ ಅಭಿಪ್ರಾಯವನ್ನು ವಿಸ್ತಾರವಾಗಿ ತಿಳಿಸಿದನು.

೧೦೪. ಪೃಥ್ವೀರಾಜನು ಇದನ್ನು ಕೇಳಿ ಅತ್ಯಾಶ್ಚರ್ಯಯುತನೂ, ಖೇದ ಯುಕ್ತನೂ ಆದನು. ಕೂಡಲೇ ಆಹ್ಲಾದ ಮುಂತಾದವರಿಗೆ ಒಂದು ಲೇಖನವನ್ನು ಬರೆದು ಕಳುಹಿಸಿದನು

ಇತಿ ಜ್ಞಾತ್ವಾ ತದಾಹ್ಲಾದಃ ಶೂರಪಂಚಶತಾವೃತಃ ।
ಕೃಷ್ಣಾಂಶವತ್ಸಜೈಸ್ಸಾರ್ಧಂ ದಿನಾಂತೇ ಚ ಸಮಾಗಮತ್ ॥ ೧೦೫ ॥

ಶತಯೋಜನಗಾಮಿನ್ಯೋ ವಾಜಿನ್ಯಶ್ಚ ದ್ವಿಯಾಮಕೇ ।
ಸಹಸ್ರಯೋಜನಂ ವೀರ್ಯಂ ತಾಸಾಂ ಚೈವ ದಿನೇ ನಿಶಿ ॥ ೧೦೬ ॥

ಕಲಾಂಶಾದುದ್ಭವಾ ಅಶ್ವಾ ವಾಜಿನಾಂ ಚ ಹರೇಃ ಸ್ವಯಂ ।
ರತ್ನಾಶ್ವಸ್ಯ ಕಲಾಂಶಶ್ಚ ಕಪೋತೋ ಹರಿಣೀಭವಃ ॥ ೧೦೭ ॥

ಗಾಯತ್ರೋ ಯೋಭವದ್ವಾಜೀ ಕಾಲಚಕ್ರಪ್ರವರ್ತಕಃ ।
ತತ್ಕಲಾಂಶಾತ್ಸಮುದ್ಭೂತೋ ರವಿದತ್ತಃ ಪಪೀಹಕಃ ।
ಹರಿಣೀ ನಾಮ ತಚ್ಛಕ್ತಿಃ ಕಲಾಂಶಾದ್ಭುವಿಮಾಗತಾ ॥ ೧೦೮ ॥

---

೧೦೫. ಆಹ್ಲಾದನು ಈ ಲೇಖನವನ್ನು ನೋಡಿದೊಡನೆ ಶೂರರಾದ ಐನೂರು ಮಂದಿಯನ್ನೊಡಗೊಂಡು ಜತೆಯಲ್ಲಿ ವತ್ಸರಾಜ ಪುತ್ರರಾದ ಬಲಖಾನಿ ಸುಖಖಾನಿ ಕುಮಾರರು ಮತ್ತು ದೇಶರಾಜಪುತ್ರ ಕೃಷ್ಣಾಂಶ ಇವರುಗಳೊಡನೆ ಸಂಧ್ಯಾಕಾಲ ದೊಳಗೆ ಅಲ್ಲಿಗೆ ಬಂದನು.

೧೦೬-೧೦೮. ಸಾಕ್ಷಾತ್ತಾಗಿ ಸೂರ್ಯಾಶ್ವದ ಕಲೆಯ ಅಂಶಗಳಿಂದ ಜನಿಸಿ ದುದೂ, ರತ್ನಾಶ್ವದ ಕಲೆಯ ಅಂಶದಿಂದ ಕೂಡಿದುದೂ ಆದ ಕಪೋತಾಶ್ವವು. ಹರಿಣೀ ಅಶ್ವದಿಂದ ಉತ್ಪನ್ನವಾಗಿ ಕಾಲಚಕ್ರವನ್ನು ನಿಯಮಿಸುವ ಗಾಯತ್ರವೆಂಬ ಕುದು ರೆಯೂ, ಈ ಗಾಯತ್ರ ಕುದುರೆಯ ಅಂಶದಿಂದ ಉತ್ಪನ್ನವಾದ ಪಪೀಹಕ ಎಂಬುದೂ ಸೂರ್ಯನು ಕರುಣಿಸಿದ್ದಾಗಿ ಅವನ ಶಕ್ತಿಯ ಕಲಾಂಶದಿಂದ ಕೂಡಿದ ಹರಿಣೀ ಎಂಬುದೂ ಹೀಗೆ ಇವುಗಳೆಲ್ಲಾ ಭೂಲೋಕದಲ್ಲಿ ಅವತರಿಸಿದ್ದುವು. ಇವು ಎರಡು ಯಾಮದಲ್ಲಿ ನೂರುಯೋಜನದೂರ ದಣಿವಿಲ್ಲದೆ ಪ್ರಯಾಣ ಮಾಡಬಲ್ಲವೂ ಒಂದು ಹಗಲು ರಾತ್ರಿಗಳಲ್ಲಿ ಸಾವಿರಯೋಜನ ದೂರ ಹೋಗಬಲ್ಲ ಶೌರ್ಯವುಳ್ಳವೂ ಆಗಿದ್ದುವು

**ಸುಖಖಾನಿಃ ಪಪೀಹಸ್ಥೋ ಬಲಖಾನಿಃ ಕಪೋತಗಃ ।**
**ಆಹ್ಲಾದಶ್ಚ ಕರಾಲಸ್ಥೋ ಬಿಂದುಲಸ್ಥೋ ಹರೇಃ ಕಲಾ ॥ ೧೦೯ ॥**

**ಗತ್ವಾ ತೇ ತು ಮಹೀರಾಜಂ ನತ್ವಾ ತುಂಗಾಸನಂ ಯಯುಃ ।**
**ಪ್ರಸನ್ನಃ ಸ ಮಹೀರಾಜೋ ವಚನಂ ಪ್ರಾಹ ನಮ್ರಧೀಃ ॥ ೧೧೦ ॥**

**ಮಮ ಪುತ್ರಾಶ್ಚ ಯುಷ್ಮಾಭಿಸ್ತ್ರಯಃ ಶೂರಾ ವಿವಾಹಿತಾಃ ।**
**ತಥೈವ ಮರ್ದನಂ ವೀರಂ ಸಮುದ್ವಾಹ್ಯ ಸುಖೀ ಭವ ॥ ೧೧೧ ॥**

**ಇತಿ ಶ್ರುತ್ವಾ ಸ ಆಹ್ಲಾದೋ ಗತ್ವಾ ಭೂತಲಮುತ್ತಮಂ ।**
**ರಸಾತಲಂ ಚ ವಿಖ್ಯಾತಂ ನಾಗಿನೀಂ ಪ್ರಾಹ ನಿರ್ಭಯಃ ॥ ೧೧೨ ॥**

---

೧೦೯. ಸುಖಖಾನಿಯು ಆ ಪಪೀಹಕವನ್ನೇರಿದನು. ಬಲಖಾನಿಯು ಕಪೋತಾಶ್ವವನ್ನೇರಿದನು. ಆಹ್ಲಾದನು ಕರಾಲಾಶ್ವವನ್ನೇರಿದನು. ಕೃಷ್ಣಾಂಶನು ಬಿಂದುಲಾಶ್ವವನ್ನೇರಿದನು.

೧೧೦. ಹೀಗೆ ಇವರೆಲ್ಲಾ ಆ ಅಶ್ವಗಳನ್ನೇರಿ ಪೃಥ್ವೀರಾಜನ ಬಳಿಗೆ ಹೋಗಿ ನಮಸ್ಕರಿಸಿ ಉನ್ನತಾಸನಗಳಲ್ಲಿ ಮಂಡಿಸಿದರು.

೧೧೧ ಆಗ ಪೃಥ್ವೀರಾಜನು ಪ್ರಸನ್ನ ಮನಸ್ಸಿನಿಂದ ಕೂಡಿ ವಿನಯಯುಕ್ತನಾಗಿ " ಅಯ್ಯಾ ಆಹ್ಲಾದ ! ನಿನ್ನ ಸಹಾಯದಿಂದ ಶೂರರಾದ ನನ್ನ ಮೂವರು ಪುತ್ರರಿಗೂ ವಿವಾಹವಾಯಿತು. ಹಾಗೆಯೇ ನಾಲ್ಕನೆಯವನಾದ ಮರ್ದನನ ಮದುವೆಯನ್ನೂ ಈಗ ನೆರವೇರಿಸಿ ಸುಖವಾಗಿ ಬಾಳು " ಎಂದು ಹೇಳಿ ನಾಗಾಭರಣ ತರಬೇಕಾಗಿ ಬಂದಿರುವ ಸಂಭವವನ್ನು ತಿಳಿಸಿದನು.

೧೧೨. ಈ ಮಾತನ್ನು ಕೇಳಿ ಆಹ್ಲಾದನು ಭೂಮಿಯೊಳಕ್ಕೆ ಇಳಿದು ಆ ಮೂಲಕ ಶ್ರೇಷ್ಠವಾದ ಪಾತಾಳಕ್ಕೆ ಹೋಗಿ ನಾಗಿನಿಯನ್ನು ಕಂಡು ಆಕೆಯೊಡನೆ ನಿರ್ಭಯವಾಗಿ ಇಂತೆಂದನು.

ಸುಪ್ತೋ ಹಿ ತವ ಭರ್ತಾ ಚ ಪುಂಡರೀಕಃ ಶುಭಾನನಃ ।
ಬೋಧಯಾಶು ಮಹಾರಾಜ್ಞಿ ನಾಗಾನಾಂ ನೋ ದಯಾಂ ಕುರು ॥ ೧೧೩ ॥

ಇತ್ಯುಕ್ತ್ವಾ ಸಾಽಽಹ ತಂ ವೀರಂ ಪುಂಡರೀಕಶ್ಚ ಮತ್ಪತಿಃ ।
ರುಷಾವಿಷ್ಟಶ್ಚ ಬಲವಾನ್ ದಾಹಯೇಚ್ಚ ವಪುಸ್ತವ ॥ ೧೧೪ ॥

ಇತಿ ಶ್ರುತ್ವಾ ವಿಹಸ್ಯಾಹ ತವ ಭರ್ತುರ್ನ ನೋ ಭಯಂ ।
ಇತ್ಯೇವಂ ವಚನಂ ಕೃತ್ವಾ ಪದ್ಭ್ಯಾಂ ಪುಚ್ಛಮತಾಡಯತ್ ॥ ೧೧೫ ॥

ಪ್ರಬುದ್ಧಶ್ಚ ತದಾ ರಾಜಾ ನಾಗಾನಾಂ ಚ ಮಹಾಬಲಃ ।
ಜ್ವಾಲಾಮಾಲಾಂ ಸ್ವದೇಹಾಚ್ಚ ಜನಯಾಮಾಸ ವೀರ್ಯವಾನ್ ॥ ೧೧೬ ॥

ದೃಷ್ಟ್ವಾ ತದ್ವಿಷಮುಜ್ಜ್ವಾಲಂ ಸ ಧ್ಯಾತ್ವಾ ಸರ್ವಮಂಗಲಾಂ ।
ಶಮಯಾಮಾಸ ಬಲವಾನ್ ದೇವೀಪೂಜನತತ್ಪರಃ ॥ ೧೧೭ ॥

---

೧೧೩. "ಎಲೈ ನಾಗಲೋಕದ ಮಹಾರಾಣಿಯೇ! ಶುಭಮುಖನೂ ನಿನ್ನ ಪತಿಯೂ ಆದ ಪುಂಡರೀಕನು ಮಲಗಿದ್ದಾನೆ. ನನ್ನಲ್ಲಿ ದಯೆಯನ್ನು ತೋರಿ ಜಾಗ್ರತೆ ಎಬ್ಬಿಸು" ಎಂದನು.

೧೧೪. ಈ ಮಾತನ್ನು ಕೇಳಿ ಆಕೆಯು ವೀರನಾದ ಅವನನ್ನು ಕುರಿತು "ನನ್ನ ಗಂಡನಾದ ಪುಂಡರೀಕನು ಬಲಶಾಲಿ, ಮತ್ತು ಕೋಪಿಷ್ಠ. ಅವನನ್ನು ಕೆಣಕಿದರೆ ನಿನ್ನ ಶರೀರವನ್ನು ದಹಿಸಿಬಿಡುವನು" ಎಂದಳು.

೧೧೫. ನಾಗಿನಿ ಹೇಳಿದ ಈ ಮಾತನ್ನು ಕೇಳಿ ಅವನು ಥಟ್ಟನೆ ನಕ್ಕು "ನಿನ್ನ ಗಂಡನಿಂದ ನಮಗೆ ಭಯವೇನೂ ಇಲ್ಲ ಅದುಹಾಗಿರಲಿ" ಎಂದು ಹೇಳುತ್ತಾ ತನ್ನ ಕಾಲುಗಳಿಂದ ಆ ಪುಂಡರೀಕನ ಬಾಲವನ್ನು ಒದೆದನು.

೧೧೬. ಆಗ ಮಹಾಬಲಶಾಲಿಯೂ ನಾಗರಾಜನೂ ಆದ ಪುಂಡರೀಕನು ಎಚ್ಚರಗೊಂಡು ರೌದ್ರಾವೇಶದಿಂದ ತನ್ನ ದೇಹದಿಂದ ಜ್ವಾಲಾಸಮೂಹವನ್ನು ಹೊರಡಿಸಿದನು.

೧೧೭. ದೇವೀಪೂಜಾಸಕ್ತನೂ, ಬಲಶಾಲಿಯೂ ಆದ ಆಹ್ಲಾದನು ಸರ್ವಮಂಗಳಾದೇವಿಯನ್ನು ಧ್ಯಾನಮಾಡುತ್ತಾ ಇರಲು, ಧಗಧಗಿಸುವ ಆ ವಿಷಜ್ವಾಲೆಯು ಕ್ರಮವಾಗಿ ಶಾಂತವಾಯಿತು.

ಪುಂಡರೀಕಃ ಪ್ರಸನ್ನಾತ್ಮಾ ನಾಗಭೂಷಣಮುತ್ತಮಮ್ ।
ಆಹ್ಲಾದಾಯ ದದೌ ಶೀಘ್ರಂ ಸರ್ವಶೃಂಗಾರಸಂಯುತಂ ॥ ೧೧೮ ॥

ಆಹ್ಲಾದಸ್ತು ಹಯಾರೂಢೋ ಮಹೀರಾಜಾಯ ದತ್ತವಾನ್ ।
ವಿವಾಹಂ ಕಾರಯಾಮಾಸ ವೈವಾಹಿಕವಿಧಾನತಃ ।
ಕೋಟಿಸ್ವರ್ಣಂ ನೃಪಾತ್ಪ್ರಾಪ್ತಂ ಗೃಹೀತ್ವಾ ಶೀಘ್ರಮಾಯಯೌ ॥ ೧೧೯ ॥

ಹಯವಿದ್ಯಾಸಮಾರೂಢಾಸ್ತೇ ಹಯಾ ಗೇಹಮಾಗತಾಃ ।
ಜ್ಞೇಯಾಃ ಪಂಚಶತಂ ಸರ್ವೇ ಸಶೂರಾಃ ಗೃಹಮಾಯಯುಃ ॥ ೧೨೦ ॥

॥ ಸೂತ ಉವಾಚಃ ॥

ಮದ್ರದೇಶೇಷು ಯಶ್ಚಾಸೀನ್ಮದ್ರಕೇಶೋ ಮಹಾಬಲಃ ।
ಪಂಚಾಬ್ದಂ ಪೂಜಯಾಮಾಸ ಸ್ವರ್ಗವೈದ್ಯೌ ಸುರೋತ್ತಮೌ ॥ ೧೨೧ ॥

---

೧೧೮. ಆಗ ಪುಂಡರೀಕನಾಗನು ಇವನ ಮಹಿಮಾಶಕ್ತಿಗೆ ಸಂತುಷ್ಟಮನಸ್ಕನಾಗಿ ಶ್ರೇಷ್ಠವಾದ ನಾಗಭರಣವನ್ನು ಇತರ ಸರ್ವಾಭರಣ ಸಮೇತವಾಗಿ ಆಹ್ಲಾದನಿಗೆ ತ್ವರೆಯಿಂದ ಕೊಟ್ಟನು.

೧೧೯. ಆಹ್ಲಾದನು ಅದನ್ನು ತೆಗೆದುಕೊಂಡು ತನ್ನ ಕುದುರೆಯನ್ನೇರಿ ಅಲ್ಲಿಂದ ಹೊರಟು ಬಂದು ಅದನ್ನು ಪೃಥ್ವೀರಾಜನಿಗೆ ಕೊಟ್ಟನು. ಸುವೇಲೆಯಿಂದ ಅಪೇಕ್ಷಿತವಾದುದನ್ನು ತಂದಿರುವುದಾಗಿ ನಾಗವರ್ಮನಿಗೆ ತಿಳಿಸಿ ಬಳಿಕ ವಿಧಿಪೂರ್ವಕವಾಗಿ ವಿವಾಹವನ್ನು ನೆರವೇರಿಸಿದನು

೧೨೦. ಅನಂತರ ಪೃಥ್ವೀರಾಜನು ಬಹುಮಾನವಾಗಿ ಕೊಟ್ಟ ಕೋಟಿ ಸ್ವರ್ಣ ನಾಣ್ಯವನ್ನು ತೆಗೆದುಕೊಂಡು ತ್ವರೆಯಿಂದ ಬಂದನು. ಕುದುರೆಗಳಿಗೆ ಬಂದಿರಬೇಕಾದ ಎಲ್ಲ ವಿದ್ಯೆಯಲ್ಲೂ ಪರಿಶ್ರಮಪಡೆದ ಆ ಕುದುರೆಗಳು ತಮ್ಮ ನಿವಾಸಕ್ಕೆ ಶೀಘ್ರವಾಗಿ ಬಂದುವು. ಅವರ ಜೊತೆಯಲ್ಲಿ ಹೋಗಿದ್ದ ಐನೂರುಮಂದಿ ಶೂರರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಸೇರಿದರು.

೧೨೧. ಸೂತಮುನಿವರ್ಯನು ಪೃಥ್ವೀರಾಜನ ಇನ್ನೊಬ್ಬ ಮಗನ ವಿವಾಹ ಸಮಾಚಾರವನ್ನು ಹೇಳುತ್ತಾನೆ.—ಮದ್ರದೇಶದಲ್ಲಿ ಮಹಾಪರಾಕ್ರಮಿಯಾದ ಮದ್ರಕೇಶನೆಂಬ ರಾಜನಿದ್ದನು. ಅವನು ಐದುವರ್ಷಗಳಕಾಲ ಸ್ವರ್ಗಲೋಕದ ವೈದ್ಯರಾದ ಅಶ್ವಿನೀ ದೇವತೆಗಳನ್ನು ಪೂಜೆಮಾಡಿದನು.

ತಯೋಶ್ಚ ವರದಾನೇನ ದಶ ಪುತ್ರಾ ಬಭೂವಿರೇ ।
ಸುತಾ ಕಾಂತಿಮತೀ ಜಾತಾ ರೂಪಯೌವನಶಾಲಿನೀ ॥ ೧೨೨ ॥

ಸ ಮಹೀರಾಜಮಾಹೂಯ ತ್ರಿಲಕ್ಷಬಲಸಂಯುತಂ ।
ದದೌ ಕನ್ಯಾಂ ವಿಧಾನೇನ ಮದ್ರೇಶಃ ಸೂರ್ಯವರ್ಮಣೇ ॥ ೧೨೩ ॥

ಸಪ್ರೋಢಾಂ ತು ತದಾ ಪತ್ನೀಂ ಸೂರ್ಯವರ್ಮಾ ಗೃಹೀತವಾನ್ ।
ಸ್ವಗೇಹಾಯ ಯಯೌ ಶೀಘ್ರಂ ಮಹೀರಾಜೋ ಬಲೈಃಸಹ ॥ ೧೨೪ ॥

ಕರ್ಬುರೋ ನಾಮ ಮಾಯಾವೀ ವಿಭೀಷಣಸುತೋ ಬಲೀ ।
ರಾಕ್ಷಸಸ್ತತ್ರ ಸಂಪ್ರಾಪ್ತೋ ದೃಷ್ಟ್ವಾ ಕಾಂತಿಮತೀಂ ಶುಭಾಂ ॥ ೧೨೫ ॥

ಮದ್ರಕೇಶಸ್ಯ ತನಯಾಂ ದಿವ್ಯಶೋಭಾಸಮನ್ವಿತಾಂ ।
ಜಹಾರ ಪಶ್ಯತಾಂ ತೇಷಾಂ ಸಹ್ಯಾದ್ರಿಗಿರಿಮಾಯಯಾ ॥ ೧೨೬ ॥

---

೧೨೨. ಅವರ ಅನುಗ್ರಹದಿಂದ ಹತ್ತುಜನ ಗಂಡುಮಕ್ಕಳೂ ಕಾಂತಿಮತಿ ಎಂಬ ಮಗಳೂ ಜನಿಸಿದರು. ಕಾಲಕ್ರಮದಲ್ಲಿ ಆಕೆ ರೂಪಯೌವನಸಂಪನ್ನೆಯಾದಳು.

೧೨೩. ಆ ಮದ್ರಕೇಶನು ಮೂರುಲಕ್ಷ ಸೇನೆಗೆ ಅಧಿಪತಿಯಾದ ಪೃಥ್ವೀರಾಜನನ್ನು ಆಹ್ವಾನಿಸಿ ಅವನ ಪುತ್ರನಾದ ಸೂರ್ಯವರ್ಮನಿಗೆ ತನ್ನ ಪುತ್ರಿಯಾದ ಕಾಂತಿಮತಿಯನ್ನು ವಿಧಿಪ್ರಕಾರ ವಿವಾಹಮಾಡಿದನು.

೧೨೪. ಸೂರ್ಯವರ್ಮನು ಹೊಸದಾಗಿ ವಿವಾಹವಾದ ಆ ಪತ್ನಿಯನ್ನು ಜತೆಯಲ್ಲಿ ಕರೆದುಕೊಂಡೇ ಹೊರಟನು. ಪೃಥ್ವೀರಾಜನೂ ತನ್ನ ಸಮಸ್ತ ಸೈನ್ಯದೊಡನೆ ಹೊರಟು ಜಾಗ್ರತೆಯಾಗಿ ತನ್ನ ಊರಿಗೆ ಬಂದು ಸೇರಿದನು.

೧೨೫. ವಿಭೀಷಣನ ಮಗನೂ, ಬಲಶಾಲಿಯೂ, ಮಾಯಾವಿಯೂ ಆದ ಕರ್ಬುರನೆಂಬ ರಾಕ್ಷಸನು ಮಂಗಳಾಂಗಿಯಾದ ಕಾಂತಿಮತಿಯ ಸುಂದರರೂಪವನ್ನು ಕಂಡು ಅವರನ್ನು ಹಿಂಬಾಲಿಸಿ ಬಂದನು.

೧೨೬. ಹೀಗೆ ಆ ರಾಕ್ಷಸನು ಬೆನ್ನಟ್ಟಿ ಬಂದು ಅವರೆಲ್ಲರೂ ನೋಡುತ್ತಿರುವಂತೆಯೇ ದಿವ್ಯತೇಜಸ್ವಿನಿಯೂ, ಮದ್ರಕೇಶಕುಮಾರಿಯೂ ಆದ ಕಾಂತಿಮತಿಯನ್ನು ಮಾಯೆಯಿಂದ ಕದ್ದುಕೊಂಡು ಸಹ್ಯಾದ್ರಿ ಶಿಖರಕ್ಕೆ ಹೋದನು.

ಮಹೀರಾಜಸ್ತದಾ ದುಃಖೀ ವಿಲಲಾಪ ಭೃಶಂ ಮುಹುಃ ।
ದೇಹಲೀಗೇಹಮಾಗಮ್ಯ ದೂತಮಾಹೂಯ ಸತ್ವರಂ ॥ ೧೨೭ ॥

ಕೃಷ್ಣಾಂಶಂ ಪ್ರೇಷಯಾಮಾಸ ಸ ಗತ್ವಾ ಸಮವರ್ಣಯತ್ ।
ಜ್ಞಾತ್ವಾ ತೇ ತು ಹಯಾರೂಢಾಃ ಶೂರಾಃ ಪಂಚಶತಾವೃತಾಃ ॥ ೧೨೮ ॥

ಸಹ್ಯಾದ್ರಿಗಿರಿಮಾಗಮ್ಯ ಕೃಷ್ಣಾಂಶಃ ಕರ್ಬುರಂ ಪ್ರತಿ ।
ನಿರ್ಭಯೋ ವಚನಂ ಪ್ರಾಹ ಶೃಣು ರಾಕ್ಷಸಸತ್ತಮ ॥ ೧೨೯ ॥

ವಿಭೀಷಣೋ ಭಕ್ತರಾಜಸ್ತಸ್ಯ ತ್ವಂ ದಯಿತಃ ಸುತಃ ।
ತಸ್ಮಾತ್ತ್ವಯಾ ನ ಕರ್ತವ್ಯಂ ಪಾಪಂ ವಂಶವಿನಾಶನಂ ॥
ರಾವಣೇನ ಪುರಾ ಸೀತಾ ಸಂಹೃತಾ ವಿದಿತಂ ತವ ॥ ೧೩೦ ॥

---

೧೨೭. ಆಗ ಪೃಥ್ವೀರಾಜನು ಹೀಗಾದುದಕ್ಕಾಗಿ ದುಃಖದಿಂದ ಬಹುವಾಗಿ ಗೋಳಾಡಿದನು. ಆರೀತಿ ಅವನು ದೆಹಲೀನಗರದಲ್ಲಿ ತನ್ನ ಮನೆಯನ್ನು ಸೇರಿ ಜಾಗ್ರತೆಯಾಗಿ ಕೃಷ್ಣಾಂಶನ ಬಳಿಗೆ ದೂತನನ್ನು ಕಳುಹಿಸಿದನು. ಆ ದೂತನು ಕೃಷ್ಣಾಂಶನ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲಾ ವರ್ಣಿಸಿದನು.

೧೨೮. ಆ ಕೃಷ್ಣಾಂಶ ಮೊದಲಾದವರು ಈ ವೃತ್ತಾಂತವನ್ನು ಕೇಳಿ ಕುದುರೆಗಳನ್ನೇರಿಕೊಂಡು ಜತೆಯಲ್ಲಿ ಐನೂರುಮಂದಿ ಶೂರರನ್ನೂ ಕರೆದುಕೊಂಡ ಹೊರಟರು.

೧೨೯. ಕೃಷ್ಣಾಂಶ ಮೊದಲಾದವರು ಸಹ್ಯಾದ್ರಿ ಪರ್ವತಕ್ಕೆ ಬಂದು ಕರ್ಬುರನನ್ನು ಕುರಿತು ನಿರ್ಭಯವಾಗಿ “ ಎಲಾ ರಾಕ್ಷಸಶ್ರೇಷ್ಠನೇ ! ವಿಭೀಷಣನು ಭಕ್ತರಲ್ಲಿ ಅಗ್ರೇಸರನು ನೀನು ಅವನ ಪ್ರಿಯಪುತ್ರನು.”

೧೩೦. “ಆದ್ದರಿಂದ ದೈವಭಕ್ತನಾದ ಅವನ ವಂಶಕ್ಕೆ ಹಾನಿಕರವಾದ ಇಂಥಾ ಪಾಪಕಾರ್ಯವನ್ನು ನೀನು ಮಾಡತಕ್ಕದ್ದಲ್ಲ. ರಾವಣನು ಪೂರ್ವದಲ್ಲಿ ಪರಸ್ತ್ರೀಯಾದ ಸೀತೆಯನ್ನು ಅಪಹರಿಸಿ ಹೊಂದಿದಗತಿ ಏನೆಂಬುದು ನಿನಗೆ ಗೊತ್ತೇ ಇದೆ ” ಎಂದನು.

ಇತಿ ಶ್ರುತ್ವಾ ಸ ಹೋವಾಚ ಪುರೇಯಂ ದಯುತಾ ಪ್ರಿಯಾ ।
ಮಮ ಗಂಧರ್ವತನಯಾ ಮುನಿಶಾಪಾನ್ಮಹೀಂ ಗತಾ ॥ ೧೩೧ ॥

ಅತೋಽಹಂ ತದ್ವಿಯೋಗೇನ ತ್ಯಕ್ತ್ವಾ ಲಂಕಾಂ ಮಹಾಪುರೀಂ ।
ಮುದ್ರಕೇಶಮಹಂ ಪ್ರಾಪ್ಯ ಮುದ್ರಕೇಶಭಯಾದಹಂ ॥
ನ ಜಹಾರ ಪ್ರಿಯಾಂ ರಮ್ಯಾಂ ತತ್ರೋಷಿತ್ವಾ ದಿನಂ ಬಹು ॥ ೧೩೨ ॥

ಅದ್ಯ ಮೇ ವಶಗಾ ಸಾಭೂನ್ನಾಮ್ನಾ ಕಾಂತಿಮತೀ ಶುಭಾ ।
ಜಿತ್ವಾ ಮಾಂ ಚ ಗೃಹಣಾಶು ಸಮರ್ಥಾಶ್ಚ ವಯಂ ಸದಾ ॥ ೧೩೩ ॥

ಇತಿ ಶ್ರುತ್ವಾ ಸ ಕೃಷ್ಣಾಂಶಃ ಖಡ್ಗಯುದ್ಧಮಚೀಕರತ್ ।
ಸಪ್ತರಾತ್ರೇಣ ತಂ ಜಿತ್ವಾ ಲಬ್ಧ್ವಾ ಕಾಂತಿಮತೀಂ ಶುಭಾಂ ॥
ತದಾ ಚ ದೇಹಲೀಂ ಪ್ರಾಪ್ಯ ಮಹೀರಾಜಾಂತಮಾಯಯೌ ॥ ೧೩೪ ॥

---

೧೩೧. ಕೃಷ್ಣಾಂಶನು ಹೀಗೆಂದುದ್ದನ್ನು ಕೇಳಿ ಗಂಧರ್ವ ಪುತ್ರಿಯಾದ ಇವಳು ಹಿಂದಿನ ಜನ್ಮದಲ್ಲಿ ನನ್ನ ಪ್ರಿಯಪತ್ನಿಯಾಗಿದ್ದಳು. ಋಷಿಯ ಶಾಪವಶದಿಂದ ಭೂಲೋಕದಲ್ಲಿ ಜನ್ಮವೆತ್ತಬೇಕಾಯಿತು.”

೧೩೨. “ಇವಳ ಅಗಲಿಕೆಯ ದುಃಖಕ್ಕಾಗಿ ನಾನು ಲಂಕಾಮಹಾಪುರಿಯನ್ನೇ ಬಿಟ್ಟು ಇವಳು ಜನಿಸಿದ್ದ ಮುದ್ರಕರಾಜನ ಪಟ್ಟಣವನ್ನು ಆಶ್ರಯಿಸಿ ಬಹುದಿನದಿಂದ ಅಲ್ಲಿಯೇ ವಾಸಿಸಿದೆನು. ಆದಾಗ್ಯೂ ಆ ರಾಜನ ಭಯದಿಂದ ನನ್ನ ಪ್ರಿಯಪತ್ನಿಯೂ ಸುಂದರಿಯೂ ಆದ ಇವಳನ್ನು ಅಪಹರಿಸಲಿಲ್ಲ.”

೧೩೩. “ಶುಭಕರವಾದ ಕಾಂತಿಮತಿಯೆಂಬ ಹೆಸರಿನ ಇವಳು ಈದಿನ ನನ್ನ ಕೈಗೆ ಸಿಕ್ಕಿದ್ದಾಳೆ. ನನ್ನೊಡನೆ ಹೋರಾಡಿ ನನ್ನನ್ನು ಜಯಿಸಿ ಇವಳನ್ನು ಕರೆದು ಕೊಂಡು ಹೋಗಬಹುದು. ನಾವು ಯಾವಾಗಲೂ ಸಾಮರ್ಥ್ಯಪ್ರಿಯರು” ಎಂದು ಹೇಳಿದನು.

೧೩೪. ಕರ್ಬುರನ ಈ ಮಾತನ್ನು ಕೇಳಿ ಕೃಷ್ಣಾಂಶನು ಅವನೊಡನೆ ಖಡ ಯುದ್ಧವನ್ನು ಮಾಡತೊಡಗಿದನು. ಏಳುದಿನ ಹಗಲೂ ರಾತ್ರಿ ಯುದ್ಧಮಾಡಿ ಅವ ನನ್ನು ಸೋಲಿಸಿ ಸುಂದರಾಂಗಿಯಾದ ಕಾಂತಿಮತಿಯನ್ನು ಬಿಡಿಸಿಕೊಂಡು ಆಕೆಯ ಸಮೇತ ದೆಹಲೀನಗರಕ್ಕೆ ಬಂದು ಪೃಥ್ವೀರಾಜನ ಸಮೀಪಕ್ಕೆ ಹೋಗಿ ಕಾಣಿಸಿ ಕೊಂಡನು.

ಕೋಟಿಸ್ವರ್ಣಂ ದದೌ ರಾಜಾ ಕೃಷ್ಣಾಂಶಾಯ ಮಹಾತ್ಮನೇ ।
ಸ ವೀರೋ ಬಂಧುಭಿಃ ಸಾರ್ಧಂ ಪ್ರಮದಾವನಮಾಯಯೌ ॥ ೧೩೫ ॥

॥ ಸೂತ ಉವಾಚ ॥

ಪಟ್ಟಿನಾಖ್ಯಪುರೇ ರಾಜಾ ನಾಮ್ನಾ ಪೂರ್ಣಾಮಲೋ ಬಲೀ ।
ವಸೂನಾರಾಧಯಾಮಾಸ ಪಂಚವರ್ಷಾಂತರೇ ಮುದಾ ॥
ತದಾ ಪ್ರಸನ್ನಾಸ್ತೇ ದೇವಾ ದದುಸ್ತಸ್ಮೈ ವರಂ ಶುಭಂ ॥ ೧೩೬ ॥

ವರದಾನಾಶ್ಚ ಸಂಜಾತಾ ದಶ ಪುತ್ರಾ ಮಹೀಪತೇಃ ।
ವಿದ್ಯುನ್ಮಾಲಾ ಸುತಾ ಜಾತಾ ರೂಪಯೌವನಶಾಲಿನೀ ॥ ೧೩೭ ॥

ತದ್ವಿವಾಹಾರ್ಥಮಾಹೂಯ ಮಹೀರಾಜಂ ಮಹಾಬಲಂ ।
ಸಪ್ತಲಕ್ಷಬಲೈಃ ಸಾರ್ಧಂ ತುತ್ಪುತ್ರಾಯ ಸುತಾಂ ದದೌ ॥ ೧೩೮ ॥

---

೧೩೫. ಆಗ ಪೃಥ್ವೀರಾಜನು ಮಹಾತ್ಮನಾದ ಕೃಷ್ಣಾಂಶನಿಗೆ ಕೋಟಿ ಸುವರ್ಣ ನಾಣ್ಯವನ್ನು ಬಹುಮಾನವಾಗಿ ಕೊಟ್ಟನು. ವೀರನಾದ ಅವನು ಅದನ್ನು ತೆಗೆದು ಕೊಂಡು ಬಂಧುಗಳ ಸಮೇತ ಪ್ರಮದಾವನಕ್ಕೆ ಬಂದನು.

೧೩೬. ಸೂತಮಹರ್ಷಿಯು ಪೃಥ್ವೀರಾಜನ ಇನ್ನೊಬ್ಬ ಮಗನ ಮದುವೆಯ ವಿಷಯವನ್ನು ಹೇಳುತ್ತಾನೆ.—ಪಾಟ್ನ ಎಂಬ ನಗರದಲ್ಲಿ ಬಲಶಾಲಿಯಾದ ಪೂರ್ಣಾಮಲನೆಂಬ ರಾಜನಿದ್ದನು. ಅವನು ಐದುವರ್ಷಗಳು ಎಡೆಬಿಡದೆ ಸಂತೋಷ ದಿಂದ ವಸುಗಳನ್ನು ಆರಾಧನಮಾಡಿದನು.

೧೩೭. ಆಗ ಅಷ್ಟವಸುದೇವತೆಗಳು ಪ್ರಸನ್ನರಾಗಿ ಅವನಿಗೆ ಶುಭಕರವಾದ ವರವನ್ನು ಕೊಟ್ಟರು. ಆ ವರಪ್ರಸಾದದಿಂದ ಅವನಿಗೆ ಹತ್ತುಜನ ಪುತ್ರರೂ, ಮತ್ತು ವಿದ್ಯುನ್ಮಾಲಾ ಎಂಬ ಒಬ್ಬ ಮಗಳೂ ಜನಿಸಿದರು. ಆಕೆಯು ಪ್ರಬುದ್ಧೆಯಾಗಿ ರೂಪ ಯೌವನ ಸಂಪನ್ನೆಯಾದಳು.

೧೩೮. ಪೂರ್ಣಾಮಲ ರಾಜನು ಅವಳನ್ನು ಪೃಥ್ವೀರಾಜನ ಮಗನಿಗೆ ಕೊಡಲು ಉದ್ದೇಶಿಸಿ ಏಳುಲಕ್ಷ ಸೇನೆಗೆ ಒಡೆಯನೂ ಮಹಾಬಲಶಾಲಿಯೂ ಆದ ಅವನನ್ನು ಆಹ್ವಾನಮಾಡಿ ಅವನ ಮಗನಿಗೆ ತನ್ನ ಮಗಳನ್ನು ಕೊಟ್ಟು ವಿವಾಹವನ್ನು ನೆರವೇರಿ ಸಿದನು

ಮಹೀರಾಜಸುತೋ ಭೀಮಃ ಪತ್ನೀಂ ಪ್ರಾಪ್ಯ ಮನೋರಮಾಂ ।
ಗೇಹಮಾಗಮ್ಯ ತೈಃ ಸಾರ್ಧಂ ದೇಹಲೀಂ ಹರ್ಷಮಾಪ್ತವಾನ್ ॥ ೧೩೯ ॥

ತದಾ ಪೈಶಾಚದೇಶಸ್ಥಃ ಸಹೋದಶ್ಚ ಮಹೀಪತಿಃ ।
ಮ್ಲೇಚ್ಛೈಶ್ಚ ದಶಸಾಹಸ್ರೈಃ ವಿದ್ಯುನ್ಮಾಲಾರ್ಥಮುದ್ಯತಃ ॥ ೧೪೦ ॥

ಬಲಿದೈತ್ಯಾಜ್ಞಯಾ ಪ್ರಾಪ್ತಃ ಕುರುಕ್ಷೇತ್ರಂ ಶುಭಸ್ಥಲಂ ।
ಭಿತ್ವಾ ಮೂರ್ತೀಃ ಸುರಾಣಾಂ ಗೋರಕ್ತೈಸ್ತೀರ್ಥಜಲಂ ಕೃತಂ ॥ ೧೪೧ ॥

ಪತ್ರಮಾಲಿಖ್ಯ ಬಲವಾನ್ ಮಹೀರಾಜಾಯ ಧರ್ಮಿಣೇ ।
ಸ್ವದೂತಃ ಪ್ರೇಷಿತಸ್ತೇನ ಶ್ರುತ್ವಾ ಭೂಪೋಽಬ್ರವೀದಂ ॥ ೧೪೨ ॥

---

೧೩೯. ಪೃಥ್ವೀರಾಜನ ಮಗನಾದ ಭೀಮಕುಮಾರನು ಮನೋಹರಳಾದ ಪತ್ನಿಯೊಡನೆಯೂ, ಇತರರೊಡನೆಯೂ ದೆಹಲಿಗೆ ಬಂದು ತನ್ನ ಮನೆಯನ್ನು ಸೇರಿ ಸಂತೋಷದಿಂದ ಇದ್ದನು.

೧೪೦. ಆಗ ಪೈಶಾಚದೇಶದವನಾದ ಸಹೋದ (ಷಹಾಬುದ್ದೀನ) ಎಂಬ ರಾಜನು ಬಲಿದೈತ್ಯನ ಅಪ್ಪಣೆಯ ಪ್ರಕಾರ ವಿದ್ಯುನ್ಮಾಲೆಯನ್ನು ವಶಪಡಿಸಿಕೊಳ್ಳ ಬೇಕೆಂದು ಉದ್ಯುಕ್ತನಾಗಿ ಹತ್ತುಸಾವಿರ ಮ್ಲೇಚ್ಛರೊಡನೆ ಹೊರಟನು.

೧೪೧. ಹೀಗೆ ಹೊರಟು ಶುಭಸ್ಥಳವಾದ ಕುರುಕ್ಷೇತ್ರಕ್ಕೆ ಬಂದನು. ಅವನ ಅಪ್ಪಣೆಯಂತೆ ಅವನ ಜತೆಯಲ್ಲಿದ್ದ ಮ್ಲೇಚ್ಛರು ದೇವಾಲಯದಲ್ಲಿದ್ದ ದೇವಮೂರ್ತಿ ಗಳನ್ನು ಒಡೆದುಹಾಕಿದರು. ಪುಣ್ಯತೀರ್ಥಜಲದಲ್ಲಿ ಗೋರಕ್ತವನ್ನು ಮಿಶ್ರ ಮಾಡಿದರು.

೧೪೨. ಆ ಬಲಶಾಲಿಯು ಇಷ್ಟಕ್ಕೇ ಬಿಡದೆ ಧರ್ಮಿಷ್ಠನಾದ ಪೃಥ್ವೀರಾಜನಿಗೆ ಒಂದು ಪತ್ರವನ್ನು ಬರೆದು ತನ್ನ ಕಡೆಯ ದೂತನೊಬ್ಬನ ಕೈಯಲ್ಲಿಕೊಟ್ಟು ಅವನ ಬಳಿಗೆ ಕಳುಹಿಸಿದನು.

ಭವಾನ್ ಮ್ಲೇಚ್ಛಪತೀ ರಾಜಾ ವಿದ್ಯುನ್ಮಾಲಾರ್ಥಮುದ್ಯತಃ ।
ಮಾಂ ಶಬ್ದವೇಧಿನಂ ವಿದ್ಧಿ ಚೌರ್ಯದೇಶಧುರಂಧರಂ ॥ ೧೪೩ ॥

ಇತ್ಯುಕ್ತ್ವಾ ಸ ತ್ರಿಲಕ್ಷ್ಯೈಶ್ಚ ಕುರುಕ್ಷೇತ್ರಮುಪಾಗತಃ ।
ತಯೋಶ್ಚಾಸೀನ್ಮಹದ್ಯುದ್ಧಮಹೋರಾತ್ರಂ ಭಯಾನಕಂ ॥ ೧೪೪ ॥

ನಿಶೀಥೇ ಸಮನುಪ್ರಾಪ್ತೇ ಜ್ಯೇಷ್ಠೇ ಮಾಸಿ ತಮೋಮಯೇ ।
ಪಾತಾಲಾದ್ಬಲಿರಾಗತ್ಯ ದೈತ್ಯಾಯುತಸಮನ್ವಿತಃ ॥ ೧೪೫ ॥

ನೃಪಸೈನ್ಯಂ ಜಘಾನಾಶು ಭಕ್ಷಯಿತ್ವಾ ಪುನಃಪುನಃ ।
ಭಯಭೀತಸ್ತದಾ ರಾಜಾ ಶಾರದಾಂ ಶರಣಂ ಯಯೌ ॥ ೧೪೬ ॥

---

೧೪೩. "ನೀನು ವಿದ್ಯುನ್ಮಾಲೆಯನ್ನು ಆಕ್ರಮಿಸಲು ಉದ್ಯುಕ್ತನಾಗಿ ಬಂದಿರುವ ಮ್ಲೇಚ್ಛದೇಶದ ರಾಜನು. ಚೋರರೊಡನೆ ವ್ಯವಹರಿಸುವ ಸಾಮರ್ಥ್ಯವುಳ್ಳ ನನಗೆ ಶಬ್ದವೇಧಿ ವಿದ್ಯೆ ಬರುತ್ತದೆಂಬುದು ನಿನಗೆ ತಿಳಿದಿರಲಿ" ಎಂದು ಆ ದೂತನ ಕೈಲಿ ಹೇಳಿ ಕಳುಹಿಸಿದನು.

೧೪೪. ಬಳಿಕ ಪೃಥ್ವೀರಾಜನು ಮೂರುಲಕ್ಷ ಸೈನ್ಯವನ್ನು ತೆಗೆದುಕೊಂಡು ಕುರುಕ್ಷೇತ್ರಕ್ಕೆ ಬಂದನು. ಅವರಿಬ್ಬರ ಸೇನೆಗೂ ಹಗಲೂ ರಾತ್ರಿ ಅವಿಚ್ಛಿನ್ನವಾಗಿ ಭಯಂಕರವಾದ ಯುದ್ಧ ನಡೆಯತೊಡಗಿತು.

೧೪೫. ಆಗ ಜ್ಯೇಷ್ಠಮಾಸ ಅರ್ಧರಾತ್ರಿಯಲ್ಲಿ ಗಾಢಾಂಧಕಾರ ಕವಿದಿರುವಾಗ ಪಾತಾಳಲೋಕದಿಂದ ಬಲಿಯು ಹತ್ತು ಸಾವಿರಮಂದಿ ದೈತ್ಯರನ್ನು ಕೂಡಿಕೊಂಡು ಭೂಮಿಗೆ ಬಂದನು.

೧೪೬. ಹೀಗೆ ಬಂದು ರಾಜನ ಸೈನ್ಯವನ್ನೆಲ್ಲಾ ಶೀಘ್ರವಾಗಿ ಹೊಡೆದುಹಾಕಿ ಅವರನ್ನೆಲ್ಲಾ ತಿಂದು ತೇಗುತ್ತಿದ್ದರು. ಆಗ ಪೃಥ್ವೀರಾಜನು ಭಯದಿಂದ ದಿಗಿಲುಬಿದ್ದು ಶಾರದೆಯ ಶರಣುಹೊಕ್ಕನು.

ಏತಸ್ಮಿನ್ನಂತರೇ ದೇವಾಃ ಕೃಷ್ಣಾಂಶಾದ್ಯಾ ಮಹಾಬಲಾಃ ।
ಕ್ಷಣಮಾತ್ರೇಣ ಸಂಪ್ರಾಪ್ತಾಸ್ತದಾ ಪದಚರಾ ಮುನೇ ॥ ೧೪೭ ॥

ಹತ್ವಾ ದೈತ್ಯಸಹಸ್ರಾಣಿ ಬಲಿದೈತ್ಯಮುಪಾಯಯುಃ ।
ದೇಶಜೌ ವತ್ಸಜೌ ವೀರೌ ದೇವಸಿಂಹಸ್ತಥೈವ ಚ ॥
ಸ್ವಖಡ್ಗೈಸ್ತರ್ಪಯಾಮಾಸ ದೈತ್ಯರಾಜಂ ಮಹಾಬಲಂ ॥ ೧೪೮ ॥

ತದಾ ಪ್ರಸನ್ನೋ ಬಲವಾನ್ ದೈತ್ಯರಾಜೋ ಬಲಿಃ ಸ್ವಯಂ ।
ವರಂ ವೃಣುತ ತಾನಾಹ ತೇ ತು ಶ್ರುತ್ವಾಽಬ್ರುವನ್ವಚಃ ॥ ೧೪೯ ॥

ಆರ್ಯದೇಶಂ ಚ ತೇ ದೈತ್ಯಾ ನಾಗಚ್ಛಂತು ತ್ವಯಾ ಸಹ ।
ಮ್ಲೇಚ್ಛದೇಶಂ ಸದಾ ಪ್ರಾಪ್ಯ ಭಕ್ಷಧ್ವಂ ಮ್ಲೇಚ್ಛಧರ್ಮಗಾನ್ ॥ ೧೫೦ ॥

---

೧೪೭. ಅಯ್ಯಾ ಶೌನಕನೇ ! ಕೇಳು; ಇಷ್ಟರೊಳಗೆ ಮಹಾಬಲಶಾಲಿಗಳಾದ ಕೃಷ್ಣಾಂಶ ಮೊದಲಾದವರು ಒಂದು ಕ್ಷಣದೊಳಗಾಗಿ ಪಾದಚಾರಿಗಳಾಗಿ ಬಂದೊದಗಿದರು.

೧೪೮. ಹೀಗೆ ಬಂದ ಅವರುಗಳು ಸಾವಿರಾರು ದೈತ್ಯರನ್ನು ಸಂಹಾರಮಾಡಿ ಬಲಿದೈತ್ಯನ ಸಮೀಪಕ್ಕೇ ಬಂದರು. ವತ್ಸರಾಜಪುತ್ರರಾದ ಬಲಖಾನಿ, ಸುಖಖಾನಿಗಳೂ ದೇಶರಾಜಪುತ್ರರಾದ ಕೃಷ್ಣಾಂಶ ಆಹ್ಲಾದರೂ ಮತ್ತು ದೇವಸಿಂಹನೂ ತಮ್ಮ ಖಡ್ಗಪ್ರಹಾರದ ಚಾತುರ್ಯದಿಂದ ದೈತ್ಯರಾಜನಾದ ಬಲಿಯನ್ನು ಮೆಚ್ಚಿಸಿದರು.

೧೪೯. ಆಗ ಬಲಶಾಲಿಯಾದ ಬಲಿದೈತ್ಯನು ಪ್ರಸನ್ನನಾಗಿ ಆ ಕೃಷ್ಣಾಂಶಾದಿಗಳನ್ನು ಕುರಿತು “ ನಿಮಗೆ ಬೇಕಾದ ವರವನ್ನು ಕೇಳಿ ” ಎಂದು ಹೇಳಿದನು. ಆಗ ಅವರು ಬಲಿಯನ್ನು ಕುರಿತು ಇಂತೆಂದರು.

೧೫೦. “ ಈ ದೈತ್ಯರು ನಿನ್ನ ಸಂಗಡ ಈ ಆರ್ಯದೇಶಕ್ಕೆ ಎಂದೂ ಬಾರದೆ ಇರಲಿ. ಯಾವಾಗಲೂ ಮ್ಲೇಚ್ಛದೇಶದಲ್ಲಿರುತ್ತಾ ಅವರು ಮ್ಲೇಚ್ಛಧರ್ಮಿಗಳನ್ನು ತಿಂದು ತೇಗಲಿ ” ಎಂದು ವರವನ್ನು ಕೇಳಿದರು.

ಇತಿ ಶ್ರುತ್ವಾ ವಚೋ ಘೋರಂ ವಿಪ್ರಿಯಂ ಚ ಬಲಿಃ ಸ್ವಯಂ ।
ಕೃಷ್ಣಾಂಶಮುದಯಂ ಗತ್ವಾ ತುಷ್ಟಾವ ಪರಯಾ ಗಿರಾ　　॥ ೧೫೧ ॥

ತದಾ ಪ್ರಸನ್ನಃ ಕೃಷ್ಣಾಂಶೋ ವಚನಂ ಪ್ರಾಹ ನಿರ್ಭಯಃ ।
ಯಾವದಹಂ ಭೂಮಿವಾಸೀ ತಾವತ್ತ್ವಂ ಗೇಹಮಾವಸ ॥
ತತ್ಪಶ್ಚಾದ್ಭೂಮಿಮಾಗತ್ಯ ಯಥಾಯೋಗ್ಯಂ ಕುರುಷ್ವ ಭೋಃ　॥ ೧೫೨ ॥

ಇತಿ ತದ್ವಚನಂ ಶ್ರುತ್ವಾ ಸಹೋದೋ ಬಲಸಂಯುತಃ ।
ಪೈಶಾಚಂ ದೇಶಮಗಮದ್ಬಲಿಃ ಪ್ರಾಪ್ತೋ ರಸಾತಲಂ　　॥ ೧೫೩ ॥

ಭೂಮಿರಾಜಃ ಪ್ರಸನ್ನಾತ್ಮಾ ಕೋಟಿಸ್ವರ್ಣಂ ದದೌ ತದಾ ।
ಗಜಾರೂಢಾಶ್ಚ ತೇ ಪಂಚ ಸಂಯಯುಶ್ಚ ಮಹಾವತೀಂ　　॥ ೧೫೪ ॥

---

೧೫೧. ಈ ಪ್ರಕಾರ ಅವರು ತನಗೆ ಅಹಿತವಾಗಿ, ವರರೂಪದಲ್ಲಿ ಕೇಳಿದ ಘೋರವಾದ ಈ ಮಾತುಗಳನ್ನು ಕೇಳಿ, ಬಲಿದೈತ್ಯನು ಕೃಷ್ಣಾಂಶನ ಸಮೀಪಕ್ಕೆ ಹೋಗಿ ಶ್ರೇಷ್ಠವಾದ ಮಾತುಗಳಿಂದ ಅವನನ್ನು ಬಹುವಾಗಿ ಸ್ತುತಿಸಿದನು.

೧೫೨. ಆಗ ಪ್ರಸನ್ನನಾದ ಕೃಷ್ಣಾಂಶನು ನಿರ್ಭಯದಿಂದ "ನಾನು ಭೂಮಿಯಲ್ಲಿ ವಾಸಿಸುವವರೆಗೆ ನೀನು ಪಾತಾಳಲೋಕದಲ್ಲಿ ನಿನ್ನ ಮನೆಯೊಳಗೇ ಇರಬೇಕು. ಅನಂತರ ಭೂಲೋಕಕ್ಕೆ ಬಂದು ನಿನ್ನ ಮನಸ್ಸಿಗೆ ಯೋಗ್ಯವೆಂದು ತೋರಿದಂತೆ ಆಚರಿಸು" ಬಲಿಗೆ ಎಂದು ಹೇಳಿದನು.

೧೫೩. ಅವನು ಈ ಪ್ರಕಾರ ಹೇಳಿದ್ದನ್ನು ಕೇಳಿ ಸಹೋದನು ತನ್ನ ಸೇನಾ ಸಮೇತನಾಗಿ ಪೈಶಾಚದೇಶಕ್ಕೆ ಹೊರಟು ಹೋದನು ಬಲಿದೈತ್ಯನು ಪಾತಾಳ ಲೋಕಕ್ಕೆ ಹೊರಟು ಹೋದನು.

೧೫೪. ಪೃಥ್ವೀರಾಜನು ಮನಸ್ಸಂತೋಷದಿಂದ ಒಂದುಕೋಟಿ ಸುವರ್ಣ ವರಹಗಳನ್ನು ಕೃಷ್ಣಾಂಶಾದಿಗಳಿಗೆ ಕೊಟ್ಟನು. ಆ ಐದುಮಂದಿ ಸೋದರರೂ ಆನೆಯನ್ನೇರಿಕೊಂಡು ಮಹಾವತೀನಗರಕ್ಕೆ ಪ್ರಯಾಣ ಮಾಡಿದರು.

॥ ಸೂತ ಉವಾಚ ॥

ವರ್ಧನೋ ಭೂಮಿರಾಜಸ್ಯ ಸುತಃ ಸರ್ವೇಭ್ಯ ಉತ್ತಮಃ ।
ಪಂಚವರ್ಷಾಬ್ದವಯಾ ಭೂತ್ವಾ ಶ್ರೀದಂ ತುಷ್ಟಾವ ಭಕ್ತಿತಃ ॥
ವರ್ಷಾಂತರೇ ಚ ಭಗವಾನ್ ದದೌ ಸರ್ವಂ ಶುಭಂ ನಿಧಿಂ ॥ ೧೫೫ ॥

ತತ್ಸರ್ವನಿಧಿಭಾವೇನ ನೃಪಕೋಶಃ ಸಮಂತತಃ ।
ಪೂರ್ಣೋ ಬಭೂವ ಕನಕೈ ರಾಜರಾಜಪ್ರಭಾವತಃ ॥ ೧೫೬ ॥

ಕಿಂನರೀ ನಾಮ ಯಾ ಕನ್ಯಾ ಮಂಕಣಸ್ಯ ಪ್ರಕೀರ್ತಿತಾ ।
ಕುಬೇರಸ್ಯ ದದೌ ತಸ್ಮೈ ವರ್ಧನಾಯ ಪ್ರಿಯಾಯ ಚ ॥
ಇತಿ ತೇ ಕಥಿತಂ ಸರ್ವಂ ವಿವಾಹಚರಿತಂ ಮುನೇ ॥ ೧೫೭ ॥

ಧುಂಧುಕಾರೋ ಮಹಾಶೂರೋ ಲಕ್ಷಸೈನ್ಯಸಮನ್ವಿತಃ ।
ಬ್ರಹ್ಮಾನಂದಮುಪಾಗಮ್ಯ ಯುದ್ಧಾರ್ಥಾಯ ತಮಾಹ್ವಯತ್ ॥ ೧೫೮ ॥

---

೧೫೫. ಸೂತಮುನಿವರ್ಯನು ಪೃಥ್ವೀರಾಜನ ಇನ್ನೊಬ್ಬ ಕುಮಾರನ ವಿವಾಹ ವಿಚಾರವನ್ನು ಹೇಳುತ್ತಾನೆ—ಪೃಥ್ವೀರಾಜನ ಪುತ್ರರಲ್ಲಿ ಎಲ್ಲರಿಗಿಂತ ಉತ್ತಮನಾದ ವರ್ಧನನು ಐದುವರ್ಷದವನಾಗಿದ್ದಾಗಲೇ ಭಕ್ತಿಯಿಂದ ಲಕ್ಷ್ಮೀಪ್ರದನಾದ ಕುಬೇರನನ್ನು ಸ್ತುತಿಸಿದನು.

೧೫೬. ಒಂದುವರ್ಷಪರ್ಯಂತ ಹೀಗೆ ಆರಾಧಿಸಲಾಗಿ ದೇವರು "ಸರ್ವ" ವೆಂಬ ಶುಭವಾದ ನಿಧಿಯನ್ನು ಕರುಣಿಸಿದನು. ಆ ಸರ್ವನಿಧಿಯ ಮಹಿಮೆಯಿಂದಲೂ ರಾಜರಾಜನಾದ ಕುಬೇರನ ಪ್ರಭಾವದಿಂದಲೂ ಎಲ್ಲಕಡೆಯೂ ಆ ರಾಜನ ಭಂಢಾರವು ಚಿನ್ನ ಮೊದಲಾದುವುಗಳಿಂದ ತುಂಬಿಹೋಯಿತು.

೧೫೭. ಅನಂತರ ಮಂಕಣನು ಕನ್ಯೆಯಾದ ಕಿನ್ನರೀ ಎಂಬವಳನ್ನು ಕುಬೇರನಿಗೆ ಪ್ರೀತಿಪಾತ್ರನಾದ ವರ್ಧನನಿಗೆ ಮದುವೆಮಾಡಿಕೊಟ್ಟನು. ಈ ಪ್ರಕಾರ ಪೃಥ್ವೀರಾಜನಮಕ್ಕಳ ವಿವಾಹ ವೃತ್ತಾಂತವನ್ನೆಲ್ಲಾ ನಿನಗೆ ಹೇಳಿದುದಾಯಿತು.

೧೫೮. ಕೆಲವು ದಿನದಮೇಲೆ ಮಹಾಶೂರನಾದ ಧುಂಧುಕಾರನು ಒಂದುಲಕ್ಷ ಸೈನ್ಯ ಸಮೇತನಾಗಿ ಬ್ರಹ್ಮಾನಂದನ ಮೇಲೆ ದಂಡೆತ್ತಿ ಬಂದು ಅವನನ್ನು ಯುದ್ಧಕ್ಕೆ ಕರೆದನು.

ಏಕತ್ರಿಂಶಾಬ್ದಕೇ ಪ್ರಾಪ್ತೇ ಕೃಷ್ಣಾಂಶೇ ಬಲವತ್ತರೇ ।
ಏಕಾಕೀ ಮಲನಾಪುತ್ರೋ ದೃಷ್ಟ್ವಾ ಸೈನ್ಯಮುಪಸ್ಥಿತಂ ॥
ಬ್ರಹ್ಮಾಸ್ತ್ರಂ ಚಾಪ ಆದಾಯ ಚಾರ್ಧಸೈನ್ಯಮದಾಹಯತ್ ॥ ೧೫೯ ॥

ಪಂಚಾಯುತಾಶ್ಚ ತೇ ಶೂರಾ ಭಯಭೀತಾ ದಿಶೋ ಗತಾಃ ।
ಧುಂಧುಕಾರೋ ರಣಂ ತ್ಯಕ್ತ್ವಾ ಭೂಮಿರಾಜಮುಪಾಗಮತ್ ॥ ೧೬೦ ॥

ಮಹೀರಾಜಸ್ತದಾ ದುಃಖೀ ಭಯಭೀತಃ ಸಮಂತತಃ ।
ಮಹೀಪತಿಂ ಸಮಾಹೂಯ ಚಂದ್ರಭಟ್ಟಂ ಚ ಸೋಽಬ್ರವೀತ್ ॥ ೧೬೧ ॥

ಕಥಂ ಜಯೋ ಮೇ ಭವಿತಾ ತತ್ಸರ್ವಂ ಮಂತ್ರಯಾಶು ವೈ ।
ಮಹೀಪತಿಸ್ತದಾ ಪ್ರಾಹ ಶೃಣು ಭೂಪಶಿರೋಮಣೇ ॥ ೧೬೨ ॥

---

೧೫೯. ಆಗ ಕೃಷ್ಣಾಂಶನಿಗೆ ಮೂವತ್ತೊಂದು ವರ್ಷವಾಗಿದ್ದಿತು. ಅವನು ಪೂರ್ಣಬಲಶಾಲಿಯೂ ಆಗಿದ್ದನು ಹೀಗೆ ದುಂಧುಕಾರನು ಜಗಳಕ್ಕೆ ಕಾಲುಕೆರೆದು ತನ್ನ ಮೇಲೆ ದಂಡೆತ್ತಿ ಬಂದುದನ್ನು ನೋಡಿ ಮಲನಾಪುತ್ರನಾದ ಬ್ರಹ್ಮಾನಂದನು ಒಬ್ಬನೇ ಯುದ್ಧಕ್ಕೆ ಬಂದು ತನ್ನ ಧನುಸ್ಸನ್ನು ತೆಗೆದು ಅದರಲ್ಲಿ ಬಾಣವನ್ನುಹೂಡಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದರ ಮಹಿಮೆಯಿಂದ ದುಂಧುಕಾರನ ಅರ್ಧ ಸೈನ್ಯವು ಸುಟ್ಟುಹೋಯಿತು.

೧೬೦. ಇದನ್ನು ನೋಡಿ ಉಳಿದ ಐವತ್ತುಸಾವಿರ ಶೂರರು ಭಯದಿಂದ ದಿಗಿಲುಬಿದ್ದು ದಿಕ್ಕುದಿಕ್ಕಿಗೆ ಚದರಿ ಓಡಿದರು. ದುಂಧುಕಾರನು ರಣಭೂಮಿಯಿಂದ ಹಿಂದಿರುಗಿ ಪೃಥ್ವೀರಾಜನ ಬಳಿಗೆ ಹೋದನು.

೧೬೧. ಆಗ ಪೃಥ್ವೀರಾಜನು ಹೀಗಾದುದಕ್ಕಾಗಿ ಖೇದಗೊಂಡು ಯಾವಕಡೆಯಿಂದ ಇನ್ನೇನು ಆಘಾತ ಬರುವುದೋ ಎಂದು ಭಯದಿಂದ ಹೆದರಿ ಮಹೀಪತಿ ರಾಜನನ್ನೂ, ಮಂತ್ರಿಯಾದ ಚಂದ್ರಭಟ್ಟನನ್ನೂ ಕರೆಯಿಸಿ ಆಲೋಚನೆಮಾಡತೊಡಗಿದನು.

೧೬೨. "ನನಗೆ ಜಯವಾಗಬೇಕಾದರೆ ಏನುಮಾಡಬೇಕು. ಎಂಬ ವಿಚಾರವನ್ನು ಆಲೋಚನೆಮಾಡಿ ನೀವು ಜಾಗ್ರತೆ ಹೇಳಿ" ಎಂದು ಕೇಳಿದನು.

ಕೃತ್ವಾ ನಾರೀಮಯಂ ವೇಷಂ ಚಾಮುಂಡಂ ಬಲಶಾಲಿನಂ ।
ವೇಲಾಂ ಮತ್ವಾ ಚ ತದ್ದೋಲಾಂ ಬ್ರಹ್ಮಾನಂದಾಯ ಚಾರ್ಪಯ ॥ ೧೬೩ ॥

ಚತ್ವಾರಸ್ತೇ ಸುತಾಃ ಶೂರಾ ಧುಂಧುಕಾರೇಣ ಸಂಯುತಾಃ ।
ಛದ್ಮನಾ ಚ ಸ್ವಶಸ್ತ್ರೈಶ್ಚ ಘಾತಯೇಯುಸ್ತಮೂರ್ಜಿತಾಃ ॥ ೧೬೪ ॥

ಇತಿ ಶ್ರುತ್ವಾ ಮಹೀರಾಜೋ ಬ್ರಹ್ಮಾನಂದಾಯ ಹರ್ಷಿತಃ ।
ತಥಾ ಕೃತ್ವಾ ದದೌ ದೋಲಾಂ ಪಂಚಶೂರೈಶ್ಚ ಪಾಲಿತಾಂ ॥ ೧೬೫ ॥

ಸಾಯಂಕಾಲೇ ತು ಸಂಪ್ರಾಪ್ತೇ ಮಾಘಶುಕ್ಲಾಷ್ಟಮೀದಿನೇ ।
ವೇಲಾವೇಷಶ್ಚ ಚಾಮುಂಡೋ ಬ್ರಹ್ಮಾನಂದಮುಪಾಯಯೌ ॥ ೧೬೬ ॥

---

೧೬೩. ಆಗ ಮಹೀಪತಿರಾಜನು ಪೃಥ್ವೀರಾಜನನ್ನು ಕುರಿತು "ಎಲೈ ಸಾರ್ವಭಾಮ ! ಕೇಳು; ಬಲಶಾಲಿಯಾದ ಚಾಮುಂಡನಿಗೆ ಸ್ತ್ರೀ ವೇಷವನ್ನು ಹಾಕಿ ಮೇನೆಯಲ್ಲಿ ಕೂರಿಸಿ ಕಳುಹಿಸಲು ಸಿದ್ಧಮಾಡು ; ಬ್ರಹ್ಮಾನಂದನಿಗೆ ನಿನ್ನ ಹೆಂಡತಿಯಾದ ವೇಲೆಯನ್ನು ನಿನ್ನ ಬಳಿಗೆ ಕಳುಹಿಸಿದ್ದೇನೆ. ಎಂದು ತಿಳಿಸಿ ಆ ಮೇನೆಯನ್ನು ಬ್ರಹ್ಮಾನಂದನ ಬಳಿಗೆ ಕಳುಹಿಸು."

೧೬೪. "ನಿನ್ನ ನಾಲ್ವರು ಪುತ್ರರೂ ಧುಂಧುಕಾರನ ಜತೆಯಲ್ಲಿ ವೇಷ ಮರೆಸಿಕೊಂಡು ಶಸ್ತ್ರಸನ್ನದ್ಧರಾಗಿ ಆ ಮೇನೆಯ ರಕ್ಷಕರಂತೆ ಜೊತೆಯಲ್ಲಿ ಹೋಗಿ ಸಮಯಕಾಯ್ದು ಆ ಮಹಾಪರಾಕ್ರಮಿ ಬ್ರಹ್ಮಾನಂದನನ್ನು ಧ್ವಂಸಮಾಡಿಬಿಡಬೇಕು" ಎಂದು ಉಪಾಯ ಸೂಚಿಸಿದನು.

೧೬೫. ಪೃಥ್ವೀರಾಜನು ಈ ಮಾತನ್ನು ಕೇಳಿ ಇದೇ ಸರಿಯಾದ ಯುಕ್ತಿ ಎಂದು ಒಪ್ಪಿ, ಅದೇರೀತಿ ಸ್ತ್ರೀವೇಷದ ಚಾಮುಂಡನನ್ನು ಮೇನೆಯಲ್ಲಿ ಕೂರಿಸಿ ಧುಂಧುಕಾರ ಮುಂತಾದ ಐದುಜನ ಶೂರರ ವೈಗಾವಲಿನೊಡನೆ ಆ ಮೇನೆಯನ್ನು ಬ್ರಹ್ಮಾನಂದನ ಬಳಿಗೆ ಕಳುಹಿಸಿದನು.

೧೬೬. ಮಾಘಶುಕ್ಲ ಅಷ್ಟಮಿಯದಿನ ಸಾಯಂಕಾಲದ ವೇಳೆಗೆ ಐದುಜನರ ಕಾವಲಿನಿಂದಕೂಡಿದ ಆ ಮೇನೆಯಲ್ಲಿ ವೇಲಾವೇಷದ ಚಾಮುಂಡನು ಕುಳಿತು ಬ್ರಹ್ಮಾನಂದನ ಬಳಿಗೆ ಬಂದನು.

ಛದ್ಮನಾ ಚ ತ್ರಿಶೂಲಂ ಚ ಬಲಾತ್ಕೃತ್ವಾ ರಿಪೂದರೇ ।
ರುರೋದ ಬಲವಾಞ್ಛೂರಸ್ತೇ ತು ಶೂರಾಃ ಸಮಾಗತಾಃ ॥ ೧೬೭ ॥

ತಾರಕೋ ಹೃದಿ ತಂ ಬಾಣೈಃ ಸೂರ್ಯವರ್ಮಾ ಚ ತೋಮರೈಃ ।
ಭೀಮಶ್ಚ ಗದಯಾ ಚಾತ್ರ ವರ್ಧನಶ್ಚ ತದಾಸಿನಾ ॥
ಧುಂಧುಕಾರಶ್ಚ ಭಲ್ಲೇನ ಜಘಾನ ರಿಪುಮೂರ್ಧನಿ ॥ ೧೬೮ ॥

ಮೂರ್ಛಿತಃ ಪತಿತೋ ಭೂಮೌ ಬ್ರಹ್ಮಾನಂದೋ ಮಹಾಬಲಃ ।
ಮಹದ್ವ್ರಣಯುತಸ್ತತ್ರ ಸ್ವಖಡ್ಗಂ ಚ ಸಮಾದಧತ್ ॥ ೧೬೯ ॥

ಭೀಮಸ್ಯ ಚ ಶಿರಃ ಕಾಯಾದ್ವರ್ಧನಸ್ಯ ತಥೈವ ಚ ।
ಛಿತ್ವಾ ತಥೈವ ಭೂಮಧ್ಯೇ ಸೂರ್ಯವರ್ಮಾಣಮಾಗತಃ ॥ ೧೭೦ ॥

---

೧೬೭. ಹೀಗೆ ಬಂದೊಡನೆ ವೇಲಾವೇಷದ ಚಾಮುಂಡನು ತನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ತಾನು ಬಚ್ಚಿಟ್ಟುಕೊಂಡಿದ್ದ ತ್ರಿಶೂಲವನ್ನು ತೆಗೆದು ಶತ್ರುವಾದ ಬ್ರಹ್ಮಾನಂದನ ಹೊಟ್ಟೆಗೆ ಚುಚ್ಚಿಬಿಟ್ಟು ತಾನೇ ಗಟ್ಟಿಯಾಗಿ ರೋದನ ಮಾಡಿದನು. ಇದನ್ನು ಕೇಳಿ ಮೇನೆಯ ಜತೆಯಲ್ಲಿ ಕಾವಲಿಗೆ ಬಂದಿದ್ದ ಶೂರರೈವರೂ ಅಲ್ಲಿಗೆ ಓಡಿಬಂದರು.

೧೬೮. ಹೀಗೆ ಓಡಿಬಂದವರಲ್ಲಿ ತಾರಕನು ಆ ಬ್ರಹ್ಮಾನಂದನ ಹೃದಯಕ್ಕೆ ಒಂದು ಬಾಣವನ್ನು ಪ್ರಯೋಗಿಸಿದನು. ಸೂರ್ಯವರ್ಮನು ತೋಮರಾಯುಧವನ್ನು ಪ್ರಯೋಗಿಸಿದನು. ಭೀಮಸಿಂಹನು ಗದಾಯುಧವನ್ನು ಪ್ರಯೋಗಿಸಿದನು ವರ್ಧನನು ಕತ್ತಿಯಿಂದ ಹೊಡೆದನು. ಧುಂಧುಕಾರನು ಭಲ್ಲೆಯವನ್ನು ಪ್ರಯೋಗಿಸಿ ಶತ್ರುವಾದ ಬ್ರಹ್ಮಾನಂದನ ತಲೆಗೇ ಗುರಿಯಿಟ್ಟು ಹೊಡೆದನು.

೧೬೯. ಬ್ರಹ್ಮಾನಂದನು ಮಹಾಬಲಶಾಲಿಯಾದರೂ ಇಷ್ಟುಜನರ ಏಟೂ ಒಟ್ಟಿಗೆ ಬೀಳಲಾಗಿ ಜ್ಞಾನತಪ್ಪಿ ನೆಲದಮೇಲೆ ಬಿದ್ದು, ಕೂಡಲೆ ಎದ್ದು ತನ್ನ ದೇಹದಲ್ಲಿ ದೊಡ್ಡ ಗಾಯವಾಗಿದ್ದರೂ ಲಕ್ಷಿಸದೆ ಕತ್ತಿಯನ್ನು ಹಿರಿದು ನಿಂತನು.

೧೭೦. ಹಾಗೆ ನಿಂತು ತನ್ನ ಒಂದೇ ಹೊಡೆತಕ್ಕೆ ಭೀಮಸಿಂಹನ ಶಿರಸ್ಸನ್ನು ಶರೀರದಿಂದ ಪ್ರತ್ಯೇಕವಾಗುವಂತೆ ಛೇದಿಸಿದನು. ಹಾಗೆಯೇ ವರ್ಧನನ ತಲೆಯನ್ನೂ ತುಂಡರಿಸಿದನು. ಮುಂದೆ ನುಗ್ಗಿಬಂದ ಸೂರ್ಯವರ್ಮನಿಗೂ ಇದೇ ಗತಿಯಾಯಿತು.

ತಾರಕೋ ಧುಂಧುಕಾರಶ್ಚ ಚಾಮುಂಡಶ್ಚ ತಥೈವ ಚ ।
ಬ್ರಹ್ಮಾನಂದಂ ತದಾ ತ್ಯಕ್ತ್ವಾ ಮಹೀರಾಜಾಂತಮಾಯಯೌ ॥ ೧೭೧ ॥

ಹತೇಷು ತೇಷು ಪುತ್ರೇಷು ಮಹೀರಾಜೋ ಭಯಾತುರಃ ।
ವೇಲಾಪಾರ್ಶ್ವಮುಪಾಗಮ್ಯ ರುರೋದ ಬಹುದುಃಖಿತಃ ॥ ೧೭೨ ॥

ಇತಿ ಶ್ರುತ್ವಾ ತದಾ ವೇಲಾ ದೋಲಾಮಾರುಹ್ಯ ಸತ್ವರಂ ।
ಬ್ರಹ್ಮಾನಂದಂ ಯಯೌ ಶೀಘ್ರಂ ಮೂರ್ಛಿತಂ ತಂ ದದರ್ಶಹ ॥ ೧೭೩ ॥

ಕನಿಷ್ಠಾನ್ಮೃತಭಾವೇನ ವೇಲಾಯಾ ಬಲವಾಂಸ್ತದಾ ।
ಉತ್ಥಾಯ ರುದತೀಂ ನಾರೀಂ ದದರ್ಶ ರುಚಿರಾನ್ವಿತಾಂ ॥ ೧೭೪ ॥

ಕಾ ತ್ವಂ ಕಸ್ಯ ಸುತಾ ರಮ್ಯಾ ಸಂಗ್ರಾಮೇ ಮಾಮುಪಸ್ಥಿತಾ ।
ಜಲಂ ದೇಹಿ ಮಹಾಸುಭ್ರೂರ್ವಚನಂ ಕುರು ಸುಪ್ರಿಯಂ ॥ ೧೭೫ ॥

---

೧೭೧. ಇದನ್ನು ನೋಡಿ ತಾರಕ, ಧುಂಧುಕಾರ, ಚಾಮುಂಡ ಇವರುಗಳು ಬ್ರಹ್ಮಾನಂದನನ್ನು ಎದುರಿಸುವ ಆಶೆಯನ್ನು ಬಿಟ್ಟು ಪೃಥ್ವೀರಾಜನ ಬಳಿಗೆ ಬಂದು ಬಿಟ್ಟರು.

೧೭೨. ತನ್ನ ಮೂವರು ಪುತ್ರರೂ ಹೀಗೆ ಹತರಾಗಿಹೋಗಲು ಪೃಥ್ವೀರಾಜನು ಭಯದಿಂದ ಕಂಪಿಸಿ, ಮಗಳಾದ ವೇಲೆಯ ಬಳಿಗೆ ಬಂದು, ಬಹಳ ದುಃಖಿಸುತ್ತಾ ರೋದನಮಾಡಿದನು.

೧೭೩. ಆ ವೇಲೆಯು ಈ ವಿಚಾರವನ್ನೆಲ್ಲಾ ಕೇಳಿ, ತಾನೇ ಮೇನೆಯನ್ನೇರಿ ಜಾಗ್ರತೆಯಾಗಿ ಬ್ರಹ್ಮಾನಂದನಿದ್ದಲ್ಲಿಗೆ ಬಂದು, ಅವನು ವ್ರಣಬಾಧೆಯಿಂದ ಮೂರ್ಛಿತನಾಗಿ ಬಿದ್ದಿದ್ದುದನ್ನು ಕಂಡಳು.

೧೭೪. ಇವಳು ತನ್ನ ತಮ್ಮಂದಿರ ಮರಣಕ್ಕಾಗಿ ಶೋಕಿಸುತ್ತಿರುವಲ್ಲಿ, ಬಲಶಾಲಿಯಾದ ಬ್ರಹ್ಮಾನಂದನು ಮೂರ್ಛೆ ತಿಳಿದು ಎದ್ದಮೇಲೆ ತನ್ನ ಬಳಿ ಅಳುತ್ತಿರುವ, ತೇಜಸ್ವಿನಿಯಾದ ಆ ಹೆಂಗಸನ್ನು ಕಂಡನು.

೧೭೫. ಆಗ ಬ್ರಹ್ಮಾನಂದನು ಅವಳನ್ನು ಗುರ್ತಿಸಲಾರದೆ "ಎಲೌ ಸುಂದರಿ! ನೀನು ಯಾರು? ಯಾರ ಪುತ್ರಿ? ಯುದ್ಧಮಾಡುತ್ತಿದ್ದ ನನ್ನ ಬಳಿಗೆ ಬಂದಿದ್ದೀಯೆ. ಎಲೌ ಶೋಭನಾಂಗೀ! ಸ್ವಲ್ಪ ನೀರು ತಂದುಕೊಡು. ನಾನು ಕೇಳಿದ್ದಕ್ಕೆ ನನ್ನ ಮಾತನ್ನು ನಡೆಯಿಸು" ಎಂದು ಹೇಳಿದನು.

ಇತಿ ಶ್ರುತ್ವಾ ತದಾ ವೇಲಾ ಜಲಂ ದತ್ವಾ ಶುಚಾನ್ವಿತಾ ।
ವಚನಂ ಪ್ರಾಹ ವೈ ರಾತ್ರೌ ಶೃಣು ತ್ವಂ ಮಲನಾಸುತ || ೧೭೬ ||

ವೇಲಾ ನಾಮ ಮಹೀಭರ್ತುಃ ಸುತಾಹಂ ತ್ವಾಮುಪಸ್ಥಿತಾ ।
ಮತ್ಪತಿಸ್ತ್ವ ಭವಾನ್ ಧೀರಶ್ಛದ್ಮನಾ ವಂಚಕೈರ್ಹತಃ ॥
ಜೀವನಂ ಕುರು ರಾಜೇಂದ್ರ ಭುಂಕ್ಷ್ವ ಭೋಗಾನ್ಮಯಾ ಸಹ || ೧೭೭ ||

ಇತ್ಯುಕ್ತಃ ಸ ತು ತಾಮಾಹ ಕಲಿಕಾಲೇ ಸಮಾಗತೇ ।
ಜೀವನಾನ್ಮರಣಂ ಶ್ರೇಷ್ಠಂ ತಸ್ಮಾನ್ಮದ್ವಚನಂ ಕುರು || ೧೭೮ ||

ಹರಿನಾಗರಮಾರುಹ್ಯ ಮಯಾ ಸಾರ್ಧಂ ಶುಭಾನನೇ ।
ಗತ್ವಾ ತೀರ್ಥಾನಿ ರಮ್ಯಾಣಿ ಸಂತ್ಯಜಾಮಿ ಕಲೇವರಂ || ೧೭೯ ||

---

೧೭೬ ಆ ವೇಲಾದೇವಿಯು ಈ ಮಾತನ್ನು ಕೇಳಿ ಆ ಕತ್ತಲಿನಲ್ಲಿ ಹೋಗಿ ಹುಡುಕಿ ನೀರನ್ನು ತಂದುಕೊಟ್ಟು ಬಳಿಕ ಈರೀತಿ ದುಃಖಿಸುತ್ತಾ ಮಾತನಾಡಲು ತೊಡಗಿದಳು.

೧೭೭. "ಎಲೈ ಮಲನಾಪುತ್ರನೇ ! ಕೇಳು. ನಾನು ಪೃಥ್ವೀರಾಜನ ಮಗಳಾದ ವೇಲೆ, ಈ ರಾತ್ರಿ ನಿನ್ನನ್ನು ನೋಡಲು ನಿನ್ನ ಬಳಿಗೆ ಬಂದೆ. ಧೀರನಾದ ನೀನು ನನ್ನ ಪತಿ. ವಂಚಕರು ಮೋಸಮಾಡಿ ನಿನ್ನನ್ನು ಘಾತಿಸಿದರು. ಎಲೈ ರಾಜೇಂದ್ರನೇ! ನೀನು ಆರೋಗ್ಯಹೊಂದಿ ನನ್ನೊಡನೆ ಸುಖವನ್ನು ಅನುಭವಿಸು" ಎಂದು ಹೇಳಿದಳು.

೧೭೮. ಆಕೆಯು ಹೀಗೆ ಹೇಳುತ್ತಲೆ, ಬ್ರಹ್ಮಾನಂದನು ಆ ವೇಲೆಯನ್ನು ಕುರಿತು "ಈ ಕಲಿಯುಗ ಪ್ರಾಪ್ತವಾದ ಮೇಲೆ ಜೀವಿಸಿರುವುದಕ್ಕಿಂತ ಸಾಯುವುದೇ ಮೇಲು. ಆದುದರಿಂದ ಎಲೌ ಸುಂದರಿ ! ನಾನು ಹೇಳಿದಂತೆ ಮಾಡು."

೧೭೯. "ನನ್ನ ಜೊತೆ ಹರಿನಾಗರ ಅಶ್ವವನ್ನು ಏರಿಕೊಂಡು ಬಾ. ಇಬ್ಬರೂ ಮನೋಹರವಾದ ಪುಣ್ಯಕ್ಷೇತ್ರಗಳ ಯಾತ್ರೆಗಳನ್ನು ಮಾಡೋಣ. ದೇಹಶಕ್ತಿಯಿರುವ ವರೆಗೆ ಸಂಚರಿಸಿ ಆ ಯಾತ್ರೆಯಲ್ಲಿಯೇ ನಾನು ಶರೀರತ್ಯಾಗ ಮಾಡುವೆನು" ಎಂದು ಹೇಳಿದನು.

ಇತ್ಯುಕ್ತ್ವಾ ತೌ ಸಮಾರುಹ್ಯ ಪೂರ್ವೇ ಚ ಕಪಿಲಾಂತಿಕಂ ।
ಗತ್ವಾ ಸ್ನಾತ್ವಾ ಚ ವಿಧಿವತ್ತತೋಽಗ್ರೇ ಜಗ್ಮತುರ್ಮುದಾ ॥ ೧೮೦ ॥

ಪೃಥಕ್ ಪೃಥಕ್ಸುತೀರ್ಥಾನಿ ಸ್ನಾತ್ವಾ ದತ್ವಾ ಚ ಜಗ್ಮತುಃ ।
ದಕ್ಷಿಣೇ ಸೇತುಬಂಧಾಂತೇ ಪಶ್ಚಿಮೇ ದ್ವಾರಿಕಾಮನು ॥ ೧೮೧ ॥

ಉತ್ತರೇ ಬದರೀಸ್ಥಾನೇ ಸ್ನಾತ್ವಾ ತೀರ್ಥಾನಿ ಜಗ್ಮತುಃ ।
ಗಂಧಮಾದನಮಾಗತ್ಯ ಬ್ರಹ್ಮಾನಂದೋ ಮಹಾಬಲಃ ॥ ೧೮೨ ॥

ವೇಲಾಮುವಾಚ ವಚನಂ ಭಾದ್ರಶುಕ್ಲಾಷ್ಟಮೀದಿನೇ ।
ದೇಹಂ ತ್ಯಜಾಮಿ ಭೋ ರಾಜ್ಞಿ ತಾರಕಂ ಜಹಿ ಭೂತಲೇ ॥ ೧೮೩ ॥

---

೧೮೦. ಹೀಗೆ ಹೇಳಿದ ಬಳಿಕ ಅವರಿಬ್ಬರೂ ಆ ಕುದುರೆಯನ್ನೇರಿ ಮೊದಲು ಪೂರ್ವದಿಕ್ಕಿನಲ್ಲಿ ಕಪಿಲ ಮಹರ್ಷಿಗಳ ಆಶ್ರಮವಿದ್ದ ಪುಣ್ಯಕ್ಷೇತ್ರಕ್ಕೆ ಬಂದು ಅಲ್ಲಿ ವಿಧಿಪ್ರಕಾರ ಸಂತೋಷದಿಂದ ಸ್ನಾನಾದಿಗಳನ್ನಾಚರಿಸಿ ಅಲ್ಲಿಂದ ಮುಂದಕ್ಕೆ ಒಡಗೂಡಿ ಹೊರಟರು.

೧೮೧. ಒಂದುಸಲ ಸ್ನಾನವಾಗಿದ್ದರೂ ಲಕ್ಷಿಸದೆ ಪ್ರತಿಯೊಂದು ಪುಣ್ಯತೀರ್ಥದಲ್ಲೂ ಬಿಡದೆ ಸ್ನಾನಮಾಡಿ ಅಲ್ಲಿ ಮಾಡಬೇಕಾದ ದಾನಾದಿಗಳನ್ನು ಮಾಡುತ್ತಾ ಮುಂದೆ ಪ್ರಯಾಣಮಾಡಿದರು. ದಕ್ಷಿಣದಿಕ್ಕಿನಲ್ಲಿ ರಾಮಸೇತುಕ್ಷೇತ್ರವನ್ನೂ, ಪಶ್ಚಿಮದಲ್ಲಿ ದ್ವಾರಕಾಕ್ಷೇತ್ರವನ್ನೂ ಸಂದರ್ಶಿಸಿದರು.

೧೮೨. ಉತ್ತರದಲ್ಲಿ ಬದರೀಕ್ಷೇತ್ರಕ್ಕೆ ಹೋಗಿ ಅಲ್ಲಿನ ನಾನಾ ತೀರ್ಥಗಳಲ್ಲಿ ಸ್ನಾನಮಾಡುತ್ತಾ ಹಾಗೆಯೇ ಗಂಧಮಾದನ ಪರ್ವತಕ್ಕೂ ಹೋದರು.

೧೮೩. ಮಹಾಬಲಶಾಲಿಯಾದ ಬ್ರಹ್ಮಾನಂದನು ಅಲ್ಲಿ ಭಾದ್ರಪದ ಶುದ್ಧ ಅಷ್ಟಮಿಯದಿನ ವೇಲೆಯನ್ನು ಕುರಿತು “ಎಲೌ ರಾಣಿ! ನಾನು ಇಲ್ಲಿ :ದೇಹತ್ಯಾಗ ಮಾಡುತ್ತೇನೆ. ನೀನು ಭೂಲೋಕದಲ್ಲಿ ಜೀವಿಸಿದ್ದು ತಾರಕನನ್ನು ಧ್ವಂಸಮಾಡಿ ನನ್ನ ಆತ್ಮಕ್ಕೆ ಸಂತೋಷವುಂಟುಮಾಡಬೇಕು” ಎಂದು ಹೇಳಿದನು.

ಇತಿ ಶ್ರುತ್ವಾ ತು ಸಾ ಪ್ರಾಹ ಸ್ವಾಮಿನ್ ಮದ್ವಚನಂ ಕುರು ।
ಕುರುಕ್ಷೇತ್ರಂ ಮಯಾ ಸಾರ್ಧಂ ಭವಾನ್ವೈ ಗಂತುಮರ್ಹತಿ ॥ ೧೮೪ ॥

ಸ್ಥಿತ್ವಾ ತತ್ರ ಸಮುಸ್ವಾಂತೋ ಭಜ ತ್ವಂ ಸರ್ವಮಂಗಲಾಂ ।
ಅಹಂ ಮಹಾವತೀಂ ಪ್ರಾಪ್ಯ ಪುನರ್ವೈ ದೇಹಲೀಂ ಪ್ರತಿ ॥ ೧೮೫ ॥

ತಾರಕಂ ಚ ತಥಾ ಹತ್ವಾ ತ್ವತ್ಸಮೀಪಂ ವ್ರಜಾಮ್ಯಹಂ ।
ಇತ್ಯುಕ್ತಃ ಸ ತಥೇತ್ಯುಕ್ತ್ವಾ ಬ್ರಹ್ಮಧ್ಯಾನಪರೋಽಭವತ್ ॥ ೧೮೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ಏಕತ್ರಿಂಶೋಽಧ್ಯಾಯಃ



---

೧೮೪. ಆ ವೇಲಾದೇವಿಯು ಪತಿಯು ಹೀಗೆ ಹೇಳಿದುದನ್ನು ಕೇಳಿ, "ಸ್ವಾಮೀ! ನಾನೊಂದು ಮಾತು ಕೇಳಿಕೊಳ್ಳುತ್ತೇನೆ; ಅದರಂತೆ ನಡೆಸಿಕೊಡಿ. ನೀವು ನನ್ನೊಡನೆ ಕುರುಕ್ಷೇತ್ರಕ್ಕೆ ಬರಬೇಕು."

೧೮೫. "ಅಲ್ಲಿ ಇದ್ದು ಶಾಂತಮನಸ್ಸಿನಿಂದ ಸರ್ವಮಂಗಳಾದೇವಿಯನ್ನು ಧ್ಯಾನಿಸುತ್ತಾ ಇರಿ. ನಾನು ಮಹಾವತಿಗೆ ಹೋಗಿ ಅಲ್ಲಿಂದ ದೆಹಲಿಗೆ ಹೋಗುವೆನು."

೧೮೬. "ಅಲ್ಲಿ ತಾರಕನನ್ನು ಸಂಹರಿಸಿ ಕೂಡಲೇ ನಿಮ್ಮ ಸಮೀಪಕ್ಕೆ ಬಂದು ಬಿಡುವೆನು" ಎಂದಳು. ಬ್ರಹ್ಮಾನಂದನು ಅದನ್ನು ಕೇಳಿ "ಹಾಗೆಯೇ ಆಗಲಿ" ಎಂದು ಹೇಳಿ, ಕುರುಕ್ಷೇತ್ರಕ್ಕೆ ಬಂದು ಬ್ರಹ್ಮಧ್ಯಾನದಲ್ಲಿ ಆಸಕ್ತನಾಗಿ ಕುಳಿತನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಪ್ರತಿಸರ್ಗಪರ್ವದ ತೃತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ತೃತೀಯಖಂಡೇ
## ದ್ವಾತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ದ್ವಾತ್ರಿಂಶಾಬ್ದೇ ಚ ಕೃಷ್ಣಾಂಶೇ ಸಂಪ್ರಾಪ್ತೇ ಯೋಗರೂಪಿಣೀ ।
ವೇಲಾ ನಾಮ ಶುಭಾ ನಾರೀ ಹರಿನಾಗರಸಂಸ್ಥಿತಾ ॥
ಮಹಾವತೀಂ ಸಮಾಗಮ್ಯ ಸಭಾಯಾಂ ತತ್ರ ಚಾವಿಶತ್ ॥ ೧ ॥

ಏತಸ್ಮಿನ್ನಂತರೇ ಪ್ರಾಪ್ತಾಃ ಕೃಷ್ಣಾಂಶಾದ್ಯಾ ಮಹಾಬಲಾಃ ।
ನತ್ವಾ ಪರಿಮಲಂ ಭೂಪಂ ವೇಲಾ ವಚನಮಬ್ರವೀತ್ ॥ ೨ ॥

---

## ಮೂವತ್ತೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ.—ಕೃಷ್ಣಾಂಶನಿಗೆ ಮೂವತ್ತೆರಡು ವರ್ಷವಾಯಿತು. ಶುಭಕರೆಯೂ, ಯೋಗಮಯ ಶರೀರವುಳ್ಳವಳೂ ಆದ ವೇಲೆಯು ಹರಿನಾಗರ ಅಶ್ವವನ್ನೇರಿಕೊಂಡು ಮಹಾವತೀನಗರಕ್ಕೆ ಬಂದು ರಾಜಸಭೆಯನ್ನು ಪ್ರವೇಶಿಸಿದಳು.

೨. ಇಷ್ಟರೊಳಗೆ ಮಹಾಪರಾಕ್ರಮಿಗಳಾದ ಕೃಷ್ಣಾಂಶ ಮೊದಲಾದವರು ಅಲ್ಲಿಗೆ ಬಂದಿದ್ದರು. ಸಭೆಗೆ ಬಂದ ವೇಲೆಯು ಪರಿಮಳರಾಜನಿಗೆ ನಮಸ್ಕಾರಮಾಡಿ ಮಾತನಾಡತೊಡಗಿದಳು.

**ಮಹೀಪತಿಂ ಪ್ರಿಯಂ ಮತ್ವಾ ಕೃಷ್ಣಾಂಶಂ ನೃಪ ದುಷ್ಪ್ರಿಯಂ ।**
**ತ್ವಯಾ ಮೇ ಘಾತಿತೋ ಭರ್ತಾ ಬ್ರಹ್ಮಾನಂದೋ ಮಹಾಬಲಃ ॥ ೩ ॥**

**ಮಹೀರಾಜಸುತೈರ್ಧೂರ್ತೈಸ್ತಾರಕಾದ್ಯೈರ್ಮಹಾಬಲೈಃ ।**
**ನಾರೀವೇಷಂ ಚ ಚಾಮುಂಡೋ ಧುಂಧುಕಾರೇಣ ಕಾರಿತಃ ॥ ೪ ॥**

**ಸ್ವಾಮಿನಂ ಪ್ರತಿ ಚಾಗಮ್ಯ ತೇ ಜಗ್ಮುಶ್ಛದ್ಮನಾ ಪ್ರಿಯಂ ।**
**ಕುರುಕ್ಷೇತ್ರಂ ಸ್ಥಿತಃ ಸ್ವಾಮೀ ಮಹತ್ಯಾ ಮೂರ್ಛಯಾನ್ವಿತಃ ॥ ೫ ॥**

**ತಸ್ಮಾದ್ಯೂಯಂ ಮಯಾ ಸಾರ್ಧಂ ಗಂತುಮರ್ಹಥ ತಂ ಪ್ರತಿ ।**
**ಇತಿ ಘೋರತಮಂ ವಾಕ್ಯಂ ಶ್ರುತ್ವಾ ಸರ್ವೇ ಶುಚಾನ್ವಿತಾಃ ॥**
**ಧಿಗ್ಭೂಪತಿಂ ಚ ಮಲನಾಂ ತಾಭ್ಯಾಂ ನೋ ಘಾತಿತಃ ಸಖಾ ॥ ೬ ॥**

---

೩. "ಮಹೀಪತಿರಾಜನು ಆಪ್ತನೆಂದೂ, ಕೃಷ್ಣಾಂಶನು ದ್ವೇಷಿಯೆಂದೂ ತಿಳಿದು ನೀನು, ಮಹಾಬಲಶಾಲಿಯೂ ನನ್ನ ಪತಿಯೂ ಆದ ಬ್ರಹ್ಮಾನಂದನನ್ನು ತೊಂದರೆಗೆ ಗುರಿಮಾಡಿದೆ. ಪೃಥ್ವೀರಾಜನ ಮಕ್ಕಳಾದ ತಾರಕ ಮೊದಲಾದ ಬಲಶಾಲಿಗಳು ಮಹಾವಂಚಕರು. ಆ ತಾರಕ ಮೊದಲಾದವರು ಧುಂಧುಕಾರನೊಡನೆ ದುರಾಲೋಚನೆಮಾಡಿ ಚಾಮುಂಡನಿಗೆ ಸ್ತ್ರೀವೇಷವನ್ನು ಹಾಕಿಸಿದರು.

೪. "ಅವನನ್ನು ಬಳಿಕ ಮೇನೆಯನ್ನೇರಿಸಿ ನನ್ನ ರೂಪಿನಂತೆ ತೋರ್ಪಡಿಸುತ್ತಾ-ಮೋಸದಿಂದ ನನ್ನ ಪತಿಯ ಸಮೀಪಕ್ಕೆ ಬಂದು ಅವನನ್ನು ಘಾತಿಸಿದರು"

೫. "ಈಗ ನನ್ನ ಪತಿಯು ಕುರುಕ್ಷೇತ್ರದಲ್ಲಿ ಮಹಾಮೂರ್ಛೆಗೊಂಡು ಮಲಗಿದ್ದಾನೆ. ಆದಕಾರಣ ಈಗ ನೀವು ನನ್ನ ಜೊತೆ ಹೊರಟು ಅವನ ಬಳಿಗೆ ಬರಬೇಕು" ಎಂದಳು.

೬. ಕಠೋರವಾದ ಈ ವರ್ತಮಾನವನ್ನು ಕೇಳಿ ಎಲ್ಲರೂ ದುಃಖಾಕ್ರಾಂತರಾಗಿ "ಈ ಮಲನಾದೇವಿಗೂ ಪರಿಮಳರಾಜನಿಗೂ ಇಬ್ಬರಿಗೂ ಧಿಕ್ಕಾರ. ಅವರಿಂದಲೇ ನಮ್ಮ ಸ್ನೇಹಿತನಾದ ಬ್ರಹ್ಮಾನಂದನಿಗೆ ವಿಘಾತವುಂಟಾಯಿತು."

ಇತ್ಯುಕ್ತ್ವೋಚ್ಚೈಶ್ಚ ರುರುದುಃ ಕೃಷ್ಣಾಂಶಾದ್ಯಾ ಮಹಾಬಲಾಃ ।
ಪತ್ರಾಣಿ ಪ್ರೇಷಯಾಮಾಸುಃ ಸ್ವಕೀಯಾನ್ ಭೂಪತೀನ್ ಪ್ರತಿ ॥ ೭ ॥

ಕ್ರೋಧಯುಕ್ತಾ ತದಾ ವೇಲಾ ಲಿಖಿತ್ವಾ ಪತ್ರಮುಲ್ಬಣಂ ।
ಮಹೀರಾಜಾಯ ಸಂಪ್ರೇಷ್ಯ ಮಲನಾಗೇಹಮಾಗಮತ್ ॥ ೮ ॥

ತತ್ಪತ್ರಂ ಚ ಮಹೀರಾಜೋ ವಾಚಯಿತ್ವಾ ವಿಧಾನತಃ ।
ಜ್ಞಾತ್ವಾ ತತ್ಕಾರಣಂ ಸರ್ವಂ ತನ್ನಿಶಮ್ಯ ವಿಶಾಂಪತಿಃ ॥ ೯ ॥

ಚಿಂತಾಕಲೇವರಂ ಪ್ರಾಪ್ಯ ಸುಖನಿದ್ರಾಂ ವ್ಯನಾಶಯತ್ ।
ಆಹೂಯ ಭೂಪತೀನ್ಸರ್ವಾನ್ ಘೋರಯುದ್ಧೋನ್ಮುಖೋಽಭವತ್
॥ ೧೦ ॥

---

೭. ಹೀಗೆಂಬದಾಗಿ ಹೇಳುತ್ತಾ ಮಹಾಪರಾಕ್ರಮಿಗಳಾದ ಕೃಷ್ಣಾಂಶ ಮೊದಲಾದವರು ಗಟ್ಟಿಯಾಗಿ ರೋದನಮಾಡಿದರು. ಮತ್ತು ಕೂಡಲೆ ತಮಗೆ ನೆರವಾಗಿ ಬರುವಂತೆ ತಮಗೆ ಆಪ್ತರಾದ ರಾಜರುಗಳಿಗೆಲ್ಲಾ ಪತ್ರವನ್ನು ಒರೆದು ಕಳುಹಿಸಿದರು.

೮. ಆಗ ವೇಲಾದೇವಿಯೂ ಮಹಾರೋಷಯುಕ್ತೆಯಾಗಿ ಪೃಥ್ವೀರಾಜನಿಗೆ ಬಹು ಕಠಿಣವಾದ ವಾಕ್ಯಗಳಿಂದ ಒಂದು ಪತ್ರವನ್ನು ಬರೆದು ಕಳುಹಿಸಿದಳು. ಬಳಿಕ ಆಕೆಯು ಅಲ್ಲಿಂದ ಹೊರಟು ಮಲನಾದೇವಿಯಿದ್ದಲ್ಲಿಗೆ ಬಂದಳು.

೯. ಈಕೆಯು ಕಳುಹಿಸಿದ ಕಾಗದವು ಪೃಥ್ವೀರಾಜನ ಕೈ ಸೇರುತ್ತಲೇ ಪೃಥ್ವೀರಾಜನು ಎಂದೂ ಕಾಗದಗಳನ್ನು ಓದಿಸಿ ಕೇಳುವ ವಿಧಾನದಂತೆ ಆ ಕಾಗದವನ್ನು ಓದಿಸಿ ವಿಚಾರವನ್ನೆಲ್ಲಾ ತಿಳಿದುಕೊಂಡನು. ಅದಕ್ಕೆ ಕಾರಣವೆಲ್ಲವನ್ನೂ ಅರಿತುಕೊಂಡನು.

೧೦. ಆ ಭೂಪತಿಯು ಮಹಾಚಿಂತಾಕ್ರಾಂತನಾಗಿ ಸ್ವಲ್ಪವೂ ನಿದ್ರೆಯೇ ಬಾರದೆ ವ್ಯಥೆಪಡತೊಡಗಿದನು. ಮತ್ತು ತನ್ನ ಸಾಮಂತರನ್ನೆಲ್ಲಾ ಸಹಾಯಕ್ಕೆ ಬರಹೇಳಿ ಕಳುಹಿಸಿ ದೊಡ್ಡಯುದ್ಧಕ್ಕೆ ಸಿದ್ಧನಾದನು.

ಚತುರ್ವಿಂಶತಿಲಕ್ಷೈಶ್ಚ ಶೂರೈರ್ಭೂಪಸಮನ್ವಿತೈಃ ।
ಕುರುಕ್ಷೇತ್ರಂ ಯಯೌ ಶೀಘ್ರಂ ಧೃತರಾಷ್ಟ್ರಾಂಶಸಂಭವಃ ॥ ೧೧ ॥

ತಥಾ ಪರಿಮಲೋ ಭೂಪೋ ಲಕ್ಷಷೋಡಶಸೈನ್ಯಪಃ ।
ದ್ರುಪದಾಂಶೋ ಯಯೌ ಶೀಘ್ರಂ ವೇಲಯಾ ಸ್ವಕುಲೈಃ ಸಹ ॥ ೧೨ ॥

ಸ್ಯಮಂತಪಂಚಕೇ ತೀರ್ಥೇ ಶಿಬಿರಾಣಿ ಚಕಾರ ಹ ।
ಬ್ರಹ್ಮಾನಂದಃ ಸ್ಥಿತೋ ಯತ್ರ ಸಮಾಧಿಧ್ಯಾನತತ್ಪರಃ ॥ ೧೩ ॥

ಗಂಗಾಕೂಲೇ ಚ ತೇ ಸರ್ವೇ ಕೌರವಾಂಶಾ ಮಹಾಬಲಾಃ ।
ಶಿಬಿರಾಣಿ ವಿಚಿತ್ರಾಣಿ ಚಕ್ರುಸ್ತೇ ವಿಜಯೈಷಿಣಃ ॥ ೧೪ ॥

ಕೃತ್ವಾ ತೇ ಕಾರ್ತಿಕೀಸ್ನಾನಂ ದತ್ವಾ ದಾನಾನ್ಯನೇಕಶಃ ।
ಮಾರ್ಗಕೃಷ್ಣದ್ವಿತೀಯಾಯಾಂ ಯುದ್ಧಭೂಮಿಮುಪಾಯಯುಃ ॥ ೧೫ ॥

---

೧೧. ಧೃತರಾಷ್ಟ್ರಾಂಶ ಸಂಭೂತನಾದ ಆ ಪೃಥ್ವೀರಾಜನು ಇಪ್ಪತ್ತನಾಲ್ಕುಲಕ್ಷ ಶೂರಸೈನಿಕರ ಮತ್ತು ಸಾಮಂತರಾಜರೊಡಗೂಡಿ ಹೊರಟು ಜಾಗ್ರತೆ ಕುರುಕ್ಷೇತ್ರಕ್ಕೆ ಬಂದನು.

೧೨. ಅತ್ತ ದ್ರುಪದನ ಅಂಶದಿಂದ ಜನಿಸಿದ ಪರಿಮಳರಾಜನು ಹದಿನಾರುಲಕ್ಷ ಸೇನೆಯನ್ನು ಒಡಗೊಂಡು ತನ್ನ ಕುಲದ ವೀರರೊಡನೆಯೂ ವೇಲೆಯೊಡನೆಯೂ ಕುರುಕ್ಷೇತ್ರಕ್ಕೆ ಬಂದನು.

೧೩. ಹಾಗೆ ಬಂದ ಅವರು ಬ್ರಹ್ಮಾನಂದನು ಸಮಾಧಿಯೋಗಧ್ಯಾನತತ್ಪರನಾಗಿ ಕುಳಿತಿದ್ದ ಸ್ಯಮಂತಪಂಚಕವೆಂಬ ಸರಸ್ಸಿನ ಬಳಿಯಲ್ಲಿ ತಮ್ಮ ಶಿಬಿರಗಳನ್ನು ಮಾಡಿಕೊಂಡು ಅಲ್ಲಿ ಇಳಿದುಕೊಂಡರು.

೧೪. ವಿಜಯಾಪೇಕ್ಷಿಗಳೂ, ಮಹಾಬಲಶಾಲಿಗಳೂ, ಕೌರವಾಂಶಸಂಭೂತರೂ ಆದ ಪೃಥ್ವೀರಾಜನ ಕಡೆಯವರೆಲ್ಲರೂ ಗಂಗಾನದಿಯ ದಡದಲ್ಲಿ ವಿಚಿತ್ರಕರವಾಗುವಂತೆ ಶಿಬಿರಗಳನ್ನು ರಚಿಸಿ ಇಳಿದುಕೊಂಡರು.

೧೫. ಅಲ್ಲಿ ಗಂಗಾನದಿಯಲ್ಲಿ ಅವರೆಲ್ಲರೂ ಕಾರ್ತಿಕಮಾಸಾಂಗವಾಗಿ ಸ್ನಾನ ಮಾಡಿ ಅನೇಕ ದಾನಗಳನ್ನು ಕೊಟ್ಟರು. ಎಲ್ಲ ಸಿದ್ಧತೆಯೂ ಕ್ರಮವಾಗಿ ಆದ ಮೇಲೆ ಮಾರ್ಗಶಿರ ಬಹುಳ ಬಿದಿಗೆಯ ದಿವಸ ರಣಭೂಮಿಗೆ ಬಂದು ನಿಂತರು.

ವಿಷ್ವಕ್ಸೇನೀಯಭೂಪಾಲೋ ಲಹರಸ್ತತ್ರ ಚಾಗತಃ ।
ಕೌರವಾಂಶಾಶ್ಚ ತತ್ಪುತ್ರಾಃ ಷೋಡಶೈವ ಮಹಾಬಲಾಃ ।
ಪೂರ್ವಜನ್ಮನಿ ಯನ್ನಾಮ ತನ್ನಾಮ್ನಾ ಪ್ರಶ್ರಿತಾ ಇಹ ॥ ೧೬ ॥

ದುಸ್ಸಹೋ ದುಶ್ಶಲಶ್ಚೈವ ಜಲಸಂಧಃ ಸಮಃ ಸಹಃ ।
ವಿಂದಸ್ತಥಾನುವಿಂದಶ್ಚ ಸುಬಾಹುರ್ದುಷ್ಪ್ರಧರ್ಷಣಃ ॥ ೧೭ ॥

ದುರ್ಮರ್ಷಣಶ್ಚ ದುಷ್ಕರ್ಣಃ ಸೋಮಕೀರ್ತಿರನೂದರಃ ।
ಶಲಃ ಸತ್ತ್ವೋ ವಿವಿತ್ಸುಶ್ಚ ಕ್ರಮಾಜ್ಜ್ಞೇಯಾ ಮಹಾಬಲಾಃ ॥ ೧೮ ॥

ತೋಮರಾನ್ವಯಭೂಪಾಲೋ ಬಾಹ್ಲೀಕಪತಿರಾಗತಃ ।
ತ್ರಿಲಕ್ಷೈಶ್ಚ ತಥಾ ಸೈನ್ಯೈಃ ಸಪ್ತಪುತ್ರೈಶ್ಚ ಭೂಪತಿಃ ॥ ೧೯ ॥

ಚಿತ್ರೋಪಚಿತ್ರೌ ಚಿತ್ರಾಕ್ಷಶ್ಚಾರುಶ್ಚಿತ್ರಃ ಶರಾಸನಃ ।
ಸುಲೋಚನಃ ಸುವರ್ಣಶ್ಚ ಪೂರ್ವಜನ್ಮನಿ ಕೌರವಾಃ ॥ ೨೦ ॥

---

೧೬-೧೮. ಇಷ್ಟುಹೊತ್ತಿಗೆ ವಿಷ್ವಕ್ಸೇನವಂಶದ ರಾಜನಾದ ಲಹರನೂ ಅಲ್ಲಿಗೆ ಬಂದನು. ಅವನಿಗೆ ಕೌರವಾಂಶಸಂಭೂತರೂ, ಮಹಾಬಲಶಾಲಿಗಳೂ ಆದ ಹದಿನಾರು ಮಂದಿ ಮಕ್ಕಳಿದ್ದರು. ಇವರಿಗೆ ಹಿಂದಿನ ಜನ್ಮದಲ್ಲಿದ್ದಂತೆಯೇ ಕ್ರಮವಾಗಿ ದುಸ್ಸಹ, ದುಶ್ಶಲ, ಜಲಸಂಧ, ಸಮ, ವಿಂದ, ಅನುವಿಂದ, ಸುಬಾಹು, ದಪ್ರ್ರಘರ್ಷಣ, ದುರ್ಮರ್ಷಣ, ದುಷ್ಕರ್ಣ, ಸೋಮಕೀರ್ತಿ, ಅನೂದರ, ಶಲ ಸತ್ವ, ವಿವಿತ್ಸು ಎಂಬ ಹೆಸರುಗಳು ಇದ್ದುವು. ಮಹಾಬಲಶಾಲಿಗಳೆಂದು ಬಹು ಪ್ರಖ್ಯಾತಿಯನ್ನು ಪಡೆದು ಕೊಂಡಿದ್ದ ಅವರೆಲ್ಲರೂ ಕೂಡ ಅವನ ಸಂಗಡ ಅಲ್ಲಿಗೆ ಬಂದಿದ್ದರು.

೧೯-೨೦ ತೋಮರವಂಶದ ರಾಜನಾದ ಬಾಹ್ಲೀಕಪತಿಯು ತನ್ನ ಮೂರು ಲಕ್ಷ ಸೇನೆಯನ್ನು ತೆಗೆದುಕೊಂಡು ಬಂದನು. ಪೂರ್ವದಲ್ಲಿ ಕೌರವರಾಗಿದ್ದು ಈಗ ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಶ್ಚಿತ್ರ, ಶರಾಸನ, ಸುಲೋಚನ, ಸುವರ್ಣ ಎಂಬ ಹೆಸರುಳ್ಳ ಏಳುಮಕ್ಕಳೂ ಅವನೊಡನೆ ಬಂದರು.

ತೇಷಾಮಂಶಾಃ ಕ್ರಮಾಜ್ಜಾತಾ ಅಭಿನಂದನದೇಹಜಾಃ ।
ಮಹಾನಂದಶ್ಚ ನಂದಶ್ಚ ಪರಾನಂದೋಪನಂದಕೌ ॥
ಸುನಂದಶ್ಚ ಸುರಾನಂದಃ ಪ್ರನಂದಃ ಕೌರವಾಂಶಕೇಃ ॥ ೨೦ ॥

ನೃಪಃ ಪರಿಹರವಂಶೀಯೋ ಮಾಯಾವರ್ಮಾ ಮಹಾಬಲೀ ।
ಲಕ್ಷ ಸೈನ್ಯಯುತಃ ಪ್ರಾಪ್ತೋ ದಶಪುತ್ರಸಮನ್ವಿತಃ ॥ ೨೨ ॥

ದುರ್ಮದೋ ದುರ್ವಿಗಾಹಶ್ಚ ನಂದಶ್ಚ ವಿಕಟಾನನಃ ।
ಚಿತ್ರವರ್ಮಾ ಸುವರ್ಮಾ ಚ ಸುದುರ್ಮೋಚನ ಏವ ಚ ॥ ೨೩ ॥

ಊರ್ಣನಾಭಃ ಸುನಾಭಶ್ಚ ಚೋಪನಂದಶ್ಚ ಕೌರವಾಃ ।
ತೇಷಾಮಂಶಾಃ ಕ್ರಮಾಜ್ಜಾತಾಃ ಸುತಾ ಅಂಗಪತೇಃ ಸ್ಮೃತಾಃ ॥ ೨೪ ॥

ಮತ್ತಃ ಪ್ರಮತ್ತ ಉನ್ಮತ್ತಃ ಸುಮತ್ತೋ ದುರ್ಮದಸ್ತಥಾ ।
ದುರ್ಮುಖೋ ದುರ್ಧರೋ ವಾಯುಃ ಸುರಥೋ ವಿರಥಃ ಕ್ರಮಾತ್ ॥೨೫॥

---

೨೦. ಅಭಿನಂದನರಾಜನು ಕೌರವಾಂಶದಿಂದ ತನ್ನ ತನುಜರಾಗಿ ಜನಿಸಿದ್ದ ಮಹಾನಂದ, ನಂದ, ಪರಾನಂದ, ಉಪನಂದ, ಸುನಂದ, ಸುರಾನಂದ, ಪ್ರನಂದ ಎಂಬ ಏಳುಮಕ್ಕಳು ಮತ್ತು ಸೇನೆಸಹಿತ ಬಂದನು.

೨೨-೨೩. ಪರಿಹರವಂಶದವನೂ, ಮಹಾಬಲಶಾಲಿಯೂ ಆದ ಮಾಯಾ ವರ್ಮನೆಂಬ ರಾಜನು ಕೌರವಾಂಶದಿಂದ ತನ್ನ ಮಕ್ಕಳಾಗಿ ಜನಿಸಿದ್ದ ದುರ್ಮದ, ದುರ್ವಿಗಾಹ, ನಂದ, ವಿಕಟಾನನ, ಚಿತ್ರವರ್ಮ, ಸುವರ್ಮ, ಸುದುರ್ಮೋಚನ, ಊರ್ಣನಾಭ, ಸುನಾಭ, ಚೋಪನಂದ ಎಂಬ ಹತ್ತು ಮಂದಿಯೊಡನೆ ಲಕ್ಷಸೈನ್ಯ ಸಮೇತ ಬಂದನು.

೨೪-೨೫. ಕೌರವರ ಅಂಶದಿಂದ ಅಂಗರಾಜವಂಶದಲ್ಲಿ ಕ್ರಮವಾಗಿ ಜನಿಸಿದ್ದ ಮತ್ತ, ಪ್ರಮತ್ತ, ಉನ್ಮತ್ತ, ಸುಮತ್ತ, ದುರ್ಮದ, ದುರ್ಮುಖ, ದುರ್ಧರ, ವಾಯು, ಸುರಥ, ವಿರಥ ಇವರುಗಳೂ ಇವನ ಸಹಾಯಕ್ಕಾಗಿ ಬಂದರು.

ಶುಕ್ಲವಂಶೀಯಭೂಪಾಲೋ ಮೂಲವರ್ಮಾ ಸಮಾಗತಃ ।
ಲಕ್ಷಸೈನ್ಯೈಶ್ಚ ಬಲವಾನ್ ದಶಪುತ್ರಸಮನ್ವಿತಃ ॥ ೨೬ ॥

ಅಯೋಬಾಹುರ್ಮಹಾಬಾಹುಶ್ಚಿತ್ರಾಂಗಶ್ಚಿತ್ರಕುಂಡಲಃ ।
ಚಿತ್ರಾಯುಧೋ ನಿಷಂಗೀ ಚ ಪಾಶೀ ವೃಂದಾರಕಸ್ತಥಾ ॥ ೨೭ ॥

ದೃಢವರ್ಮಾ ದೃಢಕ್ಷತ್ರಃ ಪೂರ್ವಜನ್ಮನಿ ಕೌರವಾಃ ।
ತೇಷಾಮಂಶಾ ಮಹೀಂ ಜಾತಾ ಗೃಹೇ ತೇ ಮೂಲವರ್ಮಣಃ ॥ ೨೮ ॥

ಬಲಶ್ಚ ಪ್ರಬಲಶ್ಚೈವ ಸುಬಲೋ ಬಲವಾನ್ ಬಲೀ ।
ಸುಮೂಲಶ್ಚ ಮಹಾಮೂಲೋ ದುರ್ಗೋ ಭೀಮೋ ಭಯಂಕರಃ ॥ ೨೯ ॥

ಕೈಕಯಶ್ಚಂದ್ರವಂಶೀಯೋ ಲಕ್ಷಸೈನ್ಯಸಮನ್ವಿತಃ ।
ದಶಪುತ್ರಾನ್ವಿತಃ ಪ್ರಾಪ್ತಃ ಕುರುಕ್ಷೇತ್ರೇ ಮಹಾರಣೇ ॥ ೩೦ ॥

ಭೀಮವೇಗೋ ಭೀಮಬಲೋ ಬಲಾಕೀ ಬಲವರ್ಧನಃ ।
ಉಗ್ರಾಯುಧೋ ದಂಡಧರೋ ದೃಢಸಂಧೋ ಮಹೀಧರಃ ॥ ೩೧ ॥

---

೨೬-೨೭. ಶುಕ್ಲವಂಶದಲ್ಲಿ ಜನಿಸಿ ಬಲಶಾಲಿಯೆಂದು ಪ್ರಖ್ಯಾತನಾದ ಮೂಲವರ್ಮನೆಂಬ ರಾಜನು ತನ್ನ ಲಕ್ಷ ಸೈನ್ಯದೊಡನೆ, ಪೃಥ್ವೀರಾಜನ ಸಹಾಯಕ್ಕೆ ಬಂದನು. ಹಿಂದಿನ ಜನ್ಮದಲ್ಲಿ ಕೌರವರಾಗಿದ್ದು, ಈಗ ಆ ಅಂಶದಿಂದಲೇ ಅವನ ಪುತ್ರರಾಗಿ ಜನಿಸಿದ್ದ ಅಯೋಬಾಹು, ಮಹಾಬಾಹು, ಚಿತ್ರಾಂಗ, ಚಿತ್ರಕುಂಡಲ, ಚಿತ್ರಾಯುಧ, ನಿಷಂಗೀ, ಪಾಶೀ, ವೃಂದಾರಕ, ದೃಢವರ್ಮ, ದೃಢಕ್ಷತ್ರ, ಎಂಬ ಹತ್ತು ಜನರೂ ಅವನ ಜೊತೆಯಲ್ಲಿಯೇ ಬಂದರು

೨೮-೨೯. ಅದೇ ಕೌರವಾಂಶದಿಂದ ಈ ಲೋಕದಲ್ಲಿ ಇನ್ನೊಬ್ಬ ಮೂಲವರ್ಮನ ಮನೆಯಲ್ಲಿ ಜನಿಸಿದ್ದ ಬಲ, ಪ್ರಬಲ, ಸುಬಲ, ಬಲವಾನ್, ಬಲೀ, ಸುಮೂಲ, ಮಹಾಮೂಲ, ದುರ್ಗ, ಭೀಮ, ಭಯಂಕರ ಎಂಬವರೂ ಬಂದರು.

೩೦-೩೧ ಚಂದ್ರವಂಶದವನಾದ ಕೇಕಯನೆಂಬ ರಾಜನು ತನ್ನ ಲಕ್ಷಸೇನೆಯೊಡನೆಯೂ, ಹಿಂದಿನ ಜನ್ಮದಲ್ಲಿ ಕೌರವರಾಗಿದ್ದು ಈಗ ಆ ಅಂಶದವರಾಗಿ ತನ್ನ ಮನೆಯಲ್ಲಿ ಜನಿಸಿರುವ ಭೀಮವೇಗ, ಭೀಮಬಲ, ಬಲಾಕೀ, ಬಲವರ್ಧನ, ಉಗ್ರಾ

ಜರಾಸಂಧಃ ಸತ್ಯಸಂಧಃ ಪೂರ್ವಜನ್ಮನಿ ಕೌರವಾಃ ।
ತೇಷಾಮಂಶಾಃ ಸಮುದ್ಭೂತಾಃ ಕೈಕಯಸ್ಯ ಗೃಹೇ ಶುಭೇ ॥ ೩೨ ॥

ಕಾಮಃ ಪ್ರಕಾಮಃ ಸಂಕಾಮೋ ನಿಷ್ಕಾಮೋ ನಿರಪತ್ರಪಃ ।
ಜಯಶ್ಚ ವಿಜಯಶ್ಚೈವ ಜಯಂತೋ ಜಯವಾನ್ ಜಯಃ ॥ ೩೩ ॥

ನಾಗವಂಶೀಯಭೂಪಾಲೋ ನಾಗವರ್ಮಾ ಸಮಾಗತಃ ।
ಲಕ್ಷಸೇನಾನ್ವಿತಃ ಪ್ರಾಪ್ತೋ ದಶಪುತ್ರಸಮನ್ವಿತಃ ॥ ೩೪ ॥

ಪೂರ್ವಜನ್ಮನಿ ಯನ್ನಾಮ್ನಾ ತನ್ನಾಮ್ನಾ ಕೌರವಾ ಭುವಿ ।
ಪುಂಡ್ರದೇಶಪತೇಃ ಪುತ್ರಾಃ ಜಾತಾ ದಶ ಶಿವಾಜ್ಞಯಾ ॥ ೩೫ ॥

ಉಗ್ರಶ್ರವಾ ಉಗ್ರಸೇನಃ ಸೇನಾನೀರ್ದುಷ್ಪರಾಯಣಃ ।
ಅಪರಾಜಿತಃ ಕುಂಡಶಾಯೀ ವಿಶಾಲಾಕ್ಷೋ ದುರಾಧರಃ ॥ ೩೬ ॥

ದೃಢಹಸ್ತಃ ಸುಹಸ್ತಶ್ಚ ಸುತಾಸ್ತೇ ನಾಗವರ್ಮಣಃ ॥ ೩೭ ॥

---

ಯುಧ, ದಂಡಧರ, ದೃಢಸಂಧ ಮಹೀಧರ, ಜರಾಸಂಧ, ಸತ್ಯಸಂಧ ಎಂಬ ಹತ್ತು ಮಂದಿ ಪುತ್ರರೊಡನೆಯೂ ಕೂಡಿ ಕುರುಕ್ಷೇತ್ರಮಹಾಯುದ್ಧಕ್ಕೆ ನೆರವಾಗಿ ಬಂದನು.

೩೩-೩೪. ನಾಗವಂಶದ ದೊರೆಯಾದ ನಾಗವರ್ಮರಾಜನು, ತನ್ನ ಒಂದು ಲಕ್ಷ ಸೇನೆಯೊಡನೆಯೂ, ಕೌರವರ ಅಂಶದಿಂದ ಈಗ ತನ್ನ ಮನೆಯಲ್ಲಿ ಜನಿಸಿದ್ದ ಕಾಮ, ಪ್ರಕಾಮ, ಸಂಕಾಮ, ನಿಷ್ಕಾಮ, ನಿರಪತ್ರಪ, ಜಯ, ವಿಜಯ, ಜಯಂತ, ಜಯವಾನ್, ಜಯ ಎಂಬ ಹತ್ತುಮಂದಿ ಮಕ್ಕಳೊಡನೆಯೂ ಕೂಡಿ ರಣಭೂಮಿಗೆ ಬಂದನು.

೩೫-೩೭. ಪುಂಡ್ರದೇಶದ ರಾಜನಾದ ನಾಗವರ್ಮನಿಗೆ ಶಿವನ ಆಜ್ಞೆಯಿಂದ ಉಗ್ರಶ್ರವ, ಉಗ್ರಸೇನ, ಸೇನಾನಿ, ದುಷ್ಪರಾಯಣ, ಅಪರಾಜಿತ್, ಕುಂಡಶಾಯಿ, ವಿಶಾಲಾಕ್ಷ, ಧುರಾಧರ, ದೃಢಹಸ್ತ, ಸುಹಸ್ತ ಎಂಬ ಹತ್ತುಜನ ಮಕ್ಕಳು ಜನಿಸಿದ್ದರು. ಆ ತಂದೆಮಕ್ಕಳೂ ಪೃಥ್ವೀರಾಜನ ಸಹಾಯಕ್ಕೆ ಕುರುಕ್ಷೇತ್ರಕ್ಕೆ ಬಂದರು.

ಮದ್ರಕೇಶಃ ಸಮಾಯಾತಸ್ತೋಮರಾನ್ವಯಸಂಭವಃ ।
ಲಕ್ಷಸೈನ್ಯಯುತೋ ರಾಜಾ ದಶಪುತ್ರಸಮನ್ವಿತಃ ॥ ೩೮ ॥

ವಾತವೇಗಃ ಸುವರ್ಚಶ್ಚ ನಾಗದಂತೋಗ್ರಯಾಜಕಃ ।
ಆದಿಕೇತುಶ್ಚ ವರ್ಷೀ ಚ ಕವಚೀ ಕ್ರಾಥ ಏವ ಚ ॥ ೩೯ ॥

ಕುಂಡಶ್ಚ ಕುಂಡಧಾರಶ್ಚ ಕೌರವಾಃ ಪೂರ್ವಜನ್ಮನಿ ।
ತನ್ನಾಮ್ನಾ ಭುವಿ ವೈ ಜಾತಾ ಮದ್ರಕೇಶಸ್ಯ ಮಂದಿರೇ ॥ ೪೦ ॥

ನೃಪಃ ಶಾರ್ದೂಲವಂಶೀಯೋ ಲಕ್ಷಸೈನ್ಯಸಮನ್ವಿತಃ ।
ಪೂರ್ಣಾಮಲೋ ಮಾಗಧೇಶೋ ದಶಪುತ್ರಾನ್ವಿತೋ ಯಯೌ ॥ ೪೧ ॥

ವೀರಬಾಹುರ್ಭೀಮರಥಶ್ಚೋಗ್ರಶ್ಚೈವ ಧನುರ್ಧರಃ ।
ರೌದ್ರವರ್ಮಾ ದೃಢರಥೋಽಲೋಲುಪಶ್ಚಾಭಯಸ್ತದಾ ॥ ೪೨ ॥

ಅನಾಧೃಷ್ಟಃ ಕುಂಡಭೇದೀ ಕೌರವಾಃ ಪೂರ್ವಜನ್ಮನಿ ।
ಪೂರ್ಣಾಮಲಸ್ಯ ವೈ ಗೇಹೇ ತನ್ನಾಮ್ನಾ ಭುವಿ ಸಂಭವಃ ॥ ೪೩ ॥

---

೩೮-೪೦. ತೋಮರವಂಶದ ರಾಜನಾದ ಮದ್ರಕೇಶನು ಲಕ್ಷಸೈನ್ಯದೊಡನೆಯೂ, ಪೂರ್ವಜನ್ಮದಲ್ಲಿ ಕೌರವರಾಗಿದ್ದು ಈಗ ಅವರ ಅಂಶದಿಂದ ತನ್ನ ಮನೆಯಲ್ಲಿ ಜನಿಸಿದ್ದ ವಾತವೇಗ, ಸುವರ್ಚ, ನಾಗದಂತ, ಉಗ್ರಯಾಜಕ, ಆದಿಕೇತು, ವರ್ಷೀ, ಕವಚೀ, ಕ್ರಾಥ, ಕುಂಡ, ಕುಂಡಧಾರ, ಎಂಬ ಹತ್ತುಮಂದಿ ಮಕ್ಕಳೊಡನೆಯೂ ಬಂದಿದ್ದನು.

೪೧-೪೩. ಶಾರ್ದೂಲವಂಶದಲ್ಲಿ ಜನಿಸಿ ಮಗಧದೇಶಾಧೀಶನಾದ ಪೂರ್ಣಾಮಲರಾಜನು ತನ್ನ ಲಕ್ಷ ಸೇನೆಯೊಡನೆಯೂ, ಹಿಂದಿನ ಜನ್ಮದಲ್ಲಿ ಕೌರವರಾಗಿದ್ದು ಈಗ ತನ್ನ ಮನೆಯಲ್ಲಿ ಜನಿಸಿದ್ದ ವೀರಬಾಹು, ಭೀಮರಥ, ಉಗ್ರ, ಧನುರ್ಧರ, ರೌದ್ರವರ್ಮ, ದೃಢರಥ, ಅಲೋಲುಪ, ಅಭಯ, ಅನಾಧೃಷ್ಟ, ಕುಂಡಭೇದಿ ಎಂಬ ಹತ್ತುಮಂದಿ ಮಕ್ಕಳೊಡನೆಯೂ ಆ ರಣಭೂಮಿಗೆ ಬಂದನು.

ಮಂಕಣಃ ಕಿನ್ನರೋ ನಾಮ ರೂಪದೇಶೇ ಮಹೀಪತಿಃ ।
ಚೀನಾದೇಶಾತ್ಪರೇ ಪಾರೇ ರೂಪದೇಶಃ ಸ್ಮೃತೋ ಬುಧೈಃ ॥
ನರಃ ಕಿನ್ನರಜಾತೀಯೋ ವಸತಿ ಪ್ರಿಯದರ್ಶನಃ ॥ ೪೪ ॥

ಮಂಕಣಶ್ಚ ತದಾ ಪ್ರಾಪ್ತಃ ಕಿಂನರಾಯುತಸಂಯುತಃ ।
ಅಷ್ಟಪುತ್ರಾನ್ವಿತಃ ಪ್ರಾಪ್ತೋ ಯತ್ರ ಸರ್ವನೃಪಾಃ ಸ್ಥಿತಾಃ ॥ ೪೫ ॥

ವಿರಾವೀ ಪ್ರಥಮಶ್ಚೈವ ಪ್ರಮಾಥೀ ದೀರ್ಘರೋಮಕಃ ।
ದೀರ್ಘಬಾಹುರ್ಮಹಾಬಾಹು ರ್ವ್ಯಾಘೋರಾಃ ಕನಕಧ್ವಜಃ ॥ ೪೬ ॥

ಪೂರ್ವಜನ್ಮನಿ ಯನ್ನಾಮ್ನಾ ತನ್ನಾಮ್ನಾ ಕಿನ್ನರಾ ಭುವಿ ।
ವಿರಜೋಂಶಶ್ಚ ಯೋ ಜಾತೋ ಮಂಕಣೋ ನಾಮ ಕಿಂನರಃ ॥ ೪೭ ॥

ನೇತ್ರಸಿಂಹಃ ಸಮಾಯಾತೋ ಲಕ್ಷಸೈನ್ಯಸಮನ್ವಿತಃ ।
ಶಲ್ಯಾಂಶಃ ಸ ತು ವಿಜ್ಞೇಯಃ ಶಾರ್ದೂಲಾನ್ವಯಸಂಭವಃ ॥ ೪೮ ॥

---

೪೪-೪೫. ಚೀನದೇಶದ ಎದುರಿನಲ್ಲಿ ಕಾಮರೂಪದೇಶವಿದೆ. ಅಲ್ಲಿಗೆ ರಾಜನೂ ಸುಂದರನೂ, ವಿರಜನ ಅಂಶದವನೂ, ಕಿನ್ನರಜಾತಿಯವನೂ ಆದ ಮಂಕಣನು ಹತ್ತುಸಹಸ್ರ ಕಿನ್ನರರೊಡನೆಯೂ, ಈ ಮುಂದಿನ ಎಂಟುಮಂದಿ ಮಕ್ಕಳೊಡನೆಯೂ ಸಮಸ್ತ ರಾಜರುಗಳಿಂದ ನಿಬಿಡವಾಗಿದ್ದ ಕುರುಕ್ಷೇತ್ರಕ್ಕೆ ಬಂದನು.

೪೬-೪೭. ಆ ಮಂಕಣನಿಗೆ ವಿರಾವೀ, ಪ್ರಥಮ, ಪ್ರಮಾಥೀ, ದೀರ್ಘರೋಮ, ದೀರ್ಘಬಾಹು, ಮಹಾಬಾಹು, ವ್ಯಾಘೋರಾ, ಕನಕಧ್ವಜ, ಇವರು ಪೂರ್ವಜನ್ಮದಲ್ಲಿ ತಮಗೆ ಪ್ರಸಿದ್ಧವಾಗಿದ್ದ ಹೆಸರಿನಿಂದಲೇ ಈಗ ಕಿನ್ನರರಾಜಪುತ್ರರಾಗಿ ಹುಟ್ಟಿದ್ದರು.

೪೮. ಹಿಂದಿನಜನ್ಮದ ಶಲ್ಯನಅಂಶದಿಂದ ಈಗ ಜನಿಸಿ ಶಾರ್ದೂಲ ವಂಶದ ರಾಜನಾಗಿರುವ ನೇತ್ರಸಿಂಹನು ತನ್ನ ಒಂದುಲಕ್ಷ ಸೈನ್ಯದೊಡನೆ ಇವನ ಸಹಾಯಕ್ಕೆ ಅಲ್ಲಿಗೆ ಬಂದನು.

ತದಾ ಗಜಪತೀ ರಾಜಾ ಲಕ್ಷಸೈನ್ಯಸಮನ್ವಿತಃ ।
ಸಂಪ್ರಾಪ್ತಃ ಶಕುನೇರಂಶಸ್ತ್ಯಕ್ತ್ವಾ ಗೇಹೇ ಸ್ವಪುತ್ರಕಾನ್ ॥ ೪೯ ॥

ಮಯೂರಧ್ವಜ ಏವಾಪಿ ಲಕ್ಷಸೈನ್ಯಸಮನ್ವಿತಃ ।
ಮಕರಂದಂ ಗೃಹೇ ತ್ಯಕ್ತ್ವಾ ವಿರಾಟಾಂಶಃ ಸಮಾಗತಃ ॥ ೫೦ ॥

ವೀರಸೇನಃ ಸಮಾಯಾತಃ ಕಾಮಸೇನಸಮನ್ವಿತಃ ।
ಲಕ್ಷಸೇನಾನ್ವಿತಸ್ತತ್ರ ಚೋಗ್ರಸೇನಾಂಶಸಂಭವಃ ॥ ೫೧ ॥

ಲಕ್ಷಣಶ್ಚ ಸಮಾಯಾತಃ ಸಪ್ತಲಕ್ಷಬಲೈರ್ಯುತಃ ।
ಸಂತ್ಯಜ್ಯ ಪದ್ಮಿನೀಂ ನಾರೀಂ ಮಹಾಕಷ್ಟೇನ ಭೂಪತಿಃ ॥ ೫೨ ॥

ತಾಲನೋ ಧಾನ್ಯಪಾಲಶ್ಚ ಲಲ್ಲಸಿಂಹಸ್ತಥೈವ ಚ ।
ಭೀಮಸ್ಯಾಂಶೋ ಯುಯುತ್ಸೋಶ್ಚ ಕುಂತಿಭೋಜಸ್ಯ ವೈ ಕ್ರಮಾತ್ ॥ ೫೩ ॥

---

೪೯. ಶಕುನಿಯ ಅಂಶದಿಂದ ಜನಿಸಿದ್ದ ಗಜಪತಿರಾಜನು ತನ್ನ ಮಕ್ಕಳನ್ನು ಮನೆಯಲ್ಲೇ ಬಿಟ್ಟು ಲಕ್ಷಸೈನ್ಯದೊಡನೆ ಬಂದಿದ್ದನು.

೫೦. ವಿರಾಟರಾಜನ ಅಂಶಸಂಭೂತನಾದ ಮಯೂರಧ್ವಜರಾಜನು ತನ್ನ ಮಗ ಮಕರಂದನನ್ನು ರಾಜ್ಯದಲ್ಲಿ ಬಿಟ್ಟು ತಾನು ಒಂದುಲಕ್ಷ ಸೈನ್ಯದೊಡನೆ ಯುದ್ಧಕ್ಕೆ ಬಂದನು.

೫೧. ಉಗ್ರಸೇನನ ಅಂಶದವನಾಗಿ ಜನಿಸಿದ ವೀರಸೇನರಾಜನು ತನ್ನ ಕಡೆಯ ಕಾಮಸೇನನೊಡನೆಯೂ ಲಕ್ಷಸೈನ್ಯದೊಡನೆಯೂ ಇವರ ಸಹಾಯಕ್ಕಾಗಿ ಅಲ್ಲಿಗೆ ಬಂದನು.

೫೨. ಜಯಚಂದ್ರನ ಕುಮಾರ ಲಕ್ಷಣನು ತನ್ನ ನೂತನಪತ್ನಿಯಾದ ಪದ್ಮಿನಿಯನ್ನು ಬಹು ಕಷ್ಟದಿಂದ ಅಗಲಿ ಏಳುಲಕ್ಷ ಸೈನ್ಯದೊಡನೆ ಅಲ್ಲಿಗೆ ಬಂದನು.

೫೩. ಭೀಮಸೇನನ ಅಂಶದವನಾದ ತಾಲನನೂ, ಯುಯುತ್ಸುವಿನ ಅಂಶದಿಂದ ಜನಿಸಿದ್ದ ಧಾನ್ಯಪಾಲನೂ, ಕುಂತೀಭೋಜಾಂಶನಾದ ಲಲ್ಲಸಿಂಹನೂ ಸಹ ಅಲ್ಲಿಗೆ ಬಂದರು.

ಆಹ್ಲಾದಶ್ಚ ಸಮಾಯಾತಃ ಕೃಷ್ಣಾಂಶೇನ ಸಮನ್ವಿತಃ ।
ಜಯಂತೇನ ಚ ವೈ ವೀರೋ ಲಕ್ಷಸೈನ್ಯಾನ್ವಿತೋ ಬಲೀ ॥ ೫೪ ॥

ಜಗನ್ನಾಯಕ ಏವಾಪಿ ಶೂರಾಯುತಸಮನ್ವಿತಃ ।
ಸಂಪ್ರಾಪ್ತೋ ಭಗದತ್ತಾಂಶೋ ಗೌತಮಾನ್ವಯಸಂಭವಃ ॥ ೫೫ ॥

ಅನ್ಯೇ ಚ ಕ್ಷುದ್ರಭೂಪಾಶ್ಚ ಸಹಸ್ರಾಢ್ಯಾಃ ಪೃಥಕ್‌ಪೃಥಕ್ ।
ಕುರುಕ್ಷೇತ್ರಂ ಪರಂ ಸ್ಥಾನಂ ಸಂಯಯುರ್ಮದವಿಹ್ವಲಾಃ ॥ ೫೬ ॥

ಮೂಲವರ್ಮಾ ಚ ನೃಪತಿಃ ಸಪುತ್ರೋ ಲಕ್ಷಸೈನ್ಯಪಃ ।
ನೃಪಂ ಪರಿಮಲಂ ಪ್ರಾಪ್ಯ ಸಂಯುಕ್ತೋ ದೇಹಲೀಪತೇಃ ॥ ೫೭ ॥

---

೫೪. ವೀರನೂ ಬಲಶಾಲಿಯೂ ಆದ ಆಹ್ಲಾದನು (ಈ ಆಹ್ಲಾದನ ವಿಚಾರವನ್ನು ಪುನಃ ಅರವತ್ತೊಂದನೇ ಶ್ಲೋಕದಲ್ಲಿ ಹೇಳಿದೆ. ಅವರ ಪಕ್ಷದಲ್ಲಿ ಇವನ ಪ್ರಾಧಾನ್ಯ.) ಕೃಷ್ಣಾಂಶ ಮತ್ತು ಜಯಂತಾಂಶನಾದ ಇಂದುಲ ಇವರ ಸಮೇತನಾಗಿ ಒಂದುಲಕ್ಷ ಸೈನ್ಯದೊಡನೆ ಬಂದನು.

೫೫. ಹಿಂದಿನಜನ್ಮದ ಭಗದತ್ತನ ಅಂಶದಿಂದ ಈಗ ಗೌತಮವಂಶದಲ್ಲಿ ಸಂಜಾತನಾಗಿದ್ದ ಜನನಾಯಕನೆಂಬ ರಾಜನು ತನ್ನ ಕಡೆಯ ಹತ್ತುಸಾವಿರ ಶೂರರೊಡನೆ ಕೂಡಿಕೊಂಡು ಇವರಿಗೆ ನೆರವಾಗಿ ಬಂದನು.

೫೬. ಇತರ ಸಣ್ಣಸಣ್ಣರಾಜರು ಸಾವಿರಾರುಮಂದಿ ಪ್ರತ್ಯೇಕ ಪ್ರತ್ಯೇಕವಾದ ತಮ್ಮ ಸೈನ್ಯದೊಡನೆ ಯುದ್ಧಮದದಿಂದ ಮುಂದುಗಾಣದವರಾಗಿ ಶ್ರೇಷ್ಠವಾದ ಕುರುಕ್ಷೇತ್ರ ಪ್ರದೇಶಕ್ಕೆ ಬಂದು ಸೇರಿದರು.

೫೭. ಮೂಲವರ್ಮರಾಜನು ತನ್ನ ಪುತ್ರನನ್ನು ಕರೆದುಕೊಂಡು ತನ್ನ ಒಂದುಲಕ್ಷ ಸೈನ್ಯದೊಡನೆ ಪರಿಮಳರಾಜನ ಜತೆಗೆ ಬಂದು ದೆಹಲೀಪತಿಯೊಡನೆ ಯುದ್ಧವನ್ನು ಮಾಡಲು ಸಿದ್ಧನಾದನು.

ಕೈಕಯೋ ಲಕ್ಷಸೇನಾಢ್ಯಃ ಸಪುತ್ರೋ ನೃಪತಿಃ ಸ್ವಯಂ ।
ನೃಪಂ ಪರಿಮಲಂ ಪ್ರಾಪ್ಯ ಸ ಯುದ್ಧಾರ್ಥಮುಪಸ್ಥಿತಃ ॥ ೫೮ ॥

ನೇತ್ರಸಿಂಹಶ್ಚ ನೃಪತಿಃ ಸವೀರೋ ಲಕ್ಷಸೈನ್ಯಪಃ ।
ಮಯೂರಧ್ವಜ ಏವಾಪಿ ಲಕ್ಷಪಃ ಶಶಿವಂಶಿನಂ ॥ ೫೯ ॥

ವೀರಸೇನಶ್ಚ ಲಕ್ಷಾಢ್ಯಃ ಸಪುತ್ರಶ್ಚಾಂದ್ರಿಪಕ್ಷಗಃ ।
ಲಕ್ಷಣಃ ಸಪ್ತಲಕ್ಷಾಢ್ಯೋ ಯುದ್ಧಾರ್ಥಂ ಸಮುಪಸ್ಥಿತಃ ॥ ೬೦ ॥

ಆಹ್ಲಾದೋ ಲಕ್ಷಸೈನ್ಯಾಢ್ಯಃ ಪಕ್ಷಗಶ್ಚಂದ್ರವಂಶಿನಃ ।
ದ್ವಿಲಕ್ಷಸಂಯುತೋ ರಾಜಾ ಚಂದ್ರವಂಶೋ ರಣೋನ್ಮುಖಃ ॥
ಏವಂ ಷೋಡಶಲಕ್ಷಾಢ್ಯಃ ಸ್ಥಿತಃ ಪರಿಮಲೋ ರಣೇ ॥ ೬೧ ॥

---

೫೮. ಕೇಕಯರಾಜನು ತನ್ನ ಮಗನೊಡಗೂಡಿ ತನ್ನ ಒಂದುಲಕ್ಷ ಸೈನ್ಯವನ್ನು ತೆಗೆದುಕೊಂಡು ತಾನೇ ಉತ್ಸಾಹದಿಂದ ಪರಿಮಳರಾಜನ ಪಕ್ಷವಹಿಸಿ ಯುದ್ಧ ಮಾಡಲು ನಿಂತನು.

೫೯. (ಇತರ ಸೈನ್ಯದ ಆಧಿಪತ್ಯ ವಿಚಾರವನ್ನು ತಿಳಿಸುತ್ತಾರೆ.) ವೀರರಾದ ನೇತ್ರಸಿಂಹ ಮಯೂರಧ್ವಜರು ಒಂದೊಂದುಲಕ್ಷ ಸೇನೆಗೆ ಅಧಿಪತಿಯಾಗಿರುತ್ತಾ ಚಂದ್ರವಂಶೋತ್ಪನ್ನನಾದ ಪರಿಮಳರಾಜನಿಗೆ ನೆರವಾದರು.

೬೦. ವೀರಸೇನ ಮಹಾರಾಜನು ಒಂದುಲಕ್ಷ ಸೈನ್ಯಕ್ಕೆ ಅಧಿಪತಿಯಾಗಿ ನಡೆಸುತ್ತಾ ಪುತ್ರರೊಡನೆ ಪರಿಮಳರಾಜನಿಗೆ ಸಹಾಯಮಾಡಿದನು. ಲಕ್ಷಣನು ಏಳು ಲಕ್ಷ ಸೈನ್ಯಕ್ಕೆ ಅಧಿಪತಿಯಾಗಿ ಯುದ್ಧಕ್ಕೆ ಹೊರಟನು.

೬೧. ಆಹ್ಲಾದನೂ ಸಹ ಒಂದುಲಕ್ಷ ಸೈನ್ಯದ ಒಡೆಯನಾಗಿ ಪರಿಮಳರಾಜನ ಪಕ್ಷದಲ್ಲಿ ಹೋರಾಡಿದನು. ಚಂದ್ರವಂಶದ ರಾಜನಾದ ಪರಿಮಳನು ತನ್ನ ಎರಡು ಲಕ್ಷ ಸೈನ್ಯಕ್ಕೆ ಅಧಿಪತಿಯಾಗಿ ಯುದ್ಧಕ್ಕೆ ಎದುರಿಸಿ ನಿಂತನು. ಮಿಕ್ಕ ಸಣ್ಣರಾಜರ ಸೇನೆಗಳೆಲ್ಲಾ ಒಂದುಲಕ್ಷ ಇದ್ದಿತು. ಈ ಪ್ರಕಾರ ಪರಿಮಳರಾಜನು ತನ್ನ ಪಕ್ಷದಲ್ಲಿ ಹದಿನಾರುಲಕ್ಷ ಸೈನ್ಯಸಮೇತ ರಣಸನ್ನದ್ಧನಾಗಿ ನಿಂತನು.

ಲಹರೋ ಭೂಪತಿಶ್ರೇಷ್ಠೋ ಲಕ್ಷಪಃ ಪುತ್ರಸಂಯುತಃ ।
ಮಹೀರಾಜಮುಪಾಗಮ್ಯ ಯುದ್ಧಾರ್ಥಂ ಸಮುಪಸ್ಥಿತಃ ॥ ೬೨ ॥

ಅಭಿನಂದನ ಏವಾಪಿ ಸಪುತ್ರೋ ಲಕ್ಷಸೈನ್ಯಪಃ ।
ಮಾಯಾವರ್ಮಾ ಚ ನೃಪತಿಃ ಸಪುತ್ರೋ ಲಕ್ಷಸೈನ್ಯಪಃ ॥ ೬೩ ॥

ನಾಗವರ್ಮಾ ಸಮಾಯಾತಃ ಸಪುತ್ರೋ ಲಕ್ಷಸೈನ್ಯಪಃ ।
ಮದ್ರಕೇಶಃ ಸಪುತ್ರಶ್ಚ ಲಕ್ಷಸೈನ್ಯೋ ರಣೋನ್ಮುಖಃ ॥ ೬೪ ॥

ಪೂರ್ಣಾಮಲಃ ಸಪುತ್ರಶ್ಚ ಲಕ್ಷಪಶ್ಚೈವ ಪಕ್ಷಗಃ ।
ಮಂಕಣಃ ಕಿಂನರೋ ನಾಮ ಸಪುತ್ರಸ್ತತ್ರ ಸಂಸ್ಥಿತಃ ॥ ೬೫ ॥

ಗಜರಾಜಃ ಸಮಾಯಾತೋ ಮಹೀರಾಜಂ ಹಿ ಲಕ್ಷಪಃ ।
ಧುಂಧುಕಾರಃ ಸಮಾಯಾತಃ ಪಂಚಲಕ್ಷಪತಿಃ ಸ್ವಯಂ ॥ ೬೬ ॥

---

೬೨. ಇನ್ನು ಪೃಥ್ವೀರಾಜನ ಪಕ್ಷದ ಸೇನಾಪತಿಗಳ ವಿಚಾರವನ್ನು ಹೇಳುತ್ತಾರೆ. ರಾಜಶ್ರೇಷ್ಠನಾದ ಲಹರನು ತನ್ನ ಮಕ್ಕಳನ್ನೊಡಗೊಂಡು ತನ್ನ ಒಂದುಲಕ್ಷ ಸೈನ್ಯಕ್ಕೆ ಅಧಿಪನಾಗಿ ಯುದ್ಧಮಾಡುವುದಕ್ಕೆ ಸಿದ್ಧನಾಗಿ ನಿಂತನು.

೬೩. ಅಭಿನಂದನರಾಜನು ತನ್ನ ಮಕ್ಕಳನ್ನೊಡಗೊಂಡು ಒಂದುಲಕ್ಷ ಸೇನೆಗೆ ಅಧಿಪತಿಯಾದನು. ಮಾಯಾವರ್ಮರಾಜನು ತನ್ನ ಮಕ್ಕಳೊಡನೆ ಒಂದುಲಕ್ಷ ಸೈನ್ಯಕ್ಕೆ ಅಧಿಪನಾಗಿ ನಿಂತನು.

೬೪. ನಾಗವರ್ಮನು ತನ್ನ ಮಕ್ಕಳ ಸಮೇತನಾಗಿ ಒಂದುಲಕ್ಷ ಸೇನೆಗೆ ಒಡೆಯನಾಗಿ ನಿಂತನು. ಮದ್ರಕೇಶನು ತನ್ನ ಮಕ್ಕಳೊಡಗೂಡಿ ಒಂದುಲಕ್ಷ ಸೇನೆಗೆ ಅಧಿಪತಿಯಾಗಿ ಯುದ್ಧೋತ್ಸಾಹದಿಂದ ನಿಂತನು.

೬೫. ಪೂರ್ಣಾಮಲನು ತನ್ನ ಮಕ್ಕಳೊಡಗೂಡಿ ಲಕ್ಷಸೇನೆಗಧಿಪನಾಗಿ ಪೃಥ್ವೀರಾಜನ ಪಕ್ಷವನ್ನು ವಹಿಸಿದನು. ತನ್ನ ಮಗನನ್ನೂ ಕರೆದುಕೊಂಡು ಮಂಕಣ ಕಿನ್ನರನೆಂಬುವನು ಸೇನಾಸಮೇತ ಅಲ್ಲಿಗೆ ಬಂದನು.

೬೬. ಗಜಪತಿರಾಜನು ಒಂದುಲಕ್ಷ ಸೇನೆಗೆ ಅಧಿಪತಿಯಾಗಿ ಪೃಥ್ವೀರಾಜನ ಪಕ್ಷವಹಿಸಿ ನಿಂತನು. ಧುಂಧುಕಾರನು ಐದುಲಕ್ಷ ಸೇನೆಗೆ ಅಧಿಪತಿಯಾದನು.

ಪುತ್ರಃ ಕೃಷ್ಣಕುಮಾರಸ್ಯ ಭಗದತ್ತಃ ಸಮಾಗತಃ ।
ತ್ರಿಲಕ್ಷಬಲಸಂಯುಕ್ತೋ ಮಹೀರಾಜಂ ಮಹೀಪತಿಂ ॥ ೬೭ ॥

ದಲವಾಹನಪುತ್ರಶ್ಚ ದೇಶಗೋಪಾಲಸಂಸ್ಥಿತಃ ।
ಅಂಗದಸ್ತತ್ರ ಸಂಪ್ರಾಪ್ತಃ ಸಾಯುತೋ ದೇವಕೀಪ್ರಿಯಃ ॥ ೬೮ ॥

ಮಹೀರಾಜಮುಪಾಗಮ್ಯ ಯುದ್ಧಾರ್ಥಂ ಸಮುಪಸ್ಥಿತಃ ।
ಕಲಿಂಗಶ್ಚ ನೃಪಃ ಪ್ರಾಪ್ತಸ್ತ್ರಿಕೋಣಶ್ಚ ತಥೈವ ಚ ॥
ಶ್ರೀಪತಿಶ್ಚ ತಥಾ ರಾಜಾ ಶ್ರೀತಾರಶ್ಚ ತಥಾ ಗತಃ ॥ ೬೯ ॥

ಮುಕುಂದಶ್ಚ ಸುಕೇತುಶ್ಚ ರುಹಿಲೋ ಗುಹಿಲಸ್ತಥಾ ।
ಇಂದುವಾರಶ್ಚ ಬಲವಾಞ್ಜಯಂತಶ್ಚ ತಥಾವಿಧಃ ॥
ಸರ್ವೇ ದಶಸಹಸ್ರಾಢ್ಯಾ ಮಹೀರಾಜಮುಪಸ್ಥಿತಾಃ ॥ ೭೦ ॥

ಮಹೀರಾಜಸ್ಯ ಪಕ್ಷೇ ತು ಸಹಸ್ರಂ ಕ್ಷುದ್ರಭೂಮಿಪಾಃ ।
ತೇ ತು ಸಾಹಸ್ರಸೇನಾಢ್ಯಾ ಮಹೀರಾಜಮುಪಸ್ಥಿತಾಃ ॥ ೭೧ ॥

---

೬೭. ಕೃಷ್ಣಕುಮಾರನ ಪುತ್ರನಾದ ಭಗದತ್ತನು ತನ್ನ ಮೂರುಲಕ್ಷ ಸೇನೆಯೊಡನೆ ಪೃಥ್ವೀರಾಜನ ಸಮೀಪಕ್ಕೆ ಬಂದನು.

೬೮. ಗೋಪಾಲ ದೇಶದಲ್ಲಿ ರಾಜನಾಗಿದ್ದ ದಲವಾಹನನಮಗನೂ, ದೇವಕಿಗೆ ಪ್ರೀತಿಪಾತ್ರನೂ ಆದ ಅಂಗದನೆಂಬುವನು ತನ್ನ ಹತ್ತುಸಾವಿರಮಂದಿ ಶೂರರೊಡನೆ ಪೃಥ್ವೀರಾಜನ ಪಕ್ಷ ಸೇರಿ ಯುದ್ಧಮಾಡುವುದಕ್ಕಾಗಿ ಬಂದನು.

೬೯-೭೦. ಕಲಿಂಗರಾಜ, ತ್ರಿಕೋಣದೇಶದರಾಜ, ಶ್ರೀಪತಿರಾಜ, ಶ್ರೀತಾರ ರಾಜ, ಮುಕುಂದ, ಸುಕೇತು, ರುಹಿಲ, ಗುಹಿಲ, ಬಲಶಾಲಿಯಾದ ಇಂದುವಾರ, ಜಯಂತ ಇವರುಗಳೆಲ್ಲರೂ ತಮ್ಮ ತಮ್ಮ ಕಡೆಯ ಹತ್ತು ಹತ್ತುಸಾವಿರ ಮಂದಿ ಸೈನಿಕರೊಡನೆ ಪೃಥ್ವೀರಾಜನ ಪಕ್ಷಕ್ಕೆ ಸೇರಲು ಬಂದಿದ್ದರು.

೭೧. ಹೀಗೆ ಪೃಥ್ವೀರಾಜನಿಗೆ ವಿಶ್ವಾಸಪಾತ್ರರಾದ ಸಾವಿರಾರು ಸಣ್ಣಸಣ್ಣ ರಾಜರುಗಳು ತಮ್ಮ ತಮ್ಮ ಕಡೆಯ ಸಾವಿರಾರು ಸೈನಿಕರ ಸಮೇತವಾಗಿ ಪೃಥ್ವೀ ರಾಜನ ಪಕ್ಷವಹಿಸಲು ಬಂದಿದ್ದರು.

ತೇಷಾಂ ಮಧ್ಯೇ ಚ ನೃ ಭೂಪಾನ್ ದ್ವಿಶತಾನ್ ದೇಹಲೀಂ ಪ್ರತಿ ।
ಸಸೈನ್ಯಾನ್ ಪ್ರೇಷಯಾಮಾಸ ರಾಷ್ಟ್ರರಕ್ಷಣಹೇತವೇ ॥
ಏವಂ ಸ ದೇಹಲೀರಾಜಶ್ಚ ಚತುರ್ವಿಂಶತಿಲಕ್ಷಪಃ ॥ ೭೨ ॥

ಯುದ್ಧಮಷ್ಟಾದಶಾಹಾನಿ ಸಂಜಾತಂ ಸರ್ವಸಂಕ್ಷಯಂ ।
ಶೃಣು ಯುದ್ಧಕಥಾಂ ರಮ್ಯಾಂ ಭೃಗುವರ್ಯ ಸುವಿಸ್ತರಾತ್ ॥ ೭೩ ॥

ಮಾರ್ಗಕೃಷ್ಣದ್ವಿತೀಯಾಯಾಂ ಮಹೀರಾಜೋ ಮಹಾಬಲಃ
ಆಹೂಯ ಲಹರಂ ಭೂಪಂ ವಚನಂ ಪ್ರಾಹ ನಿರ್ಭಯಃ ॥ ೭೪ ॥

ಭವಾನ್ಸಪುತ್ರಃ ಸೇನಾಢ್ಯೋ ಧುಂಧುಕಾರೇಣ ರಕ್ಷಿತಃ ।
ಚಾಮುಂಡೇನ ಯುತೋ ಯುದ್ಧೇ ಗಂತುಮರ್ಹತಿ ಸತ್ತಮ ॥
ಇತಿ ಶ್ರುತ್ವಾ ಯಯೌ ಶೀಘ್ರಂ ಕುರುಕ್ಷೇತ್ರೇ ಮಹಾರಣೇ ॥ ೭೫ ॥

---

೭೨. ಹೀಗೆ ಬಂದ ಇವರುಗಳಲ್ಲಿ ಇನ್ನೂರುಮಂದಿ ರಾಜರನ್ನು ಅವರ ಸೇನೆಯೊಡನೆ ತನ್ನ ರಾಷ್ಟ್ರ ರಕ್ಷಣೆಗಾಗಿ ದೆಹಲೀಪಟ್ಟಣಕ್ಕೆ ಕಳುಹಿಸಿದನು. ಹೀಗೆ ಪೃಥ್ವೀರಾಜನಕಡೆ ಇಪ್ಪತ್ತನಾಲ್ಕು ಲಕ್ಷಸೇನೆ ಒಟ್ಟುಗೂಡಿತು.

೭೩. ಹೀಗೆ ಒಟ್ಟುಗೂಡಿದ ಎರಡುಪಕ್ಷದ ಸೇನೆಗಳಿಗೂ ಘೋರಯುದ್ಧವು ಹದಿನೆಂಟು ದಿನಗಳು ನಡೆಯಿತು. ಎಲೈ ಭೃಗುಕುಲೋತ್ಪನ್ನನೇ ! ರಮ್ಯವಾದ ಆ ಯುದ್ಧ ವೃತ್ತಾಂತವನ್ನು ವಿಸ್ತಾರವಾಗಿ ಹೇಳುವೆನು ಕೇಳು.

೭೪. ಮಹಾಬಲ ಸಮನ್ವಿತನಾದ ಪೃಥ್ವೀರಾಜನು ಮಾರ್ಗಶಿರ ಬಹುಳ ಬಿದಿಗೆಯದಿವಸ ಲಹರರಾಜನನ್ನು ಕರೆಯಿಸಿ ಅವನಿಗೆ ನಿರ್ಭಯನಾಗಿ ಈ ಮಾತನ್ನು ಹೇಳಿದನು.

೭೫. " ಅಯ್ಯಾ ಶೂರಶ್ರೇಷ್ಠನೇ ! ನೀನು ನಿನ್ನಮಕ್ಕಳ ಸಮೇತನಾಗಿಯೂ ಚಾಮುಂಡನ ಸಮೇತನಾಗಿಯೂ ದುಂಧುಕಾರನ ಮುಂದಾಳುತನದಲ್ಲಿ ಯುದ್ಧ ಮಾಡಲು ಹೊರಡು " ಎಂದು ಅಪ್ಪಣೆಮಾಡಿದನು. ಆ ಲಹರರಾಜನು ಆ ಮಾತನ್ನು ಕೇಳಿದೊಡನೆ ಅದರಂತೆ ಕುರುಕ್ಷೇತ್ರದ ಮಹಾಯುದ್ಧಭೂಮಿಗೆ ಶೀಘ್ರವಾಗಿ ಪ್ರಯಾಣಮಾಡಿದನು.

ತದಾ ಪರಿಮಲೋ ರಾಜಾ ಮಯೂರಧ್ವಜಮೇವ ಹಿ ।
ಸಮಾಹೂಯ ವಚಃ ಪ್ರಾಹ ಶೃಣು ಪಾರ್ಥಿವಸತ್ತಮ ॥ ೭೬ ॥

ಕೃಷ್ಣಾಂಶೇನ ಜಯಂತೇನ ದೇವಸಿಂಹೇನ ರಕ್ಷಿತಃ ।
ಸ ಭವಾನ್ ಲಕ್ಷಸೈನ್ಯಾಢ್ಯೋ ಗಂತುಮರ್ಹತಿ ವೈ ರಣೇ ॥ ೭೭ ॥

ಇತಿ ಶ್ರುತ್ವಾ ತು ವಚನಂ ಮಯೂರಧ್ವಜ ಏವ ಹಿ ।
ಲಕ್ಷಸೈನ್ಯಾನ್ವಿತಃ ಪ್ರಾಪ್ತೋ ಲಹರಂ ನೃಪತಿಂ ಪ್ರತಿ ॥ ೭೮ ॥

ತಯೋಶ್ಚಾಸೀನ್ಮಹದ್ಯುದ್ಧಂ ಸೇನಯೋರುಭಯೋ ರಣೇ ।
ಸೇನಾ ತು ಲಕ್ಷವೀರಸ್ಯ ತತ್ರ ಯುದ್ಧೇ ಪ್ರಕೀರ್ತಿತಾ ॥ ೭೯ ॥

ಏಕೋ ರಥೋ ಗಜಾಸ್ತತ್ರ ಜ್ಞೇಯಾಃ ಪಂಚಶತಂ ರಣೇ ।
ಹಯಾಶ್ಚ ಪಂಚಸಾಹಸ್ರಾ ಪತ್ತಯಸ್ತದ್ಗುಣಾ ದಶ ॥
ಏತೇ ಸೈನ್ಯಾ ನರಾ ಜ್ಞೇಯಾ ಸೈನ್ಯಪಾಂಶ್ಚ ಶೃಣುಷ್ವ ಭೋಃ ॥ ೮೦ ॥

---

೭೬. ಅತ್ತಲಾಗಿ ಪರಿಮಳರಾಜನು ಮಯೂರಧ್ವಜನೆಂಬ ರಾಜನನ್ನು ಕರೆಯಿಸಿ ಆಪ್ತಾಲೋಚನೆ ಮಾಡುವನಾಗಿ ಇಂತೆಂದನು.

೭೭. "ಎಲೈ ರಾಜಶ್ರೇಷ್ಠನೇ ! ಕೃಷ್ಣಾಂಶ, ಜಯಂತ, ದೇವಸಿಂಹ ಇವರ ರಕ್ಷಣೆಯಲ್ಲಿ ನೀನು ಒಂದುಲಕ್ಷ ಸೇನೆಯನ್ನು ತೆಗೆದುಕೊಂಡು ಈಗಲೇ ಯುದ್ಧಕ್ಕೆ ಹೊರಡು" ಎಂದು ಅಪ್ಪಣೆಮಾಡಿದನು.

೭೮. ಪರಿಮಳರಾಜನು ಹೇಳಿದ ಮಾತಿನ ಪ್ರಕಾರ ಮಯೂರಧ್ವಜರಾಜನು ತನ್ನ ಒಂದುಲಕ್ಷ ಸೈನ್ಯವನ್ನು ತೆಗೆದುಕೊಂಡು ಲಹರಮಹಾರಾಜನ ಮೇಲೆ ಯುದ್ಧಕ್ಕೆ ಹೊರಟನು

೭೯. ಆ ಇಬ್ಬರು ರಾಜರಿಗೂ, ಅವರ ಸೈನ್ಯಗಳಿಗೂ ರಣರಂಗದಲ್ಲಿ ಮಹಾ ಯುದ್ಧವೊದಗಿತು. ಆ ಯುದ್ಧದಲ್ಲಿ ಎರಡು ಪಕ್ಷದಲ್ಲೂ ಒಂದೊಂದುಲಕ್ಷ ಸೇನೆ ಯಿದ್ದಿತು.

೮೦. ಆ ಸೇನಾವ್ಯೂಹರಚನಾಕ್ರಮವು ಹೀಗಿದ್ದಿತು:. ಒಂದು ರಥ, ಐನೂರು ಆನೆ, ಐದುಸಾವಿರ ಕುದುರೆ, ಅದರ ಹತ್ತರಷ್ಟು ಕಾಲಾಳು ಇಷ್ಟು ಒಂದುಸೈನ್ಯದಲ್ಲಿದ್ದ ಮನುಷ್ಯರ ಪರಿಮಾಣವನ್ನು ಹೇಳಿದಂತಾಯಿತು. ಇನ್ನು ಸೇನಾಪತಿಗಳ ವಿವರವನ್ನು ಹೇಳುವೆನು ಕೇಳು.

ದಶಾನಾಂ ಪಚ್ಚರಾಣಾಂ ಚ ಪತಿರ್ನಾಮ್ನಾ ಸ ಪತ್ತಿಪಃ ।
ಪಂಚಾನಾಂ ಚ ಹಯಾನಾಂ ಚ ಪತಿರ್ನಾಮ್ನಾ ಸ ಗುಲ್ಮಪಃ ॥ ೮೧ ॥

ಪಂಚಾನಾಂ ಚ ಗಜಾನಾಂ ಚ ಪತಿರ್ನಾಮ್ನಾ ಗಜಾಧಿಪಃ ।
ಏತ್ತೈಃ ಸಾರ್ಧಂ ರಥೀ ಜ್ಞೇಯೋ ರಣೇಽಸ್ಮಿನ್ ದಾರುಣೇ ಕಲೌ ॥ ೮೨ ॥

ಉಷ್ಟ್ರಾರೂಢಾಃ ಸ್ಮೃತಾ ದೂತಾಶ್ಚತ್ವಾರಿಂಶಚ್ಚ ತದ್ಬಲೇ ।
ಶತಘ್ನ್ಯಸ್ತತ್ರ ಸಾಹಸ್ರಾಸ್ತೇಷಾಂ ಮಧ್ಯೇ ಪೃಥಕ್‌ಪೃಥಕ್ ॥
ಷಟ್ತ್ರಿಂಶದ್ವೈ ಪದಚರಾಸ್ತೇಷಾಂ ಕರ್ಮಾಣಿ ಮೇ ಶೃಣು ॥ ೮೩ ॥

ದಶ ಗೋಲಕದಾತಾರೋ ದಶ ತತ್ಪುಷ್ಟಿಕಾರಕಾಃ ।
ದಶ ಚಾರ್ದ್ರಕರಾಸ್ತಾ ವೈ ತ್ರಯಸ್ತೇ ವಹ್ನಿದಾಯಿನಃ ॥
ತ್ರಯೋ ದೃಷ್ಟಿಕರಾ ಜ್ಞೇಯಾಸ್ತ್ರಿಯಾಮೇಷು ಪೃಥಕ್‌ಪೃಥಕ್ ॥ ೮೪ ॥

---

೮೧. ಹತ್ತು ಪಾವಚಾರಿಗಳಿಗೆ ಅಧಿಪತಿಯಾದವನಿಗೆ ಪತ್ತಿಪನೆಂದು ಹೆಸರು. ಐದುಕುದುರೆಗಳಿಗೆ ಅಧಿಪತಿಯಾದವನಿಗೆ ಗುಲ್ಮಪನೆಂದು ಹೆಸರು.

೮೨. ಐದು ಆನೆಗಳಿಗೆ ಅಧಿಪತಿಯಾದವನಿಗೆ ಗಜಾಧಿಪನೆಂದು ಹೆಸರು. ಕಲಿಯುಗ ಭಯಂಕರವಾದ ಈ ಯುದ್ಧದಲ್ಲಿ ಈ ಪತ್ತಿಪ, ಗುಲ್ಮಪ, ಗಜಾಧಿಪ ಇವರುಗಳೊಡನೆ ಒಬ್ಬ ರಥಿಕ ಇರುತ್ತಿದ್ದನು.

೮೩. ನಲವತ್ತುಮಂದಿ ಒಂಟೆಯ ಸವಾರರು ಈ ಸೇನೆಯ ದೂತಕಾರ್ಯ ನಿರತರಾಗಿದ್ದರು. ಆ ಒಂದೊಂದು ಸೈನ್ಯದಲ್ಲಿಯೂ ಬೇರೆಬೇರೆಯಾಗಿ ಸಾವಿರ ಸಾವಿರ ಫಿರಂಗಿಳು ಇದ್ದುವು. ಆ ಸಾವಿರ ಸಾವಿತ ಫಿರಂಗಿಯ ಒಂದೊಂದು ಸೇನೆಗೂ ಮೂವತ್ತಾರುಜನ ಪಾದಚಾರಿಗಳಿದ್ದರು. ಅವರ ಕೆಲಸಗಳನ್ನು ತಿಳಿಸುವೆನು.

೮೪. ಅವರಲ್ಲಿ ಹತ್ತುಮಂದಿ ಗುಂಡುಗಳನ್ನು ಹಾಕತಕ್ಕವರು. ಇನ್ನು ಹತ್ತು ಮಂದಿ ಅದಕ್ಕೆ ಮದ್ದುತುಂಬತಕ್ಕವರು. ಇನ್ನು ಹತ್ತುಮಂದಿ ಗುಂಡುಹೊಡೆದು ಹೊಡೆದು ಬಿಸಿಯಾದಾಗ ಅದನ್ನು ತಣ್ಣೀರಿನಿಂದ ತೊಳೆದು ತಣ್ಣಗೆ ಮಾಡತಕ್ಕವರು. ಮೂರುಜನರು ಅದಕ್ಕೆ ಬೆಂಕಿತೋರಿಸತಕ್ಕವರು. ಮೂರುಜನರು ಗುರಿನೋಡು ವವರು.

ಶೇಷಾಃ ಶೂದ್ರಾಸ್ತು ಸೇನಾನಾಂ ಶೂರಕೃತ್ಯಪರಾಯಣಾಃ ।
ಏವಂ ಚ ಲಕ್ಷವೀರಾಣಾಂ ಸೇನಾ ತತ್ರ ಪ್ರಕೀರ್ತಿತಾ ॥ ೮೫ ॥

ತತ್ರಾಸೀತ್ತುಮುಲಂ ಯುದ್ಧಂ ಧರ್ಮೇಣ ಚ ಸಮಂತತಃ ।
ಪ್ರಾತಃಕಾಲಾತ್ಸಮಾರಭ್ಯ ಮಧ್ಯಾಹ್ನಂ ಸೈನ್ಯಯೋರ್ದ್ವಯೋಃ ॥ ೮೬ ॥

ತತ್ಪಶ್ಚಾದ್ಯಾಮಮಾತ್ರೇಣ ಸೈನ್ಯಪಾ ಯುದ್ಧಮಾಗತಾಃ ।
ತತ್ಪಶ್ಚಾಚ್ಚ ಮಹಾಶೂರಾ ಧುಂಧುಕಾರಾದಯೋ ಬಲಾಃ ॥ ೮೭ ॥

ಯಾಮಮಾತ್ರಂ ಚ ಯುಂದ್ಧಾಯ ಸಂಸ್ಥಿತಾ ರಣಮೂರ್ಧನಿ ।
ಚಾಮುಂಡೇನ ಚ ಕೃಷ್ಣಾಂಶೋ ಧುಂಧುಕಾರೇಣ ಚೇಂದುಲಃ ॥ ೮೮ ॥

ಭಗದತ್ತೇನ ವೈ ದೇವಃ ಕೃತವಾನ್ ಯುದ್ಧಮುತ್ತಮಂ
ಸಾಯಂಕಾಲೇ ತು ಸಂಪ್ರಾಪ್ತೇ ಸರ್ವೇ ಶೂರಾಃ ಕ್ಷಯಂ ಗತಾಃ ॥ ೮೯ ॥

---

೮೫. ಇಷ್ಟುಜನರೂ ಸೇರಿ ಒಂದು ಗುಂಪಿನವರೆನಿಸುವರು. ಇವರು ರಾತ್ರಿಗೆ ಬೇರೆ ; ಹಗಲಿಗೆ ಬೇರೆ ಎಂದು ಸರದಿಯ ಪ್ರಕಾರ ಇರುತ್ತಿದ್ದರು. ಅನೇಕ ಶೂರರು ಸೈನ್ಯದ ಉಳಿದ ಕಾರ್ಯಗಳಲ್ಲಿ ಆಸಕ್ತರಾಗಿರುತ್ತಿದ್ದರು. ಈ ಪ್ರಕಾರ ಒಂದುಸೇನೆಯನ್ನು ಒಂದುಲಕ್ಷ ವೀರರನ್ನೊಳ್ಳ ಹಾಗೆ ಏರ್ಪಡಿಸಿದ್ದರು.

೮೬ ಅಲ್ಲಿ ಸರ್ವತ್ರ ಧರ್ಮಪ್ರಕಾರವಾಗಿ ಬೆಳಗಿನಿಂದ ಮಧ್ಯಾಹ್ನದವರೆಗೂ ಎರಡು ಸೈನ್ಯಕ್ಕೂ ಪರಸ್ಪರ ತುಮುಲಯುದ್ಧವು ನಡೆಯುತ್ತಾ ಇದ್ದಿತು.

೮೭-೮೮. ಆಮೇಲೆ ಒಂದುಜಾವದ ಹೊತ್ತಿನವರೆಗೆ ಸೇನಾಪತಿಗಳು ಯುದ್ಧ ಮಾಡುವರು. ಆದಾದಮೇಲೆ ಒಂದುಜಾವದ ವರೆಗೆ ಮಹಾಶೂರರೂ, ಯುದ್ಧದಲ್ಲಿ ಬಲಶಾಲಿಗಳೂ ಆದ ಧುಂಧುಕಾರ ಮೊದಲಾದವರು ಯುದ್ಧಕ್ಕೆ ಬಂದು ನಿಲ್ಲುವರು.

೮೯. ಚಾಮುಂಡನನ್ನು ಕೃಷ್ಣಾಂಶನೂ, ದುಂಧುಕಾರನನ್ನು ಇಂದುಲನೂ, ಭಗದತ್ತನನ್ನು ದೇವಸಿಂಹನೂ, ಎದುರಿಸಿ ಬಹು ಪರಾಕ್ರಮದಿಂದ ಯುದ್ಧಮಾಡಿದರು. ಸಾಯಂಕಾಲದ ವೇಳೆಗೆ ಆ ಎಲ್ಲ ಶೂರರು ತಮ್ಮ ತಮ್ಮ ಶಿಬಿರಗಳಿಗೆ ಹೋಗುತ್ತಲಿದ್ದರು.

ಕೃಷ್ಣಾಂಶಸ್ತತ್ರ ಚಾಮುಂಡಂ ಜಿತ್ವಾ ತು ಲಹರಾತ್ಮಜಾನ್ ।
ಷೋಡಶೈವ ಜಘಾನಾಶು ಘಟೀಮಾತ್ರೇಣ ವೀರ್ಯವಾನ್ ॥
ದಧ್ಮೌ ಶಂಖಂ ಪ್ರಸನ್ನಾತ್ಮಾ ಲಕ್ಷಣಾಂತಮುಪಾಯಯೌ ॥ ೯೦ ॥

ಚಾಮುಂಡೋ ಧುಂಧುಕಾರಶ್ಚ ಭಗದತ್ತೋ ಯುತಃ ಶತೈಃ ।
ಮಹೀರಾಜಮುಪಾಗಮ್ಯ ಸುಷುಪುರ್ನಿಶಿ ನಿರ್ಭಯಾಃ ॥ ೯೧ ॥

ಇಂದುಲೋ ದೇವಸಿಂಹಶ್ಚ ಸಹಸ್ರೈಃ ಸಂಯುತೌ ಮುದಾ ।
ಗತ್ವಾ ಪರಿಮಲಂ ಭೂಪಂ ರಾತ್ರೌ ಸುಷುಪತುಸ್ತದಾ ॥ ೯೨ ॥

ಪ್ರಾತಃಕಾಲೇ ತು ಸಂಪ್ರಾಪ್ತೇ ತೃತೀಯಾಯಾಂ ಭಯಂಕರೇ ।
ಮಹೀರಾಜಸ್ತದಾಹೂಯ ನೃಪಂ ಗಜಪತಿಂ ಬಲೀ ॥ ೯೩ ॥

ವಚನಂ ಪ್ರಾಹ ಭೋ ರಾಜಂಸ್ತ್ವಂ ತ್ರಿವೀರೈಃ ಸುರಕ್ಷಿತಃ ।
ಸ್ವಕೀಯೈರ್ಲಕ್ಷಸೈನ್ಯೈಶ್ಚ ಗಂತುಮರ್ಹಸಿ ವೈ ರಣೇ ॥ ೯೪ ॥

---

೯೦ ಶೂರನಾದ ಕೃಷ್ಣಾಂಶನು ಚಾಮುಂಡನನ್ನೂ, ಲಹರರಾಜನ ಕುಮಾರರಲ್ಲಿ ಹದಿನಾರು ಮಂದಿಯನ್ನೂ ಗೆದ್ದು ಒಂದುಕ್ಷಣದೊಳಗಾಗಿ ಕೊಂದುಬಿಟ್ಟು ಸಂತೋಷದ ಮನಸ್ಸಿನಿಂದ ಶಂಖವನ್ನು ಧ್ವನಿಮಾಡಿ, ಲಕ್ಷಣನ ಸಮೀಪಕ್ಕೆ ಬಂದನು.

೯೧. ಚಾಮುಂಡ, ಧುಂಧುಕಾರ, ಭಗದತ್ತ ಇವರು ನೂರಾರುಮಂದಿ ಯೊಡಗೂಡಿ ಅಂಗರಕ್ಷಣೆಗಾಗಿ ಪೃಥ್ವೀರಾಜನ ಸಮೀಪಕ್ಕೆ ಬಂದು ಆ ರಾತ್ರಿಯನ್ನು ನಿರ್ಭಯವಾಗಿ ಕಳೆದರು.

೯೨. ಇಂದುಲ, ದೇವಸಿಂಹ ಇವರು ಸಂತೋಷದಿಂದ ಸಾವಿರಾರುಮಂದಿ ಯೊಡಗೂಡಿ ಅಂಗರಕ್ಷಣೆಗೆ ಪರಿಮಲರಾಜನ ಬಳಿಗೆ ಹೋಗಿ ಆ ರಾತ್ರಿಯನ್ನು ನಿರ್ಭಯವಾಗಿ ಕಳೆದರು.

೯೩-೯೪. ಮೂರನೆಯದಿನ ಮಾರ್ಗಶಿರ ಬಹುಳ ತದಿಗೆ ಆದಿನ ಬೆಳಗಾಗುತ್ತಲೇ ಬಲಶಾಲಿಯಾದ ಪೃಥ್ವೀರಾಜನು ಗಜಪತಿಮಹಾರಾಜನನ್ನು ಕರೆಯಿಸಿ, "ಎಲೈ ರಾಜಶ್ರೇಷ್ಠನೇ! ನೀನು ಈ ಮೂವರು ವೀರರಿಂದ ರಕ್ಷಣೆಹೊಂದುತ್ತಾ ನಿನ್ನ ಒಂದು ಲಕ್ಷ ಸೈನ್ಯದೊಡನೆ ಈದಿನ ಯುದ್ಧಕ್ಕೆ ಹೋಗಬೇಕು" ಎಂದು ಹೇಳಿದನು.

ತದಾ ಪರಿಮಲೋ ಭೂಪೋ ನೇತ್ರಸಿಂಹಂ ಮಹೀಪತಿಂ ।
ಯುದ್ಧಾಯಾಜ್ಞಾಪಯಾಮಾಸ ಕೃಷ್ಣಾಂಶಾದ್ಯೈಃ ಸುರಕ್ಷಿತಂ ॥ ೯೫ ॥

ತಯೋಃಶ್ಚಾಸೀನ್ಮಹದ್ಯುದ್ಧಂ ಸೇನಯೋರುಭಯೋಃ ಕ್ರಮಾತ್ ।
ಹಯಾ ಹಯೈಃ ಕ್ಷಯಂ ಜಗ್ಮುರ್ಗಜಾಶ್ಚೈವ ತಥಾ ಗಜೈಃ ॥
ಪಚ್ಚುರಾಃ ಪಚ್ಚುರೈಃ ಸಾರ್ಧಂ ಶತಘ್ನ್ಯಶ್ಚ ಶತಘ್ನಿಭಿಃ ॥ ೯೬ ॥

ಅಪರಾಹ್ಣೇ ಮುನಿಶ್ರೇಷ್ಠ ನೇತ್ರಸಿಂಹೋ ಮಹಾಬಲಃ ।
ಮಹಾಗಜಂ ಗಜಪತಿಂ ಗತ್ವಾ ಯುದ್ಧಮಚೀಕರತ್ ॥ ೯೭ ॥

ಪರಸ್ಪರಂ ಚ ವಿರಥೌ ಸಂಛಿನ್ನಧನುಷೌ ತದಾ ।
ಖಡ್ಗಹಸ್ತೌ ಮಹೀಂ ಪ್ರಾಪ್ಯ ಚಕ್ರತೂ ರಣಮುಲ್ಬಣಂ ॥
ಅನ್ಯೋನ್ಯೇನ ವಧಂ ಕೃತ್ವಾ ಸ್ವರ್ಗಲೋಕಮುಪಾಗತೌ ॥ ೯೮ ॥

---

೯೫. ಇತ್ತ ಪರಿಮಲರಾಜನು ತನ್ನ ಪಕ್ಷದ ನೇತ್ರಸಿಂಹನೆಂಬ ರಾಜನನ್ನು ಕರೆಯಿಸಿ “ ನೀನು ಕೃಷ್ಣಾಂಶಾದಿಗಳ ರಕ್ಷಣೆಯಿಂದ ಯುದ್ಧಕ್ಕೆ ಹೊರಡು ” ಎಂದು ಹೇಳಿದನು.

೯೬. ಆ ವೀರರಿಬ್ಬರಿಗೂ ಅವರಕಡೆಯ ಸೇನೆಗಳೆರಡಕ್ಕೂ ಘೋರಯುದ್ಧವು ನಡೆಯತೊಡಗಿ ಕ್ರಮವಾಗಿ ಕುದುರೆಯವರು ಕುದುರೆಯವರೊಡನೆಯೂ, ಆನೆಗಳು ಆನೆಗಳೊಡನೆಯೂ, ಪದಾತಿಸೇನೆಗಳು ಪದಾತಿಸೇನೆಯೊಡನೆಯೂ, ಫಿರಂಗಿಸೇನೆಯವರು ಫಿರಂಗಿಸೇನೆಯವರೊಡನೆಯೂ ಘೋರವಾದ ಯುದ್ಧಮಾಡಿ ಎರಡು ಸೈನ್ಯವೂ ನಾಶವಾದವು.

೯೭. ಅಯ್ಯಾ ಮುನಿಶ್ರೇಷ್ಠನೇ ! ಮಧ್ಯಾಹ್ನದಮೇಲೆ ಮಹಾಬಲಶಾಲಿಯಾದ ನೇತ್ರಸಿಂಹನು ದೊಡ್ಡ ಆನೆಯನ್ನೇರಿದ್ದ ಗಜಪತಿಯನ್ನು ಎದುರಿಸಿ ಹೋಗಿ ಯುದ್ಧಮಾಡಿದನು.

೯೮-೯೯. ನೇತ್ರಸಿಂಹ, ಗಜಪತಿ, ಇವರು ಯುದ್ಧದಲ್ಲಿ ಒಬ್ಬರನ್ನೊಬ್ಬರು ಘಾತಿಸಿ ಧನುಸ್ಸು ಮುರಿದುಹೋಗಿ ರಥ ವಿಹೀನರೂ ಆಗಿ, ಕೈಯ್ಯಲ್ಲಿ ಕತ್ತಿಯನ್ನು

ಇಂದುಲಸ್ತಂ ತು ಚಾಮುಂಡಂ ದೇವ್ಯೋ ವೈ ಧುಂಧುಕಂ ತಥಾ ।
ಕೃಷ್ಣಾಂಶೋ ಭಗದತ್ತಂ ಚ ಜಿತ್ವಾ ರಾಜಾನಮಾಯಯುಃ ॥ ೯೯ ॥

ಶೇಷೈಃ ಪಂಚಶತೈಃ ಶೂರೈಸ್ತೈಃ ಸಾರ್ಧಂ ಲಕ್ಷಣಂ ಪ್ರತಿ ।
ಪರಾಜಿತಾಶ್ಚ ತೇ ಸರ್ವೇ ಸಹಸ್ರೈಃ ಸಹಿತಾ ಯಯುಃ ॥ ೧೦೦ ॥

ಪ್ರಾತಃಕಾಲೇ ತು ಸಂಪ್ರಾಪ್ತೇ ಮಹೀರಾಜೋ ಮಹಾಬಲಃ ।
ಮಾಯೂವರ್ಮಾಣಮಾಹೂಯ ವಚನಂ ಪ್ರಾಹ ನಿರ್ಭಯಃ ॥ ೧೦೧ ॥

ಭವಾನ್ ದಶಸುತೈರ್ವೀರೈರ್ಲಕ್ಷಸೈನ್ಯೈಶ್ಚ ಸಂಯುತಃ ।
ಸರ್ವಶತ್ರುವಿನಾಶಾಯ ಗಂತುಮರ್ಹತಿ ಸತ್ತಮ ॥
ಇತಿ ಶ್ರುತ್ವಾ ಸ ನೃಪತಿರ್ವಾದ್ಯಾನ್ ಸಂವಾದ್ಯ ಚಾಯಯೌ ॥ ೧೦೨ ॥

ದೃಷ್ಟ್ವಾ ಪರಿಮಲೋ ಭೂಪೋ ಮಾಯೂವರ್ಮಾಣಮಾಗತಂ ।
ಜಗನ್ನಾಯಕಮಾಹೂಯ ವಚನಂ ಪ್ರಾಹ ನಿರ್ಭಯಃ ॥ ೧೦೩ ॥

---

ಹಿಡಿದು ನೆಲದ ಮೇಲೆ ನಿಂತುಕೊಂಡು ಭಯಂಕರವಾದ ಯುದ್ಧಮಾಡುತ್ತಾ ಒಬ್ಬರಿಂದೊಬ್ಬರು ಹತರಾಗಿ ಸ್ವರ್ಗಸ್ಥರಾದರು.

೧೦೦. ಇಂದುಲನು ಚಾಮುಂಡನನ್ನೂ, ದೇವಸಿಂಹನು ಧುಂಧುಕಾರನನ್ನೂ, ಕೃಷ್ಣಾಂಶನು ಭಗದತ್ತನನ್ನೂ ಜಯಿಸಿ, ಉಳಿದ ಐದುನೂರುಮಂದಿ ಶೂರರನ್ನು ಕೂಡಿಕೊಂಡು ರಾಜನಾದ ಲಕ್ಷಣನ ಬಳಿಗೆ ಬಂದರು

೧೦೧. ಸೋತುಹೋದ ಚಾಮುಂಡನು ಸಾವಿರ ಮಂದಿಯೊಡನೆ ತಮ್ಮ ಶಿಬಿರಕ್ಕೆ ಹಿಂದಿರುಗಿದನು. ಬೆಳಗಾಗುತ್ತಲೆ ಮಹಾಬಲಶಾಲಿಯಾದ ಪೃಥ್ವೀರಾಜನು ಮಾಯೂವರ್ಮನೆಂಬ ರಾಜನನ್ನು ಕರೆಯಿಸಿ ಆಲೋಚನೆಮಾಡುತ್ತಾ ನಿರ್ಭಯವಾಗಿ ಅವನನ್ನು ಕುರಿತು,

೧೦೨. "ಅಯ್ಯಾ ರಾಜಶ್ರೇಷ್ಠನೇ ! ವೀರನಾದ ನಿನ್ನ ಹತ್ತುಮಂದಿ ಮಕ್ಕಳೊಡನೆಯೂ ಲಕ್ಷಸೈನ್ಯದೊಡನೆಯೂ ಕೂಡಿ ನೀನು ಈದಿನ ಶತ್ರುವಿನಾಶಕ್ಕಾಗಿ ಯುದ್ಧಕ್ಕೆ ಹೋಗು" ಎಂದನು.

೧೦೩. ಪೃಥ್ವೀರಾಜನು ಹೀಗೆ ಹೇಳಿದುದನ್ನು ಕೇಳಿ ಆ ರಾಜನು ರಣವಾದ್ಯಗಳು ಘೋರ್ಗರೆಯುತ್ತಿರಲು ಯುದ್ಧಕ್ಕೆ ಹೋದನು. ಮಾಯೂವರ್ಮನು ಹೀಗೆ ಯುದ್ಧಕ್ಕೆ ಬಂದುದನ್ನು ಪ್ರತಿಪಕ್ಷದ ಪ್ರಭುವಾದ ಪರಿಮಳರಾಜನು ಕಂಡು,

ಭವಾನ್ ದಶಸಹಸ್ರೈಶ್ಚ ಸಾರ್ಧಂ ತ್ರೈಸ್ತ್ರಿಭಿರನ್ವಿತಃ ।
ಗಂತುಮರ್ಹತಿ ಯುದ್ಧಾಯ ಶೀಘ್ರಂ ಮದ್ವಿಜಯಂ ಕುರು ॥ ೧೦೪ ॥

ಇತಿ ಶ್ರುತ್ವಾ ಯಯೌ ಶೀಘ್ರಂ ಸೇನಯೋರುಭಯೋರ್ಮಹತ್ ।
ಯುದ್ಧಂ ಚಾಸೀನ್ಮುನಿಶ್ರೇಷ್ಠ ಯಾಮಮಾತ್ರಂ ಭಯಾನಕಂ ॥ ೧೦೫ ॥

ಹತಾಸ್ತೇ ದಶಸಾಹಸ್ರಾಃ ಕೃಷ್ಣಾಂಶಾದ್ಯೈಃ ಸುರಕ್ಷಿತಾಃ ।
ಶಂಖಾನ್ ದಧ್ಮುಶ್ಚ ತೇ ಸರ್ವೇ ಚಾಂಗದೇಶನಿವಾಸಿನಃ ॥ ೧೦೬ ॥

ಏತಸ್ಮಿನ್ನಂತರೇ ಧೀರಾಃ ಕೃಷ್ಣಾಂಶಾದ್ಯಾಸ್ತುರೀಯಕಾಃ ।
ಯಾಮಮಾತ್ರೇಣ ಸಂಜಘ್ನುರ್ಲಕ್ಷಸೈನ್ಯಂ ರಿಪೋಸ್ತದಾ ॥ ೧೦೭ ॥

ಅಪರಾಹ್ಣೇ ಮಹಾರಾಜೋ ಮಾಯಾವರ್ಮಾ ಸುತೈಃ ಸಹ ।
ಕೃಷ್ಣಾಂಶಂ ದೇವಸಿಂಹಂ ಚ ಸಂಪ್ರಾಪ್ತೋ ಜಗನಾಯಕಂ ॥ ೧೦೮ ॥

---

೧೦೪. ತನ್ನ ಪಕ್ಷದ ಜಗನ್ನಾಯಕನೆಂಬ ರಾಜನನ್ನು ಕರೆಯಿಸಿ ನಿರ್ಭಯ ದಿಂದ "ನೀನು ನಿನ್ನ ಹತ್ತುಸಾವಿರ ಸೈನ್ಯದೊಡನೆಯೂ, ನಮ್ಮ ಕಡೆಯ ಕೃಷ್ಣಾಂಶ ಮುಂತಾದ ಮೂವರೊಡನೆಯೂ ಹೋಗಿ ಯುದ್ಧಮಾಡಿ ಜಾಗ್ರತೆಯಾಗಿ ನಮಗೆ ಜಯವನ್ನು ಸಂಪಾದಿಸು" ಎಂದು ಹೇಳಿದನು.

೧೦೫. ಈ ಮಾತನ್ನು ಕೇಳಿ ಜಗನ್ನಾಯಕನು ಬೇಗನೆ ಯುದ್ಧಕ್ಕೆ ಹೋದನು. ಎಲೈ ಮುನಿಶ್ರೇಷ್ಠನೇ! ಎರಡು ಸೇನೆಗಳಿಗೂ ಒಂದುಜಾವ ಪರ್ಯಂತ ಘೋರವಾದ ಕಾಳಗವಾಯಿತು.

೧೦೬. ಶತ್ರುಪಕ್ಷದಲ್ಲಿ ಸುರಕ್ಷಣೆಹೊಂದಿದ ಆ ಹತ್ತುಸಾವಿರಮಂದಿಯೂ ಕೃಷ್ಣಾಂಶ ಮೊದಲಾದವರಿಂದ ಹತರಾದರು. ಆಗ ಅಂಗದೇಶದ ಸೈನಿಕರೆಲ್ಲರೂ ಶಂಖವನ್ನೂದಿದರು.

೧೦೭. ಈ ಪರಿಸ್ಥಿತಿಯನ್ನು ಕಂಡು ಧೀರರಾದ ಕೃಷ್ಣಾಂಶಾದಿಗಳು ನಾಲ್ಕು ಮಂದಿಗಳೂ ಕೋಪದಿಂದ ಒಂದುಜಾವ ಯುದ್ಧಮಾಡುವುದರೊಳಗಾಗಿ ಶತ್ರು ಪಕ್ಷದ ಲಕ್ಷಸೈನ್ಯವನ್ನು ಧ್ವಂಸಮಾಡಿಬಿಟ್ಟರು.

೧೦೮. ಮಧ್ಯಾಹ್ನದ ಮೇಲೆ ಮಹಾರಾಜನಾದ ಮಾಯಾವರ್ಮನು ಮಕ್ಕಳ ಸಮೇತನಾಗಿ ಬಂದು ಕೃಷ್ಣಾಂಶ, ದೇವಸಿಂಹ, ಜಗನ್ನಾಯಕ ಇವರನ್ನು ಎದುರಿಸಿದನು.

ಅಥಾಂಗಭೂಪಂ ದಶಪುತ್ರಯುಕ್ತಂ ।
ಕೃಷ್ಣಾಂಶ ಏವಾಶು ಜಗಾಮ ಶೀಘ್ರಂ ॥
ಹಯಸ್ಥಿತೋ ವೀರವರಃ ಪ್ರಮಾಥೀ ।
ಕಲ್ಕೈಕಜಾತೋ ಮಧುಸೂದನಸ್ಯ ॥ ೧೦೯ ॥

ತತೋಂಗಭೂಪಸ್ತ್ರಿಭಿರೇವ ಬಾಣೈ ।
ರತಾಡಯನ್ಮೂರ್ಧ್ನಿ ಚ ಪಾರ್ಶ್ವಯೋರ್ವೈ ॥
ಅಮರ್ಷಮಾಣೋ ಬಲವಾನ್ಮಹೀಪತಿ ।
ರ್ದಂಡ್ಯೈರ್ಹತಃ ಕಾಲ ಇವಾಶು ಸರ್ಪಃ ॥ ೧೧೦ ॥

ಹಯಂ ಸಮುಡ್ಡೀಯ ಸ ಪುಷ್ಕರಾಂತಂ ।
ತತೋಽಭ್ಯಗಾತ್ತಂ ನೃಪತಿಂ ರಥಸ್ಥಂ ॥
ಹಯಸ್ಯ ಪಾತ್ಯೈರ್ವಿರಥೀಚಕಾರ ।
ಸ ಏವ ಭೂಪೋಽಸಿಮುಪಾದಧಾನಃ ॥ ೧೧೧ ॥

---

೧೦೯. ಮಧುಸೂದನಾಂಶದಿಂದ ಜನಿಸಿದ ಕೃಷ್ಣಾಂಶನು ತಾನೇ ಕುದುರೆಯನ್ನೇರಿಕೊಂಡು ಹೊರಟು ಶತ್ರುಗಳನ್ನು ಧ್ವಂಸಮಾಡುತ್ತಾ ಅಂಗರಾಜನ ಮೇಲೂ, ಅವನ ಹತ್ತುಮಕ್ಕಳ ಮೇಲೂ ಯುದ್ಧಮಾಡಲು ಬಂದನು.

೧೧೦. ಆಗ ಅಂಗರಾಜನು ಮೂರು ಬಾಣಗಳಿಂದ ತನ್ನ ಎದುರಾಳಿಯಾದ ಕೃಷ್ಣಾಂಶನ ತಲೆಗೂ, ಪಕ್ಕೆಗಳಿಗೂ ಹೊಡೆದನು. ಕೋಲಿನಿಂದ ತೀವ್ರವಾಗಿ ಏಟು ತಿಂದ ಕೃಷ್ಣಸರ್ಪದ ಹಾಗೆ ಬಲಶಾಲಿಯೂ ಮಹೀಪತಿಯೂ ಆದ ಕೃಷ್ಣಾಂಶನು ಕೋಪಾವಿಷ್ಟನಾದನು.

೧೧೧. ಹಾಗೆ ಕುಪಿತನಾದ ಕೃಷ್ಣಾಂಶನು ತನ್ನ ಕುದುರೆಯನ್ನು ಗಗನಕ್ಕೆ ಹಾರಿಸಿ ರಥದಲ್ಲಿದ್ದ ಅಂಗನೃಪತಿಯ ಮೇಲೆಯೇ ನುಗ್ಗಿಸಿದನು. ಆರೀತಿ ಕುದುರೆಯು ಹಾರಿ ಮೇಲೆಬೀಳಲಾಗಿ ಆ ನೃಪನ ರಥ ಮುರಿದುಹೋಯಿತು. ಆಗ ಅವನು ಕತ್ತಿಯನ್ನು ಹಿರಿದು ಯುದ್ಧಕ್ಕೆ ನಿಂತನು.

ಸ್ವೇನಾಸಿನಾ ಬಿಂದುಲಮಂಗಶಲ್ಯಂ ।
ಕೃತ್ವಾ ಸ ಕೃಷ್ಣಾಂಶಮುವಾಚ ವಾಕ್ಯಂ ॥
ಕಲ್ಲೋಲಮಾಯಾತ್ತವ ನಾಶನಾಯ ।
ತ್ವಯಾ ಜಿತಾ ಭೂಪತಯಃ ಪ್ರಧಾನಾಃ ॥ ೧೧೨ ॥

ತದ್ವೈವ ಕೀರ್ತಿರ್ಭವಿತಾ ಮಮಾಶು
ಹತ್ವಾ ಭವಂತಂ ಚ ಸುಖೀ ಭವಾಮಿ ॥
ಇತ್ಯುಕ್ತವಂತಂ ನೃಪತಿಂ ಮಹಾಂತಂ ।
ಸ್ವೇನಾಸಿನಾ ತಸ್ಯ ಶಿರೋ ಜಹಾರ ॥ ೧೧೩ ॥

ಹತೇಽಂಗಭೂಪೇ ದಶ ತಸ್ಯ ಪುತ್ರಾಃ ।
ತಮೇವ ಜಗ್ಮುರ್ಯುಧಿ ಕೌರವಾಂಶಾಃ ॥
ತಾನಾಗತಾನಿಂದುಲ ಏವ ಪಂಚ ।
ಜಘಾನ ಬಾಣೈಸ್ತು ತದಾ ಸಮನ್ಯುಃ ॥ ೧೧೪ ॥

---

೧೧೨. ಆ ಅಂಗಪತಿಯು ತನ್ನ ಖಡ್ಗದಿಂದ ಕೃಷ್ಣಾಂಶನು ಏರಿದ್ದ ಬಿಂದುಲಾಶ್ವದ ದೇಹದಲ್ಲಿ ಗಾಯಮಾಡಿ, ಕೃಷ್ಣಾಂಶನನ್ನು ಕುರಿತು " ದೊಡ್ಡದಾಗಿದ್ದ ಅಲೆಗಳು ಕ್ಷಣದೊಳಗೆ ಮಾಯವಾದಂತೆ ನಿನ್ನನ್ನು ಧ್ವಂಸಮಾಡುವುದಕ್ಕಾಗಿ ಬಂದ ಪ್ರಮುಖ ರಾಜರೆಲ್ಲಾ ಮಾಯಾವಿಯಾದ ನಿನ್ನಿಂದ ಸೋತು ಹೋಗಿರುವರು. "

೧೧೩. " ನೀನು ಹೀಗೆ ಎಲ್ಲರನ್ನೂ ಗೆದ್ದಿರುವೆ. ಇಂಥ ನಿನ್ನನ್ನು ನಾನು ಕೊಂದುಬಿಟ್ಟರೆ ನನಗೆ ಮಹತ್ತಾದ ಕೀರ್ತಿ ಬರುವುದಲ್ಲದೆ ಇನ್ನುಮುಂದೆ ನಾನು ಸುಖದಿಂದಿರುತ್ತೇನೆ " ಎಂಬದಾಗಿ ಹೇಳುತ್ತಾ ತನ್ನನ್ನು ಎದುರಿಸಿದ ಆ ಅಂಗದೇಶ ರಾಜನಾದ ಮಾಯಾವರ್ಮನ ಶಿರಸ್ಸನ್ನು ಕೃಷ್ಣಾಂಶನು ತನ್ನ ಕತ್ತಿಯಿಂದ ತುಂಡರಿಸಿ ಬಿಟ್ಟನು.

೧೧೪. ಅಂಗದೇಶದ ರಾಜನು ಈ ಪ್ರಕಾರ ಮೃತನಾಗಲಾಗಿ ಕೌರವಾಂಶದಿಂದ ಜನಿಸಿದ್ದ ಅವನ ಹತ್ತುಮಂದಿ ಮಕ್ಕಳೂ ಕೃಷ್ಣಾಂಶನನ್ನು ಎದುರಿಸಿದರು. ಹಾಗೆ ಪ್ರತಿಭಟಿಸಿ ಬಂದ ಹತ್ತುಜನಗಳನ್ನೂ ಕೋಪಾವಿಷ್ಟನಾದ ಇಂದುಲನೊಬ್ಬನೇ ತನ್ನ ಐದು ಬಾಣಗಳಿಂದ ಹೊಡೆದನು.

ಉಭೌ ಚ ದೇವಸ್ತು ಜಘಾನ ತತ್ರ ।
ಭಲ್ಲೇನ ಸಿದ್ಧೇನ ನೃಪಾತ್ಮಜೌ ಚ ॥
ಜ್ಯೇಷ್ಠಂ ಸುತಂ ಗೌತಮ ಏವ ಹತ್ವಾ ।
ದ್ವೌ ಯೌ ಸ ಕೃಷ್ಣಾಂಶ ಉಪಾಜಘಾನ ॥ ೧೧೫ ॥

ಶಂಖಂ ಪ್ರದಧ್ಮೌ ರುಚಿರಾನನಾಸ್ತೇ ।
ಪ್ರದೋಷಕಾಲೇ ಶಿಬಿರಾಣಿ ಜಗ್ಮುಃ ॥
ಶ್ರಮಾನ್ವಿತಾಸ್ತೇ ಸುಷುಪುರ್ನಿಶಾಯಾಂ ।
ಪ್ರಾತಃ ಸಮುತ್ಥಾಯ ಸ್ವಕರ್ಮ ಕೃತ್ವಾ ॥ ೧೧೬ ॥

ಗತ್ವಾ ಸಭಾಯಾಂ ನೃಪತಿಂ ಪ್ರಣಮ್ಯ ।
ವಾಕ್ಯಂ ಸಮೂಚುಃ ಶೃಣು ಚಂದ್ರವಂಶಿನ್ ॥
ಅದ್ಯೈವ ಸೇನಾಪತಿರಸ್ತಿ ಕೋ ವೈ ।
ಚಾಜ್ಞಾಪಯಾಸ್ಮಾನ್ ನೃಪ ತಸ್ಯ ಗುಪ್ತ್ಯೈ ॥ ೧೧೭ ॥

---

೧೧೫. ದೇವಸಿಂಹನು ಪ್ರಸಿದ್ಧವಾದ ತನ್ನ ಭಲ್ಲೆಯದಿಂದ ಅಂಗರಾಜನ ಇಬ್ಬರು ಮಕ್ಕಳನ್ನು ಕೊಂದನು. ಹಿರಿಯ ಮಗನನ್ನು ಗೌತಮವಂಶದ ಜನನಾಯಕನೂ, ಇನ್ನಿಬ್ಬರನ್ನು ಕೃಷ್ಣಾಂಶನೂ ಹೊಡೆದು ಹಾಕಿದರು.

೧೧೬. ಹೀಗೆ ಶತ್ರುಗಳನ್ನು ಹತಮಾಡಿದ ಮೇಲೆ ಕಳೆಗೂಡಿದ ಮುಖವುಳ್ಳ ಇವರೆಲ್ಲ ಸೂರ್ಯಾಸ್ತಮಯ ಸಮಯಕ್ಕೆ ಶಂಖವನ್ನೂದಿ ಧ್ವನಿಮಾಡಿ ಸಂಧ್ಯಾಕಾಲಕ್ಕೆ ತಮ್ಮ ಶಿಬಿರಕ್ಕೆ ಬಂದರು ಹಗಲೆಲ್ಲಾ ಬಹು ದಣಿದಿದ್ದ ಅವರು ಆರಾತ್ರಿ ಸುಖವಾಗಿ ನಿದ್ರಿಸಿದರು.

೧೧೭. ಮಾರನೆಯದಿನ ಬೆಳಗಾಗುತ್ತಲೆ ಎದ್ದು ತಮ್ಮ ನಿತ್ಯಕರ್ಮಗಳನ್ನು ಮುಗಿಸಿಕೊಂಡರು. ಬಳಿಕ ರಾಜಸಭೆಗೆ ಬಂದು ಪ್ರಭುವಿಗೆ ನಮಸ್ಕಾರಮಾಡಿ " ಓ ಚಂದ್ರವಂಶದ ಪ್ರಭುವೇ! ಈದಿನ ಸೇನಾಪತಿಯಾಗಿ ಯಾರು ನೇಮಕವಾಗಿದ್ದಾರೆ? ಎಲೈ ರಾಜನೇ! ಅವನ ರಕ್ಷಣೆಗೆ ಈಗಲೇ ನಮಗೆ ಆಜ್ಞೆಯನ್ನು ಕೊಡು " ಎಂದು ಹೇಳಿದರು.

ಶ್ರುತ್ವಾಹ ಭೂಪೋದ್ಯ ತು ವೀರಸೇನಃ ।
ಸಕಾಮಸೇನಃ ಸ್ವಬಲೈಃ ಸಮೇತಃ ॥
ರಣಂ ಕರಿಷ್ಯತ್ಯಚಿರೇಣ ವೀರಾ ।
ಸ್ತಸ್ಮಾತ್ಸುರಕ್ಷಧ್ವಮರಿಭ್ಯ ಏವ ॥ ೧೧೮ ॥

ಸ ವೀರಸೇನೋ ನೃಪತಿಂ ಪ್ರಣಮ್ಯ ।
ಲಕ್ಷೈಃ ಸ್ವಸೈನ್ಯೈರ್ಯುಧಿ ಸಂಜಗಾಮ ॥
ತದಾ ಮಹೀರಾಜನೃಪಃ ಪ್ರತಾಪೀ ।
ಸ ನಾಗವರ್ಮಾಣಮುವಾಚ ತಾಪೀ ॥ ೧೧೯ ॥

ರಣಾಯ ಗಚ್ಛಾಶು ಸುತೈಃ ಸಮೇತೋ ।
ಲಕ್ಷೈಃ ಸ್ವಸೈನ್ಯೈರುತ ಭೂಪವರ್ಯ ॥
ಹತ್ವಾ ರಿಪುಂ ಘೋರತಮಂ ಹಿ ವೀರಂ ।
ಪತಿಂ ಮಹಾಂತಂ ಯುಧಿ ವೀರಸೇನಂ ॥ ೧೨೦ ॥

---

೧೧೮. ಪರಿಮಳಮಹಾರಾಜನು ಈ ಮಾತನ್ನು ಕೇಳಿ "ಈದಿನ ಕಾಮಸೇನ ಸಮೇತನಾದ ವೀರಸೇನನು ತನ್ನ ಸೇನೆಯೊಡನೆ ಹೋಗಿ ಯುದ್ಧಮಾಡುತ್ತಾನೆ. ಎಲೈ ವೀರರುಗಳಿರಾ! ಆದಕಾರಣ ನೀವು ಅವನನ್ನು ಶತ್ರುಗಳ ದೆಸೆಯಿಂದ ಕಾಪಾಡಿ" ಎಂದು ಹೇಳಿದನು.

೧೧೯-೧೨೦. ಆಗ ವೀರಸೇನನು ರಾಜನಿಗೆ ನಮಸ್ಕರಿಸಿ ತನ್ನ ಕಡೆಯ ಒಂದುಲಕ್ಷಸೇನೆಯೊಡನೆ ಯುದ್ಧಕ್ಕೆ ಹೊರಟನು. ಇತ್ತ ಮಹಾಪ್ರತಾಪಶಾಲಿಯಾದ ಪೃಥ್ವೀರಾಜನು ತನ್ನ ಪಕ್ಷದ ನಾಗವರ್ಮನೆಂಬ ರಾಜನನ್ನು ಕುರಿತು "ಎಲೈ ರಾಜಶ್ರೇಷ್ಠನೇ! ನೀನು ಈದಿನ ನಿನ್ನ ಮಕ್ಕಳೊಡನೆಯೂ, ನಿನ್ನ ಒಂದುಲಕ್ಷ ಸೈನ್ಯದೊಡನೆಯೂ ಜಾಗ್ರತೆಯಾಗಿ ರಣಭೂಮಿಗೆ ಹೋಗಿ ಯುದ್ಧದಲ್ಲಿ ಮಹಾಭಯಂಕರ ಶತ್ರುವೂ ಮಹಾಪರಾಕ್ರಮಿಯೂ ಆದ ವೀರಸೇನರಾಜನನ್ನೂ ಮತ್ತು ಪ್ರತಿಪಕ್ಷದ ಇತರರನ್ನೂ ಕೊಂದುಹಾಕು" ಎಂದು ಹೇಳಿದನು.

ಇತ್ಯುಕ್ತವಂತಂ ನೃಪತಿಂ ಪ್ರಣಮ್ಯ ।
ಸಮಾದಯಾಮಾಸ ತದಾ ಹಿ ವೀರಃ ॥
ತಯೋರ್ಬಭೂವಾಶು ರಣೋ ಮಹಾನ್ವೈ ।
ಸುಸೇನಯೋಃ ಸಂಕುಲಯುದ್ಧಕರ್ತ್ರೋಃ ॥ ೧೨೧ ॥

ತ್ರಿಯಾಮಮಾತ್ರೇಣ ಹತಾಶ್ಚ ಸರ್ವೇ ।
ವಿಮಾನಮಾರುಹ್ಯ ಯಯುಶ್ಚ ನಾಕಂ ॥
ಹತೇಷು ಸೈನ್ಯೇಷು ಚ ನಾಗವರ್ಮಾ ।
ಸರ್ವೇಷು ವೈ ಯಾದವಭೂಪಮಾಹ ॥ ೧೨೨ ॥

ಭವಾನ್ ವಿಸೈನ್ಯಶ್ಚ ತಥೈವ ಚಾಹಂ ।
ಭವಾನ್ ಸಪುತ್ರಶ್ಚ ತಥಾಹಮೇವ ॥
ಸಂಸ್ಕೃತ್ಯ ಧರ್ಮಂ ಕುರು ಯುದ್ಧಮಾಶು ।
ತತೋ ರಥಸ್ಥಃ ಸು ಧನುರ್ಗೃಹೀತ್ವಾ ॥ ೧೨೩ ॥

---

೧೨೧. ಈ ಪ್ರಕಾರ ಹೇಳಿದ ಪೃಥ್ವೀರಾಜನಿಗೆ ಮಹಾವೀರನಾದ ನಾಗವರ್ಮನು ನಮಸ್ಕರಿಸಿ ರಣರಂಗಕ್ಕೆ ಹೋದನು. ಅಲ್ಲಿ ಆ ವೀರರಿಬ್ಬರಿಗೂ ಅವರ ಸೇನೆಗಳಿಗೂ ಶೀಘ್ರದಲ್ಲಿ ಘೋರವಾದ ಸಂಕುಲಯುದ್ಧವು ಪ್ರಾರಂಭವಾಯಿತು.

೧೨೨. ಮೂರುಜಾವಪರ್ಯಂತ ಯುದ್ಧನಡೆಯುವಷ್ಟರಲ್ಲಿ ಸೈನಿಕರೆಲ್ಲರೂ ಹತರಾಗಿ, ವೀರಸ್ವರ್ಗವನ್ನು ಸೇರುವುದಕ್ಕಾಗಿ ವಿಮಾನವನ್ನೇರಿ ಹೋದರು. ಹೀಗೆ ತನ್ನ ಸೇನೆಯು ಎಲ್ಲರೂ ಧ್ವಂಸವಾಗಲಾಗಿ ನಾಗವರ್ಮನು ಯಾದವರಾಜನಾದ ವೀರಸೇನನನ್ನು ಕುರಿತು ಹೀಗೆ ಹೇಳಿದನು.

೧೨೩. "ಅಯ್ಯಾ! ನಿನ್ನಲ್ಲಿಯೂ ಸೈನ್ಯವಿಲ್ಲ. ನನ್ನಲ್ಲಿಯೂ ಸೈನ್ಯವಿಲ್ಲ. ನೀನು ನಿನ್ನ ಮಕ್ಕಳೊಡನೆ ಇದ್ದೀಯೆ. ನಾನೂ ಅದೇ ಪ್ರಕಾರ ನನ್ನ ಪುತ್ರರೊಡನೆ ಇದ್ದೇನೆ. ಆದ್ದರಿಂದ ಈಗ ಕಾಲೋಚಿತವಾದ ಧರ್ಮವೇನೆಂಬುದನ್ನು ಜ್ಞಾಪಿಸಿಕೊಂಡು ರಥವನ್ನೇರಿ ಧನುಸ್ಸನ್ನು ಹಿಡಿದು ಯುದ್ಧಮಾಡು" ಎಂದನು.

ಬಾಣೈಶ್ಚ ಬಾಣಾನ್ಭುವಿ ತೌ ಚ ಛಿತ್ವಾ ।
ಬಭೂವತುಸ್ತೌ ವಿರಥೌ ನೃಪಾಗ್ರ್ಯೌ ॥
ಖಡ್ಗೇನ ಖಡ್ಗಂ ಚ ತಥೈವ ಛಿತ್ವಾ ।
ವಿಮಾನಮಾರುಹ್ಯ ಗತೌ ಹಿ ನಾಕಂ ॥ ೧೨೪ ॥

ಸ ಕಾಮಸೇನಃ ಸ್ವರಿಪೋಶ್ಚ ಪುತ್ರಾನ್ ।
ಜಘಾನ ಬಾಣೈಶ್ಚ ತದಾಷ್ಟಸಂಖ್ಯಾನ್ ॥
ಜ್ಯೇಷ್ಠೌ ತದಾ ಕೋಪಸಮನ್ವಿತೌ ತಂ ।
ಗೃಹೀತಖಡ್ಗೌ ಚ ಸಮೀಯತುಶ್ಚ ॥ ೧೨೫ ॥

ರಿಪೋಃ ಶಿರೋ ಜಹ್ರತುರುಗ್ರವೇಗೌ ।
ಸಕಾಮಸೇನಶ್ಚ ಕಬಂಧ ಏವ ॥
ಹತ್ವಾ ರಿಪೂ ತೌ ಚ ತದಾ ಮಿಲಿತ್ವಾ ।
ಸ್ವರ್ಗಂ ಯಯುಸ್ತೇ ಚ ವಿಮಾನರೂಢಾಃ ॥ ೧೨೬ ॥

---

೧೨೪. ಅನಂತರ ಅವರು ರಥದ ಮೇಲೆ ಕುಳಿತು ಧನುಸ್ಸನ್ನು ತೆಗೆದುಕೊಂಡು ಒಬ್ಬರಬಾಣಗಳನ್ನೊಬ್ಬರು ಕತ್ತರಿಸಿ ಭೂಮಿಗೆ ಕೆಡವುತ್ತಾ, ಕಡೆಗೆ ಆ ರಾಜಶ್ರೇಷ್ಠರಿಬ್ಬರೂ ಪರಸ್ಪರ ರಥವನ್ನು ಛೇದಿಸಿ ಇಬ್ಬರೂ ರಥವಿಹೀನರಾದರು. ಬಳಿಕ ಖಡ್ಗ ಯುದ್ಧಕ್ಕೆ ಆರಂಭಿಸಿ ಒಬ್ಬರ ಖಡ್ಗವನ್ನು ಇನ್ನೊಬ್ಬರು ಮುರಿದುಹಾಕಿದರು. ಈರೀತಿ ಪ್ರಬಲವಾದ ಹೋರಾಟದಲ್ಲಿ ಇಬ್ಬರೂ ಮೃತರಾಗಿ ವಿಮಾನವನ್ನು ಏರಿ ಸ್ವರ್ಗ ಲೋಕವನ್ನು ಹೊಂದಿದರು.

೧೨೫. ಆ ಕಾಮಸೇನರಾಜನು ತನ್ನ ಶತ್ರುವಿನ ಮಕ್ಕಳಲ್ಲಿ ಹಿರಿಯುವರಿಬ್ಬರು ಹೊರತು ಮಿಕ್ಕ ಎಂಟುಮಂದಿ ಮಕ್ಕಳನ್ನೂ ಬಾಣಪ್ರಯೋಗಮಾಡಿ ಸಂಹರಿಸಿದನು. ಆಗ ಹಿರಿಯುವರಿಬ್ಬರೂ ತುಂಬಾ ರೋಷಾವಿಷ್ಟರಾಗಿ ಕತ್ತಿಯನ್ನು ಹಿಡಿದುಕೊಂಡು ಅವನು ಮಾಡಿದ ಕಾರ್ಯಕ್ಕೆ ಸಮನಾಗಿ ತಾವೂ ಮಾಡಬೇಕೆಂದೆಣಿಸಿದರು

೧೨೬. ಅವರು ಭಯಂಕರವಾದ ರಭಸದಿಂದ ನುಗ್ಗಿ, ಶತ್ರುವಾದ ಕಾಮಸೇನನ ಶಿರಸ್ಸನ್ನು ಹಾರಿಸಿದರು. ಆಗ ಯುದ್ಧಾಸಕ್ತವಾಗಿದ್ದ ಕಾಮಸೇನನ ಮುಂಡವೇ ನುಗ್ಗಿ ಎದುರಾಳಿಗಳಾದ ಆ ಶತ್ರುವೀರರಿಬ್ಬರನ್ನೂ ಒಟ್ಟಿಗೆ ಸೇರಿಸಿ ಕೊಂದುಹಾಕಿತು. ಆ ವೀರರಿಬ್ಬರೂ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ಹೋದರು.

ಹತೇಷು ಸರ್ವೇಷು ತದಾ ತ್ರಯಸ್ತೇ ।
ಚಾಮುಂಡಾಕಾದ್ಯಾ ಜಗನಾಯಕಂ ತೇ ॥
ರುದ್ಧ್ವಾ ಸಮೇತಾಃ ಸ್ವಶರೈಃ ಕಠೋರೈ ।
ಜಘ್ನುಸ್ತಮಶ್ವಂ ಹರಿನಾಗರಂ ಚ ॥ ೧೨೭ ॥

ಸ ದಿವ್ಯವಾಜೀ ಚ ತದಾ ಸ್ವಪಕ್ಷೌ ।
ಪ್ರಸಾರ್ಯ ತೇನಾಶು ರಿಪುಂ ಜಗಾಮ ॥
ಸ ಧುಂಧುಕಾರಸ್ಯ ಗಜಂ ವಿಹತ್ಯ ।
ಚಾಮುಂಡಕಸ್ಯೈವ ಗಜಂ ವಿಮರ್ದ್ಯ ॥ ೧೨೮ ॥

ರಥಂ ಚ ಭೂಮೌ ಭಗದತ್ತಕಸ್ಯ ।
ವಿಚೂರ್ಣ್ಯ ಶೀಘ್ರಂ ಚ ನಭೋ ಜಗಾಮ ॥
ಪ್ರವಾದ್ಯ ಶಂಖಂ ಜಗನಾಯಕಶ್ಚ ।
ಕೃಷ್ಣಾಂಶಮಾಗಮ್ಯ ಕಥಾಂ ಚಕಾರ ॥ ೧೨೯ ॥

---

೧೨೭. ಹಾಗೆ ಆ ಮೂವರುವೀರರೂ ಹತವಾಗಲಾಗಿ ಚಾಮುಂಡನೇ ಮುಂತಾದವರು ಭಯಂಕರವಾದ ತಮ್ಮ ಬಾಣಗಗಳನ್ನು ಪ್ರಯೋಗಿಸುತ್ತಾ ಜಗನಾಯಕನನ್ನು ಮುತ್ತಿಗೆಹಾಕಿ ಅವನ ಹರಿನಾಗರವೆಂಬ ದಿವ್ಯಾಶ್ವವನ್ನು ಹೊಡೆದರು.

೧೨೮. ದೇವಲೋಕದ ಅಶ್ವವಾದ ಆ ಹರಿನಾಗರವು ಆಗ ತನ್ನ ಪೂರ್ವರೂಪವನ್ನು ಹೊಂದಿ ತನ್ನ ರೆಕ್ಕೆಗಳನ್ನು ಪ್ರಸರಿಸಿ ಆ ರೆಕ್ಕೆಯಿಂದಲೇ ಚಾಮುಂಡಾದಿಗಳನ್ನು ಜಾಗ್ರತೆ ಹೊಡೆದು ಶತ್ರುವಿನ ಸಮೀಪಕ್ಕೆ ನುಗ್ಗಿತು. ಕೂಡಲೆ ತನ್ನ ಏಟಿನಿಂದ ಧುಂಧುಕಾರನು ಏರಿಕೊಂಡಿದ್ದ ಆನೆಯನ್ನು ನಾಶಮಾಡಿ, ಚಾಮುಂಡನ ಆನೆಯನ್ನೂ ತುಳಿದುಹಾಕಿತು.

೧೨೯. ಆ ಹರಿನಾಗರವು ಭಗದತ್ತನ ರಥವನ್ನು ಹುಡಿಹುಡಿಮಾಡಿ ಭೂಮಿಗೆ ಬೀಳಿಸಿ, ಜಾಗ್ರತೆಯಾಗಿ ಆಕಾಶಕ್ಕೆ ಹಾರಿತು. ಜಗನಾಯಕನೂ ಕೂಡ ಶಂಖಧ್ವನಿಯನ್ನು ಮಾಡಿ ಕೃಷ್ಣಾಂಶನ ಸಮೀಪಕ್ಕೆ ಬಂದು ನಡೆದ ವೃತ್ತಾಂತವನ್ನು ತಿಳಿಸಿದನು.

ನಿಶಾಮುಷಿತ್ವಾ ಜಗನಾಯಕಾದ್ಯಾಃ ।
ಪ್ರಾತಃ ಸಮುತ್ಥಾಯ ರಣಂ ಪ್ರಜಗ್ಮುಃ ॥
ತದಾ ಮಹೀರಾಜ ಉತಾಶುಕಾರೀ ।
ಸ ಕಿನ್ನರೇಶಂ ಕಣಕಂ ಸಪುತ್ರಂ ॥ ೧೩೦ ॥

ಉವಾಚ ರಾಜಞ್ಛೃಣು ಕಿನ್ನರಾಣಾಂ ।
ಮಹಾಬಲಾಸ್ತೇ ರಿಪವೋ ಮಮೈತೇ ॥
ವಿನಾಶಯಾಶು ಪ್ರಬಲಾರಿಘಾತಾನ್ ।
ದೇವೈರ್ನ ಸಾರ್ಧಂ ಯುಧಿ ವೈ ಮನುಷ್ಯಾಃ ॥ ೧೩೧ ॥

ಇತ್ಯುಕ್ತವಾನ್ ಮಂಕಣಭೂಪತಿಸ್ತು ।
ಯಯೌ ಸಪುತ್ರೋಽಯುತಸೈನ್ಯಪಶ್ಚ ॥
ತಮಾಗತಂ ತತ್ರ ವಿಲೋಕ್ಯ ರಾಜಾ ।
ವೀರಾನ್ ಸ್ವಕೀಯಾಂಶ್ಚ ಸಮಾದಿದೇಶ ॥ ೧೩೨ ॥

---

೧೩೦. ಆ ಜಗನಾಯಕ ಮುಂತಾದವರೆಲ್ಲರೂ, ರಾತ್ರಿಯನ್ನು ಹೇಗೋ ಕಳೆದು ಬೆಳಗ್ಗೆ ಎದ್ದು ಯುದ್ಧಭೂಮಿಗೆ ಬಂದರು. ಇತ್ತ ಚಟುವಟಿಕೆವಂತನಾದ ಪೃಥ್ವೀರಾಜನು ಕಣಕನೆಂಬ ಕಿನ್ನರದೇಶಾಧಿಪನನ್ನೂ ಅವನ ಮಕ್ಕಳನ್ನೂ ಜಾಗ್ರತೆ ಯಾಗಿ ಕರೆಯಿಸಿ ಹೇಳತೊಡಗಿದನು.

೧೩೧. "ಎಲೈ ರಾಜಶ್ರೇಷ್ಠನೇ ! ಕೇಳು. ನಿನ್ನ ಕಡೆಯ ಕಿನ್ನರವರ್ಗದ ಮಹಾಸೇನೆಯನ್ನು ನುಗ್ಗಿಸಿ ಈಗ ನಮ್ಮನ್ನು ಪ್ರಬಲವಾಗಿ ಘಾತಿಸುತ್ತಿರುವ ನನ್ನ ಈ ಶತ್ರುವನ್ನು ಜಾಗ್ರತೆ ಧ್ವಂಸಮಾಡು. ಯುದ್ಧದಲ್ಲಿ ದೇವತೆಗಳಿಗೆ ಮನುಷ್ಯರು ಎಂದೂ ಸರಿದೂಗಲಾರರಲ್ಲವೇ."

೧೩೨. ಹೀಗೆಂದು ಪೃಥ್ವೀರಾಜನು ಮಂಕಣಭೂಪತಿಗೆ ಹೇಳಿದ ಕೂಡಲೆ ಆತನು ತನ್ನ ಮಕ್ಕಳೊಡನೆಯೂ ತನ್ನ ಕಡೆಯ ಹತ್ತುಸಾವಿರ ಸೇನೆಯೊಡನೆಯೂ ಯುದ್ಧಕ್ಕೆ ಬಂದನು. ಆಗ ಪರಿಮಳರಾಜನು ಹೀಗೆ ಪ್ರತಿಪಕ್ಷದ ಸೈನ್ಯವು ಸನ್ನದ್ಧವಾಗಿ ಬಂದುದನ್ನು ನೋಡಿ ತನ್ನ ಕಡೆಯ ತಾಲನಾದಿ ವೀರರಿಗೆ ರಣಕ್ಕೆ ಹೋಗಲು ಆಜ್ಞಾಪಿಸಿದನು.

ಮನೋರಥಸ್ಥೋ ಜಗನಾಯಕಶ್ಚ ।
ಸ ತಾಲನೋ ವೈ ವಡವಾಂ ವಿಗೃಹ್ಯ ॥
ಕರಾಲಸಂಸ್ಥಶ್ಚ ತದಾ ಜಯಂತೋ ।
ವಿಗೃಹ್ಯ ಚಾಪಂ ತರಸಾ ಜಗಾಮ ॥ ೧೩೩ ॥

ಪಪೀಹಕಸ್ಥಶ್ಚ ಸ ರೂಪಣೋ ವೈ ।
ಜಗಾಮ ಕೃಷ್ಣಾಂಶಸಮನ್ವಿತಶ್ಚ ॥
ಸ ಲಲ್ಲಸಿಂಹೋ ಗಜಮತ್ತಸಂಸ್ಥಃ ।
ಸ ಧಾನ್ಯಪಾಲೋ ಹಯಮಾರುರೋಹ ॥ ೧೩೪ ॥

ಸಮಂತತಃ ಕಿನ್ನರಸೈನ್ಯಘೋರಂ ।
ವಿನಾಶಯಾಮಾಸುರುಪಾಂಶುಖಡ್ಗೈಃ ॥
ವಿನಶ್ಯಮಾನೇ ತ್ರಿಸಹಸ್ರಸೈನ್ಯೇ ।
ಸ ಕಿನ್ನರೇಶಸ್ತರಸಾ ಜಗಾಮ ॥ ೧೩೫ ॥

ಧ್ಯಾತ್ವಾ ಕುಬೇರಂ ಚ ಗೃಹೀತಚಾಪೋ ।
ನಭೋಗತಸ್ತತ್ರ ಬಭೂವ ಸೂಕ್ಷ್ಮಃ ॥ ೧೩೬ ॥

---

೧೩೩. ಜಗನಾಯಕನು ಮನೋರಥಾಶ್ವವನ್ನೂ, ತಾಲನನು ಬಡಬವೆಂಬ ಅಶ್ವವನ್ನೂ ಏರಿದರು. ಜಯಂತ (ಇಂದುಲ)ನು ತನ್ನ ಧನುಸ್ಸನ್ನು ಹಿಡಿದುಕೊಂಡು ಕರಾಲಾಶ್ವವನ್ನೇರಿದನು. ಎಲ್ಲರೂ ಬಹು ವೇಗವಾಗಿ ಹೊರಟರು.

೧೩೪. ರೂಪಣನು ಪಪೀಹಕವೆಂಬ ಕುದುರೆಯನ್ನೇರಿ ಕೃಷ್ಣಾಂಶ ಸಮೇತನಾಗಿ ಹೊರಟನು. ಲಲ್ಲಸಿಂಹನು ಮದಿಸಿದ ಗಜವನ್ನೇರಿ ಹೊರಟನು. ಧಾನ್ಯಪಾಲನು ತನ್ನ ಕುದುರೆಯನ್ನೇರಿದನು.

೧೩೫. ಈರೀತಿ ಸನ್ನದ್ಧರಾದ ವೀರರೆಲ್ಲರೂ ಕತ್ತಿಯನ್ನು ಹಿರಿದು ಸುಗ್ಗಿ ಘೋರವಾದ ಕಿನ್ನರ ಸೈನ್ಯವನ್ನು ಸುತ್ತಲೂ ಧ್ವಂಸಮಾಡಿದರು. ಅವರ ಹೊಡೆತದಿಂದ ಮೂರುಸಾವಿರ ಸೇನೆಯು ನಾಶವಾಯಿತು.

೧೩೬. ಆಗ ಕಿನ್ನರರಾಜನಾದ ಮಂಕಣನು ರಣಭೂಮಿಯಿಂದ ಜಾಗ್ರತೆಯಾಗಿ ಶಿಬಿರಕ್ಕೆ ಹೋಗಿ ಕುಬೇರನನ್ನು ಧ್ಯಾನಮಾಡಿ ಅನಂತರ ಧನುರ್ಧಾರಿಯಾಗಿ ಬಂದು ಆಕಾಶದಲ್ಲಿ ಸೂಕ್ಷ್ಮರೂಪನಾಗಿ ನಿಂತನು.

ಅದೃಶ್ಯಮಾನಃ ಸ್ವಶರೈಃ ಕಠೋರೈಃ ।
ವಿನಿರ್ದ್ಯ ಸರ್ವಾನ್ನಿ ನನರ್ದ ಘೋರಂ ॥
ವಿಲಪ್ಯಮಾನೇ ಚ ಸಮಸ್ತಶೂರೇ ।
ಜಯಂತ ಏವಾಶು ಜಗಾಮ ಶತ್ರುಂ ॥ ೧೩೭ ॥

ಧ್ಯಾತ್ವಾ ಮಹೇಂದ್ರಂ ಕಣಕಂ ಚ ಬದ್ಧ್ವಾ ।
ಕೃಷ್ಣಾಂಶಮಾಗಮ್ಯ ಪದೌ ನನಾಮ ॥
ತದಾ ತು ತೇ ಶತ್ರುಸಹಸ್ರಸೈನ್ಯೇ ।
ನಿಶಮ್ಯ ಬದ್ಧಂ ಕಣಕಂ ನಿಜೇಂದ್ರಂ ॥ ೧೩೮ ॥

ವಿನರ್ಘ ಘೋರಂ ರುರುಧುಶ್ಚ ಸರ್ವಾನ್ ।
ಮಾಯಾವಿನೋ ಗುಹ್ಯಕಮಸ್ತ್ರಮೂಹುಃ ॥
ದಿನೇಷು ಸಪ್ತೇಷು ತಥಾ ನಿಶಾಸು ।
ಬಭೂವ ಯುದ್ಧಂ ಚ ಸಮಂತತಸ್ತೈಃ ॥ ೧೩೯ ॥

---

೧೩೭. ಆತನು ಈ ವೀರರ ಕಣ್ಣಿಗೆ ಕಾಣಿಸದಂತೆ ಅದೃಶ್ಯನಾಗಿದ್ದುಕೊಂಡು ತನ್ನ ಕ್ರೂರವಾದ ಬಾಣಗಳ ಏಟಿನಿಂದ ಎಲ್ಲರನ್ನೂ ಘಾತಿಸಿ ಘೋರತರವಾಗಿ ಹಿಂಸಿಸಿದನು. ಇದರಿಂದ ಆ ಸಮಸ್ತ ಶೂರರೂ ವಿಲಾಪಮಾಡತೊಡಗಲು ಜಯಂತನ ಅವತಾರನಾದ ಇಂದುಲನು ಶತ್ರುವಿನ ಈ ಗುಟ್ಟನ್ನು ತಿಳಿದು ಶೀಘ್ರದಲ್ಲಿ ಶತ್ರುವನ್ನು ಹಿಂಬಾಲಿಸಿ ಹೋದನು.

೧೩೮. ಆತನು ತನ್ನ ತಂದೆಯಾದ ಇಂದ್ರನನ್ನು ಧ್ಯಾನಿಸಿ ಅವನ ಕೃಪೆಯನ್ನು ಪಡೆದು ಅದೃಶ್ಯನಾಗಿದ್ದ ಕಣಕಕಿನ್ನರನನ್ನು ಗೊತ್ತುಹಚ್ಚಿ ಅವನನ್ನು ಸೆರೆಹಿಡಿದು ಬಂಧಿಸಿ, ಕೃಷ್ಣಾಂಶನ ಬಳಿಗೆ ಎಳೆದುತಂದನು. ಎಲ್ಲರೂ ಅವನ ಪಾದಗಳಿಗೆ ನಮಸ್ಕಾರ ಮಾಡಿದರು.

೧೩೯. ಶತ್ರುಪಕ್ಷದ ಸಾವಿರಸೇನೆ ಬಂದು ಈರೀತಿ ತಮ್ಮ ರಾಜನಾದ ಕಣಕ ಕಿನ್ನರನನ್ನು ಸೆರೆಹಿಡಿದು ಬಂಧಿಸಿದುದನ್ನು ಕೇಳಿ ಕಿನ್ನರರು ಭಯಂಕರವಾಗಿ ಧ್ವನಿಮಾಡಿ ಎಲ್ಲರನ್ನೂ ಮುತ್ತಿಗೆ ಹಾಕಿದರು. ಅಷ್ಟೇ ಅಲ್ಲದೆ ಮಾಯಾವಿಗಳಾದ ಅವರು ಗುಹ್ಯಕಾಸ್ತ್ರವನ್ನು ಪ್ರಯೋಗಿಸಿದರು.

ಶ್ರಮಾನ್ವಿತಾಃ ಸಪ್ತ ಮಹಾಪ್ರವೀರಾ ।
ಹತೇಷು ಸರ್ವೇಷು ಸುಷುಪುಶ್ಚ ವೈ ಯದಾ ॥
ತದಾ ಕುಬೇರಂ ಕಣಕಶ್ಚ ಧ್ಯಾತ್ವಾ ।
ಲಬ್ಧ್ವಾ ವರಂ ಬಂಧನಪಾಶು ಭಿತ್ವಾ ॥ ೧೪೦ ॥

ಸುಪ್ತಾನ್ಸ ಮುತ್ಥಾಯ ಚ ಸಪ್ತ ಶೂರಾನ್ ।
ನಿಶೀಥಕಾಲೇ ಸ ಚಕಾರ ಯುದ್ಧಂ ॥
ಜಿತ್ವಾ ಚ ತಾನ್ ಷಟ್ ಸ ವರಪ್ರಭಾವಾ ।
ತ್ತದೇಂದುಲೇನೈವ ರಣಂ ಚಕಾರ ॥ ೧೪೧ ॥

ಗೃಹೀತಖಡ್ಗಾ ರಣಘೋರಮತ್ತೌ ।
ಹತ್ವಾ ತತೋ ವೈ ಭುವಿ ಚೇಯತುಶ್ಚ ॥
ಪ್ರಜಗ್ಮತುರ್ನಾಕಮುಪಾಂತದೇವೌ ।
ಸಂಸ್ತೂಯಮಾನೌ ಸುರಸತ್ತಮೈಶ್ಚ ॥ ೧೪೨ ॥

---

೧೪೦-೧೪೧. ಹೀಗೆ ಏಳುದಿನಗಳಕಾಲ ಹಗಲು ರಾತ್ರಿ ಎರಡುಹೊತ್ತೂ ಅವರೊಡನೆ ಘೋರವಾದ ಯುದ್ಧಮಾಡುತ್ತಿದ್ದರು. ಸರ್ವರನ್ನೂ ಧ್ವಂಸಮಾಡು ವುದರಲ್ಲಿ ಆ ಏಳುಮಂದಿ ವೀರರೂ ಬಹು ಬಳಲಿ ಮೂರ್ಛೆಹೋದರು. ಆಗ ಕಣಕ ಕಿನ್ನರನು ಕುಬೇರನನ್ನು ಧ್ಯಾನಿಸಿ ಅವನ ವರಪ್ರಸಾದದಿಂದ ತನ್ನನ್ನು ಬಂಧಿಸಿದ್ದ ಕಟ್ಟುಗಳನ್ನೆಲ್ಲಾ ಛೇದಿಸಿ, ಮೂರ್ಛೆಹೊಂದಿ ಮಲಗಿದ್ದ ಏಳುಮಂದಿ ಶೂರರನ್ನೂ ಎಚ್ಚರಗೊಳಿಸಿ ಆ ರಾತ್ರಿ ಹೊತ್ತಿನಲ್ಲೇ ಮತ್ತೆ ಯುದ್ಧಮಾಡಿದನು. ಅತನು ಕುಬೇರನ ವರಪ್ರಭಾವದಿಂದ ಆರುಮಂದಿಯನ್ನು ಜಯಿಸಿ ಬಳಿಕ ಇಂದುಲನ ಸಂಗಡ ಯುದ್ಧ ಮಾಡತೊಡಗಿದನು.

೧೪೨. ಘೋರಯುದ್ಧದಿಂದ ಮದಿಸಿದ ಆ ಕಣಕ, ಇಂದುಲ, ಇಬ್ಬರೂ ಕತ್ತಿಯನ್ನು ಹಿಡಿದು ಒಬ್ಬರನ್ನೊಬ್ಬರು ಹೊಡೆದು, ಆನಂತರ ಭೂಮಿಯಲ್ಲಿ ಬಿದ್ದು ಬಿಟ್ಟರು. ಹೀಗೆ ವೀರತನದಿಂದ ಯುದ್ಧಮಾಡಿದ ಅವರಿಬ್ಬರನ್ನೂ ದೇವತೆಗಳು ಹೊಗಳುತ್ತಿರಲು ದೇವಾಂಶದವರಾದ ಆ ಇಬ್ಬರೂ ಸ್ವರ್ಗಲೋಕಕ್ಕೆ ತೆರಳಿದರು.

ತತಃ ಪ್ರಭಾತೇ ವಿಮಲೇ ವಿಜಾತೇ ।
ರುರೋದ ರಾಮಾಂಶ ಉತಾಲಲಾಪ ॥
ಪಾಪೈಃ ಕಲಾಪೈಃ ಪರಿಪೀಡ್ಯಮಾನಃ ।
ಕುಲಾನ್ವಿತಃ ಸರ್ವಯುತೋ ಮುನೀಂದ್ರ ॥ ೧೪೩ ॥

ಸ ಪಂಚಶಬ್ದಂ ಗಜಮಾರುರೋಹ ।
ತ್ರಿಲಕ್ಷಸೈನ್ಯೈಸ್ತರಸಾ ಜಗಾಮ ॥
ತದಾ ಮಹೀರಾಜ ಉತಾಹ ಶೃಣ್ವನ್ ।
ಗಚ್ಛಧ್ವಮದ್ಯೈವ ಮಯಾ ಸಮೇತಾಃ ॥ ೧೪೪ ॥

ಸ್ವಪಂಚಲಕ್ಷೈಃ ಪ್ರಬಲೈಶ್ಚ ಶೂರೈಃ ।
ಸಾರ್ಧಂ ರುರೋಧಾಶು ರಿಪೋಶ್ಚ ಸೇನಾಂ ॥
ತಯೋರ್ಬಭೂವಾಶು ರಣಃ ಪ್ರಘೋರೋ ।
ವಿನರ್ದತೋರ್ಯುದ್ಧನಿಮಿತ್ತಮಾಶು ॥ ೧೪೫ ॥

---

೧೪೩. ಎಲೈ ಮುನೀಂದ್ರನೇ! ಕೇಳು. ಮಾರನೆಯದಿನ ಸ್ವಚ್ಛವಾಗಿ ಬೆಳಕು ಹರಿಯುತ್ತಲೆ ಇಂದುಲನ ತಂದೆಯಾದ ಆಹ್ಲಾದನು (ರಾಮಾಂಶನು) ಪೂರ್ವಪಾಪ ವಶದಿಂದ ತನ್ನ ಪುತ್ರಮರಣದ ವೃತ್ತಾಂತವನ್ನು ತಿಳಿದು ತನ್ನ ಸಕಲ ಸಂಬಂಧಿಗಳೊಡನೆ ಗೋಳಾಡಿದನು.

೧೪೪. ಆಗ ಅವನು ಮೂರುಲಕ್ಷ ಸೇನೆಯನ್ನು ಜತೆಯಲ್ಲಿ ತೆಗೆದುಕೊಂಡು ಪಂಚಶಬ್ದವೆಂಬ ಆನೆಯನ್ನೇರಿ ಶೀಘ್ರವಾಗಿ ಹೊರಟನು. ಆಗ ಪೃಥ್ವೀರಾಜನು ಈ ವರ್ತಮಾನವನ್ನು ಕೇಳಿ, ತನ್ನ ಕಡೆಯ ರಾಜರನ್ನೆಲ್ಲಾ "ಈ ಕೂಡಲೇ ನನ್ನೊಡನೆ ಎಲ್ಲರೂ ಹೊರಡಿ" ಎಂದು ಹೇಳಿದನು.

೧೪೫. ಹೀಗೆ ಹೇಳಿ ತನ್ನ ಕಡೆಯವರಾದ ಐದುಲಕ್ಷ ಶೂರರುಳ್ಳ ಸೇನೆಯೊಡನೆ ಹೋಗಿ ಶತ್ರುವಿನ ಸೇನೆಯ ಸುತ್ತಲೂ ಶೀಘ್ರವಾಗಿ ಮುತ್ತಿಗೆ ಹಾಕಿದನು. ಯುದ್ಧಕಾರಣಕ್ಕಾಗಿ ಘೋರವಾಗಿ ಹಿಂಸೆಮಾಡುವ, ಅವರಿಬ್ಬರಿಗೂ ಬಹು ಭಯಂಕರವಾದ ಯುದ್ಧವು ನಡೆಯಿತು.

ತ್ರಿಯಾಮಮಾತ್ರೇಣ ಹತಾಶ್ಚ ಸರ್ವೇ ।
ದ್ವಯೋಶ್ಚ ಪಕ್ಷ್ಯಾ ಬಲಶಾಲಿನಶ್ಚ ॥
ತದಾ ಮಹೀರಾಜ ಉತಾಯಯೌ ವೈ ।
ಸಮಂಡಲೀಕಶ್ಚ ಧನುರ್ವಿಗೃಹ್ಯ ॥ ೧೪೬ ॥

ಸ ಧುಂಧುಕಾರಶ್ಚ ತದಾ ಜಗಾಮ ।
ರಥಸ್ಥಿತಂ ಲಕ್ಷ್ಣಣಮುಗ್ರವೀರಂ ॥
ತದೋದಯೋ ವೈ ಭಗದತ್ತಮೇವ ।
ಚಾಮುಂಡಕಂ ಭೀಷ್ಮಕರಾಜಸೂನುಃ ॥ ೧೪೭ ॥

ಸ ಪಂಚಶಬ್ದಂ ಗಜಮಾಸ್ಥಿತೋ ವೈ ।
ಗತಃ ಸ ಏವಾಶು ಜಗಾಮ ಭೂಪಂ ॥
ಧನುರ್ವಿಗೃಹ್ಯಾಶುಗಮುಲ್ಬಣಂ ಚ ।
ನೃಪಸ್ಥಿತಶ್ಚಾಥ ಭಯಂಕರಂ ಚ ॥ ೧೪೮ ॥

---

೧೪೬. ಹೀಗೆ ಮೂರು ಜಾವದೊಳಗೆ ಎರಡು ಸೈನ್ಯದಲ್ಲೂ ಬಲಶಾಲಿಗಳಾಗಿದ್ದ ಸರ್ವರೂ ಹತರಾದರು. ಆಗ ಪೃಥ್ವೀರಾಜನು ತನ್ನ ಮಂಡಲಿಕರಾಜರ ಸಮೇತ ಧನುರ್ಧಾರಿಯಾಗಿ ತಾನೇ ಯುದ್ಧಕ್ಕೆ ಹೊರಟನು.

೧೪೭. ಆಗ ರಥದ ಮೇಲೆ ಕುಳಿತು ಯುದ್ಧಮಾಡುತ್ತಿದ್ದ ಮಹಾವೀರನಾದ ಲಕ್ಷ್ಣಣನನ್ನು ಎದುರಿಸಲು ಪೃಥ್ವೀರಾಜನ ತಮ್ಮನಾದ ದುಂಧುಕಾರನು ಬಂದನು. ಹೀಗೆಯೇ ಉದಯನು (ಕೃಷ್ಣಾಂಶನು) ಭಗದತ್ತನನ್ನೂ, ಭೀಷ್ಮಕ ರಾಜಪುತ್ರನು ಚಾಮುಂಡನನ್ನೂ ಎದುರಿಸಿ ಹೋರಾಡತೊಡಗಿದರು.

೧೪೮. ಪಂಚಶಬ್ದವೆಂಬ ಆನೆಯನ್ನೇರಿದ್ದ (ರಾಮಾಂಶ) ಆಹ್ಲಾದನು ಪೃಥ್ವೀರಾಜನ ಬಳಿಗೆ ವೇಗದಿಂದ ಬಂದನು. ಕೂಡಲೆ ತನ್ನ ಧನುಸ್ಸಿಗೆ ಹೆದೆಯೇರಿಸಿ ಕ್ರೂರವಾದ ಬಾಣವನ್ನು ಹೂಡಿ ಭಯಂಕರವಾಗುವಂತೆ ಆ ನೃಪನ ಮೇಲೆ ಪ್ರಯೋಗಿಸಿದನು.

ಗಜಂ ಪ್ರಮತ್ತಂ ಶಿವದತ್ತಮುಗ್ರ- ।
ಮಾಹ್ಲಾದವಾಹಂ ತಮುವಾಚ ವಾಕ್ಯಂ ॥
ಅಯೇ ಪ್ರಮತ್ತಾಗ್ರಗಜೇಂದ್ರ ಶೂರ ।
ಜಯಂ ಚ ಮೇ ದೇಹಿ ಶಿವಪ್ರದತ್ತ ॥ ೧೪೯ ॥

ಸ ಮಂಡಲೀಕೋ ರಣದುರ್ಮದಶ್ಚ ।
ರಾಮಾಂಶ ಆಹ್ಲಾದ ಇತಿ ಪ್ರಸಿದ್ಧಃ ॥
ತಸ್ಮಾಚ್ಚ ಮಾಂ ರಕ್ಷ ಜವೇನ ಹಸ್ತಿನ್ ।
ಮಹಾಬಲಾತ್ಕಾಲರಸಾಚ್ಚ ವೀರಾತ್ ॥ ೧೫೦ ॥

ಇತ್ಯೇವಮುಕ್ತೋ ನೃಪತಿಂ ಸ ಹಸ್ತೀ ।
ವಚಸ್ತಮಾಹಾಶು ಶೃಣುಷ್ವ ರಾಜನ್ ॥
ಯಾವದಹಂ ವೈ ತನು ಜೀವಧಾರೀ ।
ತಾವದ್ಭವಾಞ್ಛತ್ರುಭಯಂಕರಶ್ಚ ॥ ೧೫೧ ॥

---

೧೪೯. ಪರಮೇಶ್ವರನು ಕರುಣಿಸಿಕೊಟ್ಟಿದ್ದೂ, ಮದವುಳ್ಳದ್ದೂ, ಉಗ್ರವಾದುದೂ, ಆ ಆಹ್ಲಾದನ ವಾಹನವೂ ಆದ ಆ ಪ್ರಮತ್ತವೆಂಬ ಆನೆಯನ್ನು ಕುರಿತು ಆತನು "ಎಲೈ ಶೂರವೂ ಶಿವಪ್ರಸಾದದತ್ತವೂ ಆದ ಪ್ರಮತ್ತ ಗಜೇಂದ್ರನೇ! ನನ್ನಲ್ಲಿ ಅನುಗ್ರಹಮಾಡಿ ನನಗೆ ಜಯವುಂಟಾಗುವಂತೆ ಮಾಡು."

೧೫೦. "ಎಲೈ ಮಹಾಗಜವೇ! ಆಹ್ಲಾದನೆಂಬುವನು ರಾಮಾಂಶದಿಂದ ಜನಿಸಿ ಯುದ್ಧದಲ್ಲಿ ಮಹಾಮದವೇರಿದವನಾಗಿ ಮಂಡಲೇಶನೆನಿಸಿಕೊಂಡು ಪ್ರಸಿದ್ಧನಾಗಿದಾನೆ. ಮಹಾಬಲಶಾಲಿಯೂ, ಕಾಲನಂತೆ ಶಕ್ತಿವಂತನೂ ಆದ ವೀರ ಆಹ್ಲಾದನಿಂದ ನನಗೆ ಅಪಾಯವಾಗದಂತೆ ರಕ್ಷಿಸು" ಎಂದು ಪ್ರಾರ್ಥಿಸಿದನು.

೧೫೧. ಈರೀತಿಯಾಗಿ ಹೇಳಿದ ರಾಜನನ್ನು ಕುರಿತು ಆ ಆನೆಯು ಕೂಡಲೆ "ಎಲೈ ರಾಜನೇ! ಕೇಳು. ನನ್ನ ಈ ಶರೀರದಲ್ಲಿ ಪ್ರಾಣವಿರುವವರೆಗೂ ನೀನು ಯಾರಿಗೂ ಸೋಲದೆ ಶತ್ರುಭಯಂಕರನಾಗಿರುತ್ತೀ" ಎಂದು ಹೇಳಿತು.

ಇತ್ಯುಕ್ತವಂತಂ ಚ ಗಜಂ ಪ್ರಮತ್ತಂ ।
ಸ ಪಂಚಶಬ್ದಶ್ಚ ತದಾ ಸ್ವದಂತೈಃ ॥
ಮುಖಂ ಚತುರ್ಭಿಶ್ಚ ವಿದಾರ್ಯ ಶತ್ರೋಃ ।
ನನರ್ದ ಘೋರಂ ಸ ಮಹೇಂದ್ರದತ್ತಃ ॥ ೧೫೨ ॥

ಸ ರುದ್ರದತ್ತಶ್ಚ ಗಜಃ ಪ್ರಮತ್ತೋ ।
ರುಷಾನ್ವಧಾವತ್ತರಸಾ ಗಜೇಂದ್ರಂ ॥
ರಿಪುಂ ಸ್ವಪದ್ಭ್ಯಾಂ ಚ ಚಖಾನ ಕುಂಭೈಃ ।
ಸ್ವತುಂಡದಂಡೇಪ ತುದಂ ಪ್ರಕುರ್ವನ್ ॥ ೧೫೩ ॥

ಅವಾಪ ಮೂರ್ಛಾಂ ಚ ಸ ಪಂಚಶಬ್ದ ।
ಸ್ತದಾಶು ಭೂಪಂ ಪ್ರತಿ ಮಂಡಲೀಕಃ ॥
ಸ್ವತೋಮರೇಣಾಂಗವ್ರಣಂ ಪ್ರದಾಯ ।
ಖಡ್ಗೇನ ಹತ್ವಾ ಗಜರಾಜಮುಗ್ರಂ ॥
ಜಗಾಮ ಪದ್ಭ್ಯಾಂ ಸ ರಿಪುಪ್ರಮಾಥೀ ।
ಯತ್ರ ಸ್ಥಿತಶ್ಚೇಂದುಲ ಉಗ್ರಧನ್ವಾ ॥ ೧೫೪ ॥

---

೧೫೨. ಈರೀತಿ ಹೇಳಿದ ಪ್ರಮತ್ತಗಜವನ್ನು ಮಹೇಂದ್ರದತ್ತವಾದ ಆ ಪಂಚಶಬ್ದಗಜವು ಸಮಿಾಪಿಸಿ ಬಂದಿತು. ಕೂಡಲೆ ತನ್ನ ನಾಲ್ಕು ದಂತಗಳಿಂದ ಅದರ ಮುಖವನ್ನು ಸೀಳಿ ಘೋರವಾಗಿ ಘೀಂಕರಿಸಿತು.

೧೫೩. ಈಶ್ವರನಿಂದ ಕೊಡಲ್ಪಟ್ಟ ಪ್ರಮತ್ತಗಜವು ಆಗ ರೋಷದಿಂದ ಆ ಪಂಚಶಬ್ದಗಜವನ್ನು ವೇಗವಾಗಿ ಬೆನ್ನಟ್ಟಿಸಿಕೊಂಡು ಹೋಗಿ ತನ್ನ ಎರಡು ಕಾಲುಗಳಿಂದಲೂ ಅದರ ಕುಂಭಸ್ಥಳವನ್ನು ಬಲವಾಗಿ ತುಳಿದು ದಂಡದಂತಿರುವ ತನ್ನ ಸೊಂಡಲಿನಿಂದ ಅದನ್ನು ಹೊಡೆದು ನೋಯಿಸಿತು. ಇದರಿಂದ ಆ ಪಂಚಶಬ್ದಗಜವು ಕೂಡಲೇ ಮೂರ್ಛೆಬಿದ್ದುಬಿಟ್ಟಿತು.

೧೫೪. ಈವೇಳೆಗೆ ಪ್ರತಿಪಕ್ಷದ ಮಂಡಲೇಶ್ವರನಾದ ಆಹ್ಲಾದನು ಪೃಥ್ವೀರಾಜನ ಬಳಿಗೆ ಬಂದು ತನ್ನ ತೋಮರಾಯುಧದಿಂದ ಅವನ ಶರೀರದಲ್ಲಿ ಗಾಯಪಡಿಸಿದ್ದಲ್ಲದೆ ಕ್ರೂರಸ್ವಭಾವದ ಪ್ರಾಣಿಯಾದ ಆ ಪ್ರಮತ್ತಗಜವನ್ನು ಕತ್ತಿಯಿಂದ ಹೊಡೆದು ಬೀಳಿಸಿದನು.

ಉತ್ಥಾಪ್ಯ ಪುತ್ರಂ ಚ ವಿಲಪ್ಯಮಾನಾಂ ।
ಪತ್ನೀಂ ಸ್ವಕೀಯಾಂ ಪ್ರತಿ ಚಾಜಗಾಮ ॥
ತದಾ ಪ್ರಮತ್ತೌ ಚ ಗಜೌ ಸುಮೂರ್ಛಾಂ ।
ತ್ಯಕ್ತ್ವಾ ಪುನಶ್ಚಕ್ರತುರೇವ ಯುದ್ಧಂ ॥ ೧೫೫ ॥

ಸ ಲಕ್ಷಣಃ ಖಡ್ಗವರೇಣ ಬಾಣಾನ್ ।
ರಿಪೋಶ್ಚ ಛಿತ್ವಾ ನಿಜವೈಷ್ಣವಾಸ್ತ್ರಂ ॥
ದಧಾರ ಚಾಪೇ ಚ ಸುಮಂತ್ರಯಿತ್ವಾ ।
ಸಧುಂಧುಕಾರಂ ಚ ಗಜಂ ದದಾಹ ॥ ೧೫೬ ॥

ಹತೇ ಚ ತಸ್ಮಿನ್ನಿಜಮುಖ್ಯಬಂಧೌ ।
ಸಭೂಮಿರಾಜಶ್ಚ ಗೃಹೀತಚಾಪಃ ॥
ಶರೇಣ ರೌದ್ರೇಣ ಚ ಲಕ್ಷಣಂ ತಂ ।
ಜಘಾನ ತತ್ರಾರಿಭಯಂಕರಸ್ಥಃ ॥ ೧೫೭ ॥

---

೧೫೫. ಹೀಗೆ ಶತ್ರುವನ್ನು ಧ್ವಂಸಮಾಡಿದ ಆಹ್ಲಾದನು ಧನುರ್ವಿದ್ಯೆಯಲ್ಲಿ ಅಸಮಸಾಹಸಿಯಾದ ಇಂದುಲನಿದ್ದ ಬಳಿಗೆ ಕಾಲುನಡಗೆಯಲ್ಲಿಯೇ ನಡೆದುಕೊಂಡು ಹೊರಟನು. ಆಗ ಅವನ ಹೆಂಡತಿಯು ಮಗನನ್ನು ಕೂರಿಸಿಕೊಂಡು ಗೋಳಾಡು ತ್ತಿದ್ದಳು. ಇವನೂ ಅಲ್ಲಿಗೆ ಬಂದನು. ಆಗ ಆ ಆನೆಗಳೆರಡೂ ಮೂರ್ಛೆತಿಳಿದೆದ್ದು ಮತ್ತೆ ಯುದ್ಧಮಾಡಿದುವು.

೧೫೬. ಅತ್ತ ಲಕ್ಷಣನು ತನ್ನ ಶ್ರೇಷ್ಠವಾದ ಖಡ್ಗದಿಂದ ಶತ್ರುವಿನ ಬಾಣ ಗಳನ್ನು ಕತ್ತರಿಸಿಹಾಕಿ ತನ್ನ ಬಿಲ್ಲಿನಲ್ಲಿ ವೈಷ್ಣವಾಸ್ತ್ರವನ್ನು ಹೂಡಿ ಚೆನ್ನಾಗಿ ಅಭಿ ಮಂತ್ರಣಮಾಡಿ ಪ್ರಯೋಗಿಸಿ ಅದರ ಪ್ರಭಾವದಿಂದ ಆ ಧುಂಧುಕಾರನನ್ನೂ ಆ ಆನೆ ಯನ್ನೂ ಸಹ ದಹಿಸಿಬಿಟ್ಟನು.

೧೫೭. ತನ್ನ ಕಡೆಯವರಲ್ಲಿ ಮುಖ್ಯನೂ ತನ್ನ ಸಹೋದರನೂ ಆದ ಧುಂಧು ಕಾರನು ಮೃತನಾಗಲಾಗಿ ಶತ್ರುಭಯಂಕರನಾದ ಪೃಥ್ವೀರಾಜನು ತಾನೇ ಬಿಲ್ಲನ್ನು ಹಿಡಿದು ಪರಮೇಶ್ವರನ ಸಂಬಂಧವಾದ ರೌದ್ರಾಸ್ತ್ರವನ್ನು ಹೂಡಿ ಆ ಲಕ್ಷಣನ ಮೇಲೆ ಪ್ರಯೋಗಿಸಿದನು.

ಸ ಮೂರ್ಛಿತಃ ಶುಕ್ಲಕುಲೇಷು ಸೂರ್ಯ ।
ಸ್ತದೋದಯೋ ವೈ ಭಗವತ್ತಮೇವ ॥
ಸುಮೂರ್ಛಯಿತ್ವಾ ಚ ಜಗಾಮ ಶೀಘ್ರಂ ।
ಯತ್ರ ಸ್ಥಿತೋ ಲಕ್ಷಣ ಏಕವೀರಃ ॥ ೧೫೮ ॥

ಭಯಾನ್ವಿತಸ್ತಂ ಚ ವಿಲೋಕ್ಯ ರಾಜಾ ।
ಜವೇನ ದುದ್ರಾವ ಚ ರಕ್ತಬೀಜಂ ॥
ತದಾ ಸುದೇವಂ ಚ ಸ ರಕ್ತಬೀಜೋ ।
ಜಿತ್ವಾ ತು ಕೃಷ್ಣಾಂಶಯುತಂ ಜಗಾಮ ॥ ೧೫೯ ॥

ಬಾಣೇನ ಶೀಘ್ರಂ ಸ ಚ ಮೂರ್ಛಯಿತ್ವಾ ।
ಪುನಶ್ಚ ದೇವಂ ಚ ಸ ಮೂರ್ಛಯಿತ್ವಾ ॥
ತದ್ಬಂಧನಾಯೋದ್ಯತ ಆಶುಕಾರೀ ।
ಸ ಲಕ್ಷಣಸ್ತತ್ರ ತದಾ ಜಗಾಮ ॥ ೧೬೦ ॥

---

೧೫೮. ಪರಿಶುದ್ಧಕುಲಸಂಭೂತನೆನಿಸಿ ಶ್ರೇಷ್ಠನಾದ ಆ ಲಕ್ಷಣನು ಈ ಏಟಿನಿಂದ ಮೂರ್ಛೆಹೋದನು. ಈವೇಳೆಗೆ ಉದಯನು (ಕೃಷ್ಣಾಂಶನು) ಭಗದತ್ತನನ್ನು ಸಂಪೂರ್ಣವಾಗಿ ಮೂರ್ಛೆಬೀಳಿಸಿ ವೀರನಾದ ಲಕ್ಷಣನು ಇದ್ದಲ್ಲಿಗೆ ಬೇಗ ಬಂದನು.

೧೫೯. ಹೀಗೆ ಅವನು ಬಂದುದನ್ನು ನೋಡಿ ಪೃಥ್ವೀರಾಜನು ಭಯಪಟ್ಟು ವೇಗವಾಗಿ ಓಡಿ ರಕ್ತಬೀಜನ ಬಳಿಗೆ ಸೇರಿದನು. ಆಗ ಆ ರಕ್ತಬೀಜನು ಕೃಷ್ಣಾಂಶ ಸಹಿತನಾದ ಸುದೇವನನ್ನು ಜಯಿಸಿ ಮುಂದಕ್ಕೆ ಹೋದನು.

೧೬೦. ಅನಂತರ ಈ ರಕ್ತಬೀಜನು ತನ್ನ ಬಾಣದಿಂದ ಹೊಡೆದು ಮತ್ತೆ ದೇವಸಿಂಹನನ್ನು ಸಹ ಮೂರ್ಛೆಬೀಳಿಸಿ ಅವನನ್ನು ಬಂಧಿಸುವುದಕ್ಕೆ ಉದ್ಯುಕ್ತನಾಗಿ ತ್ವರೆಪಡುತ್ತಿರಲು ಅಷ್ಟರಲ್ಲಿ ಎಚ್ಚರಹೊಂದಿದ ಲಕ್ಷಣನು ಅಲ್ಲಿಗೆ ಬಂದನು.

ಪ್ರಧಾಯ ಚಾಪೇ ಚ ಸ ವೈಷ್ಣವಾಸ್ತ್ರಂ ।
ಪ್ರಚೋದಯಾಮಾಸ ಚ ರಕ್ತಬೀಜೇ ॥
ತದಾ ಸ ಸಾಮಂತಸುತೋ ಬಲೀಯಾನ್ ।
ರಣಂ ವಿಹಾಯಾಶು ವಿಲೋಕ್ಯ ಸಂಧ್ಯಾಂ ॥
ಭಯಾನ್ವಿತಃ ಸ್ವೈಶ್ಚ ಯುತೋ ಯಯೌ ವೈ ।
ಯತ್ರ ಸ್ಥಿತಾ ಭೂಪತಯಃ ಸಕೋಪಾಃ ॥ ೧೬೧ ॥

ವಿಲೋಕ್ಯ ಶತ್ರುಂ ಚ ಸ ರತ್ನಭಾನೋಃ ।
ಸುತೋ ಯಯೌ ವೈ ಶಿಬಿರಾಣಿ ಯುಕ್ತಃ ॥
ನಿಶಾಮ್ಯ-ಭೂಪಃ ಸ ಚ ಚಂದ್ರವಂಶೀ ।
ಜಯಂ ಸ್ವಕೀಯಂ ಸುಷುಪುಸ್ತು ತೇ ವೈ ॥
ಪ್ರಾತಶ್ಚ ಕಾಲೇ ಸ ಚ ಚಂದ್ರವಂಶೀ ।
ವಿಲೋಕ್ಯ ಶುಕ್ಲಾನ್ವಯಮಾಹ ಭೂಪಂ ॥ ೧೬೨ ॥

ಅಯೇ ಗುರ್ಜರದೇಶೀಯ ಮೂಲವರ್ಮನ್ ಸುತೈಃ ಸಹ ।
ಲಕ್ಷಸೈನ್ಯಾನ್ವಿತೋ ಭೂತ್ವಾ ಗಂತುಮರ್ಹಸಿ ವೈ ಭವಾನ್ ॥ ೧೬೩ ॥

---

೧೬೧. ಆ ಲಕ್ಷಣನು ತನ್ನ ಧನುಸ್ಸಿನಲ್ಲಿ ವೈಷ್ಣವಾಸ್ತ್ರವನ್ನು ಹೂಡಿ ಆ ರಕ್ತಬೀಜನ ಮೇಲೆ ಪ್ರಯೋಗಿಸಿದನು. ಆಗ ಸಾಮಂತವಿಪ್ರನ ಪುತ್ರನೂ ಬಲಶಾಲಿಯೂ ಆದ ರಕ್ತಬೀಜನು ಸಂಧ್ಯಾಕಾಲವಾದುದನ್ನು ನೋಡಿ ದಿಗಿಲಿನಿಂದ ಕೂಡಿ ರಣರಂಗವನ್ನು-ಬಿಟ್ಟು ತನ್ನವರನ್ನೆಲ್ಲಾ ಕರೆದುಕೊಂಡು ಹೊರಟು ಯುದ್ಧದಲ್ಲಿ ಕೈಸಾಗಮುದಕ್ಕೆ ಕೋಪಾವಿಷ್ಟರಾಗಿ ಕುಳಿತಿದ್ದ ರಾಜರುಗಳೆಲ್ಲಾ ಇದ್ದ ಬಳಿಗೆ ಹೋದನು.

೧೬೨. ಹೀಗೆ ತನ್ನ ಶತ್ರುವಾದ ರಕ್ತಬೀಜನು ಯುದ್ಧರಂಗವನ್ನು ಬಿಟ್ಟು ಓಡಿಹೋದುದನ್ನು ನೋಡಿ ರತ್ನಭಾನುಪುತ್ರನಾದ ಲಕ್ಷಣನೂ ತನ್ನ ಶಿಬಿರಕ್ಕೆ ಹೋದನು. ಬಳಿಕ ಚಂದ್ರವಂಶದ ರಾಜನಾದ ಪರಿಮಳನು ಈ ವೃತ್ತಾಂತವನ್ನು ಕೇಳಿ ಆ ದಿನದ ಯುದ್ಧದಲ್ಲಿ ತಮಗೇ ಜಯವಾಯಿತು ಎಂದು ನಿಶ್ಚಯಿಸಿದನು. ಅನಂತರ ಆ ರಾತ್ರಿ ಅವರೆಲ್ಲರೂ ಸುಖವಾಗಿ ಮಲಗಿ ನಿದ್ರಿಸಿದರು.

೧೬೩. ಪರಿಮಲನು ಮೂರನೆಯದಿನ ಬೆಳಗಾಗುತ್ತಲೇ ಶುಕ್ಲಾನ್ವಯಸಂಭೂತನಾದ ಮೂಲವರ್ಮನನ್ನು ನೋಡಿ " ಎಲೈ ! ಗುರ್ಜರ ದೇಶಾಧಿಪತಿಯೇ !

ಇತ್ಯುಕ್ತ್ವಾ ಸ್ಸ ತು ಭೂಪಾಲೋ ಯುದ್ಧಭೂಮಿಮುಪಾಯಯೌ ।
ಮಹೀರಾಜಾಜ್ಞಯಾ ಪ್ರಾಪ್ತೋ ನಾಮ್ನಾ ಪೂರ್ಣಾಮಲೋ ಬಲೀ ॥ ೧೬೪ ॥

ದಶಪುತ್ರಾನ್ವಿತೋ ಯುದ್ಧೇ ಸೈನ್ಯಲಕ್ಷೇಣ ಸಂಯುತಃ ।
ತಯೋಶ್ಚಾಸೀನ್ಮಹದ್ಯುದ್ಧಂ ಯಾಮದ್ವಯಮುಪಸ್ಥಿತಂ ॥ ೧೬೫ ॥

ಹತೇಷು ತೇಷು ಸರ್ವೇಷು ತೌ ನೃಪೌ ಸಸುತೈರ್ಬಲೌ ।
ಅನ್ಯೋನ್ಯೇನ ರಣಂ ಕೃತ್ವಾ ಯಮಲೋಕಮುಪಾಗತೌ ॥ ೧೬೬ ॥

ಮಾರ್ಗಕೃಷ್ಣಚತುರ್ದಶ್ಯಾಂ ಪ್ರಭಾತೇ ವಿಮಲೇ ರವೌ ।
ಕೈಕಯೋ ಲಕ್ಷಸೇನಾಢ್ಯೋ ದಶಪುತ್ರಸಮನ್ವಿತಃ ॥ ೧೬೭ ॥

---

ನೀನು ನಿನ್ನ ಮಕ್ಕಳೊಡನೆ ಒಂದುಲಕ್ಷ ಸೈನ್ಯದೊಡಗೂಡಿ ಈದಿನ ಯುದ್ಧಕ್ಕೆ ಹೋಗಿ ಜಯಶಾಲಿಯಾಗು " ಎಂದು ಆಜ್ಞಾಪಿಸಿದನು.

೧೬೪-೧೬೫. ಹೀಗೆ ಹೇಳುತ್ತಲೇ ಆ ರಾಜನು ಯುದ್ಧಭೂಮಿಗೆ ಹೋದನು. ಇತ್ತ ಪೃಥ್ವೀರಾಜನ ಅಪ್ಪಣೆಯ ಮೇರೆ ಬಲಶಾಲಿಯಾದ ಪೂರ್ಣಾಮಲನೆಂಬ ರಾಜನು ತನ್ನ ಹತ್ತುಜನ ಮಕ್ಕಳೊಡನೆಯೂ ಲಕ್ಷಸೈನ್ಯದೊಡನೆಯೂ ಕೂಡಿ ರಣಭೂಮಿಗೆ ಬಂದನು. ಅವರಿಬ್ಬರಿಗೂ ಎರಡು ಜಾವಕಾಲ ದೊಡ್ಡಯುದ್ಧ ನಡೆಯಿತು.

೧೬೬. ಅವರಿಬ್ಬರ ಪಕ್ಷದ ಎಲ್ಲಾ ಸೇನೆಗಳೂ ಹತವಾಗಲಾಗಿ ಬಲಶಾಲಿಗಳಾದ ಆ ಇಬ್ಬರು ರಾಜರೂ ತಮ್ಮ ಪುತ್ರರೊಡಗೂಡಿ ಎದುರಾಳಿಗಳೊಡನೆ ಯುದ್ಧಮಾಡಿ ಉಭಯಪಕ್ಷದವರೂ ಯಮಲೋಕವನ್ನು ಐದಿದರು.

೧೬೭. ಮಾರ್ಗಶಿರ ಬಹುಳ ಚತುರ್ದಶಿಯದಿನ ಬೆಳಿಗ್ಗೆ ಸೂರ್ಯನು ಉದಯಿಸಿ ನಿರ್ಮಲವಾಗಿ ಪ್ರಕಾಶಿಸುತ್ತಿರಲು ಲಕ್ಷಣನ ಆಜ್ಞೆಯಂತೆ ಕೇಕಯರಾಜನು ತನ್ನ ಲಕ್ಷಸೈನ್ಯಸಮೇತನಾಗಿ ಹತ್ತುಜನ ಪುತ್ರರೊಡಗೂಡಿ ಭಯಂಕರವಾದ ಆ ಯುದ್ಧಭೂಮಿಗೆ ಬಂದನು.

ಲಕ್ಷಣಾನುಜ್ಞಯಾ ಪ್ರಾಪ್ತಸ್ತಸ್ಮಿನ್ ಯುಧಿ ಭಯಾನಕೇ ।
ಮದ್ರಕೇಶಸ್ತದಾ ರಾಜಾ ದಶಪುತ್ರಸಮನ್ವಿತಃ ।
ಲಕ್ಷಸೈನ್ಯಾನ್ವಿತಸ್ತತ್ರ ಯತ್ರ ಯುದ್ಧಂ ಸಮನ್ವಭೂತ್ ॥ ೧೬೮ ॥

ಪರಸ್ಪರಂ ಹತಾಸ್ಸರ್ವೇ ದಿನಾಂತೇ ಕ್ಷತ್ರಿಯಾ ರಣೇ ।
ಪುನಃ ಪ್ರಭಾತೇ ವಿಮಲೇ ಭಗದತ್ತೋ ಮಹಾಬಲೀ ॥
ತ್ರಿಲಕ್ಷಬಲಸಂಯುಕ್ತೋ ಜಗರ್ಜ ರಣಮೂರ್ಧನಿ ॥ ೧೬೯ ॥

ದೃಷ್ಟ್ವಾ ತಂ ಲಕ್ಷಣೋ ವೀರಃ ತ್ರಿಲಕ್ಷಬಲಸಂಯುತಃ ।
ಚಕಾರ ತುಮುಲಂ ಘೋರಂ ಸೇನಯಾ ಚ ಸ್ವಕೀಯಯಾ ॥ ೧೭೦ ॥

ಅಪರಾಹ್ಣೇ ಹತಾಃ ಸರ್ವೇ ಸೈನಿಕಾ ನೃಪಯೋಸ್ತದಾ ।
ಭಗದತ್ತಃ ಸ್ವಯಂ ಕ್ರುದ್ಧೋ ರಥಸ್ಥೋ ಲಕ್ಷಣಂ ಯಯೌ ॥ ೧೭೧ ॥

---

೧೬೮. ಇತ್ತ ಪೃಥ್ವೀರಾಜನ ಆಶಯದಂತೆ ಮದ್ರಕೇಶರಾಜನು ತನ್ನ ಹತ್ತು ಮಂದಿ ಮಕ್ಕಳೊಡನೆ ಒಂದುಲಕ್ಷ ಸೈನ್ಯವನ್ನು ತೆಗೆದುಕೊಂಡು ಯುದ್ಧಭೂಮಿಗೆ ಬಂದು ಸೇರಿದನು.

೧೬೯-೧೭೦. ಹೀಗೆ ಬಂದಕೂಡಲೆ ಆ ಕ್ಷತ್ರಿಯವೀರರು ಘೋರವಾಗಿ ಯುದ್ಧಮಾಡಿ ಸಾಯಂಕಾಲದ ವೇಳೆಗೆ ಎಲ್ಲರೂ ಹತರಾದರು. ಮಾರನೆಯದಿನ ಬೆಳಗಾಗುತ್ತಲೇ ಮಹಾಬಲಶಾಲಿಯಾದ ಭಗದತ್ತನು ಮೂರುಲಕ್ಷ ಸೇನೆಯಿಂದ ಕೂಡಿದವನಾಗಿ ರಣಭೂಮಿಯಲ್ಲಿ ನಿಂತು ಗರ್ಜಿಸಿದನು. ವೀರನಾದ ಲಕ್ಷಣನು ಅದನ್ನು ನೋಡಿ ತನ್ನ ಕಡೆಯ ಮೂರುಲಕ್ಷ ಸೈನ್ಯದೊಡದೆ ಬಂದು ಭಯಂಕರವಾದ ಸಂಕುಲಯುದ್ಧವನ್ನು ಮಾಡಿದನು.

೧೭೧. ಅಪರಾಹ್ಣದ ವೇಳೆಗೆ ಇಬ್ಬರುರಾಜರ ಪಕ್ಷದಲ್ಲೂ ಎಲ್ಲ ಸೈನಿಕರೂ ನಿರ್ನಾಮವಾದರು. ಆಗ ಭಗದತ್ತನು ಕ್ರೋಧಾವೇಶದಿಂದ ಬಂದು ರಥವನ್ನು ಏರಿ ಎದುರಾಳಿಯಾದ ಲಕ್ಷಣನ ಮೇಲೆ ತಾನೇ ನುಗ್ಗಿದನು.

ಲಕ್ಷ್ಮಣೋ ರಥಮಾರುಹ್ಯ ಸ್ವಪಿತುಃ ಶತ್ರುಜಂ ನೃಪಂ ।
ತ್ರಿಭಿರ್ಬಾಣೈಶ್ಚ ಸಂತಾಡ್ಯ ಭಲ್ಲೇನ ಸಮತಾಡಯತ್ ॥ ೧೭೨ ॥

ಭಗದತ್ತಸ್ತದಾ ಕ್ರುದ್ಧೋ ವಿರಥಂ ತಂ ಚಕಾರ ಹ ।
ಕ್ರುದ್ಧವಂತಂ ರಿಪುಂ ಘೋರಂ ಲಕ್ಷ್ಮಣಃ ಖಡ್ಗಪಾಣಿಕಃ ॥
ಹತ್ವಾ ಹಯಾಂಸ್ತಥಾ ಸೂತಂ ಭಗದತ್ತಮುಪಾಯಯೌ ॥ ೧೭೩ ॥

ಮರ್ದಯಿತ್ವಾ ಚ ತಚ್ಚರ್ಮ ಛಿತ್ವಾ ವರ್ಮ ತದುದ್ಭವಂ ।
ತ್ರಿಧಾ ಚಕಾರ ಬಲವಾನ್ ಭಗದತ್ತಂ ರಿಪೋಸ್ಸುತಂ ॥ ೧೭೪ ॥

ಸಂಧ್ಯಾಕಾಲೇ ಹತೇ ತಸ್ಮಿನ್ ಲಕ್ಷ್ಮಣಸ್ತ್ವರಯಾನ್ವಿತಃ ।
ಏಕಾಕೀ ಶಿಬಿರಂ ಪ್ರಾಪ್ತೋ ಹಸ್ತಿನ್ಯುಪರಿ ಸಂಸ್ಥಿತಃ ॥ ೧೭೫ ॥

---

೧೭೨. ಆಗ ಲಕ್ಷ್ಮಣನು ತನ್ನ ರಥವನ್ನು ಏರಿ, ತನ್ನ ತಂದೆಯ ಶತ್ರುವಿನ ಮಗನಾದ ಈ ಭಗದತ್ತನನ್ನು ಮೂರು ಬಾಣಗಳಿಂದ ಘಾತಿಸಿದುದಲ್ಲದೆ ತನ್ನ ಭಲ್ಲೆಯದಿಂದಲೂ ಹೊಡೆದನು.

೧೭೩-೧೭೪ ಆಗ ಭಗದತ್ತನು ಕ್ರೋಧಯುಕ್ತನಾಗಿ ಆ ಲಕ್ಷ್ಮಣನ ರಥವನ್ನು ಘಾತಿಸಿ, ಅವನನ್ನು ರಥವಿಹೀನನನ್ನಾಗಿ ಮಾಡಿದನು. ಕೂಡಲೆ ಲಕ್ಷ್ಮಣನು ಒರೆಯಿಂದ ಖಡ್ಗವನ್ನು ಹಿರಿದು ರೋಷಾವಿಷ್ಟನೂ ರಣಭಯಂಕರನೂ ಆದ ಶತ್ರುವಿನ ಮೇಲೆ ಬಿದ್ದು, ಅವನ ರಥದ ಕುದುರೆಗಳನ್ನೂ ಸಾರಥಿಯನ್ನೂ ಸಂಹರಿಸಿ, ಆ ಭಗದತ್ತನ ಸಮೀಪಕ್ಕೇ ನುಗ್ಗಿದನು. ಬಲಶಾಲಿಯಾದ ಲಕ್ಷ್ಮಣನು, ಭಗದತ್ತನ ದೇಹದ ಚರ್ಮವು ಸೀಳುವಂತೆ ಅವನ ಕವಚವನ್ನೆಲ್ಲಾ ಛೇದಿಸಿ ಭಗದತ್ತನನ್ನು ಮೂರು ತುಂಡಾಗಿ ಛೇದಿಸಿದನು.

೧೭೫. ಹೀಗೆ ಶತ್ರುವು ಮೃತನಾಗಲಾಗಿ ಲಕ್ಷ್ಮಣನು ಸಾಯಂಕಾಲದ ಹೊತ್ತಿಗೆ ಆತುರಆತುರದಿಂದ ಒಬ್ಬನೇ ಆನೆಯನ್ನೇರಿ ಶಿಬಿರಕ್ಕೆ ಬಂದು ಬಿಟ್ಟನು.

ಭಗವತ್ತೇ ಹತೇ ತಸ್ಮಿನ್ ಸ ರಾಜಾ ಕ್ರೋಧಮೂರ್ಛಿತಃ ।
ಸ್ವಕೀಯಾನ್ ಸರ್ವಭೂಪಾಂಶ್ಚ ಚಾಮುಂಡೇನ ಸಮನ್ವಿತಾನ್ ॥
ಪ್ರೇಷಯಾಮಾಸ ಯುದ್ಧಾಯ ಪುಷೋ ಚ ಪ್ರತಿಪದ್ದಿನೇ ॥ ೧೭೬ ॥

ಅಂಗದಶ್ಚ ಕಲಿಂಗಶ್ಚ ತ್ರಿಕೋಣಃ ಶ್ರೀಪತಿಸ್ತಥಾ ।
ಶ್ರೀತಾರಶ್ಚ ಮುಕುಂದಶ್ಚ ರುಹಿಲೋ ಗುಹಿಲಸ್ತಥಾ ॥ ೧೭೭ ॥

ಸುಕೇತುರ್ನವ ಭೂಪಾಸ್ತೇ ನವಾಯುತಬಲೈರ್ಯುತಾಃ ।
ವಾದ್ಯಾನಿ ವಾದಯಾಮಾಸುಸ್ತಸ್ಮಿನ್ಯುದ್ಧಮಹೋತ್ಸವೇ ॥ ೧೭೮ ॥

ದೃಷ್ಟ್ವಾ ತಾನ್ಲಕ್ಷಣೋ ವಿರೋ ರಾಜಭಿಶ್ಚ ಸ್ವಕೀಯಕೈಃ ।
ಸಾರ್ಧಂ ಜಗಾಮ ಯುದ್ಧಾಯ ತಥಾ ವ್ಯೂಹ್ಯಾಯುಧದ್ರಿಪೂನ್॥ ೧೭೯ ॥

ರುದ್ರವರ್ಮಾ ಚ ನೃಪತಿಃ ಶೂರೈರ್ದಶಸಹಸ್ರಕೈಃ ।
ಅಂಗದಂ ವೈರಿಣಂ ಮತ್ವಾ ತೇನ ಸಾರ್ಧಮಯುಧ್ಯತ ॥ ೧೮೦ ॥

---

೧೭೬. ತನ್ನ ಪಕ್ಷದ ವೀರನಾದ ಭಗದತ್ತನು ಹೀಗೆ ಮೃತನಾಗಲಾಗಿ ಆ ಪೃಥ್ವೀರಾಜನು ಕೋಪದಿಂದ ಎಚ್ಚರ ತಪ್ಪಿದವನಾಗಿ ತನ್ನ ಪಕ್ಷದ ಎಲ್ಲ ರಾಜರುಗಳನ್ನೂ ಚಾಮುಂಡನ ಜತೆಮಾಡಿ ಪುಷ್ಯಮಾಸ ಪ್ರತಿಪತ್ತಿನದಿವಸ ಯುದ್ಧ ಮಾಡಲು ಕಳುಹಿಸಿದನು.

೧೭೭-೧೭೮. ಹಾಗೆ ಆದಿನ ಕಳುಹಿಸಿದ ರಾಜರಲ್ಲಿ ಅಂಗದರಾಜ, ಕಳಿಂಗರಾಜ, ತ್ರಿಕೋಣಾಧಿಪ, ಶ್ರೀಪತಿ, ಶ್ರೀತಾರ, ಮುಕುಂದ, ರುಹಿಲ, ಗುಹಿಲ, ಸುಕೇತು ಎಂಬ ಒಂಬತ್ತುಜನ ರಾಜರು ತಮ್ಮ ತಮ್ಮ ಕಡೆಯ ಹತ್ತು ಹತ್ತು ಸಾವಿರ ಸೈನ್ಯಗಳ ಸಮೇತ ಹೊರಟು ರಣವಾದ್ಯಗಳಸಮೇತ ಯುದ್ಧಕ್ಕೆ ಬಂದರು.

೧೭೯. ಹೀಗೆ ಶತ್ರುಪಕ್ಷದ ರಾಜರು ತನ್ನನ್ನು ಎದುರಿಸಲು ಬಂದುದನ್ನು ನೋಡಿ ವೀರನಾದ ಲಕ್ಷಣನೂ ಸಹ ತನ್ನ ಕಡೆಯ ರಾಜರುಗಳೊಡನೆ ಹೊರಟು ರಣಭೂಮಿಗೆ ಬಂದು ವ್ಯೂಹಗಳನ್ನು ರಚಿಸಿಕೊಂಡು ಶತ್ರುಗಳೊಡನೆ ಯುದ್ಧ ಮಾಡಿದನು.

೧೮೦. ಲಕ್ಷಣನ ಪಕ್ಷದ ರಾಜನಾದ ರುದ್ರವರ್ಮನೆಂಬುವನು ತನ್ನ ಕಡೆಯ ಹತ್ತುಸಾವಿರ ಸೇನೆಯೊಡನೆ ಹೊರಟು ಶತ್ರುಪಕ್ಷದ ಅಂಗದನನ್ನು ಎದುರಿಸಿ ಅವನೊಡನೆ ಘೋರಯುದ್ಧ ಮಾಡಿದನು.

ಕಾಲೀವವರ್ಮಾಽಯುತೈಸ್ಸಾರ್ಧಂ ಕಲಿಂಗಂ ಪ್ರತ್ಯಯುದ್ಧ್ಯತ ।
ವೀರಸಿಂಹೋಽಯುತೈಸ್ಸಾರ್ಧಂ ತ್ರಿಕೋಣಂ ಪ್ರತ್ಯಯುದ್ಧ್ಯತ ॥ ೧೮೧ ॥

ತತೋಽನುಜಃ ಪ್ರವೀರಶ್ಚ ಶ್ರೀಪತಿಂ ಸೋಽಯುತೈಸ್ಸಹ ।
ನೃಪಃ ಸೂರ್ಯರಥೋ ವೀರೋಽಯುತಾಢ್ಯೋ ಬಲವಾನ್ರಣೇ ॥
ಶ್ರೀತಾರಂ ನೃಪಮಾಸಾದ್ಯ ಮಹದ್ಯುದ್ಧಮಚೀಕರತ್ ॥ ೧೮೨ ॥

ವಾಮನೋಽಯುತಸಂಯುಕ್ತೋ ಮುಕುಂದಂ ಪ್ರತಿ ಸೋಽಗಮತ್ ।
ಗಂಗಾಸಿಂಹಶ್ಚ ಬಲವಾನ್ರುಹಿಲಂ ಪ್ರತಿ ಸಾಯುತಃ ॥ ೧೮೩ ॥

ಲಲ್ಲಸಿಂಹೋಯುತೈಸ್ಸಾರ್ಧಂ ಗುಹಿಲಂ ಪ್ರತಿ ಸೋಽಗಮತ್ ।
ತ್ರಿಶತಾನಿ ತತೋ ಭೂಪಾಃ ಸಹಸ್ರಾಢ್ಯಾಃ ಪೃಥಕ್ಪೃಥಕ್ ॥ ೧೮೪ ॥

ಕ್ಷುದ್ರಭೂಪಾಃ ಕ್ಷುದ್ರಭೂಪಾಂಸ್ತ್ರಿಶತಾನಿ ಸಮಾಯಯುಃ ।
ಅನ್ಯೋನ್ಯೇನ ಹತಾಃ ಸರ್ವೇ ಕೃತ್ವಾ ಯುದ್ಧಂ ಭಯಾನಕಂ ॥ ೧೮೫ ॥

---

೧೮೧. ಕಾಲೀವವರ್ಮನು ತನ್ನ ಹತ್ತುಸಾವಿರ ಸೇನೆಯೊಡನೆ ಮುಕುಂದನನ್ನು ಎದುರಿಸಿದನು. ವೀರಸಿಂಹನು ತನ್ನ ಹತ್ತುಸಾವಿರ ಸೇನೆಯನ್ನು ತೆಗೆದುಕೊಂಡು ಬಂದು ತ್ರಿಕೋಣರಾಜನೊಡನೆ ಯುದ್ಧಮಾಡಿದನು.

೧೮೨. ವೀರಸಿಂಹನ ಸಹೋದರನಾದ ಪ್ರವೀರನು ತನ್ನ ಹತ್ತುಸಾವಿರ ಸೇನೆಯೊಡನೆ ಶ್ರೀಪತಿ ರಾಜನನ್ನು ಎದುರಿಸಿ ಯುದ್ಧಮಾಡಿದನು. ವೀರನಾದ ಸೂರ್ಯರಥನು ತನ್ನ ಕಡೆಯ ಬಲಿಷ್ಠರಾದ ಹತ್ತುಸಾವಿರ ಯೋಧರೊಡನೆ ಶ್ರೀತಾರನೆಂಬ ರಾಜನನ್ನು ಎದುರಿಸಿ ಬಲು ದೊಡ್ಡ ಯುದ್ಧಮಾಡಿದನು

೧೮೩. ವಾಮನರಾಜನು ತನ್ನ ಹತ್ತುಸಾವಿರ ಸೇನೆಯೊಡನೆ ಮುಕುಂದನನ್ನು ಎದುರಿಸಿದನು. ಬಲಶಾಲಿಯಾದ ಗಂಗಾಸಿಂಹನು ಹತ್ತುಸಾವಿರ ಸೇನೆಯೊಡನೆ ರುಹಿಲನನ್ನು ಎದುರಿಸಿದನು.

೧೮೪. ಲಲ್ಲಸಿಂಹನು ಹತ್ತುಸಾವಿರ ಸೇನೆಯ ಸಮೇತ ಗುಹಿಲನನ್ನೆದುರಿಸಿ ಯುದ್ಧ ಮಾಡಿದನು. ಅಲ್ಲದೆ ತಮ್ಮ ಪಕ್ಷದ ಪ್ರತಿಯೊಬ್ಬರಲ್ಲೂ ಸಾವಿರವೀರರನ್ನುಳ್ಳ ಮುನ್ನೂರುಜನ ರಾಜರುಗಳು.

೧೮೫. ಮತ್ತು ಮುನ್ನೂರುಜನ ಕ್ಷುದ್ರರಾಜರೂ ಸಹ ಪ್ರತ್ಯೇಕಪ್ರತ್ಯೇಕವಾಗಿ ಎರಡು ಪಕ್ಷದಲ್ಲೂ ಪರಸ್ಪರ ಎದುರಿಸಿ ಭಯಂಕರವಾಗಿ ಯುದ್ಧಮಾಡಿ ಒಬ್ಬರಿಂದೊಬ್ಬರು ಹತರಾದರು.

ಚಾಮುಂಡಸ್ತು ತದಾ ದೃಷ್ಟ್ವಾ ಮೃತಕಾನ್ಸರ್ವಭೂಪತೀನ್ ।
ಲಕ್ಷಣಾಂತಮುಪಾಗಮ್ಯ ಮಹದ್ಯುದ್ಧಂ ಚಕಾರ ಹ ॥ ೧೮೬ ॥

ಲಕ್ಷಣೋ ರಕ್ತಬೀಜಂ ತಂ ಜ್ಞಾತ್ವಾಂ ಬ್ರಾಹ್ಮಣಸಂಮತಂ ।
ವೈಷ್ಣವಾಸ್ತ್ರಂ ತದಾ ತಸ್ಮೈ ನ ದದೌ ತೇನ ಪೀಡಿತಃ ॥ ೧೮೭ ॥

ಸಾಯಂಕಾಲೇ ತು ಸಂಪ್ರಾಪ್ತೇ ಲಕ್ಷಣೋ ಹಸ್ತಿನೀಸ್ಥಿತಃ ।
ಏಕಾಕೀ ಶಿಬಿರಂ ಪ್ರಾಪ್ತಶ್ಚಾಮುಂಡಂ ನೃಪಮಾಯಯೌ ॥ ೧೮೮ ॥

ದ್ವಿತೀಯಾಯಾಂ ಪ್ರಭಾತೇ ಚ ಕೃಷ್ಣಾಂಶೋ ದೇವಸಂಯುತಃ ।
ಶೂರೈರ್ದಶಸಹಸ್ರೈಶ್ಚ ಯುದ್ಧಭೂಮಿಮುಪಾಯಯೌ ॥ ೧೮೯ ॥

ತಾರಕಶ್ಚ ಸಚಾಮುಂಡೋ ದ್ವಿಲಕ್ಷಬಲಸಂಯುತಃ ।
ದ್ವಿಶತೈಶ್ಚ ತಥಾ ಭೂಪೈಃ ಸಾರ್ಧಂ ಯುದ್ಧಮುಪಸ್ಥಿತೌ ॥ ೧೯೦ ॥

---

೧೮೬. ಅನಂತರ ಚಾಮುಂಡನು ಹೀಗೆ ತನ್ನ ಕಡೆಯ ಎಲ್ಲ ರಾಜರೂ ಮೃತರಾದುದನ್ನು ನೋಡಿ ಲಕ್ಷಣನ ಬಳಿಗೆ ಬಂದು ಅವನೊಡನೆ ಘೋರಯುದ್ಧ ಮಾಡಿದನು.

೧೮೭. ಆಗ ಲಕ್ಷಣನು ರಕ್ತಬೀಜ (ಚಾಮುಂಡ) ನು ಶತ್ರುವಾದರೂ ಅವನು ಬ್ರಾಹ್ಮಣನೆಂಬುದನ್ನು ತಿಳಿದು ಬ್ರಹ್ಮಹತ್ಯಾ ದೋಷವು ತಟ್ಟುವುದೆಂಬ ಭೀತಿಯಿಂದ ಅವನ ಮೇಲೆ ತನ್ನ ವೈಷ್ಣವಾಸ್ತ್ರವನ್ನು ಪ್ರಯೋಗಿಸಲಿಲ್ಲ

೧೮೮. ಹೀಗೆ ಇಬ್ಬರೂ ಪರಸ್ಪರ ಯುದ್ಧಮಾಡಿ ಸಾಯಂಕಾಲವಾಗುತ್ತಲೆ ಯುದ್ಧದಿಂದ ಹಿಂದಿರುಗಿದರು. ಲಕ್ಷಣನು ಹಸ್ತಿನಿಯನ್ನೇರಿ ಒಬ್ಬನೇ ತನ್ನ ಶಿಬಿರಕ್ಕೆ ಬಂದನು. ಇತ್ತ ಚಾಮುಂಡನೂ ಸಹ ಪೃಥ್ವೀರಾಜನ ಸಮೀಪಕ್ಕೆ ಬಂದನು.

೧೮೯. ಬಿದಿಗೆಯದಿನ ಬೆಳಗಾಗುತ್ತಲೆ ಕೃಷ್ಣಾಂಶನು ದೇವಸಿಂಹನೊಡನೆಯೂ, ಹತ್ತುಸಾವಿರ ಶೂರರೊಡನೆಯೂ ರಣರಂಗಕ್ಕೆ ಬಂದನು.

೧೯೦. ಪೃಥ್ವೀರಾಜನ ಮಗನಾದ ತಾರಕನು ಚಾಮುಂಡನೊಡಗೂಡಿ ಎರಡುಲಕ್ಷ ಸೈನಿಕರು ಮತ್ತು ಇನ್ನೂರುಜನ ಸಾಮನ್ತರಾಜರ ಸಮೇತ ಯುದ್ಧಕ್ಕೆ ಬಂದನು

ಪುರಸ್ಕೃತ್ಯ ನೃಪಾನ್ಸರ್ವಾನ್ ಸಸೈನ್ಯೌ ಬಲವತ್ತರೌ ।
ತೇಷಾಮನುಸ್ಥಿತೌ ಯುದ್ಧೇ ತತ್ರ ಜಾತೋ ಮಹಾರಣಃ ॥ ೧೯೧ ॥

ಯಾಮಮಾತ್ರೇಣ ತೌ ವೀರೌ ಹತ್ವಾ ಸರ್ವಮಹೀಪತೀನ್ ।
ಲಕ್ಷಸೈನ್ಯಾಂಸ್ತಥಾ ಹತ್ವಾ ಸಂಸ್ಥಿತೌ ಶ್ರಮಕರ್ಷಿತೌ ॥ ೧೯೨ ॥

ಚಾಮುಂಡಸ್ತಾರಕೋ ಧೂರ್ತಃ ಸಂಪ್ರಾಪ್ತೌ ಛಿದ್ರದರ್ಶಿನೌ ।
ತಾಭ್ಯಾಂ ಶ್ರಮಾನ್ವಿತಾಭ್ಯಾಂ ಚ ಚಕ್ರತುಸ್ತೌ ಸಮಂ ರಣಂ ॥ ೧೯೩ ॥

ತೇಷಾಂ ತ್ರಿಯಾಮಮಾತ್ರೇಣ ಸಂಬಭೂವ ಮಹಾನ್ರಣಃ ।
ಸಾಯಂಕಾಲೇ ತು ಸಂಪ್ರಾಪ್ತೇ ಕೃಷ್ಣಾಂಶಶ್ಚ ನಿರಾಯುಧಃ ॥
ತಲಪ್ರಹಾರೇಣ ರಿಪುಂ ಮೂರ್ಛಯಾಮಾಸ ವೀರ್ಯವಾನ್ ॥ ೧೯೪ ॥

---

೧೯೧. ಸೇನಾಸಮೇತರೂ ಬಲಶಾಲಿಗಳೂ ಆದ ಅವರಿಬ್ಬರೂ ಆ ಸಾಮಂತ ರಾಜರನ್ನೆಲ್ಲಾ ಗೌರವಿಸಿ ಅವರನ್ನೆಲ್ಲಾ ಹಿಂದಿಟ್ಟುಕೊಂಡು ಯುದ್ಧಕ್ಕೆ ಬರಲಾಗಿ ಅತ್ಯಂತ ಘೋರವಾಗಿ ಯುದ್ಧವು ನಡೆಯಿತು.

೧೯೨. ಒಂದುಜಾವ ಯುದ್ಧ ನಡೆಯುವುದರೊಳಗೆ ಆ ಇಬ್ಬರು ವೀರರು ಇವರ ಸಾಮಂತ ರಾಜರನ್ನೂ ಕೊಂದುದಲ್ಲದೆ ಲಕ್ಷಸೈನ್ಯವನ್ನು ಧ್ವಂಸಮಾಡಿ ತುಂಬ ದಣಿವು ಹೊಂದಿದರು

೧೯೩. ಇತ್ತ ಚಾಮುಂಡನೂ ಧೂರ್ತನಾದ ತಾರಕನೂ ಛಿದ್ರದರ್ಶಿಗಳಾಗಿ ಹೋರಾಡತೊಡಗಿದರು. ತುಂಬಾ ದಣಿದಿದ್ದ ಅವರಿಬ್ಬರೊಡನೆ ಇವರು ಸಮಸಮ ವಾಗಿ ಕಾಳಗಮಾಡುತ್ತಿದ್ದರು.

೧೯೪. ಮೂರು ಜಾವಗಳಕಾಲ ಅವರಿವರಿಗೆ ಘೋರಯುದ್ಧ ನಡೆಯಿತು. ಸಾಯಂಕಾಲವಾಗುತ್ತಲೇ ಶೂರನಾದ ಕೃಷ್ಣಾಂಶನು ನಿರಾಯುಧನಾಗಿ ಅಲ್ಲಿಗೆ ಬಂದು ಅಂಗೈಯಿಂದ ಏಟು ಹೊಡೆದು ಎದುರಾಳಿಯಾದ ಚಾಮುಂಡನನ್ನು ಮೂರ್ಛೆಬೀಳಿಸಿದನು.

ಏತಸ್ಮಿನ್ನಂತರೇ ವೀರಸ್ತಾರಕೋ ದೇವಸಿಂಹಕಂ ।
ಹಯಂ ಮನೋರಥಂ ಹತ್ವಾ ಶಂಖಶಬ್ದಮಥಾಕರೋತ್ ॥ ೧೯೫ ॥

ತಚ್ಛ್ರುತ್ವಾ ತ್ಸ ಚ ಚಾಮುಂಡಸ್ತ್ಯಕ್ತ್ವಾ ಮೂರ್ಛಾಂ ಮಹಾಬಲಃ ।
ಕೃಷ್ಣಾಂಶಸ್ಯ ಶಿರಃ ಕಾಯಾದಪಾಹೃತ್ಯ ಚ ವೇಗವಾನ್ ॥
ತಯೋರ್ಗೃಹೀತ್ವಾ ಶಿರಸೀ ಮಹೀರಾಜಮುಪಾಯಯೌ ॥ ೧೯೬ ॥

ಮಹೀರಾಜಸ್ತು ತೇ ದೃಷ್ಟ್ವಾ ಪರಮಾನಂದನಿರ್ಭರಃ ।
ದತ್ವಾ ದಾನಂ ದ್ವಿಜಾತಿಭ್ಯೋ ಮಹೋತ್ಸವಮಕಾರಯತ್ ॥ ೧೯೭ ॥

ಲಕ್ಷಣಸ್ಯ ತದಾ ಸೈನ್ಯೇ ಹಾಹಾಶಬ್ದೋ ಮಹಾನಭೂತ್ ।
ಶ್ರುತ್ವಾ ಕೋಲಾಹಲಂ ತೇಷಾಂ ಜ್ಞಾತ್ವಾ ತೌ ಚ ಹತೌ ನೃಪಃ ॥
ಬ್ರಹ್ಮಾನಂದಸ್ತದಾ ಮೂರ್ಛಾಂ ತ್ಯಕ್ತ್ವಾ ವೇಲಾಮುವಾಚ ಹ ॥ ೧೯೮ ॥

---

೧೯೫-೧೯೬. ಇಷ್ಟರೊಳಗೆ ಶೂರನಾದ ತಾರಕನು ದೇವಸಿಂಹನನ್ನೂ ಅವನ ಮನೋರಥಾಶ್ವವನ್ನೂ ಕೊಂದು ಹರ್ಷದಿಂದ ಶಂಖಧ್ವನಿ ಮಾಡಿದನು. ಆ ಶಬ್ದ ಕೇಳಿದೊಡನೆ ಮೂರ್ಛೆಬಿದ್ದಿದ್ದ ಚಾಮುಂಡನು ಮೂರ್ಛೆತಿಳಿದೆದ್ದು ಶೀಘ್ರವಾಗಿ ಕೃಷ್ಣಾಂಶನ ತಲೆಯನ್ನು ಅವನ ದೇಹದಿಂದ ಛೇದಿಸಿ ಅವರಿಬ್ಬರ ಶಿರಸ್ಸುಗಳನ್ನೂ ಹಿಡಿದುಕೊಂಡು ಪೃಥ್ವೀರಾಜನ ಸಮೀಪಕ್ಕೆ ಬಂದನು.

೧೯೭. ಹೀಗೆ ತನ್ನ ಬಳಿಗೆ ತಂದ ಆ ಎರಡು ಶಿರಸ್ಸುಗಳನ್ನೂ ನೋಡಿ ಪೃಥ್ವೀರಾಜನು ಪರಮಾನಂದಭರಿತನಾಗಿ ಬ್ರಾಹ್ಮಣರಿಗೆ ಸಮೃದ್ಧಿಯಾಗಿ ದಾನಾದಿಗಳನ್ನು ಕೊಟ್ಟು ದೊಡ್ಡ ಉತ್ಸವವನ್ನೇ ಮಾಡಿಸಿದನು.

೧೯೮. ಆಗ ಲಕ್ಷಣನ ಕಡೆಯ ಸೈನ್ಯದಲ್ಲಿ ಎಲ್ಲೆಲ್ಲಿಯೂ ದೊಡ್ಡದಾಗಿ ಹಾಹಾಕಾರವುಂಟಾಯಿತು. ಅವರ ಕೋಲಾಹಲ ಶಬ್ದವನ್ನು ಕೇಳಿದ ಮೇಲಂತೂ ಆ ರಾಜನು ಅವರಿಬ್ಬರೂ ಸತ್ತರೆಂದು ಖಚಿತವಾಗಿ ತಿಳಿದನು

ಪ್ರಿಯೇ ಗಚ್ಛ ರಣಂ ಶೀಘ್ರಂ ಹರಿನಾಗರಮಾಸ್ಥಿತಾ ।
ಮಮ ವೇಷಂ ಶುಭಂ ಕೃತ್ವಾ ತಾರಕಂ ಜಹಿ ಮಾ ಚಿರಂ ॥ ೧೯೯ ॥

ಇತಿ ಶ್ರುತ್ವಾ ತು ಸಾ ವೇಲಾ ರಾಮಾಂಶೇನ ಸಮನ್ವಿತಾ ।
ಸಹಸ್ರಶೂರಸಹಿತಾ ಯುದ್ಧಭೂಮಿಮುಪಾಯಯೌ ॥ ೨೦೦ ॥

ಶ್ರುತ್ವಾ ಸ ಲಕ್ಷಣೋ ವೀರಸ್ತಾಲನೇನ ಸಮನ್ವಿತಃ ।
ಸೈನ್ಯೈಶ್ಚ ದಶಸಾಹಸ್ರೈರ್ಮಹೀರಾಜಮುಪಾಯಯೌ ॥ ೨೦೧ ॥

ತೃತೀಯಾಯಾಂ ಪ್ರಭಾತೇ ಚ ತಾರಕೋ ಬಲವತ್ತರಃ ।
ಬ್ರಹ್ಮಾನಂದಂ ಚ ತಂ ಮತ್ವಾ ಮಹಾಯುದ್ಧಮಚೀಕರತ್ ॥ ೨೦೨ ॥

---

೧೯೯. ಆ ವೇಳೆಗೆ ಬ್ರಹ್ಮಾನಂದನು ಮೂರ್ಛೆಯಿಂದ ತಿಳಿದು, ವೇಲೆಯನ್ನು ಕುರಿತು " ಎಲೌ ಪ್ರಿಯಳೇ! ಶುಭಕರವಾದ ನನ್ನ ವೇಷವನ್ನು ಧರಿಸಿ, ಹರಿನಾಗರಾಶ್ವವನ್ನು ಹತ್ತಿಕೊಂಡು ಜಾಗ್ರತೆ ಯುದ್ಧಭೂಮಿಗೆ ಹೋಗು. ಕೂಡಲೇ ತಾರಕನನ್ನು ಹೊಡೆದುಹಾಕು. ತಡಮಾಡಬೇಡ " ಎಂದನು.

೨೦೦. ವೇಲೆಯು ಈ ಮಾತನ್ನು ಕೇಳಿದೊಡನೆ ರಾಮಾಂಶ (ಆಹ್ಲಾದ) ನನ್ನು ಜತೆಯಲ್ಲಿ ಕರೆದುಕೊಂಡು ಸಾವಿರಮಂದಿ ಸೇನೆಯೊಡನೆ ಯುದ್ಧರಂಗಕ್ಕೆ ಬಂದಳು.

೨೦೧. ವೀರನಾದ ಲಕ್ಷಣನು ಈ ಸಮಾಚಾರವನ್ನು ಕೇಳಿ ತಾಲನನನ್ನು ಜತೆಮಾಡಿಕೊಂಡು ಹತ್ತುಸಾವಿರ ಸೇನೆಯೊಡನೆ ಪೃಥ್ವೀರಾಜನ ಮೇಲೆ ಯುದ್ಧಕ್ಕೆ ಬಂದನು.

೨೦೨. ತದಿಗೆಯದಿನ ಬೆಳಗಾಗುತ್ತಲೇ ಬಲಶಾಲಿಯಾದ ತಾರಕನು ಹೊಸದಾಗಿ ತನ್ನನ್ನೆದುರಿಸಿ ಬರುತ್ತಿರುವವನ ವೇಷವನ್ನು ನೋಡಿ ಬ್ರಹ್ಮಾನಂದನೆಂದೇ ಭಾವಿಸಿ ಅವನೊಡನೆ ದೊಡ್ಡದಾಗಿ ಕಾಳಗಮಾಡಿದನು.

ರಕ್ತಬೀಜಶ್ಚ ಚಾಮುಂಡೋ ರಾಮಾಂಶೋ ಬಲವತ್ತರಃ ।
ಚಕಾರ ದಾರುಣಂ ಯುದ್ಧಂ ತಸ್ಮಿನ್ವೀರಸಮಾಗಮೇ ॥ ೨೦೩ ॥

ಯಾಮಮಾತ್ರೇಣ ರಾಮಾಂಶೋ ಹತ್ವಾ ತಸ್ಯ ಮಹಾಗಜಂ ।
ತಚ್ಛಸ್ತ್ರಾಣಿ ತಥಾ ಛಿತ್ವಾ ಮಲ್ಲಯುದ್ಧಮಚೀಕರತ್ ॥ ೨೦೪ ॥

ತ್ರಿಯಾಮಮಾತ್ರೇಣ ತದಾ ಸಾಯಂಕಾಲೇ ಸಮಾಗತೇ ।
ಮಮಂಥ ಭ್ರಾತೃಹಂತಾರಂ ಸ ಚ ವೀರೋ ಮಮಾರ ಹ ॥ ೨೦೫ ॥

ತದಾ ವೇಲಾ ಮಹಾಶತ್ರುಂ ತಾರಕಂ ಬಲವತ್ತರಂ ।
ಛಿತ್ವಾಸ್ತ್ರಾಣಿ ಸ್ವಖಡ್ಗೇನ ಶಿರಃ ಕಾಯಾದಪಾಹರತ್ । ॥ ೨೦೬ ॥

---

೨೦೩. ಬಲಶಾಲಿಯಾದ ರಕ್ತಬೀಜ ( ಚಾಮುಂಡ) ಮುಂತಾದವರು ಹೊಸದಾಗಿ ಬಂದ ರಾಮಾಂಶ ಮೊದಲಾದ ವೀರವೃಂದರೊಡನೆ ಬಲವಾದ ಕಾಳಗ ಮಾಡಿದರು.

೨೦೪. ಹೀಗೆ ಒಂದುಜಾವ ಯುದ್ಧಮಾಡುವುದರೊಳಗೆ ರಾಮಾಂಶನು ತಾರಕನ ಮಹಾಗಜವನ್ನು ಕೊಂದು, ಅವನ ಅಸ್ತ್ರಗಳನ್ನು ಕತ್ತರಿಸಿ, ಅವನೊಡನೆ ಮಲ್ಲಯುದ್ಧವನ್ನು ಮಾಡಲು ತೊಡಗಿದನು.

೨೦೫. ಮೂರುಜಾವಗಳು ಯುದ್ಧನಡೆಯುವುದರೊಳಗೆ ಸಾಯಂಕಾಲ ವಾಯಿತು. ರಾಮಾಂಶ(ಆಹ್ಲಾದ)ನು ತನ್ನ ಸಹೋದರನನ್ನು ಕೊಂದಿದ್ದ ಆ ತಾರಕ ನನ್ನು ಆ ಮಬ್ಬಿನಲ್ಲಿ ಚೆನ್ನಾಗಿ ನಜ್ಜುಗುಜ್ಜು ಮಾಡಲಾಗಿ ಆ ವೀರನು ಗತಪ್ರಾಣ ನಾಗಿ ನೆಲಕ್ಕೆ ಉರುಳಿದನು.

೨೦೬. ಆಗ ವೇಲೆಯು ಬಲವತ್ತರನೂ ಮಹಾಶತ್ರುವೂ ಆದ ಆ ತಾರಕ ನನ್ನು ತನ್ನ ಖಡ್ಗದಿಂದ ಛಿದ್ರಛಿದ್ರವಾಗಿ ಕತ್ತರಿಸಿ ಅವನ ಶಿರಸ್ಸನ್ನು ಶರೀರದಿಂದ ಬೇರ್ಪಡಿಸಿದಳು.

ಚಿತಾಂ ಕೃತ್ವಾ ವಿಧಾನೇನ ಸಾ ದೇವೀ ದ್ರುಪದಾತ್ಮಜಾ ।
ಬ್ರಹ್ಮಾನಂದಂ ನಮಸ್ಕೃತ್ಯ ತಚ್ಚಿತಾಯಾಂ ಸಮಾರುಹತ್ ॥ ೨೭೦ ॥

ತೇನ ಸಾರ್ಧಂ ಚ ಸಾ ಶುದ್ಧಾ ಶ್ವಶುರಸ್ಯಾಜ್ಞಯಾ ಮುದಾ ।
ಸಪ್ತಜನ್ಮಕಥಾಂ ಕೃತ್ವಾ ಸ್ವಪತೇಸ್ತು ದದಾಹ ವೈ ॥ ೨೦೮ ॥

ತಚ್ಚಿತಾಯಾಂ ಚ ಭರ್ತಾರಮಿಂದುಲಂ ಬಲವತ್ತರಂ ।
ಸಂಸ್ಥಾಪ್ಯ ದಾಹಯಾಮಾಸ ತೇನ ಸಾರ್ಧಂ ಕಲೇವರಂ ॥ ೨೦೯ ॥

ರಾತ್ರೌ ಪರಿಮಲೋ ರಾಜಾ ಲಕ್ಷಣೇನ ಸಮನ್ವಿತಃ ।
ಮಹೀರಾಜಮುಪಾಗಮ್ಯ ಮಹದ್ಯುದ್ಧಮಚೀಕರತ್ ॥ ೨೧೦ ॥

ಸಪಾದಲಕ್ಷಾಶ್ಚ ತದಾ ಹತಶೇಷಾ ಮಹಾಬಲಾಃ ।
ತ್ರಿಲಕ್ಷೈರ್ಹತಶೇಷೈಶ್ಚ ಸಾರ್ಧಂ ಯೋದ್ಧುಮುಪಸ್ಥಿತಾಃ ॥ ೨೧೧ ॥

---

೨೦೭. ದ್ರೌಪದೀ ಅಂಶಸಂಭೂತೆಯಾದ ಆ ವೇಲೆಯು ಆಮೇಲೆ ವಿಧಿಪ್ರಕಾರ ಚಿತೆಯನ್ನು ರಚಿಸಿ, ಪತಿಯಾದ ಬ್ರಹ್ಮಾನಂದನಿಗೆ ನಮಸ್ಕಾರಮಾಡಿ ಅವನ ದೇಹ ವನ್ನು ಚಿತೆಯ ಮೇಲೆ ಇರಿಸಿದಳು.

೨೦೮. ಪರಿಶುದ್ಧೆಯಾದ ಅವಳು ಮಾವನ ಅಪ್ಪಣೆಯಂತೆ ಸಂತೋಷದಿಂದ ತನ್ನ ಪತಿಯ ಏಳುಜನ್ಮದ ಕಥೆಯನ್ನು ಸ್ಮರಣಮಾಡಿ ಆ ಶರೀರವನ್ನು ದಹನ ಮಾಡಿದಳು.

೨೦೯. ಬ್ರಹ್ಮಾನಂದನ ಕಳೇಬರವನ್ನಿಟ್ಟ ಚಿತೆಯಲ್ಲಿಯೇ ಬಲಶಾಲಿಯೂ ತನ್ನ ಪತಿಯೂ ಆದ ಇಂದುಲನ ಕಳೇಬರವನ್ನೂ ಇರಿಸಿ ಒಟ್ಟಿಗೆ ದಹನಮಾಡಿಸಿದಳು.

೨೧೦. ಆರಾತ್ರಿ ಪರಿಮಳರಾಜನು ಲಕ್ಷಣನನ್ನು ಜತೆಯಲ್ಲಿ ಕರೆದುಕೊಂಡು ಪೃಥ್ವೀರಾಜನ ಮೇಲೆ ಬಿದ್ದು ದೊಡ್ಡದಾಗಿ ಯುದ್ಧಮಾಡತೊಡಗಿದನು.

೨೧೧. ಪರಿಮಳನಕಡೆ ಕಳೆದು ಉಳಿದಿದ್ದ ಒಂದೂಕಾಲುಲಕ್ಷಮಂದಿ ಮಹಾಬಲಶಾಲಿಗಳು ಅವರಕಡೆ ಉಳಿದಿದ್ದ ಮೂರುಲಕ್ಷ ಸೇನೆಯೊಡನೆ ಯುದ್ಧಮಾಡ ತೊಡಗಿದರು

ಧಾನ್ಯಪಾಲಃ ಶತಂ ಭೂಪಾನ್ ಲಕ್ಷಣಶ್ಚ ತಥಾ ಶತಂ ।
ತಾಲನಶ್ಚ ಶತಂ ಭೂಪಾನ್ ಹತ್ವಾ ರಾಜಾನಮಾಯಯೌ ॥ ೨೧೨ ॥

ಮಹೀರಾಜಸ್ತದಾ ದುಃಖೀ ಧ್ಯಾತ್ವಾ ರುದ್ರಂ ಮಹೇಶ್ವರಂ ।
ನಿಶೀಥೇ ಸಮನುಪ್ರಾಪ್ತೇ ಹತಶೇಷೈಸ್ಸಮಾಗತಃ ॥
ಏಕಾಕೀ ಗಜಮಾರುಹ್ಯ ಯಯೌ ಚಾದಿಭಯಂಕರಂ ॥ ೨೧೩ ॥

ರುದ್ರದತ್ತೇನ ಬಾಣೇನ ಹತ್ವಾ ಪರಿಮಲಂ ನೃಪಂ ।
ಧಾನ್ಯಪಾಲಂ ತಥಾ ಹತ್ವಾ ತಾಲನಂ ಬಲವತ್ತರಂ ॥
ಲಕ್ಷಣಾಂತಮುಪಾಗಮ್ಯ ಮಹದ್ಯುದ್ಧಮಚೀಕರತ್ ॥ ೨೧೪ ॥

ಮಹೀರಾಜಸ್ಯ ರೌದ್ರಾಸ್ತ್ರೈ ಸ್ಸೈನ್ಯಾಸ್ಸರ್ವೇ ಕ್ಷಯಂ ಗತಾಃ ।
ಲಕ್ಷಣಂ ಪ್ರತಿ ರೌದ್ರಾಸ್ತ್ರಂ ಮಹೀರಾಜಃ ಸಮಾದಧೇ ॥ ೨೧೫ ॥

---

೨೧೨ ಧಾನ್ಯಪಾಲನು ನೂರಾರುಮಂದಿ ರಾಜರನ್ನು ಕೊಂದನು. ಲಕ್ಷಣನೂ ಪ್ರತಿಪಕ್ಷದ ನೂರುಮಂದಿ ರಾಜರನ್ನು ಧ್ವಂಸಮಾಡಿದನು. ತಾಲನನೂ ನೂರುಮಂದಿ ರಾಜರನ್ನು ಕೊಂದುಹಾಕಿದನು. ಬಳಿಕ ಇವರೆಲ್ಲರೂ ರಾಜನ ಸಮೀಪಕ್ಕೆ ಬಂದರು.

೨೧೩. ಆಗ ದುಃಖಾಕ್ರಾಂತನಾದ ಪೃಥ್ವೀರಾಜನು ಮಹೇಶ್ವರನಾದ ರುದ್ರನನ್ನು ಚೆನ್ನಾಗಿ ಧ್ಯಾನಿಸಿ ಅರ್ಧರಾತ್ರಿಯಾಗುತ್ತಲೇ ತನ್ನ ಕಡೆ ಕಳೆದುಳಿದ ಜನರನ್ನು ಜೊತೆ ಮಾಡಿಕೊಂಡು ಹೊರಟನು.

೨೧೪. ಪೃಥ್ವೀರಾಜನು ತಾನೊಬ್ಬನೇ ಅರಿಭಯಂಕರವಾದ ಆನೆಯ ಮೇಲೆ ಏರಿಕೊಂಡು ಪರಿಮಳನ ಸಮ್ಮುಖಕ್ಕೆ ಬಂದನು. ಈಶ್ವರನು ತನಗೆ ಕೊಟ್ಟಿದ್ದ ಬಾಣವನ್ನು ಪ್ರಯೋಗಿಸಿ ಪರಿಮಳರಾಜನನ್ನೂ ಧಾನ್ಯಪಾಲನನ್ನೂ ಮತ್ತು ಬಲಶಾಲಿಯಾದ ತಾಲನನನ್ನೂ ಹೊಡೆದು ಲಕ್ಷಣನ ಸಮ್ಮುಖಕ್ಕೆ ಬಂದು ಅವನನ್ನು ಎದುರಿಸಿ ಘೋರವಾಗಿ ಯುದ್ಧಮಾಡಿದನು.

೨೧೫. ಪೃಥ್ವೀರಾಜನ ಮಹಾಸ್ತ್ರಗಳಿಂದ ಎಲ್ಲ ಸೇನೆಗಳೂ ನಾಶವಾದುವು. ಬಳಿಕ ಪೃಥ್ವೀರಾಜನು ರುದ್ರನು ಕರುಣಿಸಿಕೊಟ್ಟಿದ್ದ ರೌದ್ರಾಸ್ತ್ರವನ್ನು ಹೂಡಿ ಲಕ್ಷಣನ ಮೇಲೆ ಪ್ರಯೋಗಮಾಡಿದನು. ಲಕ್ಷಣನು ಅದಕ್ಕೆ ಪ್ರತಿಯಾಗಿ ವೈಷ್ಣವಾಸ್ತ್ರವನ್ನು ಪ್ರಯೋಗಿಸಿದನು.

ತದಾ ತು ಲಕ್ಷಣೋ ವೀರೋ ವೈಷ್ಣವಾಸ್ತ್ರಂ ಸಮಾದಧೇ ।
ತೇನಾಸ್ತ್ರೇಣ ಕ್ಷಯಂ ಜಾತೋ ಮಹೀರಾಜಸ್ಯ ಸಾಯಕಃ ॥
ತೇನಾಸ್ತ್ರತೇಜಸಾ ರಾಜಾ ಮಹಾಸಂತಾಪಮಾಪ್ತವಾನ್ ॥ ೨೧೬ ॥

ಧ್ಯಾತ್ವಾ ರುದ್ರಂ ಮಹಾದೇವಂ ತ್ಯಕ್ತ್ವಾ ವಿದ್ಯಾಂ ಚ ವೈಷ್ಣವೀಂ ।
ಸ್ವಭಲ್ಲೇನ ಶಿರಃ ಕಾಯಾದಪಾಹರತ ಭೂಮಿಪಃ ॥ ೨೧೭ ॥

ಹಸ್ತಿನೀ ಚ ತದಾ ರುಷ್ಟಾ ಗಜಮಾದಿಭಯಂಕರಂ ।
ಗತ್ವಾ ಯುದ್ಧಂ ಮುಹೂರ್ತೇನ ಕೃತ್ವಾ ಸ್ವರ್ಗಮುಪಾಯಯೌ ॥ ೨೧೮ ॥

ಉಷಃಕಾಲೇ ಚ ಸಂಪ್ರಾಪ್ತೇ ಮಲನಾ ಪತಿಮುತ್ತಮಂ ।
ತಚ್ಚಿತಾಯಾಂ ಸಮಾರೋಪ್ಯ ದದಾಹ ಸ್ವಂ ಕಲೇವರಂ ॥ ೨೧೯ ॥

---

೨೧೬. ವೀರನಾದ ಲಕ್ಷಣನು ಪ್ರಯೋಗಿಸಿದ ಆ ವೈಷ್ಣವಾಸ್ತ್ರದಿಂದ ಪೃಥ್ವೀರಾಜನು ಬಿಟ್ಟ ಅಸ್ತ್ರವು ಕ್ಷಯವಾಗಿ ಹೋದುದಲ್ಲದೆ ಪ್ರತ್ಯಸ್ತ್ರದ ತೇಜೋಮಹಿಮೆಯಿಂದ ಪೃಥ್ವೀರಾಜನಿಗೆ ಬಹಳ ಸಂತಾಪವೂ ಉಂಟಾಯಿತು.

೨೧೭. ಈರೀತಿ ಲಕ್ಷಣನ ವೈಷ್ಣವಾಸ್ತ್ರದಿಂದ ದಿಗಿಲುಗೊಂಡ ಪೃಥ್ವೀರಾಜನು ಮಹಾದೇವನನ್ನು ಸ್ವಲ್ಪಕಾಲ ಧ್ಯಾನಮಾಡಿ ವೈಷ್ಣವಾಸ್ತ್ರದ ತಾಪವನ್ನು ಹೋಗಲಾಡಿಸಿಕೊಂಡು, ತಾನು ಸಂಪಾದಿಸಿದ್ದ ಭಲ್ಲೆಯದಿಂದ ಲಕ್ಷಣಕುಮಾರನ ತಲೆಯನ್ನು ಕತ್ತರಿಸಿ ಹಾಕಿದನು.

೨೧೮. ತನ್ನ ಸ್ವಾಮಿಯಾದ ಲಕ್ಷಣನು ಹೀಗೆ ಮೃತನಾಗಲು ಅವನ ವಾಹನವಾದ ಹಸ್ತಿನೀ ಎಂಬ ಆನೆಯು ತುಂಬಾ ಕೋಪಗೊಂಡು ಆದಿಭಯಂಕರವೆಂಬ ಪೃಥ್ವೀರಾಜನ ಆನೆಯನ್ನು ಎದುರಿಸಿ ಅದರೊಡನೆ ಯುದ್ಧಮಾಡುತ್ತಾ ಒಂದು ಮುಹೂರ್ತಕಾಲ ಹೋರಾಡಿ ಮೃತಪಟ್ಟು ಸ್ವರ್ಗವನ್ನು ಸೇರಿತು.

೨೧೯. ಹೀಗೆ ಆದಿನ ಕಳೆಯಲು ಮಾರನೆಯದಿನ ಬೆಳಗಾಗುತ್ತಲೆ ಮಲನಾದೇವಿಯು (ಪರಿಮಳನ ರಾಣಿಯು) ತನ್ನ ಪತಿಯಾದ ಪರಿಮಲನ ಶರೀರವನ್ನು ಚಿತೆಯಮೇಲಿರಿಸಿ ಅದರೊಡನೆ ತಾನೂ ಚಿತೆಯನ್ನೇರಿ ಶರೀರತ್ಯಾಗ ಮಾಡಿದಳು.

ತದಾ ತು ದೇವಕೀ ಶುದ್ಧಂ ಲಕ್ಷಣಂ ಬಲವತ್ತರಂ ।
ತಾಲನಾದೀಂಸ್ತಥಾ ಹುತ್ವಾ ದದಾಹ ಸ್ವಂ ಕಲೇವರಂ ॥ ೨೨೦ ॥

ಪ್ರಭಾತೇ ವಿಮಲೇ ಜಾತೇ ಚತುರ್ಥ್ಯಾಂ ಭೌಮವಾಸರೇ ।
ತಥಾ ಹುತ್ವಾ ಸ್ವರ್ಣವತೀಂ ಕೃತ್ವಾ ತೇಷಾಂ ತಿಲಾಂಜಲಿಂ ॥
ಧ್ಯಾತ್ವಾ ಸರ್ವಮಯೀಂ ದೇವೀಂ ಸ್ಥಿರೀಭೂಯ ಸ್ವಯಂ ಸ್ಥಿತಃ ॥ ೨೨೧ ॥

ಏತಸ್ಮಿನ್ನಂತರೇ ತತ್ರ ಕಲಿರ್ಭಾರ್ಯಾಸಮನ್ವಿತಃ ।
ವಾಂಛಿತಂ ಫಲಮಾಗಮ್ಯ ತುಷ್ಟಾವ ಶ್ಲಕ್ಷ್ಣಯಾ ಗಿರಾ ॥ ೨೨೨ ॥

॥ ಕಲಿರುವಾಚ ॥

ನಮ ಆಹ್ಲಾದ ಮಹತೇ ಸರ್ವಾನಂದಪ್ರದಾಯಿನೇ ।
ಯೋಗೇಶ್ವರಾಯ ಶುದ್ಧಾಯ ಮಹಾವತೀನಿವಾಸಿನೇ ॥ ೨೨೩ ॥

---

೨೨೦. ಆಗ ದೇವಕೀದೇವಿಯು, ಬಲಶಾಲಿಯೂ ಪರಿಶುದ್ಧನೂ ಆದ ಲಕ್ಷಣನ ದೇಹಕ್ಕೂ, ತಾಲನನೇ ಮೊದಲಾದವರ ಶರೀರಕ್ಕೂ ಸಹ, ದಹನಸಂಸ್ಕಾರವನ್ನು ಮಾಡಿ ತಾನೂ ಅಗ್ನಿಪ್ರವೇಶಮಾಡಿದಳು.

೨೨೧. ಮಾರನೆಯದಿವಸ ಬೆಳಗಾಗುತ್ತಲೆ ಎಂದರೆ ಚತುರ್ಥೀ ಮಂಗಳ ವಾರದದಿನ ಆಹ್ಲಾದನು ಸ್ವರ್ಣವತಿಗೂ, ದಹನಸಂಸ್ಕಾರವನ್ನು ನಡೆಯಿಸಿ ಮೃತರಾದ ತನ್ನ ಬಂಧುಗಳಿಗೆಲ್ಲಾ ತಿಲೋದಕವನ್ನು ಕೊಟ್ಟು ಅನಂತರ ಸರ್ವವ್ಯಾಪಕಳಾದ ಶಾರದಾದೇವಿಯನ್ನು ಧ್ಯಾನಮಾಡುತ್ತಾ ತಾನೊಬ್ಬನೇ ಸ್ಥಿರವಾಗಿ ನಿಂತನು.

೨೨೨. ಇದೇ ಸಂದರ್ಭದಲ್ಲಿ ಕಲಿಪುರುಷನು ತನ್ನ ಪತ್ನಿಯೊಡನೆ ಆಹ್ಲಾದ ನಿದ್ದಲ್ಲಿಗೆ ಬಂದು ಧರ್ಮಮಾರ್ಗಪ್ರವರ್ತಕರಾದ ಕೃಷ್ಣಾಂಶನೇ ಮೊದಲಾದವರು ಮೃತರಾಗಿ ಕಲಿಧರ್ಮವು ಹರಡಲು ಅವಕಾಶ ದೊರೆಯುವಂತಹ ತನಗೆ ಇಷ್ಟವಾದ ಫಲವನ್ನು ಹೊಂದಿ ಆ ಆಹ್ಲಾದನನ್ನು ಮೃದುವಾದ ನುಡಿಗಳಿಂದ ಸ್ತೋತ್ರ ಮಾಡಿದನು.

೨೨೩. (ಕಲಿಯು ಸ್ತೋತ್ರಮಾಡಿದಕ್ರಮ) ಮಹಾತ್ಮನೂ, ಸಕಲ ಆನಂದ ಗಳನ್ನೂ ಉಂಟುಮಾಡುವವನೂ, ಯೋಗೇಶ್ವರನೂ, ಪರಿಶುದ್ಧನೂ ಮತ್ತು ಮಹಾ ವತೀನಗರದಲ್ಲಿ ವಾಸಿಸುವನೂ ಆದ ಆಹ್ಲಾದನೇ ! ನಿನಗೆ ನಮಸ್ಕಾರ.

**ರಾಮಾಂಶಸ್ತ್ವಂ ಮಹಾಬಾಹೋ ಮಮ ಪಾಲನತತ್ಪರಃ ।**
**ಕಲೈಕಯಾ ಸಮಾಗಮ್ಯ ಭುವೋ ಭಾರಸ್ತ್ವಯಾ ಹೃತಃ ॥ ೨೨೪ ॥**

**ರಾಜಾನಃ ಪಾವಕೀಯಶ್ಚ ತಪೋಬಲಸಮನ್ವಿತಾಃ ।**
**ಹತ್ವಾ ತಾನ್ ಪಂಚಸಾಹಸ್ರಾನ್ ಕ್ಷುದ್ರಭೂಪಾನನೇಕಶಃ ॥**
**ಯೋಗಮಧ್ಯೇ ಸಮಾಸೀನೋ ನಮಸ್ತಸ್ಮೈ ಮಹಾತ್ಮನೇ ॥ ೨೨೫ ॥**

**ತೇಷಾಂ ಸೈನ್ಯಾಃ ಷಷ್ಟಿಲಕ್ಷಾಃ ಕ್ರಮಾದ್ವೀರ ತ್ವಯಾ ಹತಾಃ ।**
**ವರಂ ಬ್ರೂಹಿ ಮಹಾಭಾಗ ಯತ್ತೇ ಮನಸಿ ವರ್ತತೇ ॥ ೨೨೬ ॥**

**ಇತಿ ಶ್ರುತ್ವಾ ಸ ಆಹ್ಲಾದೋ ವಚನಂ ಪ್ರಾಹ ನಿರ್ಭಯಃ ।**
**ಮಮ ಕೀರ್ತಿಸ್ತ್ವಯಾ ದೇವ ಕರ್ತವ್ಯಾ ಚ ಜನೇಜನೇ ॥ ೨೨೭ ॥**

---

೨೨೪. " ಎಲೈ ಮಹಾಬಾಹುವೇ ! ನೀನು ಬಲರಾಮಾಂಶದಿಂದ ಜನಿಸಿದವನು. ಯಾವಾಗಲೂ ನನ್ನ ಧರ್ಮವನ್ನು ಪಾಲನೆಮಾಡುವುದರಲ್ಲಿ ತತ್ಪರನೂ ಆಗಿರುವೆ. ಒಂದೇ ಕಲೆಯಿಂದ ಅವತರಿಸಿ ಭೂಮಿಗೆ ಬಂದು ನೀನು ಭೂಭಾರವನ್ನೆಲ್ಲಾ ನಾಶ ಮಾಡಿದೆ."

೨೨೫. "ತಪೋಬಲದಿಂದ ಕೂಡಿ ಹೆಮ್ಮೆಗೊಂಡಿದ್ದ ಅಗ್ನಿವಂಶದ ಐದುಸಾವಿರ ರಾಜರುಗಳನ್ನೂ, ಮತ್ತು ಅನೇಕಮಂದಿ ಇತರ ಕ್ಷುದ್ರರಾಜರನ್ನೂ ಸಹ ಧ್ವಂಸ ಮಾಡಿ, ಈಗ ಯೋಗಧ್ಯಾನಾಸಕ್ತನಾಗಿರುವ ಮಹಾತ್ಮನಾದ ಆಹ್ಲಾದನೇ ! ನಿನಗೆ ನಮಸ್ಕಾರ."

೨೨೬. " ಎಲೈ ಮಹಾವೀರನೇ ! ಆ ರಾಜರುಗಳ ಅರವತ್ತುಲಕ್ಷ ಸೇನೆಗಳೂ ಒಂದಾಗುತ್ತಲೊಂದರಂತೆ ಕ್ರಮವಾಗಿ ನಿನ್ನಿಂದಲೇ ಧ್ವಂಸವಾದುವು. ಅಯ್ಯಾ ! ಮಹಾಭಾಗನಾದ ಆಹ್ಲಾದನೇ ! ನಿನ್ನ ಮನಸ್ಸಿನಲ್ಲಿರುವ ವರವನ್ನು ಬೇಡು ಅವಶ್ಯ ವಾಗಿ ಕೊಡುವೆನು " ಎಂದನು.

೨೨೭. ಕಲಿಪುರುಷನು ಪ್ರಸನ್ನನಾಗಿ ಹೇಳಿದ ಈ ಮಾತನ್ನು ಕೇಳಿ ಆಹ್ಲಾದನು ನಿರ್ಭಯನಾಗಿ ಅವನನ್ನು ಕುರಿತು " ಎಲೈ ದೇವನೇ ! ನನ್ನ ಕೀರ್ತಿಯು ಎಲ್ಲ ಜನಗಳಲ್ಲೂ ಹರಡುವ ರೀತಿಯಲ್ಲಿ ಮಾಡು. "

ಪುನಸ್ತೇ ಕಾರ್ಯಮತುಲಂ ಕರಿಷ್ಯಾಮಿ ಶೃಣುಷ್ವ ಭೋಃ ।
ಮಹೀರಾಜಶ್ಚ ಧರ್ಮಾತ್ಮಾ ಶಿವಭಕ್ತಿಪರಾಯಣಃ ॥
ತಸ್ಯ ನೇತ್ರೇ ಮಯಾ ಶುದ್ಧೇ ಕರ್ತವ್ಯೇ ನೀಲರೂಪಕೇ ॥ ೨೨೮ ॥

ತವ ಪ್ರಿಯಸ್ಸದಾ ನೀಲಸ್ತಥೈವ ಚ ಮಮ ಪ್ರಿಯಃ ।
ದೇವಾನಾಂ ದುಃಖದೋ ದೇವ ದೈತ್ಯಾನಾಂ ಹರ್ಷವರ್ಧನಃ ॥ ೨೨೯ ॥

ಇತ್ಯುಕ್ತ್ವಾ ಸ ತು ರಾಮಾಂಶೋ ಗಜಮಾರುಹ್ಯ ವೇಗತಃ ।
ಮಹೀರಾಜಮುಪಾಗಮ್ಯ ಮಹದ್ಯುದ್ಧಂ ಚಕಾರ ಹ. ॥ ೨೩೦ ॥

ರುದ್ರದತ್ತೋ ಗಜಸ್ತೂರ್ಣಂ ಪಂಚಶಬ್ದಮುಪಸ್ಥಿತಃ ।
ಪದ್ಮದಂತಾನ್ ಸಮಾರುಹ್ಯ ಯುಯುಧಾತೇ ಪರಸ್ಪರಂ ॥ ೨೩೧ ॥

ಅನ್ಯೋನ್ಯೇನ ತಥಾ ಹತ್ವಾ ಗಜೌ ಸ್ವರ್ಗಮುಪೇಯತುಃ ॥ ೨೩೨ ॥

---

೨೨೮. "ಅಲ್ಲದೆ ನಿನ್ನಿಂದ ಇನ್ನೊಂದು ದೊಡ್ಡಕಾರ್ಯವಾಗಬೇಕಾಗಿದೆ. ಅದನ್ನು ಹೇಳುವೆನು ಕೇಳು. ಪೃಥ್ವೀರಾಜನು ಧರ್ಮಸ್ವರೂಪನು. ಮತ್ತು ಶಿವನಲ್ಲಿ ಪರಮಭಕ್ತಿಯುಳ್ಳವನು. ಇವನ ಶುಭ್ರವಾದ ಎರಡು ಕಣ್ಣುಗಳನ್ನು ನೀಲವರ್ಣದಿಂದ ಕೂಡಿರುವಂತೆ ಮಾಡಬೇಕು. ಇದಕ್ಕೆ ನಿನ್ನ ಸಹಾಯಬೇಕು."

೨೨೯. "ನಿನಗೆ ನೀಲಬಣ್ಣವು ಯಾವಾಗಲೂ ಪ್ರೀತಿಕರವಾದುದು. ನನಗೂ ಅದರಲ್ಲೇ ತುಂಬಾ ವಿಶ್ವಾಸ; ಎಲೈ ಕಲಿಪುರುಷನೇ! ನೀನು ಯಾವಾಗಲೂ ದೇವತೆಗಳಿಗೆ ದುಃಖವುಂಟುಮಾಡುವೆ. ದೈತ್ಯರಿಗೆ ಯಾವಾಗಲೂ ಸಂತೋಷವನ್ನು ಉಂಟುಮಾಡುತ್ತೀಯೆ. ಎಲೈ ಮಹಾಮಹಿಮನೇ! ನನ್ನ ಈ ಕೋರಿಕೆಯನ್ನು ನಡೆಸಿಕೊಡು" ಎಂದು ಪ್ರಾರ್ಥಿಸಿದನು.

೨೩೦. ರಾಮಾಂಶನಾದ ಆಹ್ಲಾದನು ಕಲಿಪುರುಷನಿಗೆ ಹೀಗೆ ಹೇಳಿ ಅವನ ಅನುಜ್ಞೆಪಡೆದು ಪಂಚಶಬ್ದವೆಂಬ ತನ್ನ ಗಜವನ್ನೇರಿ ಬಂದು ಪೃಥ್ವೀರಾಜನನ್ನು ಎದುರಿಸಿ ಅವನೊಡನೆ ಘೋರವಾಗಿ ಯುದ್ಧಮಾಡಿದನು.

೨೩೧-೨೩೨. ಪೃಥ್ವೀರಾಜನ ರುದ್ರದತ್ತವಾದ ಪ್ರಮತ್ತಗಜವು ಜಾಗ್ರತೆಯಾಗಿ ಆಹ್ಲಾದನ ಪಂಚಶಬ್ದಗಜದೊಡನೆ ಹೋರಾಟಮಾಡಿತು. ಎರಡು ಆನೆಗಳೂ ಪರಸ್ಪರ ದಂತಗಳಿಂದ ತಿಕ್ಕಾಡುತ್ತಾ ಕೊನೆಗೆ ಎರಡೂ ಮೃತವಾಗಿ ಸ್ವರ್ಗಲೋಕವನ್ನು ಸೇರಿದುವು.

ತದಾ ಭಯಾತುರೋ ರಾಜಾ ತ್ಯಕ್ತ್ವಾ ಯುದ್ಧಂ ಭಯಂಕರಂ ।
ಸ ತು ದುದ್ರಾವ ವೇಗೇನ ರಾಮಾಂಶೋಽನುಯಯೌ ತತಃ ॥ ೨೩೩ ॥

ಕೇಶೇಷು ಚ ಮಹೀರಾಜಂ ಗೃಹೀತ್ವಾ ತರಸಾ ಬಲೀ ।
ಕಲಿದತ್ತಂ ಮಹಾನೀಲಂ ನೇತ್ರಯೋಸ್ತೇನ ತತ್ಕೃತಂ ॥ ೨೩೪ ॥

ತದಾಪ್ರಭೃತಿ ವೈ ಶಂಭುರಶುದ್ಧಂ ನೃಪತಿಂ ಪ್ರಿಯಂ ।
ಮತ್ವಾ ತ್ಯಕ್ತ್ವಾ ಯಯೌ ಸ್ಥಾನೇ ಕೈಲಾಸೇ ಗುಹ್ಯಕಾಲಯೇ ॥ ೨೩೫ ॥

ಆಹ್ಲಾದಃ ಕಲಿನಾ ಸಾರ್ಧಂ ಕದಲೀವನಮುತ್ತಮಂ ।
ಗತ್ವಾ ಯೋಗಂ ಚಕಾರಾಶು ಪರ್ವತೇ ಗಂಧಮಾದನೇ ॥ ೨೩೬ ॥

ತಥಾಭೂತಂ ಚ ರಾಮಾಂಶಂ ಕಲಿರ್ದೃಷ್ಟ್ವಾ ಮುದಾನ್ವಿತಃ ।
ಬಲಿಪಾರ್ಶ್ವಮುಪಾಗಮ್ಯ ವರ್ಣಯಾಮಾಸ ಸರ್ವಶಃ ॥ ೨೩೭ ॥

---

೨೩೩. ಆಗ ಪೃಥ್ವೀರಾಜನು ಅಂಥ ಆನೆ ಮೃತವಾದುದಕ್ಕೆ ಭಯಪಟ್ಟು ಘೋರವಾದ ಯುದ್ಧವನ್ನು ನಿಲ್ಲಿಸಿ ಓಡತೊಡಗಿದನು ಅದನ್ನು ನೋಡಿ ರಾಮಾಂಶನಾದ ಆಹ್ಲಾದನು ವೇಗವಾಗಿ ಅವನನ್ನು ಹಿಂಬಾಲಿಸಿದನು.

೨೩೪. ಬಲಶಾಲಿಯಾದ ಈ ಆಹ್ಲಾದನು ಪೃಥ್ವೀರಾಜನ ಜುಟ್ಟು ಹಿಡಿದು ಕಲಿಯು ತನಗೆ ಅನುಗ್ರಹಿಸಿದ್ದ ಮಹಾನೀಲಮಣಿಯನ್ನು ಪೃಥ್ವೀರಾಜನ ಕಣ್ಣಿನಲ್ಲಿ ಇರಿಸಿದನು.

೨೩೫. ಅದು ಮೊದಲುಗೊಂಡು ಪರಮೇಶ್ವರನು ಅಶುದ್ಧನೆಂದು ಪೃಥ್ವೀರಾಜನು ತಿಳಿದು ಅವನ ಸಮೀಪದಿಂದ ಹೊರಟು ಗುಹ್ಯಕರ ವಾಸ್ಥಾನವಾದ ಕೈಲಾಸಕ್ಕೆ ಬಂದು ವಾಸಮಾಡತೊಡಗಿದನು.

೨೩೬. ಅನಂತರ ಆಹ್ಲಾದನು ಕಲಿಯೊಡನೆ ಹೊರಟು ಶ್ರೇಷ್ಠವಾದ ಕದಳೀವನಕ್ಕೆ ಬಂದು ಅದರ ಸಮೀಪವಲ್ಲಿದ್ದ ಗಂಧಮಾದನ ಪರ್ವತದಲ್ಲಿ ಯೋಗಾರೂಢನಾದನು.

೨೩೭. ಹೀಗೆ ರಾಮಾಂಶನು ಯೋಗಧ್ಯಾನ ಮಗ್ನನಾದುದನ್ನು ನೋಡಿ ಕಲಿಪುರುಷನು ಸಂತೋಷದಿಂದ ಬಲಿಯ ಸಮೀಪಕ್ಕೆ ಬಂದು ಎಲ್ಲವನ್ನೂ ಅವನಿಗೆ ತಿಳಿಸಿದನು.

ಸ ವೈ ಬಲಿರ್ದೈತ್ಯರಾಜೋಽಯುತೈಃ ಸಹ ವಿನಿರ್ಗತಃ ।
ಗೌರದೇಶಮುಪಾಗಮ್ಯ ಸಹೋಡ್ಡೀನಮುವಾಚ ಹ ॥ ೨೩೮ ॥

ಗಚ್ಛ ವೀರ ಬಲೈಸಾರ್ಧಂ ನಿಶಾಯಾಂ ರಕ್ಷಿತೋ ಮಯಾ ।
ಹತ್ವಾ ಭೂಪಂ ಮಹೀರಾಜಂ ವಿದ್ಯುನ್ಮಾಲಾಂ ಗೃಹಾಣ ಭೋಃ ॥ ೨೩೯ ॥

ಇತಿ ಶ್ರುತ್ವಾ ವಚಸ್ತಸ್ಯ ಷೋಡಶಾಬ್ದಾಂತರೇ ಗತೇ ।
ಸಪಾದಲಕ್ಷೈಶ್ಚ ಬಲೈಃ ಕುರುಕ್ಷೇತ್ರಮುಪಾಯಯೌ ॥ ೨೪೦ ॥

ಮಹೀರಾಜಸುತಾಞ್ಜಿತ್ವಾ ಸಮಾಹೂಯ ಮಹಾವತೀಂ ।
ಮಹೀಪತಿಂ ಪ್ರೇಷಯಿತ್ವಾ ಲುಂಠಯಿತ್ವಾ ಚ ತದ್ವಸು ॥ ೨೪೧ ॥

---

೨೩೮. ಆಗ ದೈತ್ಯರಾಜನಾದ ಬಲಿಯು ತನ್ನ ಹತ್ತುಸಾವಿರ ಸೇನೆಯೊಡನೆ ಹೊರಟು ಗೌರ (ಘೋರಿ) ದೇಶಕ್ಕೆ ಬಂದು ಅಲ್ಲಿಗೆ ಅಧಿಪನಾದ ಸಹೋದ್ದೀನನನ್ನು (ಷಹಾಬುದ್ದೀನ್) ಕುರಿತು ಇಂತೆಂದನು.

೨೩೯. " ಎಲೈ ವೀರನೇ ! ನಾನು ನಿನ್ನ ರಕ್ಷಣೆಗೆ ಸರಿಯಾಗಿ ಏರ್ಪಡಿಸುವೆನು. ನೀನು ಈ ಸೇನೆಯೊಡನೆ ಈ ರಾತ್ರಿಯೇ ಹೊರಟು ಪೃಥ್ವೀರಾಜನ ಸಮೀಪಕ್ಕೆ ಹೋಗಿ ಅವನನ್ನು ಆಕ್ರಮಿಸಿ ಕೊಂದು ವಿದ್ಯುನ್ಮಾಲೆಯನ್ನು ವಶಪಡಿಸಿಕೋ " ಎಂದು ಹೇಳಿದನು.

೨೪೦. ಬಲಿಯು ಹೇಳಿದ ಈ ಮಾತನ್ನು ಕೇಳಿ, ಹದಿನಾರುವರ್ಷ ವಯಸ್ಕನಾದ ಆ ಸಹೋದ್ದೀನನು ಒಂದೂಕಾಲುಲಕ್ಷ ಸೇನೆಯೊಡನೆ ಹೊರಟು ಕುರುಕ್ಷೇತ್ರಕ್ಕೆ ಬಂದನು.

೨೪೧. ಅನಂತರ ಅಲ್ಲಿ ಪೃಥ್ವೀರಾಜನ ಮಕ್ಕಳನ್ನು ಜಯಿಸಿ ಬಳಿಕ ಮಹೀಪತಿರಾಜನನ್ನು ಕರೆಯಿಸಿ ಮಹಾವತೀನಗರಕ್ಕೆ ಕಳುಹಿಸಿ ಅಲ್ಲಿದ್ದ ಹಣವನ್ನೆಲ್ಲಾ ಲೂಟಿಮಾಡಿಸಿದನು.

**ಲಿಂಗಾರ್ಥಂ ಕೃತವಾನ್ ಯತ್ನಂ ಸ ನೃಪಃ ಕೀರ್ತಿಸಾಗರೇ ।**
**ನ ಪ್ರಾಪ್ತಸ್ಸನೃಪಸ್ತಂ ವೈ ಸ್ವಗೇಹಾಯ ತದಾ ಯಯೌ ॥ ೨೪೨ ॥**

**ಲಕ್ಷಚಂಡೀಂ ಕಾರಯಿತ್ವಾ ಪರಮಾನಂದಮಾಪ್ತವಾನ್ ।**
**ಜಯಚಂದ್ರಸ್ತು ತಚ್ಛ್ರುತ್ವಾ ಪುತ್ರಶೋಕಸಮನ್ವಿತಃ ॥ ೨೪೩ ॥**

**ನಿರಾಹಾರೋ ಯತಿರ್ಭೂತ್ವಾ ಮೃತಃ ಸ್ವರ್ಗಪುರಂ ಯಯೌ ।**
**ಸಹೋದ್ದೀನೇನ ಸ ನೃಪಃ ಕೃತ್ವಾ ಯುದ್ಧಂ ಭಯಂಕರಂ ॥ ೨೪೪ ॥**

**ಸಪ್ತಾಹೋರಾತ್ರಮಾತ್ರೇಣ ಮ್ಲೇಚ್ಛರಾಜವಶಂ ಗತಃ ।**
**ಮಾರಿತೋ ಬಹುಯತ್ನೇನ ಮಹೀರಾಜೋ ನ ವೈ ಮೃತಃ ॥ ೨೪೫ ॥**

---

೨೪೨ ಅವನು ಹಾಗೆ ಲೂಟಿಮಾಡಿದ್ದಲ್ಲದೆ ಕೀರ್ತಿಸಾಗರದಲ್ಲಿದ್ದ ಲಿಂಗಕ್ಕೋಸ್ಕರ ಬಹು ಪ್ರಯತ್ನಮಾಡಿದನು. ಆದರೂ ಅದು ದೊರೆಯದೆ ಹೋಗಲು ಆ ರಾಜನು ಅಲ್ಲಿಂದ ತನ್ನ ನಿವಾಸಕ್ಕೆ ಹಿಂದಿರುಗಿದನು.

೨೪೩. ಊರಿಗೆ ಬಂದು ಲಕ್ಷ ಚಂಡೀಹೋಮವನ್ನಾಚರಿಸಿ ಪರಮಾನಂದ ಭರಿತನಾದನು. ಅತ್ತ ಜಯಚಂದ್ರನು ತನ್ನ ಮಗನಾದ ಲಕ್ಷಣನು ಮೃತನಾದುದನ್ನು ತಿಳಿದು ದುಃಖದಿಂದ ಆಹಾರವನ್ನೇ ತೊರೆದು ಸನ್ಯಾಸಿಯಾಗಿ ಮರಣಹೊಂದಿ ಸ್ವರ್ಗವನ್ನು ಸೇರಿದನು.

೨೪೪. ಅನಂತರ ಪೃಥ್ವೀರಾಜನು ಆ ಸಹೋದ್ದೀನ (ಷಹಾಬುದ್ದೀನ) ನೊಡನೆ ಏಳುದಿನ ಹಗಲೂ ರಾತ್ರೆ ಭಯಂಕರವಾದ ಯುದ್ಧಮಾಡಿ ಕಾದಿದಮೇಲೆ ಮ್ಲೇಚ್ಛ ರಾಜನ ಅಧೀನನಾದನು.

೨೪೫-೨೪೬. ಯಾವಯಾವ ರೀತಿಯಿಂದ ಘಾತಿಸಿದರೂ ಪೃಥ್ವೀರಾಜನು ಮೃತನಾಗಲಿಲ್ಲ. ಆಗ ಮ್ಲೇಚ್ಛರಾಜನಾದ ಸಹೋದ್ದೀನನು ತುಂಬಾ ನಿರ್ಬಂಧ ಮಾಡಲು ಪೃಥ್ವೀರಾಜನ ಮಂತ್ರಿಯಾದ ಚಂದ್ರಭಟ್ಟನು ರಾಜನ ಅಪ್ಪಣೆಯಂತೆ ಜ್ಯೋತಿಸ್ವರೂಪವಾಗಿರುವ ಪೃಥ್ವೀರಾಜನ ಕಳೆಯನ್ನು ಕ್ಷುರಪ್ರವೆಂಬ ಬಾಣದಿಂದ

ತದಾ ಮ್ಲೇಚ್ಛಸ್ಸಹೋದ್ದೀನೋ ನಿರ್ಬಂಧನಮಥಾಕರೋತ್ ।
ಜ್ಯೋತಿರೂಪಸ್ಥಿತಂ ತತ್ರ ಚಂದ್ರಭಟ್ಟೋ ನೃಪಾಜ್ಞಯಾ ।
ಕ್ಷುರಪ್ರೇಣ ಚ ಬಾಣೇನ ಹತ್ವಾ ವಹ್ನೌ ದದಾಹ ವೈ ॥ ೨೪೬ ॥

ವಿದ್ಯುನ್ಮಾಲಾಂ ಸ ಚ ಮ್ಲೇಚ್ಛೋ ಗೃಹೀತ್ವಾ ಚ ಧನಂ ಬಹು ।
ತತ್ರಾಸ್ಥಾಪ್ಯ ಸ್ವದಾಸಂ ಚ ಕುತುಕೋದ್ದೀನಮಾಗತಃ ॥ ೨೪೭ ॥

ಇತಿ ಶ್ರೀ ಭವಿಷ್ಯೆಮಹಾಪುರಾಣೇ ಪ್ರತಿಸರ್ಗಪರ್ವಣಿ ತೃತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ದ್ವಾತ್ರಿಂಶೋಽಧ್ಯಾಯಃ.

## ಇತಿ ತೃತೀಯಖಂಡಂ ಸಮಾಪ್ತಂ



ವೇಗವಾಗಿ ಹೊಡೆದು ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡಿದನು. ಇದರಿಂದ ಪೃಥ್ವೀರಾಜನು ಮೃತನಾದನು.

೨೪೭. ಅನಂತರ ಆ ಮ್ಲೇಚ್ಛರಾಜನು ಆ ವಿದ್ಯುನ್ಮಾಲೆಯನ್ನೂ, ಬಹು ದ್ರವ್ಯವನ್ನೂ ವಶಪಡಿಸಿ ತೆಗೆದುಕೊಂಡು ಆ ಮಹಾವತೀನಗರದಲ್ಲಿ ತನ್ನ ಸೇವಕ (ಗುಲಾಮ) ನಾದ ಕುತುಬುದ್ದೀನನನ್ನು ನಿಯಮಿಸಿ ಅಲ್ಲಿಂದ ಹಿಂದಿರುಗಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಮೂರನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಮೂವತ್ತೆರಡನೆಯ ಅಧ್ಯಾಯ ಮುಗಿದುದು.

## ಪ್ರತಿಸರ್ಗಪರ್ವದ ತೃತೀಯಖಂಡ ಸಮಾಪ್ತಿ.

